# ಎಂ. ಎಂ. ಕಲಬುರ್ಗಿ ಅವರ ವಚನ ವ್ಯವಸಾಯ : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸಿದ

ಪಿಎಚ್.ಡಿ. ಮಹಾಪ್ರಬಂಧ)

ಸಂಶೋಧಕರು

ಶ್ವೇತ ಹೆಚ್. ಬಿ.

ಮಾರ್ಗದರ್ಶಕರು

ಡಾ. ಕೆ. ರವೀಂದ್ರನಾಥ

ಪ್ರಾಧ್ಯಾಪಕರು

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ




ಹಸ್ತಪ್ರತಿಶಾಸ್ತ್ರ ವಿಭಾಗ

ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೨೦

# ಎಂ.ಎಂ. ಕಲಬುರ್ಗಿ ಅವರ
# ವಚನ ವ್ಯವಸಾಯ: ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸಿದ
ಪಿಎಚ್.ಡಿ. ಮಹಾಪ್ರಬಂಧ)


ಸಂಶೋಧಕರು
**ಶ್ವೇತ ಹೆಚ್. ಬಿ.**

ಮಾರ್ಗದರ್ಶಕರು
**ಡಾ. ಕೆ. ರವೀಂದ್ರನಾಥ**
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ





**ಹಸ್ತಪ್ರತಿಶಾಸ್ತ್ರ ವಿಭಾಗ**
**ಭಾಷಾ ನಿಕಾಯ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ ೫೮೩ ೨೭೬**

೨೦೧೯-೨೦



ಡಾ. ಕೆ. ರವೀಂದ್ರನಾಥ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

---

# ದೃಢೀಕರಣ ಪತ್ರ

**ಎಂ.ಎಂ. ಕಲಬುರ್ಗಿ ಅವರ ವಚನ ವ್ಯವಸಾಯ: ಒಂದು ಅಧ್ಯಯನ** ಎಂಬ ಈ ಶೀರ್ಷಿಕೆಯ ಮಹಾಪ್ರಬಂಧವನ್ನು **ಶ್ವೇತ ಹೆಚ್. ಬಿ.** ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರು ವುದಿಲ್ಲವೆಂದು ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**(ಡಾ. ಕೆ. ರವೀಂದ್ರನಾಥ)**

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** ೨೭/೧/೨೦

# ಪ್ರಮಾಣ ಪತ್ರ

**ಎಂ.ಎಂ. ಕಲಬುರ್ಗಿ ಅವರ ವಚನ ವ್ಯವಸಾಯ: ಒಂದು ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ **ಡಾ. ಕೆ. ರವೀಂದ್ರನಾಥ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

Shwetha H B

**ಶ್ವೇತ ಹೆಚ್. ಬಿ.**
ಸಂಶೋಧನ ವಿದ್ಯಾರ್ಥಿನಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ: ವಿದ್ಯಾರಣ್ಯ
ದಿನಾಂಕ: 27/1/2020

# ಪರಿವಿಡಿ

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

### ಪೀಠಿಕೆ

ಕನ್ನಡ ಸಾಹಿತ್ಯ ವಿಶ್ವಸಾಹಿತ್ಯಕ್ಕೆ ನೀಡಿದ ಮಹತ್ವದ ಕೊಡುಗೆಗಳಲ್ಲಿ ವಚನ ಸಾಹಿತ್ಯವು ಒಂದು. ವರ್ಗ, ವರ್ಣ, ಲಿಂಗಭೇದ ಸಮಾಜವನ್ನು ಕಟ್ಟಬೇಕೆಂಬ ವಚನಕಾರರ ಆಲೋಚನೆಗಳು 'ವಚನ' ಸಾಹಿತ್ಯ ಮಾಧ್ಯಮದ ಮೂಲಕ ಪ್ರಕಟಗೊಂಡಿತು. ಇದರಿಂದ ವಚನ ಸಾಹಿತ್ಯಕ್ಕೆ ಸಾಮಾಜಿಕ ಪ್ರಜ್ಞೆ ಪ್ರೇರಣೆಯಾಯಿತು. ಇಂಥ ಸಮಾಜಮುಖಿ ಸಾಹಿತ್ಯ ಕುರಿತಾದ ಅಧ್ಯಯನ ಎರಡು ಘಟ್ಟಗಳಲ್ಲಿ ನಡೆದಿರುವುದನ್ನು ಗುರುತಿಸಬಹುದು. ೧. ಪ್ರಾಚೀನ ಕಾಲದ ಅಧ್ಯಯನ, ೨. ಆಧುನಿಕ ಕಾಲದ ಅಧ್ಯಯನ. ಪ್ರಾಚೀನ ಕಾಲದ ಅಧ್ಯಯನ ೧೫ನೇ ಶತಮಾನದಿಂದ ೧೯ನೇ ಶತಮಾನದವರೆಗೆ ಅಂದರೆ, ೧೨ನೇ ಶತಮಾನದಲ್ಲಿ ವಚನಗಳು ರಚನೆಯಾದವು. ಶರಣರ ಸಾಮಾಜಿಕ ನಿಲುವುಗಳು ಸಂಪ್ರದಾಯ ಸಮಾಜದ ಹಗೆತನಕ್ಕೆ ಗುರಿಯಾಗಿ ಕಲ್ಯಾಣ ಕ್ರಾಂತಿಗೆ ಕಾರಣವಾಯಿತು. "ಊರು ಸುಟ್ಟು ಸೂರೆಯಾಗುವಾಗ ಆರಿಗಾರೂ ಇಲ್ಲ" ಎನ್ನುವಂತೆ ವಚನ ಸಾಹಿತ್ಯ ಅನಾಥವಾಯಿತು. ಮುಂದೆ ೧೫ನೇ ಶತಮಾನದ ನೂರೊಂದು ವಿರಕ್ತರ ಕಾಲದಲ್ಲಿ ವಿಜಯಕಲ್ಯಾಣವೆನಿಸಿದ್ದ ಹಂಪಿಯ ಪ್ರೌಢದೇವರಾಯರ ಆಶ್ರಯದಲ್ಲಿ ಶರಣ ಸಾಹಿತ್ಯ–ಸಂಸ್ಕೃತಿ ಕುರಿತಾದ ಕಾವ್ಯರಚನೆ ಜೊತೆಗೆ, ವಚನ ಸಾಹಿತ್ಯ ಶೋಧಿಸುವ, ಕೂಡಿಹಾಕುವ, ಅವುಗಳನ್ನು ತಾತ್ವಿಕ ನೆಲೆಗಟ್ಟಿನಲ್ಲಿ ಸಂಯೋಜಿಸುವ ಕಾರ್ಯಗಳು ನಡೆದವು. ಆ ನಂತರದಲ್ಲಿ ತೋಂಟದ ಸಿದ್ಧಲಿಂಗಯತಿಗಳ ಮುಂದಾಳತ್ವದಲ್ಲಿ ಏಳುನೂರೊಂದು ಮಂದಿ ವಿರಕ್ತರೆಂದು ಪ್ರಸಿದ್ಧರಾದ ಸಿದ್ಧಲಿಂಗಯತಿಗಳ ಶಿಷ್ಯ–ಪ್ರಶಿಷ್ಯರು ದುಡಿದ ಪರಿಣಾಮವಾಗಿ "ವಚನ ಸಂಪಾದನ ಸಮಯ" ರೂಪಗೊಂಡಿತು. ಮಹಾಲಿಂಗದೇವ, ಜಕ್ಕಣಾರ್ಯ, ಗುಬ್ಬಿಯ ಮಲ್ಲಣ್ಣ, ಕಲ್ಲುಮಠದ ಪ್ರಭುದೇವ, ಕರಸ್ಥಲ ವೀರಣ್ಣೊಡೆಯ, ಕರಸ್ಥಲ ಮಲ್ಲಿಕಾರ್ಜುನ ಮುಂತಾದವರು "ವಚನ ಸಂಕಲನ ಸಮಯ"ದ ನಿರ್ಮಾಪಕರಾದಂತೆ; ಸಂಪಾದನೆಯ ಚೆನ್ನಂಜೆದೇವ, ಸಂಪಾದನೆಯ

ಗುರುಲಿಂಗದೇವ, ಸಂಪಾದನೆಯ ವೀರಸಂಗಯ್ಯ, ಹಲಗೆದೇವ, ಗುಮ್ಮಳಾಪುರದ ಸಿದ್ಧಲಿಂಗ, ಗೂಳೂರು ಸಿದ್ಧ ವೀರಣ್ಣೊಡೆಯ ಮೊದಲಾದವರು "ವಚನ ಸಂಪಾದನ ಸಮಯ"ದ ನಿರ್ಮಾಪಕರಾದರು. ಇವರ ಕಾಲದಲ್ಲಿ ಅವರವರ ದೃಷ್ಟಿಕೋನ, ಅನುಭಾವ, ಆಧ್ಯಾತ್ಮಿಕ ನಿಲುವು, ತಾತ್ವಿಕ ನಿಷ್ಠೆಯಿಂದ ಷಟ್‌ಸ್ಥಲ, ಏಕೋತ್ತರ ಷಟ್‌ಸ್ಥಲ, ಟೀಕು ವ್ಯಾಖ್ಯಾನ, ಸಂಪಾದನೆ ಕಾರ್ಯಗಳು ನಡೆದವು. ಇದು ಒಂದರ್ಥದಲ್ಲಿ ವಚನ ಕುರಿತಾಗಿ ನಡೆದ ಪ್ರಾಚೀನ ಅಧ್ಯಯನವೆಂದು ಹೇಳಬಹುದು.

ಅಧುನಿಕ ಕಾಲದ ಅಧ್ಯಯನ ೧೯ನೆಯ ಶತಮಾನದಿಂದ ಇಲ್ಲಿಯವರೆಗೆ ನಡೆದುಬಂದಿದೆ. ಇದನ್ನು 'ವಚನ ಪಿತಾಮಹ' ಹಳಕಟ್ಟಿ ಅವರನ್ನು ಕೇಂದ್ರವಾಗಿಟ್ಟುಕೊಂಡು ಹಳಕಟ್ಟಿ ಪೂರ್ವಕಾಲ, ಹಳಕಟ್ಟಿ ಕಾಲ, ಹಳಕಟ್ಟಿ ನಂತರದ ಕಾಲ ಎಂದು ವಿದ್ವಾಂಸರು ಗುರುತಿಸುತ್ತಾರೆ. ಕ್ರೈಸ್ತ ಮಿಷನರಿಗಳಿಂದ ವಚನ ಸಾಹಿತ್ಯ ಪ್ರಕಟಣೆ ಉಪೇಕ್ಷೆಗೊಂಡಾಗ ವಚನಗಳನ್ನು ಪ್ರಕಟಿಸುವ ಕಾರ್ಯದಲ್ಲಿ ಬಳ್ಳಾರಿ ಶೆಟ್ಟರ ಕೊಡುಗೆ ಮಹತ್ವದ್ದಾಗಿದೆ. ೧೮೮೩ರಿಂದ ೧೯೧೪ರವರೆಗೆ ಶಿಕಾರತ್ನ ಪ್ರಕಾಶ, ಸಿದ್ಧೇಶ್ವರ ವಚನವು, ಅಖಂಡೇಶ್ವರ ವಚನ, ಬಸವಣ್ಣನವರ ವಚನಗಳು ಮುಂತಾದ ಹತ್ತು ಹನ್ನೊಂದು ವಚನ ಗ್ರಂಥಗಳು ಬೆಳಕು ಕಂಡವು. ಇದೇ ಸಂದರ್ಭದಲ್ಲಿ ಆರ್. ನರಸಿಂಹಾಚಾರ್ಯರು ಕವಿಚರಿತೆ ಸಂಪುಟಗಳ ಮೂಲಕ ೬೦ ಜನ ವಚನಕಾರರನ್ನು ಬೆಳಕಿಗೆ ತಂದರು. ಇದಾದ ನಂತರ ಹಳಕಟ್ಟಿ ಅವರ ಕಾಲ. ವಚನ ಸಾಹಿತ್ಯ ಸಂಗ್ರಹ ಪ್ರಕಟಣೆಗೆ ತಮ್ಮನ್ನು ತೊಡಗಿಸಿಕೊಂಡ ಹಳಕಟ್ಟಿ ಅವರು ಮುದ್ರಣ, ಪತ್ರಿಕೆ, ಗ್ರಂಥಪ್ರಕಾಶನದಂಥ ಮೂರು ರೀತಿಯ ಕಾರ್ಯ ವ್ಯಾಪ್ತಿಯಲ್ಲಿ ವಚನ ಅಧ್ಯಯನವನ್ನು ವಿಸ್ತರಿಸಿಕೊಂಡರು. ಹಿತಚಿಂತಕವೆಂಬ ಮುದ್ರಣಾಲಯ, ಶಿವಾನುಭವ ಪತ್ರಿಕೆ, ಶಿವಾನುಭವ ಗ್ರಂಥಮಾಲೆ ಸ್ಥಾಪಿಸಿ ಏಕವ್ಯಕ್ತಿ ನೆಲೆಯಲ್ಲಿ ಸಾಂಸ್ಥಿಕ ಪ್ರಜ್ಞೆಯಿಂದ ದುಡಿದರು. ವಚನಶಾಸ್ತ್ರಸಾರದ ಮೂರು ಸಂಪುಟಗಳ ಪ್ರಕಟಣೆಯೊಳಗೊಂಡಂತೆ ೭೭ಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿದರು. ಇವರ ಸಮಕಾಲೀನರಾದ ಚನ್ನಮಲ್ಲಿಕಾರ್ಜುನ ಮಾಸ್ತರ ಅವರು ಶಿವಲಿಂಗ ವಿಜಯ ಎಂಬ ಮುದ್ರಣಾಲಯ, ಸದ್ಧರ್ಮ ದೀಪಿಕೆ ಹೆಸರಿನ ಪತ್ರಿಕೆ, ಸದ್ಧರ್ಮ ಗ್ರಂಥಮಾಲೆ ಹುಟ್ಟುಹಾಕಿ ೧೨ಕ್ಕೂ ಹೆಚ್ಚು ಗ್ರಂಥಗಳನ್ನು ಬೆಳಕಿಗೆ ತಂದರು.

ಹಳಕಟ್ಟಿ ನಂತರದ ಕಾಲ ಇದು ವಚನ ಸಾಹಿತ್ಯದ ಪರಿಷ್ಕರಣ ಮತ್ತು ಸಂಶೋಧನೆಗೆ ಹೊಸ ವ್ಯಾಖ್ಯಾನವನ್ನು ಬರೆದ ಕಾಲ. ಶಿ.ಶಿ.ಬಸವನಾಳರು ವಚನ ಸಂಗ್ರಹ–ಸಂಕಲನ–ಸಂಪಾದನ ಮೌಲ್ಯವನ್ನು ಎತ್ತರಿಸಿದ ವ್ಯಕ್ತಿ. ಅವರ 'ಬಸವಣ್ಣನವರ ಷಟ್‌ಸ್ಥಲ ವಚನಗಳು' ಎಂಬ ಸಂಪಾದಿತ ಕೃತಿ ವಚನ ಪರಿಷ್ಕರಣ ಇತಿಹಾಸದಲ್ಲಿ ವಿನೂತನವಾದದ್ದು. ಮುಂದಿನ

ವಚನ ಪರಿಷ್ಕರಣ ಸಂಪಾದನೆಗೆ ಮಾರ್ಗದರ್ಶಿಪ್ರಾಯವಾದ ಕೃತಿಯೆನಿಸಿತು. ಅದೇ ರೀತಿ ಆರ್.ಸಿ.ಹಿರೇಮಠ, ಎಲ್.ಬಸವರಾಜು, ಎಂ.ಎಸ್.ಸುಂಕಾಪುರ ಅವರ ಕಾರ್ಯಗಳು ಅಧ್ಯಯನ ಯೋಗ್ಯವಾದವುಗಳು. ಇದೇ ಕಾಲಘಟ್ಟದಲ್ಲಿ ಹೊಸಹಳ್ಳಿ ಪ್ರಭುಸ್ವಾಮಿಗಳು, ಪ್ರೊ.ಸಂ.ಶಿ. ಭೂಸನೂರಮಠ, ಉತ್ತಂಗಿ ಚೆನ್ನಪ್ಪ, ಎಚ್.ದೇವಿರಪ್ಪ, ವೀ.ರು.ಕೊಪ್ಪಳ, ಎಸ್.ಎಂ.ಹುಣಶ್ಯಾಳ ಮುಂತಾದವರನ್ನು ಸ್ತುತಿಸಬಹುದು. ಮುಂದೆ ಬಸವನಾಳ ಪರಂಪರೆಯಲ್ಲಿ ಎಂ.ಎಂ.ಕಲಬುರ್ಗಿ, ವಿ.ಶಿವಾನಂದ, ಎಸ್.ವಿದ್ಯಾಶಂಕರ್, ಬಿ.ವಿ.ಶಿರೂರ, ವೀರಣ್ಣ ರಾಜೂರ, ಬಿ.ಆರ್.ಹಿರೇಮಠ, ಎಸ್.ಉಮಾಪತಿ, ಎಸ್.ಶಿವಣ್ಣ, ಬಿ.ವ್ಹಿ.ಮಲ್ಲಾಪುರ ಮುಂತಾದ ವಿದ್ವಾಂಸರ ತಂಡವೇ ವಚನ ಸಾಹಿತ್ಯ ಸಂಗ್ರಹ–ಸಂಕಲನ–ಸಂಪಾದನೆ ಹಾಗೂ ಪ್ರಕಟಣೆಯ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಮುಂದೆ ಗದುಗಿನ ತೋಂಟದಾರ್ಯ ಮಠದ ಕಾರ್ಯ, ಸರಕಾರದ ಯೋಜನೆಗಳು, ಹೀಗೆ ಹಳಕಟ್ಟಿ ನಂತರದ ಕಾಲದಲ್ಲಿ ವಚನ ಸಾಹಿತ್ಯ ಅಧ್ಯಯನ ಸಾಗಿಬಂದಿತು. ಒಟ್ಟಿನಲ್ಲಿ ಧಾರ್ಮಿಕ ನೆಲೆ, ಸಾಮಾಜಿಕ ನೆಲೆ, ಸಾಹಿತ್ಯಿಕ ನೆಲೆ ಹಾಗೂ ಸಾಂಸ್ಕೃತಿಕ ನೆಲೆ ಎಂಬ ನಾಲ್ಕು ನೆಲೆಯಲ್ಲಿ ವಚನ ಅಧ್ಯಯನ ನಡೆಯಿತು. ಈ ನಾಲ್ಕು ನೆಲೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ದುಡಿದ ವಿದ್ವಾಂಸರಲ್ಲಿ ಎಂ.ಎಂ.ಕಲಬುರ್ಗಿ ಅವರ ಕೆಲಸ ಅಷ್ಟೇ ಮಹತ್ವಪೂರ್ಣವಾದದ್ದು. ಅವರ ವಚನ ಸಾಹಿತ್ಯ ಕುರಿತಾದ ಕೆಲಸವನ್ನು ಶೋಧಿಸುವ ಹಿನ್ನೆಲೆಯಲ್ಲಿ ಸಿದ್ಧಗೊಂಡ ಮಹಾಪ್ರಬಂಧ "ಎಂ.ಎಂ.ಕಲಬುರ್ಗಿ ಅವರ ವಚನ ವ್ಯವಸಾಯ: ಒಂದು ಅಧ್ಯಯನ"

## ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಎಂ.ಎಂ.ಕಲಬುರ್ಗಿ ಅವರದು ಬಹುಮೂಲದ ಸಂಶೋಧನೆ. ಶಿಷ್ಟ ಸಾಹಿತ್ಯ, ದಾಖಲು ಸಾಹಿತ್ಯ, ವಚನ ಸಾಹಿತ್ಯ, ಜನಪದ ಸಾಹಿತ್ಯ ಕುರಿತಂತೆ ಶಾಸ್ತ್ರ, ಕಾವ್ಯ, ಶಾಸನ, ಐತಿಹಾಸಿಕ ಕೃತಿಗಳ ಸಂಪಾದನೆ – ಅಧ್ಯಯನಗಳಲ್ಲಿ ತಮ್ಮನ್ನು ಪೂರ್ಣಪ್ರಮಾಣದಲ್ಲಿ ತೊಡಗಿಸಿಕೊಂಡವರು. ವಿಶೇಷವಾಗಿ ಗ್ರಂಥಸಂಪಾದನೆ, ಹಸ್ತಪ್ರತಿ, ನಾಮವಿಜ್ಞಾನ, ಸಂಶೋಧನಾಶಾಸ್ತ್ರ ಕುರಿತಾಗಿ ಆ ಕ್ಷೇತ್ರದ ಕಾರ್ಯವಿಧಾನಗಳನ್ನು ಕುರಿತು ವೈಧಾನಿಕಾತ್ಮಕ ಕೃತಿಗಳನ್ನು ರಚಿಸಿದವರು. ಕರ್ನಾಟಕ ವಿಶ್ವವಿದ್ಯಾಲಯದ ಬಸವೇಶ್ವರ ಅಧ್ಯಯನ ಪೀಠದ ಪ್ರಾಧ್ಯಾಪಕರಾಗಿ, ನಿರ್ದೇಶಕರಾಗಿ, ಆರ್.ಸಿ.ಹಿರೇಮಠ ಅವರು ರೂಪಿಸಿದ ವಚನ ಸಾಹಿತ್ಯ ಪ್ರಕಟಣಾ ಯೋಜನೆಯ ಸದಸ್ಯರಾಗಿ 'ವಚನ ಸಾಹಿತ್ಯ' ಕುರಿತು ವಿಶೇಷ ಅಧ್ಯಯನ ಮಾಡಿದರು. ಹೀಗಾಗಿ ಕಾವ್ಯ, ಶಾಸ್ತ್ರ, ಅಧ್ಯಯನಗಳ ಜೊತೆಗೆ ವಚನ ಸಾಹಿತ್ಯ ಅಧ್ಯಯನದಲ್ಲೂ ಅಷ್ಟೇ ಪ್ರಮಾಣದಲ್ಲಿ ಎಂ.ಎಂ.ಕಲಬುರ್ಗಿ ಅವರು ತಮ್ಮನ್ನು ತೊಡಗಿಸಿಕೊಂಡರು. ಆ ಮೂಲಕ ಬಸವಸ್ತೋತ್ರದ ವಚನಗಳು, ಬಸವಣ್ಣನ

ಟೀಕಿನ ವಚನಗಳು, ಚೆನ್ನಬಸವಣ್ಣನವರ ಷಟ್‌ಸ್ಥಲ ವಚನ ಮಹಾ ಸಂಪುಟ, ವಚನ ಸಂಕಲನ ಸಂಪುಟ-೪, ವಚನ ಸಂಕಲನ ಸಂಪುಟ-೬, ಬಸವಣ್ಣನವರ ವಚನ ಸಂಪುಟ, ಸಂಕೀರ್ಣ ವಚನ ಸಂಪುಟ, ವಚನ ಶಾಸ್ತ್ರಸಾರ, ಸಿದ್ಧರಾಮನ ವಚನಗಳು, ಪರಮಾನಂದ ಸುಧೆ, ಏಕೋತ್ತರ ಶತಸ್ಥಲ ಮುಂತಾದವು ಇವರ ವಚನ ಸಾಹಿತ್ಯ ಸಂಪಾದನೆಯ ಪ್ರಮುಖ ಕೃತಿಗಳು.

ಸಂಪಾದನೆಯಲ್ಲಿ ತಮ್ಮದೇ ಆದ ವೈಧಾನಿಕತೆಯನ್ನು ರೂಪಿಸಿಕೊಂಡು ಪಾಠ ಪರಿಷ್ಕರಣಕ್ಕೆ ಹೊಸ ಆಯಾಮವನ್ನು ನೀಡಿದರು. ದೇಶಿ ಸಾಹಿತ್ಯವೆನಿಸಿದ ವಚನ ಸಾಹಿತ್ಯ ಸಂಪಾದನೆಗೆ ಭಾಷೆ, ವಿಷಯ, ಶೈಲಿ ದೃಷ್ಟಿಯಿಂದ ಉತ್ತಮವಾದ ಕೇವಲ ಒಂದು ಹಸ್ತಪ್ರತಿ ಕಟ್ಟನ್ನು ಆಯ್ದುಕೊಂಡು ಆಧಾರಪ್ರತಿಯೆಂದು ಭಾವಿಸಿ, ಅದೇ ಕುಟುಂಬದ ಒಂದೆರಡು ಪ್ರತಿಗಳನ್ನು ಪಾಠಾಂತರಕ್ಕಾಗಿ ಬಳಸಿಕೊಳ್ಳುವ ವಿಧಾನವನ್ನು ರೂಪಿಸಿದರು. ಇಂಥ ಅನೇಕ ಸಿದ್ಧಾಂತಗಳನ್ನು ಹೊಸದಾಗಿ ತಿಳಿಸಿ ಗ್ರಂಥಸಂಪಾದನ ಶಾಸ್ತ್ರದ ವಿಧಾನದಲ್ಲಿ ಬದಲಾವಣೆಯನ್ನು ತಂದರು. ವಚನಶೋಧ, ವಚನಸಂಗ್ರಹ, ಸಂಕಲನ, ಸಂಪಾದನೆ ಮತ್ತು ಅಧ್ಯಯನ-ನಿರ್ವಚನ ಹೀಗೆ ಕಲಬುರ್ಗಿ ಅವರ ವಚನ ವ್ಯವಸಾಯದ ಹಲವು ನೆಲೆಗಳನ್ನು ಶೋಧಿಸುವುದು ಈ ಮಹಾಪ್ರಬಂಧದ ಉದ್ದೇಶವಾಗಿದೆ.

ಮುಖ್ಯವಾಗಿ ಕರ್ನಾಟಕದಲ್ಲಿ ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಬೆಂಗಳೂರು ಭಾಗದಲ್ಲಿ ಡಾ.ಎಸ್.ವಿದ್ಯಾಶಂಕರ್, ಮೈಸೂರು ಭಾಗದಲ್ಲಿ ಡಾ.ಎಲ್.ಬಸವರಾಜು, ಕಲಬುರ್ಗಿ ವಿಭಾಗದಲ್ಲಿ ಡಾ.ಎಂ.ಎಸ್.ಲಠ್ಠೆ, ಧಾರವಾಡ ಭಾಗದಲ್ಲಿ ಆರ್.ಸಿ.ಹಿರೇಮಠ ನೇತೃತ್ವದಲ್ಲಿ ಅನೇಕ ಜನ ವಿದ್ವಾಂಸರು ವಚನ ಸಾಹಿತ್ಯ ಶೋಧ ಸಂಪಾದನೆಯಲ್ಲಿ ದುಡಿದ ಮಹನೀಯರಿದ್ದಾರೆ. ಈ ಎಲ್ಲ ವಿದ್ವಾಂಸರ ವಚನ ಅಧ್ಯಯನ ಕುರಿತಾದ ಆಲೋಚನೆಗಳಿಗಿಂತ ಡಾ.ಎಂ.ಎಂ.ಕಲಬುರ್ಗಿ ಅವರ ಆಲೋಚನಾ ಮಾದರಿಯನ್ನು ಗುರುತಿಸುವುದು ಈ ಮಹಾಪ್ರಬಂದದ ಮತ್ತೊಂದು ಉದ್ದೇಶವಾಗಿದೆ.

ವಚನ ಅಧ್ಯಯನದಲ್ಲಿ ತೊಡಗಿಸಿಕೊಂಡ ಡಾ.ಕಲಬುರ್ಗಿ ಅವರು ವಚನಗಳಂತೆ ಶಿವಶರಣರಿಂದ ರಚನೆಯಾದ ಸ್ವರವಚನ ಸಾಹಿತ್ಯ, ಕಾಲಜ್ಞಾನ ಸಾಹಿತ್ಯ, ವಚನ ಟೀಕು ಸಾಹಿತ್ಯ, ಶೂನ್ಯ ಸಂಪಾದನೆ ಸಾಹಿತ್ಯ ಕುರಿತಾಗಿ ವಿದ್ವಾಂಸರ ಗಮನವನ್ನು ಆ ಕಡೆ ಸೆಳೆಯುವಲ್ಲಿ ಯಶಸ್ವಿಯಾದರು. ಹತ್ತಾರು ಯೋಜನೆಗಳನ್ನು ರೂಪಿಸುವುದರ ಮೂಲಕ ವಚನ ಪರಿಸರನಿಷ್ಠ ಸಾಹಿತ್ಯದ ವಿವಿಧ ಮಗ್ಗಲುಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ.

ಹೀಗಾಗಿ ಎಂ.ಎಂ.ಕಲಬುರ್ಗಿ ಅವರ 'ವಚನ ವ್ಯವಸಾಯದ' ಶ್ರಮ-ಪರಿಶ್ರಮವನ್ನು ದಾಖಲಿಸುವ ಮಗದೊಂದು ಉದ್ದೇಶವನ್ನು ಈ ಮಹಾಪ್ರಬಂಧ ಹೊಂದಿದೆ.

**ಅಧ್ಯಯನದ ವ್ಯಾಪ್ತಿ**

ಆರಂಭದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿ ಅವರು ವಚನ ಸಾಹಿತ್ಯ ಪ್ರಕಟಣೆ-ಅಧ್ಯಯನದಲ್ಲಿ ಮಾಡಿದ ಕೆಲಸದಿಂದ ಹಿಡಿದು ಸ್ವತಃ ಅವರು ಈ ಕ್ಷೇತ್ರದಲ್ಲಿ ದುಡಿದಿರುವುದಲ್ಲದೆ ಇತರರನ್ನೂ ದುಡಿಯುವಂತೆ ಮಾಡಿದರು. ಹೀಗಾಗಿ ಹತ್ತಾರು ಧಾರ್ಮಿಕ ಸಂಸ್ಥೆಗಳಿಂದ, ಸರಕಾರದಿಂದ ಹಾಗೂ ಖಾಸಗಿ ವ್ಯಕ್ತಿಗಳಿಂದ ವಚನ ಸಾಹಿತ್ಯ ಅಧ್ಯಯನವನ್ನು ನಿರಂತರವಾಗಿ ಮುಂದುವರಿಸಿದರು. ಹೀಗಾಗಿ ವಚನ ಸಾಹಿತ್ಯ ಸಂಗ್ರಹ-ಸಂಪಾದನೆ ಹಾಗೂ ವಚನಕಾರರ ಅಂಕಿತಶೋಧ, ಕಾಲನಿರ್ಣಯ, ವಚನಗಳ ನಿರ್ವಚನ ಹಾಗೂ ವಚನ ಸಂಬಂಧಿ ಅನುಷ್ಠಾನಕ್ಕೆ ತಂದ ಯೋಜನೆಗಳನ್ನು ವಿಶ್ಲೇಷಿಸುವುದು ಈ ಅಧ್ಯಯನದ ವ್ಯಾಪ್ತಿಯಾಗಿದೆ.

**ಅಧ್ಯಯನದ ಸ್ವರೂಪ**

ಎಂ.ಎಂ.ಕಲಬುರ್ಗಿ ಅವರ ವಚನ ವ್ಯವಸಾಯ: ಒಂದು ಅಧ್ಯಯನ ಈ ಮಹಾಪ್ರಬಂಧವು ಏಳು ಅಧ್ಯಾಯಗಳನ್ನು ಒಳಗೊಂಡಿದೆ. ಎಂ.ಎಂ.ಕಲಬುರ್ಗಿ ಅವರು ಹಲವು ಕ್ಷೇತ್ರಗಳಲ್ಲಿ ಕಾರ್ಯ ಕೈಗೊಂಡಿದ್ದರೂ ವಚನ ಸಾಹಿತ್ಯದಲ್ಲಿ ಸಾಕಷ್ಟು ಕಾರ್ಯ ನಿರ್ವಹಿಸಿರುವುದು ವಿಶೇಷ ಸಂಗತಿಯಾಗಿದೆ. ಹೊಸ ವಚನಗಳನ್ನು ಹುಡುಕುವ, ವಚನಗಳನ್ನು ವಿವಿಧ ನೆಲೆಗಳಲ್ಲಿ ಅಧ್ಯಯನ ಮಾಡುವ, ವಚನಗಳ ಪರಿಷ್ಕರಣ ಸಂಪಾದನೆಗೆ ಹೊಸ ವೈಧಾನಿಕತೆಯನ್ನು ರೂಪಿಸಿಕೊಂಡ ಬಗೆ, ಹಾಗೆಯೇ ವಚನ ಸಾಹಿತ್ಯವನ್ನು ವಿಶ್ವಮಾನ್ಯ ಮಟ್ಟಕ್ಕೆ ಕೊಂಡೊಯ್ಯುವ ಹಂಬಲವನ್ನು ಹಾಗೂ ಸೃಜನಶೀಲ ಪಠ್ಯದಲ್ಲೂ ವಚನವನ್ನೇ ಕೇಂದ್ರವಾಗಿಟ್ಟುಕೊಂಡು ರಚನೆ ಮಾಡಿದ ಬಗೆಯನ್ನು ಈ ಮಹಾಪ್ರಬಂಧದಲ್ಲಿ ನೋಡಬಹುದು. ಈ ಮೂಲಕ ಅಧ್ಯಯನಕ್ಕೆ ಬೇಕಾದ ರಾಚನಿಕ ಸ್ವರೂಪವನ್ನು ಸಿದ್ಧಪಡಿಸಲಾಗಿದೆ.

**ಅಧ್ಯಾಯ: ಒಂದು**

ಎಂ. ಎಂ. ಕಲಬುರ್ಗಿ ಅವರ ವಚನಸಾಹಿತ್ಯದ ಕಾರ್ಯಗಳನ್ನು ಒಂದು ಶೈಕ್ಷಣಿಕ ಹಿನ್ನೆಲೆಯಲ್ಲಿ ಚರ್ಚಿಸುವ ಅಗತ್ಯ ಹೊಂದಿರುವ ಈ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪವನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ: ಎರಡು**

ಎಂ.ಎಂ.ಕಲಬುರ್ಗಿ ಅವರ ವಚನ ವ್ಯವಸಾಯ: ಇದುವರೆಗಿನ ಅಧ್ಯಯನಗಳ ಸಮೀಕ್ಷೆಯಲ್ಲಿ ಈ ಅಧ್ಯಾಯದಲ್ಲಿ ಎಂ.ಎಂ.ಕಲಬುರ್ಗಿ ಅವರ ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಎಂ.ಫಿಲ್. ಪ್ರಬಂಧಗಳು, ಪಿಎಚ್.ಡಿ. ಮಹಾಪ್ರಬಂಧಗಳು, ಕೃತಿಗಳು ಹಾಗೂ ಲೇಖನಗಳು ಎಂದು ವರ್ಗೀಕರಿಸಿಕೊಂಡು ಸಮೀಕ್ಷೆ ಮಾಡಲಾಗಿದೆ.

**ಅಧ್ಯಾಯ: ಮೂರು**

'ಎಂ.ಎಂ.ಕಲಬುರ್ಗಿ: ವಚನ ಶೋಧ' ಇದರಲ್ಲಿ ಎಂ.ಎಂ.ಕಲಬುರ್ಗಿ ಅವರು ಹೊಸದಾಗಿ ಶೋಧಿಸಿದ ವಚನಗಳನ್ನು ಸಮೀಕ್ಷಿಸಲಾಗಿದೆ. ಎಂ.ಎಂ.ಕಲಬುರ್ಗಿ ಅವರು ವಚನ ಸಾಹಿತ್ಯವನ್ನು ಸಂಪಾದನೆ ಮಾಡುವ ಸಂದರ್ಭದಲ್ಲಿ, ಹಾಗೆಯೇ ಅಧ್ಯಯನ ಮಾಡುವ ಸಂದರ್ಭದಲ್ಲಿ ಅವರಿಗೆ ಗೋಚರವಾದ ಹಲವು ವಚನಗಳನ್ನು ಪ್ರಕಟಿಸಿದ್ದಾರೆ. ಬಸವಣ್ಣ, ಅಲ್ಲಮಪ್ರಭು, ಚೆನ್ನಬಸವಣ್ಣ ಹೀಗೆ ಹಲವು ವಚನಕಾರರ ಹೊಸ ವಚನಗಳನ್ನು ಶೋಧಿಸಿದ್ದಾರೆ. ಅದರಲ್ಲೂ ಚೆನ್ನಬಸವಣ್ಣನವರ ಸಮಗ್ರ ವಚನ ಸಾಹಿತ್ಯವನ್ನು ಸಂಪಾದನೆ ಮಾಡಬೇಕೆಂಬ ಹಂಬಲದಿಂದ ಎಡೆಬಿಡದೆ ಸಂಪಾದನಾ ಕಾರ್ಯದಲ್ಲಿ ತೊಡಗಿದಾಗ ಒಂದು ಕೃತಿಯಲ್ಲಿ ಚೆನ್ನಬಸವಣ್ಣನವರ ೮ ಹೊಸ ವಚನಗಳನ್ನು, ಇನ್ನೂ ಕೆಲವು ಕೃತಿಗಳಲ್ಲಿ ಹಲವು ವಚನಗಳನ್ನು ಶೋಧಿಸಿರುವುದು ವಿಶೇಷವಾಗಿ ಕಂಡುಬರುತ್ತದೆ.

**ಅಧ್ಯಾಯ: ನಾಲ್ಕು**

ಎಂ.ಎಂ.ಕಲಬುರ್ಗಿ ಅವರ ವಚನಸಂಬಂಧಿ ಅಧ್ಯಯನವನ್ನು ವಚನಗಳ ತತ್ವ ಸಿದ್ಧಾಂತಗಳ ಅಧ್ಯಯನ, ವಚನಕಾರರ ಅಧ್ಯಯನ ಹಾಗೂ ವಚನ ಕೃತಿಗಳ ಅಧ್ಯಯನ ಎಂದು ಮೂರು ರೀತಿಯಲ್ಲಿ ವಿಭಾಗಿಸಿಕೊಂಡು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಮೌಲ್ಯ-ಆದರ್ಶಗಳ ನಡುವೆ ವಚನ ಸಾಹಿತ್ಯ ಬದುಕನ್ನು ಕಟ್ಟಿಕೊಟ್ಟ ವಿಧಾನವನ್ನು ಎಂ.ಎಂ. ಕಲಬುರ್ಗಿ ಅವರ ಅಧ್ಯಯನದಿಂದ ನಿರೂಪಿಸಲಾಗಿದೆ.

**ಅಧ್ಯಾಯ: ಐದು**

"ಎಂ.ಎಂ.ಕಲಬುರ್ಗಿ: ವಚನ ಪರಿಷ್ಕರಣೆ-ಸಂಪಾದನೆ" ಇದರಲ್ಲಿ ಎಂ.ಎಂ.ಕಲಬುರ್ಗಿ ಅವರ ಸಂಪಾದನ ಕಾರ್ಯವನ್ನು ಸಂಗ್ರಹ, ಸಂಕಲನ ಮತ್ತು ಸಂಪಾದನೆ ಎಂದು ಮೂರು ನೆಲೆಯಲ್ಲಿ ಗುರುತಿಸಬಹುದು. ಯಾವುದೇ ತಾತ್ವಿಕ ಹಿನ್ನೆಲೆಯನ್ನು ಇಟ್ಟುಕೊಳ್ಳದೆ ಒಬ್ಬೊಬ್ಬ ಅಥವಾ ಹಲವು ವಚನಕಾರ/ವಚನಕಾರ್ತಿಯರ ವಚನಗಳನ್ನು ಒಂದೆಡೆ ಸಂಪಾದಿಸುವುದು

ಸಂಗ್ರಹ, ಒಂದು ತಾತ್ವಿಕತೆಯನ್ನು ಇಟ್ಟುಕೊಂಡು ಸ್ಥಲಸಹಿತವಾಗಿ ಇಲ್ಲವೇ ಸ್ಥಲರಹಿತವಾಗಿ ಸಂಪಾದನೆ ಮಾಡುವುದು ಸಂಕಲನ ಎನಿಸುತ್ತದೆ. ಹಾಗೆಯೇ ಸಂಭಾಷಣೆಯ ರೂಪದಲ್ಲಿ ವಚನ, ಸ್ವರವಚನಗಳಿಗೆ ಅಲ್ಲಲ್ಲಿ ಸ್ವಯಂರಚಿತ ಗದ್ಯವನ್ನು ಜೋಡಿಸುವ ಕಾರ್ಯ ಸಂಪಾದನೆ ಎನಿಸುತ್ತದೆ. ಈ ಮೂರು ನೆಲೆಯಲ್ಲಿ ಎಂ.ಎಂ.ಕಲಬುರ್ಗಿ ಅವರು ಸಂಪಾದನ ಕಾರ್ಯವನ್ನು ಪೂರೈಸಿದ್ದಾರೆ. ಗ್ರಂಥಸಂಪಾದನೆ ಎಂದರೆ ಪಾಠಪರಿಷ್ಕರಣೆ ಎಂದರ್ಥ. ಹಸ್ತಪ್ರತಿಗಳಲ್ಲಿ ಸ್ಖಾಲಿತ್ಯ ಹಾಗೂ ಪಾಠಾಂತರಗಳಿಗೆ ಕವಿ, ಸಹೃದಯ ಹಾಗೂ ಲಿಪಿಕಾರರು ಕಾರಣರಾಗುತ್ತಾರೆ. ಅದರಲ್ಲೂ ದೇಸಿ ಸಾಹಿತ್ಯದಲ್ಲಿ ಪಾಠಾಂತರಗಳು ಹೆಚ್ಚು. ಇಂಥ ಪಾಠಪರಿಷ್ಕರಣ ಪಾಠಾಂತರ ಶೋಧದಲ್ಲಿ ಸಾಂಸ್ಕೃತಿಕ ಪರಿಷ್ಕರಣ, ಪರಿಷ್ಕರಣದ ಪರಿಷ್ಕರಣ ಮಾದರಿಗಳನ್ನು ಎಂ.ಎಂ.ಕಲಬುರ್ಗಿ ಅವರು ಮೊದಲ ಬಾರಿಗೆ ಅನುಸರಿಸಿದ್ದಾರೆ.

ಉದಾಹರಣೆಗೆ: ನಿಮ್ಮ ಮೈಸಿರಿ ಹಾರಿಹೋಹುದೇ> ನಿಮ್ಮೈಸಿರಿ ಹಾರಿಹೋಹುದೇ,

ಸೋಂಕಿನಲ್ಲಿ ಸುಖಿ>ಸೋಂಕಿನಲ್ಲಿ ಶುಚಿ

ಮುಂತಾದವು ಎಂ.ಎಂ.ಕಲಬುರ್ಗಿ ಅವರ ವಚನ ಪಾಠಶೋಧದಲ್ಲಿನ ಕೆಲವು ಮಾದರಿಗಳು. ಈ ರೀತಿಯ ಪರಿಷ್ಕರಣ ಮಾದರಿಯನ್ನು ಈ ಅಧ್ಯಯದಲ್ಲಿ ವಿವೇಚಿಸಲಾಗಿದೆ. ಹಾಗೆಯೇ ಅವರು ಸಂಪಾದಿಸಿದ ಕೃತಿಗಳ ವೈಧಾನಿಕತೆಯ ಜೊತೆಗೆ ಸಂಪಾದನೆಗೊಂಡ ಕೃತಿಗಳನ್ನು ಪರಿಚಯಿಸಲಾಗಿದೆ.

**ಅಧ್ಯಾಯ: ಆರು**

"ಎಂ.ಎಂ.ಕಲಬುರ್ಗಿ: ವಚನ ಭಾಷಾಂತರ ಯೋಜನೆ" ಈ ಅಧ್ಯಾಯದಲ್ಲಿ ಎಂ.ಎಂ. ಕಲಬುರ್ಗಿ ಅವರು ಕೇವಲ ವಚನ ಸಾಹಿತ್ಯದ ಸಂಪಾದನಾಕಾರ್ಯದ ಕಡೆಗೆ ಮಾತ್ರ ಗಮನ ಕೊಡದೆ ಅದು ವಿಶ್ವಮಾನ್ಯಕ್ಕೆ ತಲುಪಬೇಕೆಂಬ ಉದ್ದೇಶದಿಂದ ಅನುವಾದ ಕಾರ್ಯದ ಕಡೆಗೂ ಗಮನ ಹರಿಸಿದರು. ಇದುವರೆಗೆ ಕೇವಲ ಪ್ರಮುಖ ವಚನಕಾರರನ್ನು ಕುರಿತಂತೆ ಹಾಗೂ ಅತಿ ಹೆಚ್ಚಿನದಾಗಿ ಇಂಗ್ಲಿಷ್ ಭಾಷೆಗೆ ಅನುವಾದವಾಗಿರುವ ವಚನಗಳು ಕಂಡುಬರುತ್ತವೆ. ಆದರೆ ಈ ಅಧ್ಯಾಯದಲ್ಲಿ ಎಂ.ಎಂ. ಕಲಬುರ್ಗಿ ಅವರು ಬಸವಸಮಿತಿಯ ನೆರವಿನಿಂದ ೨೫೦೦ ವಚನಗಳನ್ನು ೨೩ ಭಾಷೆಗಳಿಗೆ ಅನುವಾದದ ದೊಡ್ಡ ಯೋಜನೆಯನ್ನು ಕೈಗೊಳ್ಳುವ ಮೂಲಕ ಅದನ್ನು ಪೂರ್ಣಗೊಳಿಸುವಲ್ಲಿ ಸಾಕಷ್ಟು ಶ್ರಮ ವಹಿಸಿರುವುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಅಧ್ಯಾಯ: ಏಳು**

"ಎಂ.ಎಂ.ಕಲಬುರ್ಗಿ: ವಚನ ಸಾಹಿತ್ಯ ಹಾಗೂ ಸೃಜನಶೀಲ ಪಠ್ಯ ಕೆಟ್ಟಿತ್ತು ಕಲ್ಯಾಣ" ಈ ಅಧ್ಯಾಯದಲ್ಲಿ ಎಂ.ಎಂ.ಕಲಬುರ್ಗಿ ಅವರು ವಚನ ಸಾಹಿತ್ಯವನ್ನೇ ಕೇಂದ್ರವಾಗಿಟ್ಟುಕೊಂಡು ಸೃಜನಶೀಲ ಪಠ್ಯವಾದ 'ಕೆಟ್ಟಿತ್ತು ಕಲ್ಯಾಣ' ನಾಟಕವನ್ನು ರಚನೆ ಮಾಡಿರುವುದು ವಿಶೇಷ ಸಂಗತಿಯಾಗಿದೆ. ವಚನ ಚಳುವಳಿಯ ಹಿನ್ನೆಲೆಯಲ್ಲಿ ರಚನೆಯಾದ ಈ ನಾಟಕವು ಬೇರೆ ಲೇಖಕರ ನಾಟಕಗಳಿಗಿಂತ ಭಿನ್ನವಾಗಿ ರಚನೆಗೊಂಡ ಬಗೆಯನ್ನು ಚರ್ಚಿಸಲಾಗಿದೆ. ವಚನ ಸಾಹಿತ್ಯದ ಹಿನ್ನೆಲೆಯಲ್ಲಿಯೇ ಈ ನಾಟಕವನ್ನು ರಚನೆ ಮಾಡಿರುವುದು ಎಂ.ಎಂ.ಕಲಬುರ್ಗಿ ಅವರ ಸೃಜನಶೀಲ ಸಾಹಿತ್ಯದ ವೈಶಿಷ್ಟ್ಯತೆಯನ್ನು ನಿರೂಪಿಸುವ ಅಧ್ಯಯನವಾಗಿದೆ.

**ಅಧ್ಯಾಯ: ಎಂಟು**

ಇದುವರೆಗೆ ಅಧ್ಯಯನದಿಂದ ಕಂಡುಕೊಂಡ ಅಧ್ಯಯನದ ಫಲಿತಗಳನ್ನು ಹಾಗೂ ಫಲಶ್ರುತಿಗಳನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

**ಅನುಬಂಧಗಳು**

ಮುಂದಿನ ಅಧ್ಯಯನಕಾರರ ಅನುಕೂಲಕ್ಕಾಗಿ ಎಂ. ಎಂ. ಕಲಬುರ್ಗಿ ಅವರ ವಚನ ಸಾಹಿತ್ಯ ಸಂಬಂಧಿ ಕೃತಿಗಳನ್ನು ಹಾಗೂ ಲೇಖನಗಳನ್ನು ಸೂಚಿರೂಪದಲ್ಲಿ ನೀಡಲಾಗಿದೆ. ಪ್ರಬಂಧಕ್ಕೆ ಪೂರಕವಾಗಿ ಬಳಸಿಕೊಂಡ ಪ್ರಧಾನ ಆಕರಗಳು ಹಾಗೂ ಪೂರಕ ಆಕರಗಳಾಗಿ ಬಳಕೆಮಾಡಿಕೊಂಡ ಪರಾಮರ್ಶನ ಗ್ರಂಥಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

## ಅಧ್ಯಾಯ: ಎರಡು

# ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಎಂ.ಎಂ.ಕಲಬುರ್ಗಿ ಅವರು ಕನ್ನಡ ನಾಡು ಕಂಡ ಅಪರೂಪದ ಸಂಶೋಧಕರು. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಆರ್.ಸಿ.ಹಿರೇಮಠ ಅಧ್ಯಯನ ಪೀಠದ ಪ್ರಾಧ್ಯಾಪಕರಾಗಿ ಭಾಷೆ, ಸಾಹಿತ್ಯ, ಸಂಸ್ಕೃತಿ ಕ್ಷೇತ್ರದಲ್ಲಿ ದುಡಿದವರು. ಸಂಶೋಧನೆ, ಗ್ರಂಥಸಂಪಾದನೆ ಅವರ ಆಸಕ್ತಿಯ ವಿಷಯಗಳು. ಪ್ರಾಚೀನ ಕಾವ್ಯ, ವಚನ ಸಾಹಿತ್ಯ ಮತ್ತು ಚಾರಿತ್ರಿಕ ಕೃತಿಗಳನ್ನು ಶೋಧಿಸಿ, ಪರಿಷ್ಕರಿಸಿ ಪ್ರಕಟಿಸುವುದರ ಮೂಲಕ ಕನ್ನಡ ಸಂಶೋಧನ ಕ್ಷೇತ್ರಕ್ಕೆ ಮತ್ತು ಗ್ರಂಥ ಸಂಪಾದನ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ಹಾಗೆ ನೋಡಿದರೆ ಎಂ.ಎಂ. ಕಲಬುರ್ಗಿ ಅವರ ಕಾವ್ಯಶೋಧ ಪ್ರಕಟಣೆ, ಶಾಸನ ಶೋಧ ಮತ್ತು ಅಧ್ಯಯನ ಕುರಿತು ಪ್ರತ್ಯೇಕವಾಗಿ ಅಧ್ಯಯನ ಮಾಡುವಷ್ಟು ಅವರು ಆ ಕ್ಷೇತ್ರಗಳಲ್ಲಿ ಕೃಷಿ ಮಾಡಿದ್ದಾರೆ. ಹೀಗಾಗಿ ಪ್ರಸ್ತುತ "ಎಂ.ಎಂ.ಕಲಬುರ್ಗಿ ಅವರ ವಚನ ವ್ಯವಸಾಯ: ಒಂದು ಅಧ್ಯಯನ" ಎಂಬ ಶೀರ್ಷಿಕೆಯು ವಿಶೇಷವಾಗಿ ಎಂ.ಎಂ.ಕಲಬುರ್ಗಿಯವರ ವಚನ ಸಾಹಿತ್ಯ ಕುರಿತಾದ ಅಧ್ಯಯನವನ್ನು ಒಳಗೊಂಡಿದೆ.

ಎಂ.ಎಂ.ಕಲಬುರ್ಗಿ ಅವರ ವಚನ ಸಾಹಿತ್ಯ ಕುರಿತಂತೆ ಈಗಾಗಲೇ ಹಲವಾರು ವಿದ್ವಾಂಸರು ಚರ್ಚೆ, ಸಂವಾದಗಳನ್ನು ಮಾಡಿದ್ದಾರೆ. ಏಕೆಂದರೆ ಕರ್ನಾಟಕದಲ್ಲಿ ವಚನ ಸಾಹಿತ್ಯ ಮತ್ತು ವಚನಕಾರರ ಮೇಲೆ ಅಧಿಕೃತವಾಗಿ ಮಾತನಾಡಬಲ್ಲ ವಿರಳ ವಿದ್ವಾಂಸರಲ್ಲಿ ಎಂ.ಎಂ.ಕಲಬುರ್ಗಿ ಅವರು ಒಬ್ಬರು. ಗುರುಗಳಾದ ಆರ್.ಸಿ.ಹಿರೇಮಠರ ಪರಿಸರದಲ್ಲಿ ಬೆಳೆದ ಎಂ.ಎಂ.ಕಲಬುರ್ಗಿ ಅವರಿಗೆ ವಚನ ಸಾಹಿತ್ಯ ಪ್ರಕಟಣ ಯೋಜನೆಯಲ್ಲಿ ದುಡಿಯುವ ಅವಕಾಶ ಸಿಕ್ಕಿದ್ದು ಅವರ ಈ ಕ್ಷೇತ್ರದ ಆಸಕ್ತಿಗೆ ಕಾರಣವೆನ್ನಬಹುದು. ಬಸವೇಶ್ವರ ಪೀಠದ ಪ್ರಾಧ್ಯಾಪಕ ಮತ್ತು ನಿರ್ದೇಶಕರು ಆದ ಎಂ.ಎಂ.ಕಲಬುರ್ಗಿ ಅವರು ವಚನ ಸಾಹಿತ್ಯದ ಪ್ರಮಾಣ ಮತ್ತು ಪ್ರಕಟಣೆಯನ್ನು ನಾಡಿಗೆ ಪರಿಚಯಿಸಬೇಕೆಂಬ ಉದ್ದೇಶದಿಂದ ಕೆಲವು

ಯೋಜನೆಗಳನ್ನು ರೂಪಿಸಿದರು. ಅಂದರೆ ವಚನ ಸಂಗ್ರಹ, ಅಧ್ಯಯನ ಮತ್ತು ಪ್ರಕಟಣ ನೆಲೆಯಲ್ಲಿ ವಚನ ಸಾಹಿತ್ಯದ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಎಂ.ಎಂ.ಕಲಬುರ್ಗಿ ಅವರ ಈ ಕೆಲಸವನ್ನು ಅನೇಕ ವಿದ್ವಾಂಸರು ಹೀಗಾಗಲೇ ಲೇಖನ ರೂಪದಲ್ಲಿ, ಕೃತಿಗಳ ರೂಪದಲ್ಲಿ, ಸಂದರ್ಶನ ರೂಪದಲ್ಲಿ, ಅಧ್ಯಯನದ ರೂಪದಲ್ಲಿ ಪರಿಚಯಿಸುವ ಕೆಲಸವನ್ನು ಮಾಡಿದ್ದಾರೆ. ಆ ಎಲ್ಲಾ ಕಾರ್ಯಗಳನ್ನು ಸಮೀಕ್ಷಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

ಎಂ.ಎಂ.ಕಲಬುರ್ಗಿ ಅವರ ವಚನ ಸಾಹಿತ್ಯ ಕುರಿತಾದ ಅಧ್ಯಯನದ ಸಮೀಕ್ಷೆಯನ್ನು ಮೂರು ನೆಲೆಗಳಲ್ಲಿ ಸಮೀಕ್ಷಿಸಲಾಗಿದೆ. ಅವುಗಳೆಂದರೆ: ಅಧ್ಯಯನಗಳು, ಕೃತಿಗಳು ಹಾಗೂ ಲೇಖನಗಳು.

## ೨.೧. ಅಧ್ಯಯನಗಳು

ಎಂ.ಎಂ.ಕಲಬುರ್ಗಿ ಅವರ ಆಸಕ್ತಿ ಕ್ಷೇತ್ರಗಳೆಂದರೆ ಗ್ರಂಥಸಂಪಾದನೆ ಮತ್ತು ಸಂಶೋಧನೆ. ಈ ಕಾರಣವಾಗಿ ಅವರು ಕನ್ನಡ ಗ್ರಂಥಸಂಪಾದನ ಶಾಸ್ತ್ರ ಹಾಗೂ ಕನ್ನಡ ಸಂಶೋಧನಶಾಸ್ತ್ರ ಎಂಬ ಎರಡು ವೈಧಾನಿಕತೆಯನ್ನು ನಿರೂಪಿಸುವ ಕೃತಿಗಳನ್ನು ರಚಿಸಿದ್ದಾರೆ. ಈ ಎರಡೂ ವಿಧಾನಗಳನ್ನು ತಮ್ಮ ಸಂಶೋಧನೆ ಹಾಗೂ ಗ್ರಂಥಸಂಪಾದನೆಯಲ್ಲಿ ಅಳವಡಿಸಿಕೊಂಡಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ವಿದ್ಯಾರ್ಥಿ–ವಿದ್ವಾಂಸರಾಗಿರುವ ಎಂ.ಎಂ.ಕಲಬುರ್ಗಿ ಅವರಿಗೆ ಚಾರಿತ್ರಿಕ ಪ್ರಜ್ಞೆ ಮೊದಲಿನಿಂದಲೂ ಅಧ್ಯಯನದ ಆಸಕ್ತಿ ಕ್ಷೇತ್ರವಾಗಿರುವುದನ್ನು ಗಮನಿಸಬಹುದು. ಈ ಕಾರಣವಾಗಿ ವಚನ ಸಾಹಿತ್ಯದಷ್ಟೇ ಇತರೆ ಕನ್ನಡ ಕಾವ್ಯಗಳ ಪರಾಮರ್ಶೆ, ಶಾಸನಗಳ ಅಧ್ಯಯನ, ಶಾಸ್ತ್ರ ಕೃತಿಗಳ ವಿಶ್ಲೇಷಣೆ, ಚಾರಿತ್ರಿಕ ಕಾವ್ಯಗಳ ಸಂಪಾದನೆ ಹೀಗೆ ಭಾಷೆ, ಸಾಹಿತ್ಯ, ಸಂಸ್ಕೃತಿ, ಚರಿತ್ರೆ ಮುಂತಾದ ಹಲವು ಹತ್ತು ಕ್ಷೇತ್ರಗಳನ್ನು ಪ್ರತಿನಿಧಿಸುವ ರೀತಿಯಲ್ಲಿ ಶ್ರೀಯುತರ ಸಾಹಿತ್ಯ ಕೃಷಿ ನಡೆದಿದೆ. ಈ ಕಾರಣವಾಗಿ ಎಂ.ಎಂ.ಕಲಬುರ್ಗಿ ಅವರನ್ನು ಮತ್ತು ಅವರ ಸಾಹಿತ್ಯವನ್ನು ಕುರಿತು ಅಧ್ಯಯನಗಳು ನಡೆದಿವೆ. ಅವುಗಳನ್ನು ಇಲ್ಲಿ ಸಮೀಕ್ಷಿಸುವುದು ಔಚಿತ್ಯಪೂರ್ಣವೆಂದು ಭಾವಿಸುತ್ತೇನೆ.

ಎಂ.ಎಂ.ಕಲಬುರ್ಗಿ ಅವರ ಮಾರ್ಗ ಲೇಖನ ಸಂಪುಟಗಳನ್ನು ಕುರಿತು ಡಾ.ಕಲ್ಯಾಣರಾವ್ ಜಿ.ಪಾಟೀಲ ಅವರು ೨೦೧೭ರಲ್ಲಿ "ಡಾ.ಎಂ.ಎಂ.ಕಲಬುರ್ಗಿ ಅವರ ಶೋಧಗಳು" ಎಂಬ ಮಹಾಪ್ರಬಂಧವು ಕೃತಿರೂಪದಲ್ಲಿ ಪ್ರಕಟವಾಗಿದೆ. ಈ ಮಹಾಪ್ರಬಂಧದ ಮಾರ್ಗದರ್ಶಕರು ಡಾ.ವೀರಣ್ಣ ದಂಡೆ ಅವರು. ಪ್ರಸ್ತುತ ಅಧ್ಯಯನ ಎಂಟು ಅಧ್ಯಾಯಗಳನ್ನು ಒಳಗೊಂಡಿದೆ. ಈ ಎಲ್ಲಾ ಅಧ್ಯಾಯಗಳು ಎಂ.ಎಂ.ಕಲಬುರ್ಗಿ ಅವರ ವಚನ ಸಾಹಿತ್ಯ ಶೋಧಗಳಿಗೆ ಮಾತ್ರ ಸಂಬಂಧಿಸಿರುವುದಿಲ್ಲ. ಶಾಸನ, ಹಳಗನ್ನಡ, ನಡುಗನ್ನಡ, ಗ್ರಂಥಸಂಪಾದನೆ, ಹೊಸಗನ್ನಡ,

ವಿಮರ್ಶೆ ಕುರಿತಂತೆ ಅಧ್ಯಯನವನ್ನು ಮಾಡಲಾಗಿದೆ. ಅಧ್ಯಾಯ ಆರರಲ್ಲಿ ವಚನಸಾಹಿತ್ಯ ಸಾಂಸ್ಕೃತಿಕ ಶೋಧಗಳು ಎಂದು ಶ್ರೀಯುತರ ಅಧ್ಯಯನವನ್ನು ವ್ಯಕ್ತಿ ವಿಶಿಷ್ಟ ಶೋಧಗಳು, ಅಂದರೆ ಬಸವಣ್ಣ, ದಾಸಿಮಯ್ಯ, ಅಲ್ಲಮಪ್ರಭು, ಸಿದ್ಧರಾಮ ಹೀಗೆ ಶರಣರನ್ನು ಕುರಿತು ಬರೆದ ಲೇಖನಗಳನ್ನು ವಿಶ್ಲೇಷಿಸಲಾಗಿದೆ. ವಚನ ಸಾಹಿತ್ಯ ಸಂಪಾದನೆ ಮತ್ತು ಪರಿಷ್ಕರಣೆಗೆ ಸಂಬಂಧಿಸಿದಂತೆ ಹಾಗೂ ವಚನಮೀಮಾಂಸೆಗೆ ಸಂಬಂಧಿಸಿದಂತೆ ಮತ್ತು ವಚನ ನಿರ್ವಚನ ಕುರಿತಂತೆ ಬರೆದ ಲೇಖನಗಳನ್ನು ಇಲ್ಲಿ ಚರ್ಚಿಸಲಾಗಿದೆ. ಅಂದರೆ, ಮುಖ್ಯವಾಗಿ 'ವಚನ ಸಾಹಿತ್ಯ: ಸಾಂಸ್ಕೃತಿಕ ಶೋಧಗಳು' ಎಂಬ ಅಧ್ಯಾಯ ಆರರಲ್ಲಿ ವಚನಸಂಬಂಧಿ ಲೇಖನಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಈ ಮಹಾಪ್ರಬಂಧದಲ್ಲಿ ಚರ್ಚಿಸಲಾದ ಎಂ.ಎಂ.ಕಲಬುರ್ಗಿ ಅವರ ವಚನ ಸಾಹಿತ್ಯ ಅಧ್ಯಯನವನ್ನು ಪರಿಚಯಿಸುವ ಹಾಗೂ ಪರಿಷ್ಕರಣೆ ಕುರಿತಂತೆ ಸ್ವಲ್ಪಮಟ್ಟಿನ ಕೆಲಸ ಮಾತ್ರ ಆಗಿದೆ. ಆದರೆ ವಚನ ಸಾಹಿತ್ಯ ಸಂಪಾದನೆ ಮತ್ತು ಪರಿಷ್ಕರಣೆ ಕನ್ನಡ ಗ್ರಂಥಸಂಪಾದನ ಶಾಸ್ತ್ರದಲ್ಲಿ ಒಂದು ವಿಧಾನವನ್ನು ರೂಪಿಸಿಕೊಂಡು ಮಾಡಬೇಕಾದ ಕೆಲಸ. ಹೀಗಾಗಿ ದೇಶಿಸಾಹಿತ್ಯ ಪ್ರಕಾರವಾದ ವಚನ ಸಾಹಿತ್ಯವನ್ನು ಕುರಿತು ಎಂ.ಎಂ.ಕಲಬುರ್ಗಿ ಅವರ ಸಂಪಾದನೆ ಮತ್ತು ಪರಿಷ್ಕರಣೆಗಳು ಒಂದು ವಿನೂತನ ಸಂಪಾದನ ವಿಧಾನವನ್ನೇ ರೂಪಿಸಿಕೊಡಲು ಸಾಧ್ಯವಾಗಿದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನದ ಮಿತಿ ಎನಿಸಿದೆ. ಎಂ.ಎಂ.ಕಲಬುರ್ಗಿ ಅವರ ವಚನ ವ್ಯವಸಾಯ ಎಂದಾಕ್ಷಣ ಕೇವಲ ಸಂಪಾದನೆಯ ವಚನಗಳನ್ನು ನಿರ್ವಚನ ಮಾಡುವುದು ಹಾಗೂ ಅವುಗಳಲ್ಲಿಯ ಕಾವ್ಯತತ್ವವನ್ನು ಶೋಧಿಸುವುದು ಮಾತ್ರ ಅಲ್ಲ, ಅಪ್ರಕಟಿತ ಸ್ಥಿತಿಯಲ್ಲಿ ಉಳಿದ ವಚನಗಳನ್ನು ಸರ್ವೇಕ್ಷಣೆ ಮಾಡುವುದು ಆದ್ಯ ಕರ್ತವ್ಯ ಎನಿಸಿದೆ. ಈ ದೃಷ್ಟಿಯಿಂದಲೂ ಈ ಅಧ್ಯಯನ ಉಳಿದ ಅಧ್ಯಯನಕ್ಕಿಂತ ಭಿನ್ನ ಸ್ವರೂಪವನ್ನು ಪಡೆಯಲು ಸಾಧ್ಯವಾಗಿದೆ.

೧೯೯೭ರಲ್ಲಿ ಶ್ರೀ ಮಲ್ಲನಾಯ್ಕ ದಾದಾನಾಯ್ಕರ ಅವರು "ಗ್ರಂಥಸಂಪಾದನೆ : ಡಾ.ಎಂ.ಎಂ. ಕಲಬುರ್ಗಿ ಅವರ ಸಾಧನೆ" ಎಂಬ ವಿಷಯದ ಮೇಲೆ ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ.ಫಿಲ್. ಪದವಿ ಪಡೆದಿದ್ದಾರೆ. ಈ ಕಿರುಪ್ರಬಂಧದಲ್ಲಿ ಸಂಶೋಧಕರು ಎಂ.ಎಂ.ಕಲಬುರ್ಗಿ ಅವರ ಗ್ರಂಥಸಂಪಾದನೆಯನ್ನು ಕುರಿತು ವೈಯಕ್ತಿಕ ಸಂಪಾದನೆ, ಜಂಟಿಸಂಪಾದನೆ ಹಾಗೂ ನಿರ್ದೇಶನ ಸಂಪಾದನೆ ಎಂದು ವರ್ಗೀಕರಿಸಿದ್ದಾರೆ. ಈ ಮೂರು ವರ್ಗೀಕರಣದಲ್ಲಿ ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳೆಂದರೆ ಬಸವಣ್ಣನವರ ಟೀಕಿನ ವಚನಗಳು ಸಂ.೧, ಸಂ.೨, ಚೆನ್ನಬಸವಣ್ಣನವರ ಷಟ್‌ಸ್ಥಲವಚನ ಮಹಾಸಂಪುಟಗಳು ಸೇರಿಕೊಂಡಿವೆ. ಹೆಚ್ಚಾಗಿ ಕಾವ್ಯಸಾಹಿತ್ಯ ಸಂಪಾದನೆಗೆ ಒತ್ತುಕೊಟ್ಟು ಅಧ್ಯಯನ ಮಾಡಿರುವ ಈ ಕೃತಿಯಲ್ಲಿ ಚಾರಿತ್ರಿಕ ಕಾವ್ಯಗಳು, ದಾಖಲು ಸಾಹಿತ್ಯ ಮುಂತಾದ ಕೃತಿಗಳ ಸಂಪಾದನೆಯ ಮಹತ್ವವನ್ನು ಚರ್ಚಿಸಲಾಗಿದೆ. ಹಾಗೆ

ನೋಡಿದರೆ ಎಂ.ಫಿಲ್. ಕಿರುನಿಬಂಧಕ್ಕೆ ವಸ್ತುವ್ಯಾಪ್ತಿ ಹೆಚ್ಚಾಯಿತೆಂದು ತೋರುತ್ತದೆ. ವಿಶೇಷವಾಗಿ ಕನ್ನಡ ಗ್ರಂಥಸಂಪಾದನ ಹೆಸರಿನ ವೈಧಾನಿಕತೆ ನಿರೂಪಿಸುವ ಕೃತಿಯನ್ನು ರಚಿಸಿದ ಎಂ.ಎಂ.ಕಲಬುರ್ಗಿ ಅವರಿಗೆ ಚಾರಿತ್ರಿಕ ಕಾವ್ಯಸಂಪಾದನೆ, ವಚನ ಸಾಹಿತ್ಯ ಸಂಪಾದನೆ, ದಾಖಲು ಸಾಹಿತ್ಯ ಸಂಪಾದನೆ, ಬಸವರಾಜ ಕಟ್ಟೀಮನಿ ಅವರಂತಹ ಆಧುನಿಕ ಪ್ರಗತಿಶೀಲ ಸಾಹಿತಿಯ ಸಮಗ್ರ ಕಾದಂಬರಿಗಳ ಸಂಪಾದನೆ, ವಿಶೇಷವಾಗಿ ವಚನ ಪಿತಾಮಹ ಫ.ಗು.ಹಳಕಟ್ಟಿ ಅವರ ಸಮಗ್ರ ಸಾಹಿತ್ಯ ಸಂಪಾದನೆಯನ್ನು ಪೂರೈಸಿದವರು. ಹೀಗಾಗಿ ಒಂದೊಂದು ವಿಷಯಕ್ಕೆ ಅನುಸರಿಸಬಹುದಾದ ಸಂಪಾದನಾ ವೈಧಾನಿಕತೆಯನ್ನು ಈ ಎಂ.ಫಿಲ್. ನಿಬಂಧದಲ್ಲಿ ಚರ್ಚಿಸಬೇಕಾಗಿತ್ತು. ಬದಲಾಗಿ ಕೇವಲ ಸಂಪಾದಿತ ಕೃತಿಗಳ ಪಟ್ಟಿ ಸಂಪಾದನೆಗೆ ಬಳಸಿಕೊಂಡ ಹಸ್ತಪ್ರತಿಗಳು ಇತ್ಯಾದಿ ಮಾಹಿತಿಯನ್ನು ಎಂ.ಎಂ.ಕಲಬುರ್ಗಿ ಅವರ ಸಂಪಾದಿತ ಕೃತಿಗಳ ಸಂಪಾದಕೀಯ ಅಥವಾ ಪ್ರಸ್ತಾವನೆಯಿಂದ ಎತ್ತಿಕೊಂಡು ಚರ್ಚಿಸಲಾಗಿದೆ. ಆದರೆ ಸ್ವತಃ ತಾವು ಸಂಪಾದಿಸುವ ಕೃತಿಗಳಿಗೆ ಕೊಡುವ ಪ್ರಾಮುಖ್ಯತೆಯನ್ನೇ ಇತರರಿಗೆ ಹೇಳಿ ಮಾಡಿಸುವಾಗಲೂ ಅದೇ ಪ್ರಾಮುಖ್ಯತೆಯನ್ನು ಅವರಲ್ಲಿ ನೋಡಲು ಸಾಧ್ಯವಿದೆ. ಅದೇನೆ ಇರಲಿ ಎಂ.ಎಂ.ಕಲಬುರ್ಗಿ ಅವರ ಗ್ರಂಥಸಂಪಾದನ ಸಾಧನೆಯನ್ನು ಗುರುತಿಸುವಲ್ಲಿ ಈ ಕಿರುನಿಬಂಧ ಮಹತ್ವದ್ದಾಗಿದೆ.

ಸುಜಾತ ಎಸ್. ಅವರು ಪ್ರೊ.ಶ್ರೀನಿವಾಸಶರ್ಮ ಅವರ ಮಾರ್ಗದರ್ಶನದಲ್ಲಿ "ಡಾ.ಎಂ.ಎಂ. ಕಲಬುರ್ಗಿ ಅವರು ಹಸ್ತಪ್ರತಿಶಾಸ್ತ್ರಕ್ಕೆ ನೀಡಿದ ಕೊಡುಗೆ" ಎಂಬ ವಿಷಯದ ಮೇಲೆ ಕನ್ನಡ ವಿಶ್ವವಿದ್ಯಾಲಯದಿಂದ ೨೦೦೭ರಲ್ಲಿ ಎಂ.ಫಿಲ್. ಪದವಿಯನ್ನು ಪಡೆದಿದ್ದಾರೆ. ಹಸ್ತಪ್ರತಿಶಾಸ್ತ್ರ ಮತ್ತು ಗ್ರಂಥಸಂಪಾದನಶಾಸ್ತ್ರ ಒಂದೇ ಭೂಮಿಕೆಯಲ್ಲಿ ಕವಲೊಡೆದ ಎರಡು ಶಾಸ್ತ್ರಗಳು, ಪ್ರಸ್ತುತ ನಿಬಂಧದಲ್ಲಿ ಹಸ್ತಪ್ರತಿಶಾಸ್ತ್ರದ ಕೊಡುಗೆಯನ್ನು ಕುರಿತಂತೆ ಹೆಚ್ಚು ಚರ್ಚಿಸುವ ಬದಲಾಗಿ ಕಲಬುರ್ಗಿ ಅವರ ಗ್ರಂಥಸಂಪಾದನ ಕೃತಿಗಳ ಚರ್ಚೆಯನ್ನು ಒಂದು ಅಧ್ಯಯನದಲ್ಲಿ ನಿರೂಪಿಸಿದ್ದಾರೆ. ವಿಶೇಷವಾಗಿ ಗ್ರಂಥಗಳ ಸಂಗ್ರಹ ಹಾಗೂ ಪರಿಷ್ಕರಣ ಕುರಿತಂತೆ ೫ ಹಂತಗಳಲ್ಲಿ ಎಂ.ಎಂ.ಕಲಬುರ್ಗಿ ಅವರ ಸಂಪಾದನ ವೈಧಾನಿಕತೆಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಪ್ರಾಸಂಗಿಕವಾಗಿ ಕಾವ್ಯಸಂಪಾದನೆಯ ಜೊತೆಗೆ ವಚನ ಸಾಹಿತ್ಯ ಸಂಪಾದನೆ ಮತ್ತು ವಚನಗಳಿಗೆ ಒತ್ತು ನೀಡಿರುವುದನ್ನು ಗಮನಿಸಬೇಕಾಗಿದೆ. ಇಲ್ಲಿ ವಚನಸಂಬಂಧಿ ಹಸ್ತಪ್ರತಿಗಳ ಶೋಧ ಹಾಗೂ ವಚನಗಳ ಶೋಧದ ಬಗ್ಗೆ ಗಮನ ಹರಿಸದಿರುವುದು ಈ ನಿಬಂಧದ ಕೊರತೆ ಎನಿಸಿದೆ.

"ಡಾ.ಎಂ.ಎಂ. ಕಲಬುರ್ಗಿ ಅವರ ವಚನಸಂಪಾದನೆ : ಒಂದು ಅಧ್ಯಯನ" ಎಂಬ ವಿಷಯದ ಮೇಲೆ ಮಲ್ಲಿಕಾರ್ಜುನ ವಣೇನೂರ ಅವರ ಮಾರ್ಗದರ್ಶನದಲ್ಲಿ ೨೦೧೬ರಲ್ಲಿ

ಶ್ರೀಮತಿ ಗಂಗೂಬಾಯಿ ಎ. ಪವಾರ ಅವರು ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್. ನಿಬಂಧ ಆರು ಅಧ್ಯಾಯಗಳನ್ನು ಒಳಗೊಂಡಿದೆ. ಅಧ್ಯಯನದ ಉದ್ದೇಶ ಮತ್ತು ಸ್ವರೂಪ, ಎಂ.ಎಂ.ಕಲಬುರ್ಗಿ ಅವರ ಜೀವನ ಮತ್ತು ಸಾಧನೆ ಹಾಗೂ ವಚನ ಸಾಹಿತ್ಯ ಪ್ರಕಟಣೆ ಇತಿಹಾಸ ಎಂಬ ಮೂರು ಅಧ್ಯಾಯಗಳ ವಿಷಯವನ್ನು ಹೊರತುಪಡಿಸಿದರೆ ನಾಲ್ಕನೇ ಅಧ್ಯಾಯ ಮಾತ್ರ ಎಂ.ಎಂ.ಕಲಬುರ್ಗಿ ಅವರ ವಚನಸಂಪಾದನೆಗೆ ಮೀಸಲಾಗಿದೆ. ಈ ಸಂಪಾದನೆಯಲ್ಲಿ ವಚನಗಳು, ವಚನಸಂಕಲನ ಕೃತಿಗಳನ್ನು ಚರ್ಚಿಸಲಾಗಿದೆ. ಇಷ್ಟು ವಚನಸಂಬಂಧಿ ಚರ್ಚೆಯನ್ನು ಬಿಟ್ಟರೇ ಎಂ.ಎಂ.ಕಲಬುರ್ಗಿ ಅವರ ಸಂಪಾದನೆಯ ವೈಶಿಷ್ಟ್ಯಗಳಾದ ದೇಶಿಸಾಹಿತ್ಯ ಸಂಪಾದನೆ ವಿಧಾನ, ಮಾರ್ಗಸಾಹಿತ್ಯ ಸಂಪಾದನ ವಿಧಾನ, ಜನಪ್ರಿಯ ಆವೃತ್ತಿಗಳ ವಿಧಾನ, ವಿದ್ವತ್ ಆವೃತ್ತಿಗಳ ವಿಧಾನ ಕುರಿತು ಗುರುತಿಸುವಲ್ಲಿ ಈ ಕಿರುಪ್ರಬಂಧ ವಿಫಲವಾಗಿದೆ ಎಂದು ಹೇಳಬಹುದು.

ಹೀಗೆ ಒಂದು ಪಿಎಚ್.ಡಿ. ಮಹಾಪ್ರಬಂಧ ಮೂರು ಎಂ.ಫಿಲ್. ನಿಬಂಧಗಳು ಆಂಶಿಕವಾಗಿ ಎಂ.ಎಂ.ಕಲಬುರ್ಗಿ ಅವರ ವಚನಶೋಧ ಮತ್ತು ಸಂಪಾದನೆಗೆ ಮೀಸಲಾಗಿವೆ. ಆದರೆ "ಎಂ.ಎಂ.ಕಲಬುರ್ಗಿ ಅವರ ವಚನ ವ್ಯವಸಾಯ: ಒಂದು ಅಧ್ಯಯನ" ಎಂಬ ಈ ಮಹಾ ಪ್ರಬಂಧದಲ್ಲಿ ವಚನ ಸಾಹಿತ್ಯ ಪರಿಷ್ಕರಣೆ, ಸಂಪಾದನೆ ಹಾಗೂ ಅಧ್ಯಯನ ವಿಶೇಷವಾಗಿ 'ಕೆಟ್ಟಿತು ಕಲ್ಯಾಣ'ದಂತಹ ನಾಟಕವನ್ನು ವಚನಗಳನ್ನೇ ಆಧಾರವಾಗಿಟ್ಟುಕೊಂಡು ಬರೆದ ಕಾರಣ ಅವರ ವಚನ ಸಾಹಿತ್ಯದ ಓದಿನ ಉಪ ಉತ್ಪಾದನೆ ಎನಿಸಿದ ನಾಟಕವನ್ನು ಇಲ್ಲಿ ಅಧ್ಯಯನಕ್ಕೆ ಎತ್ತಿಕೊಳ್ಳಲಾಗಿದೆ.

### ೨.೨. ಕೃತಿಗಳು

ಎಂ.ಎಂ.ಕಲಬುರ್ಗಿ ಅವರ ವಚನ ಸಾಹಿತ್ಯದ ಕೃಷಿಯನ್ನು ಕುರಿತು ಪ್ರಾಸಂಗಿಕವಾಗಿ ಪಿಎಚ್.ಡಿ. ಮಹಾಪ್ರಬಂಧ ಸಂಪಾದನೆಯನ್ನೇ ಪ್ರಧಾನವಾಗಿ ಪರಿಗಣಿಸಿಕೊಂಡು ಎಂ.ಫಿಲ್. ನಿಬಂಧಗಳು ರಚನೆಯಾಗಿವೆ. ಆದರೆ ಎಂ.ಎಂ.ಕಲಬುರ್ಗಿ ಅವರ ವಚನ ವ್ಯವಸಾಯ ಕುರಿತಾಗಿ ಬಂದ ಕೃತಿಗಳು ಅತ್ಯಂತ ವಿರಳವೆಂದು ಹೇಳಬಹುದು. ಹೀಗಾಗಿ ಅಧ್ಯಯನದ ಸಮೀಕ್ಷೆಯ ದೃಷ್ಟಿಯಿಂದ ಪ್ರಾಸಂಗಿಕವಾಗಿ ಕೆಲವು ಕೃತಿಗಳನ್ನು ಇಲ್ಲಿ ಚರ್ಚಿಸಲು ಸಾಧ್ಯವಾಗಿದೆ.

ಎಂ.ಎಂ.ಕಲಬುರ್ಗಿ ಅವರ ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಸಂಪಾದಿತ ಕೃತಿಗಳು ಮತ್ತು ಲೇಖನಗಳು ಎಂದು ವರ್ಗೀಕರಿಸಿಕೊಳ್ಳಬಹುದು. ಸಮೀಕ್ಷೆಯ ದೃಷ್ಟಿಯಿಂದ ಅವರ ವಚನ ಸಾಹಿತ್ಯ ಕೃತಿಗಳನ್ನು ಅಧ್ಯಯನ ಮಾಡಿರುವುದು ಕಡಿಮೆಯೆನಿಸುತ್ತದೆ. ಅವರ

ಅಭಿನಂದನಗ್ರಂಥ ಮಹಾಮಾರ್ಗದಲ್ಲಿ 'ವಚನ ಸಾಹಿತ್ಯ' ಎಂಬ ಲೇಖನವನ್ನು ಬರೆದ ವೀರಣ್ಣ ರಾಜೂರ ಅವರು ಕಲಬುರ್ಗಿ ಅವರ ವಚನ ಸಾಹಿತ್ಯ ಅಧ್ಯಾಯದಲ್ಲಿ ಗಮನಿಸಬೇಕಾದ ವಚನ ಸಾಹಿತ್ಯ ಸಂಗ್ರಹ, ಸಂಕಲನ, ಸಂಪಾದನಾ ಹಾಗೂ ಟೀಕಾ ಸಾಹಿತ್ಯದ ನೆಲೆಗಳನ್ನು ಗುರುತಿಸಿ ಸಮೀಕ್ಷಿಸುವ ಕಾರ್ಯ ಮಾಡಿದ್ದಾರೆ. ಮುಖ್ಯವಾಗಿ ವಚನಸಂಬಂಧಿ ಲೇಖನಗಳನ್ನು ಹೊರತುಪಡಿಸಿ ಕೇವಲ ಕೃತಿಗಳನ್ನು ಸಮೀಕ್ಷಿಸಿರುವುದು ವೀರಣ್ಣ ರಾಜೂರ ಅವರ ಲೇಖನದ ವೈಶಿಷ್ಟ್ಯವಾಗಿದೆ. ಆರಂಭದಲ್ಲಿ ವಚನ ಸಾಹಿತ್ಯದ ಅಧ್ಯಯನದ ಘಟ್ಟಗಳನ್ನು ಪ್ರಾಚೀನ ಕಾಲ ಮತ್ತು ಆಧುನಿಕ ಕಾಲ ಎಂದು ಗುರುತಿಸಿ ಈ ಎರಡು ಕಾಲಘಟ್ಟದಲ್ಲಿ ವಚನ ಸಾಹಿತ್ಯದ ಆಕರ ಶೋಧದ ಸಂಗತಿಯನ್ನು ನಿರೂಪಿಸುತ್ತಾರೆ. ವಿಶೇಷವಾಗಿ ಆಧುನಿಕ ಕಾಲಘಟ್ಟವನ್ನು ಹಳಕಟ್ಟಿ ಪೂರ್ವಕಾಲಘಟ್ಟ, ಹಳಕಟ್ಟಿ ಕಾಲಘಟ್ಟ, ಹಳಕಟ್ಟಿ ನಂತರದ ಕಾಲಘಟ್ಟ. ಈ ಮೂರು ಕಾಲಘಟ್ಟಗಳಲ್ಲಿ ವಚನ ಸಾಹಿತ್ಯ ತಾತ್ವಿಕ ನೆಲೆಯಲ್ಲಿ, ಸಾಮಾಜಿಕ ನೆಲೆಯಲ್ಲಿ, ಸಾಹಿತ್ಯಿಕ ನೆಲೆಯಲ್ಲಿ ಹಾಗೂ ಸಾಂಸ್ಕೃತಿಕ ನೆಲೆಯಲ್ಲಿ ಅಧ್ಯಯನಗೊಂಡ ಉಪಕ್ರಮವನ್ನು ಚರ್ಚಿಸಿದ್ದಾರೆ. ಈ ಚರ್ಚೆಯ ಭಾಗವಾಗಿ ಇತರೆ ವಿದ್ವಾಂಸರಂತೆ ಎಂ.ಎಂ.ಕಲಬುರ್ಗಿ ಅವರ ಕಾರ್ಯವನ್ನು ಪರಿಚಯಿಸಿದ್ದಾರೆ. ಮಹಾಮಾರ್ಗದಲ್ಲಿ ಎಂ.ಎಂ.ಕಲಬುರ್ಗಿ ಅವರ ಕೃತಿಗಳು ಎಂಬ ಭಾಗದಲ್ಲಿ ಬಿ.ವಿ.ಶಿರೂರ ಅವರು ಎಂ.ಎಂ.ಕಲಬುರ್ಗಿ ಅವರ ಗ್ರಂಥಸಂಪಾದನೆ ಕುರಿತು ಚರ್ಚಿಸಿ ವಚನ ಸಂಬಂಧಿ ಕೃತಿಗಳನ್ನು ಸಮೀಕ್ಷಿಸಿದ್ದಾರೆ. ಅವುಗಳಲ್ಲಿ ಬಸವಸ್ತೋತ್ರದ ವಚನಗಳು, ಬಸವಣ್ಣನವರ ಟೀಕಿನ ವಚನಗಳು, ಚೆನ್ನಬಸವಣ್ಣನವರ ಷಟ್‌ಸ್ಥಲ ವಚನ ಸಂಪುಟ, ವಚನಸಂಕಲನ ಸಂಪುಟ ೪, ಸಂಕೀರ್ಣ ವಚನ ಸಂಪುಟ, ಬಸವಣ್ಣನವರ ವಚನ ಸಂಪುಟ, ವಚನಶಾಸ್ತ್ರಸಾರ ಕೃತಿಗಳ ಸಂಪಾದನ ವೈಧಾನಿಕತೆಯನ್ನು ಪರಿಚಯಿಸಿದ್ದಾರೆ. ಈ ಎಲ್ಲಾ ಕೃತಿಗಳಿಗೆ ಎಂ.ಎಂ.ಕಲಬುರ್ಗಿ ಅವರು ಬರೆದ ಪ್ರಸ್ತಾವನೆಯ ಮಹತ್ವವನ್ನು ಬಿ.ವ್ಹಿ.ಶಿರೂರ ಅವರು ದಾಖಲಿಸಿದ್ದಾರೆ. ಜೊತೆಗೆ ವಚನ ಸಾಹಿತ್ಯದಂತಹ ದೇಶಿಸಾಹಿತ್ಯ ಸಂಪಾದನೆಯ ವಿಧಾನದಲ್ಲಿ ಅನುಸರಿಸಬಹುದಾದ ಕ್ರಮಗಳನ್ನು ತಿಳಿಸಿದ್ದಾರೆ. "ಒಬ್ಬರು ಸಂಪಾದಿಸಿದ ವಚನ ಕೃತಿಗಳನ್ನು ಇನ್ನೊಬ್ಬರು ಪರಿಷ್ಕರಿಸ ಹೊರಟಿರುವುದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿಯೇ ಹೊಸ ಉಪಕ್ರಮವೆನಿಸಿದೆ"[೧] ಎಂಬ ಎಂ.ಎಂ.ಕಲಬುರ್ಗಿ ಅವರ ವಚನ ಸಾಹಿತ್ಯ ಸಂಪಾದನೆಯ ಅನನ್ಯತೆಯನ್ನು ತಿಳಿಸುತ್ತಾರೆ. ಈ ಕೆಲವು ಗ್ರಂಥಗಳ ಸಮೀಕ್ಷೆಯನ್ನು ಬಿಟ್ಟರೆ ಕರ್ನಾಟಕದ ಬೇರೆ ಬೇರೆ ವಿದ್ವಾಂಸರು ಉದಾಹರಣೆಗೆ ಎಂ.ಚಿದಾನಂದಮೂರ್ತಿ, ವಿದ್ಯಾಶಂಕರ್, ಎಲ್.ಬಸವರಾಜು, ಎಸ್.ಬಸವರಾಧ್ಯ ಮುಂತಾದವರು ಪ್ರಾಸಂಗಿಕವಾಗಿ ಎಂ.ಎಂ. ಕಲಬುರ್ಗಿ ಅವರ ವಚನ ಸಾಹಿತ್ಯ ಸಂಪಾದನೆ ಮತ್ತು ಅಧ್ಯಯನ ಕುರಿತು ಅಲ್ಲಲ್ಲಿ ಪ್ರಸ್ತಾಪಿಸಿರುವುದನ್ನು ಕಾಣಬಹುದಾಗಿದೆ.

ಮಾರ್ಗದ ಮಹಾವಾಕ್ಯಗಳ ಹೆಸರಿನ ಕೃತಿಯನ್ನು ಎಫ್.ಟಿ.ಹಳ್ಳಿಕೇರಿ ಮತ್ತು ಎನ್.ಬಿ.ವಿರೂಪಾಕ್ಷಿ ಅವರು ಜೊತೆಗೂಡಿ ಸಂಪಾದನೆ ಮಾಡಿದ್ದಾರೆ. ಎಂ.ಎಂ.ಕಲಬುರ್ಗಿಯವರ ಎಲ್ಲಾ ಕೃತಿಗಳು ಹಾಗೂ ಸಂಪ್ರಬಂಧಗಳಲ್ಲಿನ ಚಿಂತನನಿಷ್ಠ ಹೇಳಿಕೆಗಳನ್ನು ಹೊರತೆಗೆದು, ವಿಷಯಾನುಸಾರ ವರ್ಗೀಕರಿಸಿ, 'ಮಾರ್ಗದ ಮಹಾವಾಕ್ಯಗಳು' ಎಂಬ ಈ ಕೃತಿಯಲ್ಲಿ ಕ್ರಮಬದ್ಧವಾಗಿ ಅಳವಡಿಸಲಾಗಿದೆ. ಪ್ರತಿಯೊಂದು ವ್ಯಾಖ್ಯೆಯ ಕೊನೆಯಲ್ಲಿ ಪ್ರಕಟಗೊಂಡ ಪುಸ್ತಕದ ಹೆಸರು ಹಾಗೂ ಪುಟವನ್ನು ಸಂಕ್ಷಿಪ್ತವಾಗಿ ಸೂಚಿಸಲಾಗಿದೆ. ಅನುಬಂಧದಲ್ಲಿ ಕಲಬುರ್ಗಿಯವರ ಜೀವನಮಾರ್ಗದ ಬಹುಮುಖ್ಯ ವಿವರ ಮತ್ತು ಕೃತಿಗಳ ಸೂಚಿಯನ್ನು ನೀಡಲಾಗಿದೆ"[೨] ಎಂದು ಸಂಪಾದಕರು ಹೇಳಿದ್ದಾರೆ. ಈ ಸಂಗ್ರಹ ಕಾರ್ಯವು ಅತ್ಯಂತ ವೈಶಿಷ್ಟ್ಯತೆಯಿಂದ ಕೂಡಿದೆ ಎನ್ನಬಹುದು. ಮಾರ್ಗ ಸಂಪುಟಗಳು ಕ್ರಮವಾಗಿ ೧ರಿಂದ ೬ ಅಲ್ಲದೆ, ಕನ್ನಡ ಸಂಶೋಧನಶಾಸ್ತ್ರ, ಕನ್ನಡ ಹಸ್ತಪ್ರತಿಶಾಸ್ತ್ರ, ಗ್ರಂಥಸಂಪಾದನ ಶಾಸ್ತ್ರ, ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಸಮಾಧಿ-ಬಲಿದಾನ-ವೀರಮರಣ ಸ್ಮಾರಕಗಳು, ಕನ್ನಡ ನಾಮವಿಜ್ಞಾನ ಈ ಕೃತಿಗಳಲ್ಲಿ ಕಂಡುಬರುವ ಸೂತ್ರಪ್ರಾಯವಾದ ಎಂ.ಎಂ.ಕಲುಬುರ್ಗಿ ಅವರ ವ್ಯಾಖ್ಯೆಗಳನ್ನು ಒಂದೆಡೆ ಸಂಗ್ರಹಿಸುವ ಪ್ರಯತ್ನವನ್ನು ಸಂಪಾದಕರು ಮಾಡಿದ್ದಾರೆ. ಇದರಲ್ಲಿ ಸಂಶೋಧನೆ, ಹಸ್ತಪ್ರತಿ, ಗ್ರಂಥಸಂಪಾದನೆ, ಶಾಸನ-ಪುರಾತತ್ವ, ಪ್ರಾಚೀನ ಕನ್ನಡ ಸಾಹಿತ್ಯ, ವಚನ ಸಾಹಿತ್ಯ ಮತ್ತು ವಿಮರ್ಶೆ ಹೀಗೆ ಒಟ್ಟಾರೆ ೨೬ ಭಾಗಗಳಲ್ಲಿ ಮಹಾವ್ಯಾಖ್ಯೆಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಅದರಲ್ಲಿ ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತಹ ಮಹಾವ್ಯಾಖ್ಯೆಗಳು ಮಹತ್ವಪೂರ್ಣವಾದಂತವುಗಳಾಗಿವೆ. ವಚನ ಸಾಹಿತ್ಯ ಎಂಬ ಭಾಗದಲ್ಲಿ ವಿಶೇಷವಾಗಿ ವಚನ ಸಾಹಿತ್ಯದ ಹುಟ್ಟು, 'ವಚನ' ಪದದ ಅರ್ಥ, ಸ್ಥಾವರ-ಜಂಗಮ ಪರಿಕಲ್ಪನೆ, ಸ್ವರವಚನ, ಹನ್ನೆರಡನೆಯ ಶತಮಾನದ ಶಿವಶರಣರ ವೈಚಾರಿಕ ಚಳುವಳಿ ಹಾಗೂ ವೀರಶೈವ ಧರ್ಮದ ಮಹತ್ವ ಹಾಗೂ ಬಸವಣ್ಣನ ಚಿಂತನೆ ಹೀಗೆ ಹಲವಾರು ಮಹತ್ವ ಅಂಶಗಳಿಗೆ ಸಂಬಂಧಿಸಿದ ಎಂ.ಎಂ.ಕಲಬುರ್ಗಿ ಅವರ ಚಿಂತನಪೂರ್ಣ ವ್ಯಾಖ್ಯೆಗಳನ್ನು ಸಂಗ್ರಹಿಸಲಾಗಿದೆ. ಇಲ್ಲಿ ಸಂಪಾದಕರು ಮುಖ್ಯವಾಗಿ ವಚನಸಂಬಂಧಿ ಮಹತ್ವದ ಅಂಶಗಳನ್ನು ಒಂದೆಡೆ ಸಂಗ್ರಹಿಸುವ ಕೆಲಸವನ್ನು ಶೀರ್ಷಿಕೆಗೆ ಅನುಗುಣವಾಗಿ ಮಾಡಿದ್ದಾರೆ. ಆದರೆ ವಿಶ್ಲೇಷಣೆಯ ಹಂತಕ್ಕೆ ಇಳಿದಿಲ್ಲ. ಈ ಕೃತಿ ಸಂಶೋಧಕರಿಗೆ ಒಂದು ರೀತಿಯ ಆಕರಸೂಚಿಯಾಗಿದೆ. ಈ ಹಿನ್ನೆಲೆಯಲ್ಲಿ ಎಂ.ಎಂ.ಕಲಬುರ್ಗಿ ಅವರ ವಚನ ಸಾಹಿತ್ಯ ಕುರಿತು ಸಂಶೋಧನ ಅಧ್ಯಯನ ಕೈಗೊಂಡ ಇದೊಂದು ಉಪಯುಕ್ತ ಆಕರಸೂಚಿಯಾಗಿದೆ. ಇದರಲ್ಲಿನ ಮಹಾವಾಕ್ಯಗಳು ಈ ಅಧ್ಯಯನಕ್ಕೆ ಪೂರಕವಾಗಿವೆ.

ಸಂಪಾದಕರು ೨೦೧೨ರ ಈ ಕೃತಿ ಸಂಪಾದನಾಕಾರ್ಯ ಮಾಡಿರುವುದರಿಂದ ಇತ್ತೀಚೆಗೆ ಬಂದ ಹಲವು ವಚನಸಂಬಂಧಿ ಕೃತಿಗಳು ಇವೆ. ಅವುಗಳಲ್ಲಿ ವಚನಸಂಬಂಧಿ ಮಹತ್ವದ

ವಾಕ್ಯಗಳು ಕಂಡುಬರುವ ಸಾಧ್ಯತೆಗಳು ಇವೆ. ಅವುಗಳನ್ನು ಗಮನಿಸಿದಾಗ ಪೂರ್ಣ ಪ್ರಮಾಣದ ವಚನಸಂಬಂಧಿ ಮಹಾವಾಕ್ಯಗಳು ನಮಗೆ ಗೋಚರವಾಗುವ ಸಾಧ್ಯತೆಗಳಿವೆ. ಈ ಮಹಾಕಾವ್ಯಗಳಲ್ಲಿ ವಚನಗಳ ರೂಪ–ಸ್ವರೂಪ, ಸಂಗ್ರಹ–ಸಂಕಲನ–ಸಂಪಾದನೆಗಳಂಥ ವಚನ ಕಟ್ಟುಗಳ ಆಶಯ, ಲಿಂಗಾಯತ ತತ್ತ್ವಗಳಾದ ಕಾಯಕ, ದಾಸೋಹ, ಅಷ್ಟಾವರಣ, ಷಟ್ಸ್ಥಲ, ಪಂಚಾಚಾರ್ಯ ಗಳನ್ನೊಳಗೊಂಡ ವಚನಗಳ ಆಶಯ ಹೀಗೆ ಹಲವು ಹತ್ತು ದೃಷ್ಟಿಯಿಂದ ವ್ಯಾಖ್ಯಾನಿಸಿರುವ ಹೇಳಿಕೆಗಳನ್ನು ಗಮನಿಸಿದರೆ ಎಂ.ಎಂ. ಕಲಬುರ್ಗಿ ಅವರಿಗಿದ್ದ ವಚನ ಸಾಹಿತ್ಯ ಆಳವಾದ ಅಧ್ಯಯನದ ವ್ಯಾಪ್ತಿ ಈ ಮಹಾವಾಕ್ಯಗಳಿಂದ ಮನವರಿಕೆಯಾಗುತ್ತದೆ.

ಡಾ.ಕರೀಗೌಡ ಬೀಚನಹಳ್ಳಿ ಅವರ 'ಬಸವಣ್ಣ: ಪುನರ್ಲೇಖ' ಇದು ಬಸವಣ್ಣನವರನ್ನು ಕುರಿತು ಬಂದ ಕನ್ನಡದ ಐದು ನಾಟಕಗಳ ಅಧ್ಯಯನದ ಹಿನ್ನೆಲೆಯಲ್ಲಿ ರಚನೆಗೊಂಡಿದೆ. ಸಂಕ್ರಾಂತಿ, ಮಹಾಚೈತ್ರ, ತಲೆದಂಡ, ಶಿವರಾತ್ರಿ ಹಾಗೂ ಕೆಟ್ಟಿತ್ತು ಕಲ್ಯಾಣ ನಾಟಕಗಳನ್ನು ಕುರಿತಂತೆ ಅಧ್ಯಯನ ಮಾಡಿದ ಕೃತಿ. "ಈ ನಾಟಕಗಳ ವಸ್ತುವೆಲ್ಲಾ ಹನ್ನೆರಡನೆಯ ಶತಮಾನದ ವಚನ ಚಳುವಳಿಯ ಸಮಾಜವನ್ನು ಆಕರವಾಗಿ ತೆಗೆದುಕೊಂಡಂತಹವು. ಇಪ್ಪತ್ತನೆಯ ಶತಮಾನದಲ್ಲಿ ಬೇರೆ ಬೇರೆ ಕಾಲಘಟ್ಟಗಳಲ್ಲಿ ಬೇರೆ ಬೇರೆ ನಾಟಕಕಾರರ ಮನೋಧರ್ಮದ ಹಿನ್ನೆಲೆಯಲ್ಲಿ ಮೂಡಿ ಬಂದಂತಹವುಗಳು"[೩] ಎಂದು ಲೇಖಕರು ಹೇಳಿಕೊಂಡಿದ್ದಾರೆ. ಬೇರೆ ಬೇರೆ ಕಾಲಘಟ್ಟಗಳಲ್ಲಿ ಬೇರೆ ಬೇರೆ ನಾಟಕಕಾರರ ಮನೋಧರ್ಮದ ಹಿನ್ನೆಲೆಯಲ್ಲಿ ರಚನೆ ಆಗಿರುವ ಕಾರಣ ನಾಟಕ ರಚನೆ ಒಂದಕ್ಕೊಂದು ವಿಭಿನ್ನವಾಗಿ ಗೋಚರಿಸುತ್ತದೆ. ಈ ಐದು ನಾಟಕಗಳನ್ನು ಲೇಖಕರು ವಿಶ್ಲೇಷಣಾತ್ಮಕವಾಗಿ ನೋಡುವ ಪ್ರಯತ್ನವನ್ನು ಮಾಡಿದ್ದಾರೆ.

ಅಧ್ಯಾಯ ಐದರಲ್ಲಿ 'ಕೆಟ್ಟಿತ್ತು ಕಲ್ಯಾಣ' ನಾಟಕವನ್ನು ವಿಶ್ಲೇಷಣೆ ಮಾಡಿದ್ದಾರೆ. ಆದರೆ ಸಾಮಾಜಿಕ, ಧಾರ್ಮಿಕ, ಸ್ತ್ರೀಸಮಾನತೆ, ವರ್ಗಸಂಘರ್ಷ ಹಾಗೂ ವೈದಿಕಶಾಹಿವಿರೋಧಿ ನೆಲೆಯಲ್ಲಿ ವಿಶ್ಲೇಷಣೆ ಮಾಡಿದ್ದರೂ ಕೂಡ ಪ್ರತ್ಯೇಕವಾದ ಅಧ್ಯಯನ ನಡೆಸಿಲ್ಲವೆಂದು ಹೇಳಬಹುದು. ವಚನಗಳನ್ನೇ ಆಕರಗಳನ್ನಾಗಿ ಬಳಸಿಕೊಂಡು ನಾಟಕ ಬರೆದಿರುವ ಎಂ.ಎಂ.ಕಲಬುರ್ಗಿ ಅವರ ಆಶಯದ ಗ್ರಹಿಕೆ ಅಷ್ಟಾಗಿ ಇಲ್ಲಿ ನಿರೂಪಿತಗೊಂಡಿರುವುದಿಲ್ಲ.

ವೀರಣ್ಣ ದಂಡೆ ಅವರ ಸಂಪಾದಕತ್ವದಲ್ಲಿ 'ಎಂ.ಎಂ.ಕಲಬುರ್ಗಿ ಸಂಶೋಧನ ಸಾಹಿತ್ಯ' ಕೃತಿ ಬಂದಿದೆ. ಇದರಲ್ಲಿ 'ವಚನಸಾಹಿತ್ಯ ಸಂಪಾದನೆಗಳು' ಎಂಬ ವೀರಣ್ಣ ರಾಜೂರ ಅವರ ಲೇಖನದಲ್ಲಿ ಎಂ.ಎಂ.ಕಲಬುರ್ಗಿ ಅವರ ವಚನ ಸಾಹಿತ್ಯವನ್ನು ಕುರಿತು ಚರ್ಚಿಸಿದ್ದಾರೆ. "ಎಂ.ಎಂ.ಕಲಬುರ್ಗಿ ಅವರು ರಚಿಸಿದ ಒಟ್ಟು ೧೫೦ ಕೃತಿಗಳಲ್ಲಿ ೨೦ ಕೃತಿಗಳು, ಒಟ್ಟು ೭೫೪ ಲೇಖನಗಳಲ್ಲಿ ೨೨೮ ಲೇಖನಗಳು ವಚನ ಸಾಹಿತ್ಯಕ್ಕೆ ಸಂಬಂಧಿಸಿವೆ"[೪] ಎಂದು ಅವರ

ಒಟ್ಟಾರೆ ವಚನ ಸಾಹಿತ್ಯ ಕೃತಿಗಳ ಮತ್ತು ಲೇಖನಗಳನ್ನು ಸಮೀಕ್ಷಿಸಿದ್ದಾರೆ. ಹಾಗೆಯೇ ಎಂ.ಎಂ.ಕಲಬುರ್ಗಿ ಅವರ ವಚನ ಸಾಹಿತ್ಯ ಕಾರ್ಯವನ್ನು ಮೂರು ನೆಲೆಗಳಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ೧. ವಚನ ಗ್ರಂಥ ಪರಿಷ್ಕರಣೆ, ಪ್ರಕಟಣೆ, ೨. ವಚನಗ್ರಂಥ ಪ್ರಕಟಣೆಗೆ ನಿರ್ದೇಶನ, ೩. ವಚನ ಸಾಹಿತ್ಯ ಆಧಾರಿತ ಲೇಖನ ರಚನೆ. ಈ ರೀತಿಯಾಗಿ ವಿಂಗಡಣೆ ಮಾಡಿಕೊಂಡು ವಚನ ಸಾಹಿತ್ಯ ಕುರಿತಂತೆ ಅಧ್ಯಯನ ನಡೆಸಿದ್ದಾರೆ.

ಇದೇ ಕೃತಿಯಲ್ಲಿ 'ವಚನ ಸಾಹಿತ್ಯ ವಿಶ್ಲೇಷಣೆಗಳು' ಎಂಬ ಜಯಶ್ರೀ ದಂಡೆ ಅವರ ಲೇಖನ ಕೂಡ ಎಂ.ಎಂ. ಕಲಬುರ್ಗಿ ಅವರ ವಚನ ಸಾಹಿತ್ಯವನ್ನು ಕುರಿತಂತೆ ಇದೆ. ಎಂ.ಎಂ. ಕಲಬುರ್ಗಿ ಅವರ ವಚನ ಸಂಬಂಧಿ ಲೇಖನಗಳನ್ನು ನಾಲ್ಕು ನೆಲೆಯಲ್ಲಿ ನೋಡುವ ಪ್ರಯತ್ನ ಮಾಡಿದ್ದಾರೆ. ೧. ಧಾರ್ಮಿಕ ಚಿಂತನೆ, ೨. ತಾತ್ತ್ವಿಕ ಚಿಂತನೆ, ೩. ಸಾಮಾಜಿಕ ಚಿಂತನೆ, ೪. ವಚನ ನಿರ್ವಚನ. ಇವರು ಲೇಖನಗಳ ಆಧಾರಗಳನ್ನು ಮಾತ್ರ ಇಟ್ಟುಕೊಂಡು ಚರ್ಚೆ ಮಾಡಿರುವುದು ಒಂದು ರೀತಿಯ ವಿಶೇಷತೆ ಎನ್ನಬಹುದು. ಇದೇ ಕೃತಿಯಲ್ಲಿ ಎಸ್.ಎಸ್.ಅಂಗಡಿ ಅವರು ಕನ್ನಡ ಭಾಷಾಧ್ಯಯನ ಚಿಂತನೆಗಳು ಕುರಿತು ಹೇಳುವಾಗ 'ವಚನಕಾರರ ವಚನಗಳ ಸಾಧನೆ ಅವರ ಭಾಷೆಯ ಬಳಕೆಯಲ್ಲಿದೆ ಎಂದು ವಚನಕಾರರ ಭಾಷೆ ಕುರಿತು ಹೇಳುತ್ತಾ ಎಂ.ಎಂ. ಕಲಬುರ್ಗಿ ಅವರ 'ವಚನಕಾರರು: ಭಾಷೆ, ಕನ್ನಡ ಭಾಷೆ ಮತ್ತು ವಚನ ಭಾಷೆ' ಎಂಬ ಲೇಖನದಲ್ಲಿ ಭಾಷೆಯ ಕುರಿತು ಶರಣರ ನಿಲುವುಗಳನ್ನು, ಮಾಡಿದ ಪ್ರಯೋಗಗಳನ್ನು ರಾಚನಿಕವಾಗಿ ವಿಶ್ಲೇಷಿಸುವ ಬಗೆಯನ್ನು ತಿಳಿಸಿದ್ದಾರೆ.

ಎಂ.ಎಂ.ಕಲಬುರ್ಗಿ ಅವರ ಪ್ರಬಂಧಗಳ ಸಂಕಲನ "ಗ್ರಂಥಸಂಪಾದನ ವ್ಯಾಸಂಗ"ದ ಸಂಪಾದಕರು ವೈ.ಸಿ.ಭಾನುಮತಿ ಅವರು. ಇದರಲ್ಲಿ ಎಂ.ಎಂ.ಕಲಬುರ್ಗಿ ಅವರ ಗ್ರಂಥಸಂಪಾದನೆ ಕುರಿತು ಚರ್ಚೆ ಮಾಡಿದ್ದಾರೆ. ಈ ಕೃತಿಯಲ್ಲಿ ವಚನ ಸಾಹಿತ್ಯ ಎಂಬ ಎರಡನೆಯ ಭಾಗದಲ್ಲಿ ವಚನ ಪರಿಷ್ಕರಣ ವಚನ ಸಾಹಿತ್ಯ: ಸಂಪಾದನೆಯ ವಿಧಾನ, ಇತಿಹಾಸ, ವಚನ ಪರಿಷ್ಕರಣೆ ಈವರೆಗಿನ ಎರಡು ತಪ್ಪು ವಿಧಾನಗಳು, ಸಕಲ ಪುರಾತನ ವಚನಕಟ್ಟು: ಕೆಲವು ಸಮಸ್ಯೆಗಳು, ಸಂಕ್ಷಿಪ್ತ ವಚನಕಾರರು, ಸಮಗ್ರ ವಚನ ಸಂಪುಟ : ಪ್ರಥಮ ಆವೃತ್ತಿಯ ಬಿಡುಗಡೆ ಎಂಬ ಲೇಖನಗಳನ್ನು ಗ್ರಂಥಸಂಪಾದನೆಯ ವೈಧಾನಿಕತೆಯ ನೆಲೆಯಲ್ಲಿ ಅಧ್ಯಯನ ನಡೆಸಿದ್ದಾರೆ. ಸೂಕ್ತವಾದ ಪ್ರಸ್ತಾವನೆಯನ್ನು ಬರೆಯುವುದರ ಮೂಲಕ ಎಂ.ಎಂ.ಕಲಬುರ್ಗಿ ಅವರ ಗ್ರಂಥಸಂಪಾದನ ವಿಧಾನವನ್ನು ಇಲ್ಲಿ ವಿವರಿಸಲಾಗಿದೆ.

'ಲಿಂಗಾಯತ ಅಧ್ಯಯನ ಸಂಸ್ಥೆ ಮತ್ತು ಡಾ.ಎಂ.ಎಂ.ಕಲಬುರ್ಗಿ' ಪ್ರಕಾಶ ಗಿರಿಮಲ್ಲನವರ ಈ ಕೃತಿಯಲ್ಲಿ ಶ್ರೀ ಜಗದ್ಗುರು ತೋಂಟದ ಸಿದ್ಧಲಿಂಗಮಹಾಸ್ವಾಮಿಗಳಿಂದ ಸ್ಥಾಪನೆಯಾದ

ಈ ಸಂಸ್ಥೆಯನ್ನು ಒಂದು ಅಕಾಡೆಮಿ ಶಿಸ್ತಿನಿಂದ ಬೆಳೆಸಿದವರು ನಿರ್ದೇಶಕರಾಗಿದ್ದ ಡಾ.ಎಂ.ಎಂ. ಕಲಬುರ್ಗಿ ಅವರು ಎಂದು ಲೇಖಕರು ತಮ್ಮ ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಅಷ್ಟೇ ಅಲ್ಲದೇ ಎಂ.ಎಂ.ಕಲಬುರ್ಗಿ ಅವರು ಹತರಾದಾಗ ಈ ಸಂಸ್ಥೆಗೆ ಪೂಜ್ಯರು 'ಡಾ.ಎಂ.ಎಂ.ಕಲಬುರ್ಗಿ ಲಿಂಗಾಯತ ಅಧ್ಯಯನ ಸಂಸ್ಥೆ' ಎಂದು ಪುನರ್‌ನಾಮಕರಣ ಮಾಡಿರುವುದನ್ನು ಲೇಖಕರು ತಿಳಿಸಿದ್ದಾರೆ. ಇದರಿಂದ ಎಂ.ಎಂ. ಕಲಬುರ್ಗಿ ಅವರಿಗೂ ಲಿಂಗಾಯತ ಸಂಸ್ಥೆಗಿದ್ದ ಅವಿನಾಭಾವ ಸಂಬಂಧ ಅಗಾಧವಾದದ್ದೆಂದು ಇಲ್ಲಿ ಗೋಚರವಾಗುತ್ತದೆ. ಈ ಕೃತಿಯಲ್ಲಿ 'ಡಾ.ಕಲಬುರ್ಗಿಯವರ ಕೃತಿಗಳು' ಎಂಬ ಭಾಗದಲ್ಲಿ 'ವಚನ ಸಾಹಿತ್ಯ' ಕುರಿತಂತೆ ಬಂದ ಕೃತಿಗಳನ್ನು ಚರ್ಚಿಸಿದ್ದಾರೆ. "ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ವಚನ ಸಾಹಿತ್ಯ ಪ್ರಕಟಣೆ ಯೋಜನೆಯ ಸಹಾಯಕ ಸಂಶೋಧಕರಾಗಿ ಸೇವೆ ಪ್ರಾರಂಭಿಸಿದ ಎಂ.ಎಂ.ಕಲಬುರ್ಗಿ ಅವರು ತಮ್ಮ ಜೀವನದ ಕೊನೆಯವರೆಗೂ ವಚನ ಸಾಹಿತ್ಯವನ್ನು ಕುರಿತು ಚಿಂತಿಸುತ್ತಲೇ ಇದ್ದರು. ವಚನ ಸಾಹಿತ್ಯವನ್ನು ಕುರಿತು ತೋಂಟದಾರ್ಯ ಮಠದಿಂದ ಅವರು ಒಂಬತ್ತು ಕೃತಿಗಳನ್ನು ಪ್ರಕಟಿಸಿದ್ದಾರೆ. ಇಲ್ಲಿ ಲೇಖಕರು ಎಂ.ಎಂ.ಕಲಬುರ್ಗಿ ಅವರಿಗಿದ್ದ ವಚನ ಸಾಹಿತ್ಯದ ಮೇಲಿನ ಆಸಕ್ತಿ ಹಾಗೂ ಶ್ರಮವನ್ನು ಕುರಿತು ಹೇಳಿದ್ದಾರೆ. ವಚನ ಸಾಹಿತ್ಯ ಕುರಿತ ಅನೇಕ ಕೃತಿಗಳು ರಚನೆಗೊಂಡಿದ್ದರೂ ಮುಖ್ಯವಾಗಿ ತೋಂಟದಾರ್ಯ ಮಠದಿಂದ ಪ್ರಕಟಗೊಂಡ ಒಂಬತ್ತು ಕೃತಿಗಳನ್ನು ಮಾತ್ರ ಇಲ್ಲಿ ಚರ್ಚಿಸಿರುವುದನ್ನು ಗಮನಿಸಬಹುದಾಗಿದೆ.

ರಾಮಕೃಷ್ಣ ಮರಾಠೆ ಅವರು 'ಕನ್ನಡದ ಮಹಾಮಾರ್ಗ ಡಾ.ಎಂ.ಎಂ.ಕಲಬುರ್ಗಿ' ಎಂಬ ಕೃತಿಯಲ್ಲಿ ಎಂ.ಎಂ.ಕಲಬುರ್ಗಿ ಅವರ ಜೀವನ, ಸಾಹಿತ್ಯ ಹಾಗೂ ವಿವಿಧ ಯೋಜನೆಗಳನ್ನು ಕುರಿತಂತೆ ಚರ್ಚೆ ಮಾಡಿದ್ದಾರೆ. 'ಸಂಶೋಧನ ವ್ಯವಸಾಯ' ಎಂಬ ಆರನೇ ಭಾಗದಲ್ಲಿ ಒಂದೆಡೆ ವಚನ ಸಾಹಿತ್ಯವನ್ನು ಕುರಿತು ಚರ್ಚೆ ಮಾಡಿದ್ದಾರೆ. ಆದರೆ ವಚನ ನಿರ್ವಚನ ಮತ್ತು ವಚನ ಸಾಹಿತ್ಯದ ಅನನ್ಯತೆ ಕುರಿತಂತೆ, ವಚನ ಸಂಪಾದನೆ ಮತ್ತು ವಚನ ವಿಶ್ಲೇಷಣೆ ಎಂದು ವಿಭಾಗಿಸಿಕೊಂಡು ಚರ್ಚಿಸಿದ್ದಾರೆ. ಆದರೆ ವಿವರಣಾತ್ಮಕ ಚರ್ಚೆ ನಡೆದಿಲ್ಲ ಎನ್ನಬಹುದು. ಲೇಖಕರು ಎಂ.ಎಂ.ಕಲಬುರ್ಗಿ ಅವರನ್ನು ಕುರಿತಂತೆ "ವಚನ ಸಾಹಿತ್ಯ ಅವರ ಅಂತರಂಗ ಬಹಿರಂಗವನ್ನು ಆವರಿಸಿತ್ತು ಎನ್ನಲು ಅವರ ವಚನ, ಪ್ರಕಟಣೆಗಳೇ ನಿದರ್ಶನ"[೫] ಎಂದಿದ್ದಾರೆ. ವಚನ ಸಾಹಿತ್ಯ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಬಗೆಯನ್ನು ಕುರಿತು ಹೇಳಿರುವುದನ್ನು ಗಮನಿಸಬಹುದಾಗಿದೆ. ಹಾಗೆಯೇ ಏಳನೇ ಭಾಗದಲ್ಲಿ 'ಸೃಜನಬೆಳೆ'ಯನ್ನು ಕುರಿತು ಚರ್ಚೆ ಮಾಡಿದ್ದಾರೆ. ಅದರಲ್ಲಿ 'ಕೆಟ್ಟಿತ್ತು ಕಲ್ಯಾಣ' ಎಂಬ ನಾಟಕವನ್ನು ಕುರಿತು ಚರ್ಚಿಸಿರುವುದನ್ನು ಗಮನಿಸಬಹುದಾಗಿದೆ. ಸಂಕ್ಷಿಪ್ತವಾಗಿ ಮೂರು ಪುಟಗಳಲ್ಲಿ ಇಡೀ ನಾಟಕದ

ಚಿತ್ರಣವನ್ನು ಕುರಿತು ವಿಶ್ಲೇಷಿಸಿದ್ದಾರೆ. ವಿವರಣಾತ್ಮಕವಾಗಿ ಹಾಗೂ ವಿವಿಧ ನೆಲೆಗಳಲ್ಲಿ ನೋಡಲು ಲೇಖಕರು ಇಲ್ಲಿ ಪ್ರಯತ್ನಿಸಿಲ್ಲವೆನ್ನಬಹುದು.

ಮೃತ್ಯುಂಜಯ ರುಮಾಲೆ ಅವರ 'ಸಮಗ್ರ ಸಂಶೋಧಕ ಎಂ.ಎಂ.ಕಲಬುರ್ಗಿ' ಕೃತಿಯಲ್ಲಿ ಎರಡನೆಯ ಭಾಗ ಸಂಶೋಧನ ಆಯಾಮಗಳು ಎಂಬುದು. ಇದರಲ್ಲಿ ಆಕರಮುಖಿ, ವಿಶ್ಲೇಷಣಾಮುಖಿ, ವ್ಯಾಖ್ಯಾನಮುಖಿ, ಸಮಾಜಮುಖಿ, ಆನಂದಮುಖಿ, ಶಾಸ್ತ್ರಮುಖಿ ಮತ್ತು ಸೃಜನ ಎಂದು ವಿಂಗಡಣೆ ಮಾಡಿಕೊಂಡು ಅಧ್ಯಯನ ನಡೆಸಿದ್ದಾರೆ. ಇದರಲ್ಲಿ 'ಆಕರಮುಖಿ' ಎಂಬ ಭಾಗದಲ್ಲಿ 'ಬಸವಣ್ಣವರ ಟೀಕಿನ ವಚನಗಳು', 'ಚೆನ್ನಬಸವಣ್ಣನವರ ಷಟ್‌ಸ್ಥಲ ವಚನ ಮಹಾಸಂಪುಟ', 'ಬಸವಣ್ಣನವರ ವಚನಗಳು', ಷಟ್‌ಸ್ಥಲ ಕೃತಿಗಳಲ್ಲಿ ಕಡೆ ಗಮನ ಹರಿಸಿಲ್ಲವೆನ್ನ ಬಹುದು.

ಬಿ.ವ್ಹಿ.ಶಿರೂರ ಅವರು 'ಎಂ.ಎಂ.ಕಲಬುರ್ಗಿ ಮತ್ತು ನಾನು' ಎಂಬ ಕೃತಿಯನ್ನು ಹೊರತಂದಿದ್ದಾರೆ. ಇದರಲ್ಲಿ ಎಂ.ಎಂ.ಕಲಬುರ್ಗಿ ಅವರ ಒಟ್ಟಾರೆ ಸಂಪಾದನ ಕೃತಿಗಳನ್ನು ಕುರಿತು ಚರ್ಚಿಸುವ ಸಂದರ್ಭದಲ್ಲಿ ಗ್ರಂಥಸಂಪಾದನಾ ಕೃತಿಗಳನ್ನು ಹಾಗೂ ಇತರ ಸಂಪಾದನ ಕೃತಿಗಳನ್ನು ಕುರಿತು ಚರ್ಚೆ ಮಾಡಿದ್ದಾರೆ. ಇವರ ಕೃತಿಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಚರ್ಚಿಸಿದ್ದಾರೆ.

ನಾನು ಕಲಬುರ್ಗಿ(ಡಾ.ಎಂ.ಎಂ.ಕಲಬುರ್ಗಿ ಬರಹಗಳ ವಾಚಿಕೆ) ಈ ಕೃತಿಯ ಆಯ್ಕೆ ಮತ್ತು ಸಂಪಾದಕರು ರಾಜೇಂದ್ರ ಚೆನ್ನಿ, ರಹಮತ್ ತರೀಕೆರೆ, ಮೀನಾಕ್ಷಿ ಬಾಳಿ. ಈ ಕೃತಿಯಲ್ಲಿ ಮಾರ್ಗ ೮ ಸಂಪುಟಗಳಲ್ಲಿನ ಲೇಖನಗಳಲ್ಲಿ ಎಂ.ಎಂ.ಕಲಬುರ್ಗಿ ಅವರ ಚಿಂತನೆ ಕುರಿತು ಚರ್ಚಿಸಿದ್ದಾರೆ. ಅದರಲ್ಲಿ ವಚನಸಂಬಂಧಿ ಕೆಲವು ಲೇಖನಗಳನ್ನು ಕುರಿತು ಚರ್ಚಿಸಿದ್ದಾರೆ. ವಚನಕಾರರು : ಭಾಷೆ, ಕನ್ನಡ ಭಾಷೆ ಮತ್ತು ವಚನ ಭಾಷೆ, ವಚನ ಸಾಹಿತ್ಯ ಮತ್ತು ಜೀವನ ಮೌಲ್ಯಗಳು, ಜಂಗಮ, ದಾಸೋಹ : ಐತಿಹಾಸಿಕ ಅಗತ್ಯದ ಸೃಷ್ಟಿ, ಅಸ್ಪೃಶ್ಯತೆಯ ನಿರ್ಮೂಲನ: ಶರಣರ ಕಾರ್ಯವಿಧಾನ, ಶರಣರು ಕಟ್ಟಬಯಸಿದ ಸ್ತ್ರೀಸಮಾಜ, ಬಲಿದಾನ, ಮರಣ ಸಂಪ್ರದಾಯಕ್ಕೆ ಶರಣರ ಪ್ರತಿಕ್ರಿಯೆ, ಮಾದಾರ ಚೆನ್ನಯ್ಯನ ಮನೆಯ ಮಗ ನಾನಯ್ಯ!, ಇಬ್ಬರಿಗೆ ಹುಟ್ಟಿದ ಮಗ ನಾನು, ಸ್ಥಾವರಕ್ಕಳಿವುಂಟು–ಜಂಗಮಕ್ಕಳಿವಿಲ್ಲ. ಈ ಲೇಖನಗಳಲ್ಲಿ ಎಂ.ಎಂ.ಕಲಬುರ್ಗಿ ಅವರ ವಚನ ಬಗೆಗಿನ ಚಿಂತನೆಯನ್ನು ಓದುಗರಿಗೆ ತಲುಪಿಸುವ ಪ್ರಯತ್ನವನ್ನು ಮಾಡಿದ್ದಾರೆ. ಎಂ.ಎಂ.ಕಲಬುರ್ಗಿ ಅವರ ಮಾರ್ಗ ಸಂಪುಟ ಲೇಖನಗಳನ್ನು ಇಲ್ಲಿ ಆಯ್ದು ಸಂಯೋಜಿಸಿದ್ದಾರೆ. ಆದರೆ ಈ ಲೇಖನಗಳ ಹಿಂದಿರುವ ಆಶಯವನ್ನು ಅಧ್ಯಯನ ಮಾಡಿ ಸುದೀರ್ಘವಾದ ಮತ್ತು ವೈಚಾರಿಕವಾದ ಪ್ರಸ್ತಾವನೆಯ ಕೊರತೆಯನ್ನು ಈ ಕೃತಿಯಲ್ಲಿ ಗಮನಿಸಬಹುದು.

'ಡಾ.ಎಂ.ಎಂ.ಕಲಬುರ್ಗಿ ಸಂದರ್ಶನ ಸಂಪುಟ' ಈ ಕೃತಿಯ ಸಂಪಾದಕರು ವೀರಣ್ಣ ರಾಜೂರ, ಹನುಮಾಕ್ಷಿ ಗೋಗಿ ಮತ್ತು ಮೇಲಿನಮನಿ. ಎಂ.ಎಂ.ಕಲಬುರ್ಗಿ ಅವರನ್ನು ಹಲವು ವಿದ್ವಾಂಸರು ಸಂದರ್ಶನ ಮಾಡಿದ ಸಂಪುಟವಾಗಿದೆ. ಇದರಲ್ಲಿ 'ಸಮಗ್ರ ವಚನಸಂಪುಟ ಲೋಕಾರ್ಪಣೆ' ಮತ್ತು 'ಲಿಂಗಾಯತ ಅಧ್ಯಯನ ಸಂಸ್ಥೆಯ ಕೆಲಸವೆಂದರೆ ಅದು ಕನ್ನಡ ಕೆಲಸ' ಎಂಬ ಎರಡು ಸಂದರ್ಶನಗಳನ್ನು ಜಿ.ಎಂ.ಹೆಗಡೆ ಮಾಡಿದ್ದಾರೆ. ಇದರಲ್ಲಿ ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಚರ್ಚೆಗಳಿವೆ. ಅದೇ ರೀತಿ 'ಗ್ರಂಥಸಂಪಾದನೆಯೆನ್ನುವುದು ಸೃಜನಶೀಲ ಸಂಶೋಧನೆ' ಎಂಬುದು ವೀರೇಶ ಬಡಿಗೇರ ಅವರು ಮಾಡಿರುವ ಸಂದರ್ಶನದ ಭಾಗ. 'ಸಮಾಜವಿರೋಧಿ ಸಿದ್ಧಾಂತದಲ್ಲಿ ಶರಣರು ಹೋಗುವುದು ತಪ್ಪು' ಎಂಬ ಭಾಗವು ರಹಮತ್ ತರೀಕೆರೆ ಅವರು ಮಾಡಿರುವ ಸಂದರ್ಶನ. ಈ ರೀತಿ ಹಲವು ವಿದ್ವಾಂಸರು ಎಂ.ಎಂ.ಕಲಬುರ್ಗಿ ಅವರನ್ನು ಸಂದರ್ಶಿಸಿರುವುದನ್ನು ಪುಸ್ತಕ ರೂಪದಲ್ಲಿ ಹೊರತಂದಿದ್ದಾರೆ. ಇದರಲ್ಲಿ ಸಾಕಷ್ಟು ಅಂಶಗಳು ವಚನ ಸಾಹಿತ್ಯ ಮತ್ತು ಗ್ರಂಥಸಂಪಾದನೆ ವಿಧಾನ ಹಾಗೂ ಆಶಯಗಳನ್ನು ಕುರಿತಂತೆ ಇವೆ.

ಎಂ.ಎಂ.ಕಲಬುರ್ಗಿ ಅವರು ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳ ಪ್ರಮಾಣ ೧೦ ಸಂಪುಟದಷ್ಟು, ಲೇಖನಗಳ ಪ್ರಮಾಣ ೩ ಸಂಪುಟದಷ್ಟು ವ್ಯಾಪ್ತಿಯನ್ನು ಪಡೆಯುತ್ತದೆ. ಇವುಗಳಲ್ಲಿ ಲೇಖನಕ್ಕೆ ಸಂಬಂಧಿಸಿದಂತೆ ೮ ಮಾರ್ಗ ಸಂಪುಟಗಳಲ್ಲಿ ಅವರ ವಚನ ಸಾಹಿತ್ಯದ ಅಭ್ಯಾಸ ವಿಸ್ತಾರಗೊಂಡಿದೆ. ಇತ್ತೀಚೆಗೆ ಇಲ್ಲಿಯ ಲೇಖನಗಳನ್ನು ವಿಷಯಾನುಸಾರ ಕೃತಿಗಳನ್ನಾಗಿ ರೂಪಿಸುವ ಕೆಲಸ ಹಲವು ವಿದ್ವಾಂಸರಿಂದ ನಡೆದಿದೆ. ಅವುಗಳಲ್ಲಿ ಜಂಗಮದಿಂದ ಸ್ಥಾವರಕ್ಕೆ ಎಂಬ ಕೃತಿಯನ್ನು ಸಂಪಾದಿಸಿರುವ ಮೃತ್ಯುಂಜಯ ರುಮಾಲೆಯವರು ವಚನ ಸಾಹಿತ್ಯ ಕಲ್ಯಾಣದಲ್ಲಿ ಹುಟ್ಟಿ, ತುಂಗಭದ್ರಾದ ಈಚೆಗೆ ಅಧ್ಯಯನಕ್ಕೆ ಒಳಪಡುವುದರ ಮೂಲಕ ಸಂಗ್ರಹ-ಸಂಕಲನ-ಸಂಪಾದನ ಹೆಸರಿನಲ್ಲಿ ಪ್ರಕಟವಾದ ಸಂಗತಿಗಳನ್ನು ನಿರೂಪಿಸುತ್ತಾರೆ. ಆ ಮೂಲಕ ಹಂಪೆ, ದ್ವಾರಸಮುದ್ರ, ಸಿದ್ಧಗಂಗೆ, ಕೆಳದಿ ಪ್ರದೇಶಗಳಲ್ಲಿ ಜಂಗಮಸ್ವರೂಪಿ ಆಗಿದ್ದ ವಚನ ಸಾಹಿತ್ಯ ಸ್ಥಾವರದ ಕಡೆಗೆ ಹೊರಳಿದ ಚಾರಿತ್ರಿಕ ಸಂಗತಿಗಳನ್ನು ನಿರೂಪಿಸುವ ಲೇಖನವನ್ನು ಆಯ್ದು ಪ್ರಕಟಿಸಿದ್ದಾರೆ. ಅವರ ಈ ಕೃತಿಯಲ್ಲಿ ವಚನಗಳು ಮತ್ತು ವಚನಕಾರರ ಆಶಯಗಳು ಬಸವೋತ್ತರ ಯುಗದಲ್ಲಿ ಪಲ್ಲಟಗೊಂಡಿದ್ದನ್ನು ತಿಳಿಸುತ್ತದೆ. ಬಸವಣ್ಣ ಮತ್ತು... ೨೫ ಲೇಖನಗಳನ್ನು ಸಂಕಲಿಸಿದ ಈ ಕೃತಿ ಬಸವಣ್ಣನ ಜನಪದ ಉದ್ದೇಶದಿಂದ ಹಿಡಿದು ಆತನ ಮೂಲ, ಕಾರ್ಯಕ್ಷೇತ್ರವಾದ ಕಪ್ಪಡಿ ಸಂಗಮನಾಥ, ಕೂಡಲಸಂಗಮದಲ್ಲಿ ಬಸವಣ್ಣನ ಗುರುಜಾತ ವೇದಿ ಗದ್ದುಗೆಯ ಸುಳ್ಳಿನ ಕಂತೆ, ಬಸವಣ್ಣನವರ ವಚನಗಳನ್ನು ಕುರಿತು

ಅವುಗಳಲ್ಲಿ ಬಸವಣ್ಣವರ ವೈಯಕ್ತಿಕ ಸಂಗತಿಗಳು, ವಚನ ಭಾಷಾ ಮೀಮಾಂಸೆ ಮತ್ತು ಕೆಲವು ವಚನಗಳನ್ನು ಕುರಿತು ನಂದೀಶ್ ಹಂಜೆ ಅವರು ಪ್ರಸ್ತಾವನೆಯಲ್ಲಿ ನಿರ್ವಚಿಸಿರುವುದನ್ನು ಕಾಣಬಹುದು.

ರೇವಣಸಿದ್ಧ ಮತ್ತು... ಕೆ. ರವೀಂದ್ರನಾಥ ಅವರು ಸಂಪಾದಿಸಿರುವ ಈ ಕೃತಿಯಲ್ಲಿ ಎಂ.ಎಂ.ಕಲಬುರ್ಗಿ ಅವರು ಬರೆದ ೩೧ ಲೇಖನಗಳು ಸಂಯೋಜನೆಗೊಂಡಿವೆ. ಪ್ರಸ್ತುತ ಸಂದರ್ಭದಲ್ಲಿ ಪಂಚಪೀಠಗಳ ಅಸ್ತಿತ್ವ, ರೇವಣಸಿದ್ಧನ ಮೂಲ, ಶೈವ ಕೇಂದ್ರಗಳಾದ ದ್ವಾರಸಮುದ್ರ, ಹಂಪಿ, ಶಿವಗಂಗೆ ಕುರಿತಾದ ಲೇಖನಗಳಲ್ಲದೆ ವಚನಗಳಲ್ಲಿ ಚತುರಾಚಾರ್ಯರ ಉಲ್ಲೇಖ, ವಚನಗಳಲ್ಲಿ ಆಗಮಗಳ ಸಂಪರ್ಕ ಇತ್ಯಾದಿ ಸಂಗತಿಗಳನ್ನು ಒಳಗೊಂಡಂತೆ ಇಲ್ಲಿಯ ಲೇಖನಗಳ ಆಶಯಗಳನ್ನು ಸುದೀರ್ಘವಾದ ೩೦ ಪುಟಗಳಲ್ಲಿ ವಿವರಿಸಿದ್ದಾರೆ. ಇಲ್ಲಿಯ ಎಲ್ಲ ಲೇಖನಗಳ ಆಶಯವನ್ನು ೪ ಪ್ರಮೇಯಗಳಲ್ಲಿ ಕೆ. ರವೀಂದ್ರನಾಥ ಅವರು ಸಂಯೋಜಿಸುತ್ತಾರೆ. ಅವುಗಳೆಂದರೆ ೧. ನಾಥ ಶುದ್ಧ ಶೈವಪಂಥಗಳ ವಿಲೀನೀಕರಣದ ಸಹಜ ಇತಿಹಾಸ, ೨. ಆಚಾರ್ಯ ಪೀಠ ಸ್ಥಾಪನೆಯ ಕೃತಕ ಇತಿಹಾಸ, ೩. ಆಗಮ ಮತ್ತು ವಚನಾಗಮಗಳ ಇತಿಹಾಸ, ೪. ವೀರಶೈವ ಮತವಲ್ಲ ವ್ರತವೆಂಬ ಸ್ಪಷ್ಟೀಕರಣದ ಇತಿಹಾಸ ಎಂಬುದಾಗಿದೆ. ಈ ಪ್ರಮೇಯಗಳಲ್ಲಿ 'ಆಗಮ ಮತ್ತು ವಚನಾಗಮಗಳ ಇತಿಹಾಸ' ಎಂಬುದು ಎಂ.ಎಂ.ಕಲಬುರ್ಗಿ ಅವರ ವಚನ ಅಧ್ಯಯನಕ್ಕೆ ಸಂಬಂಧಿಸಿದ ಭಾಗವಾಗಿದೆ. ಸಿದ್ಧರಾಮ ಮತ್ತು... ಈ ಕೃತಿಯನ್ನು ಎಸ್.ಕೆ.ಕೊಪ್ಪಾ ಅವರು ಸಂಪಾದಿಸಿದ್ದಾರೆ. ವಚನಕಾರನಾದ ಸಿದ್ಧರಾಮನ ಕುರಿತಾಗಿ ಆತನ ಸಮಕಾಲೀನರು, ಸಂಪ್ರದಾಯ, ಆಚರಣೆ, ಶಾಸನಗಳಲ್ಲಿ ಸಿದ್ಧರಾಮನ ವಚನಗಳು, ರಾಘವಾಂಕನ ಕಾವ್ಯದ ತಾತ್ವಿಕತೆ ಇತ್ಯಾದಿ. ೧೧ ಲೇಖನಗಳನ್ನು ಕುರಿತು ಈ ಕೃತಿ ನಿರ್ವಚನ ಮಾಡುತ್ತದೆ. ಕೊಪ್ಪಾ ಅವರು ಸಿದ್ಧರಾಮನ ಕುರಿತ ಲೇಖನಗಳ ಆಶಯವನ್ನು ಪ್ರಸ್ತಾವನೆಯಲ್ಲಿ ವಿವರಿಸಿದ್ದಾರೆ. ಪ್ರಾಸಂಗಿಕವಾಗಿ ಎಂ.ಎಂ. ಕಲಬುರ್ಗಿ ಅವರು ಇಲ್ಲಿಯ ಲೇಖನಗಳ ಅಧ್ಯಯನಕ್ಕೆ ವಚನಗಳನ್ನು ಆಕರವಾಗಿ ಬಳಸಿಕೊಂಡ ರೀತಿಯನ್ನು ಇಲ್ಲಿ ಪರಿಭಾವಿಸಬಹುದಾಗಿದೆ. 'ಶರಣರು ಮತ್ತು.... ವಿ.ಎಸ್.ಮಾಳಿ ಅವರು ಸಂಪಾದಿಸಿದ ಈ ಕೃತಿಯು ಶಿವಶರಣರಲ್ಲಿ ಕೊಂಡುಗುಳಿ ಕೇಶಿರಾಜ, ಉಳಿಯುಮೇಶ್ವರ ಚಿಕ್ಕಯ್ಯ, ನೆಲುವಿಗೆಯ ಶಾಂತಯ್ಯ, ಮೊಲ್ಲೆಬೊಮ್ಮಯ್ಯ, ಗುಂಡುಬ್ರಹ್ಮಯ್ಯ, ದೇವರದಾಸಿಮಯ್ಯ, ಅಲ್ಲಮಪ್ರಭು, ನೀಲಲೋಚನೆ, ಗಜೇಶ್ವರ ಮಸಣಯ್ಯ, ಪುಲಿಗೆರೆಯ ಸೋಮನಾಥ ಮುಂತಾದ ವಚನಕಾರರ ಉಲ್ಲೇಖಿತ ಶಾಸನಗಳು, ಅವರ ಮೂಲ, ವ್ಯಕ್ತಿತ್ವ ಕುರಿತು ಬರೆದ ಲೇಖನಗಳಿಂದ ಕೂಡಿದೆ. ಈ ಲೇಖನಗಳಲ್ಲಿ ಎಂ.ಎಂ.ಕಲಬುರ್ಗಿ ಅವರು ಶರಣರ ಕುರಿತಾದ ಬಹುಶಿಸ್ತೀಯ ಅಧ್ಯಯನದ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತಾರೆ. ಹೀಗೆ ಸಂಪಾದನೆಗೊಂಡ ಈ ಕೃತಿಗಳಲ್ಲಿ ಶರಣರ ಕುರಿತಾದ ಮತ್ತು ವಚನ ಸಾಹಿತ್ಯದ

ಅನನ್ಯತೆಯನ್ನು ಚಾರಿತ್ರಿಕ ದೃಷ್ಟಿಯಿಂದ ಅಧ್ಯಯನ ಮಾಡಿರುವ ಎಂ.ಎಂ.ಕಲಬುರ್ಗಿ ಅವರ ಅನನ್ಯತೆಯನ್ನು ನಿರೂಪಿಸುವ ಪ್ರಯತ್ನ ಮಾಡಲಾಗಿದೆ. ಮುಖ್ಯವಾಗಿ ಈ ಕೃತಿಗಳ ನಾಯಕರು ವಚನಕಾರರಾಗಿದ್ದರೂ ಇಲ್ಲಿ ವಚನಗಳ ಮೂಲಕ ಮತ್ತು ಇತರೆ ಆಕರಗಳ ಮೂಲಕ ಸಿದ್ಧರಾಮ, ರೇವಣಸಿದ್ಧ, ಬಸವಣ್ಣ ಇವರ ನಿಜದ ನೆಲೆಯನ್ನು ಶೋಧಿಸುವ ಪ್ರಯತ್ನವನ್ನು ಮಾಡಿದ್ದಾರೆ. ಅಂದರೆ ವಚನ ಸಾಹಿತ್ಯ ಕೇವಲ ವೀರಶೈವ ತತ್ವಸಿದ್ಧಾಂತಗಳ ನಿರೂಪಣೆಯಲ್ಲ, ನಮ್ಮ ನಾಡಿನ ಸಾಮಾಜಿಕ ಚಳುವಳಿಯಲ್ಲಿ ಪಾತ್ರ ವಹಿಸಿದ ವಚನಕಾರರ ಮೂಲ ಮತ್ತು ಸೈದ್ಧಾಂತಿಕತೆಯನ್ನು ಚಾರಿತ್ರಿಕವಾಗಿ ಕಟ್ಟಿಕೊಡುವ ಕಾರ್ಯವನ್ನು ಮಾಡಿದ್ದಾರೆ. ಅಂದರೆ ವಚನಗಳನ್ನು ಕೇವಲ ಸಾಹಿತ್ಯ ನೆಲೆಯಲ್ಲಿ, ಮೀಮಾಂಸೆ ನೆಲೆಯಲ್ಲಿ ಅರ್ಥೈಸದೆ ಅವು ಜನಜೀವನದ ಪ್ರತಿಬಿಂಬಗಳಾಗಿ ಹೇಗೆ ನಿಲ್ಲುತ್ತವೆ ಎಂಬುದನ್ನು ಪ್ರತಿಪಾದಿಸಿರುವುದನ್ನು ಈ ಕೃತಿಗಳಲ್ಲಿ ವಿವರಿಸಲಾಗಿದೆ.

ಮಾರ್ಗಾನುಸಂಧಾನ ಎಂಬುದು ವೀರಣ್ಣ ರಾಜೂರ ಅವರ ಸಂಪಾದನ ಕೃತಿಯಾಗಿದೆ. ಇದರಲ್ಲಿ ಮೇಲೆ ಗಮನಿಸಿದ ಎಂ.ಎಂ.ಕಲಬುರ್ಗಿ ಅವರ ವಿಭಿನ್ನ ಕ್ಷೇತ್ರಗಳಿಗೆ ಸಂಬಂಧಿಸಿದ ಲೇಖನಗಳನ್ನು ಒಂದೆಡೆ ಸೇರಿಸಿ ಪ್ರತ್ಯೇಕ ಅಂದರೆ ರೇವಣಸಿದ್ಧ ಮತ್ತು ಸಿದ್ಧರಾಮ ಮತ್ತು ಈ ರೀತಿಯ ೧೬ ಕೃತಿಗಳ ಪ್ರಸ್ತಾವನೆಗಳನ್ನು ಒಳಗೊಂಡಿದೆ. ಇದರಲ್ಲಿ ಎಂ.ಎಂ.ಕಲಬುರ್ಗಿ ಅವರ ಒಟ್ಟು ಸಂಶೋಧನೆಯ ಸ್ವರೂಪ, ಲಕ್ಷಣ, ದೃಷ್ಟಿ–ಧೋರಣೆ ಹಾಗೂ ವಿಶಿಷ್ಟ ವಿನೂತನ ಕೊಡುಗೆಗಳನ್ನು ಕುರಿತು ಸಮರ್ಥವಾಗಿ ಪ್ರತಿಪಾದಿಸಿದ್ದಾರೆ.

### ೨.೩. ಲೇಖನಗಳು

ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಗೊಂಡ ಕನ್ನಡ ವಾರ್ಷಿಕ–೧೯೯೩ ಎಂಬ ಕೃತಿಯು ಹಲವು ವಿದ್ವಾಂಸರ ಲೇಖನಗಳನ್ನು ಒಳಗೊಂಡಿದೆ. ಇದರಲ್ಲಿ 'ವಚನ ಸಾಹಿತ್ಯ ಸಂಪುಟಗಳು' ಕೆ.ವಿ.ನಾರಾಯಣ ಅವರ ಲೇಖನ ಅಧ್ಯಯನಕ್ಕೆ ಪೂರಕವಾಗಿದೆ. ಈ ಲೇಖನದಲ್ಲಿ ವಚನ ಸಾಹಿತ್ಯ ಬೆಳೆದುಬಂದ ಬಗೆಯನ್ನು ಕುರಿತು ಚರ್ಚಿಸಿದ್ದಾರೆ. ಓಲೆ, ಕಾಗದಗಳ ಮೇಲೆ ಸೀಮಿತವಾಗಿದ್ದ ಮುದ್ರಣದ ಮೂಲಕ ಬಿಡುಗಡೆ ಮಾಡಿದ ಹಂತದಿಂದ ಹಿಡಿದು ಮೊದಲಾಗಿ ವಿದ್ವಾಂಸರು ವಚನಗಳನ್ನು ಬೆಳಕಿಗೆ ತರುತ್ತಲೇ ಇದ್ದಾರೆ. ಹೊಸ ಹೊಸ ವಚನಗಳು ಒಂದೆಡೆ ಪ್ರಕಟವಾದರೆ ಮತ್ತೊಂದೆಡೆ ಕೂಟವಚನಗಳೆಂದು ವಾದಿಸಿ ಕತ್ತಲೆಗೆ ತಳ್ಳುತ್ತಿದ್ದಾರೆ. ಇಂತಹ ಎಲ್ಲಾ ಪ್ರಯತ್ನಗಳು ಒಂದೆಡೆ ಸೇರಿ 'ಸಮಗ್ರ ವಚನ ಸಂಪುಟಗಳು'(೧೪ ಸಂಪುಟಗಳು) ಪ್ರಕಟವಾಗಿವೆ. ಈ ಸಂಪುಟಗಳ ಪ್ರಧಾನ ಸಂಪಾದಕರಾದ ಎಂ.ಎಂ.ಕಲಬುರ್ಗಿ ಅವರು 'ವಚನ ಸಾಹಿತ್ಯದ ಪರಿಷ್ಕರಣ ಕಾರ್ಯ ಜಟಿಲವಾದದ್ದು' ಎಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ.

"ಎಲ್ಲಾ ಶರಣರ ವಚನಗಳನ್ನು ಎಲ್ಲಾ ಪ್ರಾಚೀನ ಆಕರಗಳಿಂದ ಸಂಗ್ರಹಿಸುವುದು, ಪ್ರಕ್ಷಿಪ್ತವಾಗಿರುವ ವಚನಕಾರರನ್ನು, ವಚನಗಳನ್ನು ಕೈಬಿಡುವುದು, ನಿಜವಚನಗಳ ಪಾಠವನ್ನು ಪರಿಷ್ಕರಿಸುವುದು ಈ ಯೋಜನೆಯ ಉದ್ದೇಶವಾಗಿದೆ" ಎಂದಿದ್ದಾರೆ. ಈ ಸಂಪುಟ ಸಿದ್ಧತೆಯ ಹಿಂದಿನ ಪರಿಶ್ರಮವನ್ನು ಒಪ್ಪಬೇಕಾದದ್ದೆ ಎಂದು ಲೇಖಕರೇ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಕೃತಿ ರಚನೆಯ ಹಿಂದಿನ ಶ್ರಮ, ಕ್ರಮಬದ್ಧತೆ, ಕಾರ್ಯವಿಧಾನಗಳ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ನಿಜ ವಚನಗಳನ್ನು, ನಿಜ ವಚನಕಾರರನ್ನು ನಿರ್ಧರಿಸಲು ಸಂಪಾದಕರು ಕೆಲವು ಮಾನದಂಡಗಳನ್ನು ಹೊಂದಿರುವ ಬಗೆಯನ್ನು ತಿಳಿಸಿದ್ದಾರೆ. ಕೃತಿ–ಕೃತಿಕಾರರ ಸಮೀಕರಣದಿಂದಾಗಿ ವಚನಗಳ ನಡುವೆ ನಡೆಯಬಹುದಾದ ಸಂವಾದಕ್ಕೂ ಮಿತಿಯನ್ನು ಕಲ್ಪಿಸಿದಂತಾಗುತ್ತದೆ. ಇಂಥದೊಂದು ಸಂಸ್ಕೃತಿ ಸಂವಾದದ ನೆಲೆಯ ವಚನ ಸಂಕಲನಕ್ಕೆ ಈ ಸಂಪುಟಗಳ ನಂತರವೂ ಇನ್ನೂ ಅವಕಾಶ ಉಳಿದಿದೆ ಎಂದಿದ್ದಾರೆ. ಇದರಿಂದ ಸಂಶೋಧನೆ ಮೂಲಕ ಕಂಡುಕೊಂಡಿದ್ದು ನಮಗೆ ಸರಿಯಾಗಿ ಕಾಣಬಹುದು. ಆದರೆ ಇನ್ನೊಂದು ಕಾಲಮಾನಕ್ಕೆ ಹೊಸ ಆಲೋಚನೆಗೆ ಅವಕಾಶ ಕೊಡಬೇಕು ಎಂಬ ಅಂಶವನ್ನು ಎತ್ತಿ ಹೇಳುವ ಮೂಲಕ ಸಂಶೋಧನೆಗೆ ದಾರಿ ಮಾಡಿಕೊಟ್ಟಿದ್ದಾರೆ. ಇಲ್ಲಿ ಲೇಖಕರು 'ಸಮಗ್ರ ವಚನ ಸಂಕಲನ' ಸಂಪುಟಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಅದರ ವೈಶಿಷ್ಟ್ಯತೆಯನ್ನು ಕುರಿತು ಚರ್ಚಿಸಿದ್ದಾರೆ. ಎಂ.ಎಂ.ಕಲಬುರ್ಗಿ ಅವರ ವಚನಸಂಬಂಧಿ ಕೃತಿಗಳನ್ನು, ಲೇಖನಗಳನ್ನು ಕುರಿತು ಚರ್ಚಿಸಿಲ್ಲ. ಆದರೆ ಪ್ರಸ್ತುತ ಪಿಎಚ್.ಡಿ. ಅಧ್ಯಯನದಲ್ಲಿ ಎಲ್ಲಾ ವಚನಸಂಬಂಧಿ ಕೃತಿಗಳನ್ನು, ಲೇಖನಗಳನ್ನು ಗಮನಿಸಲಾಗುವುದು.

'ಕಲ್ಲರಳಿ' ಪೂಜ್ಯಶ್ರೀ ಶರಣಬಸವಾರ್ಯ ತಾತನವರ ಸಂಸ್ಮರಣ ಗ್ರಂಥ. ಇದನ್ನು ಡಾ.ಕೆ.ರವೀಂದ್ರನಾಥ ಹಾಗೂ ಡಾ.ಕಲ್ಲಯ್ಯ ಎಸ್.ಹಿರೇಮಠ ಅವರು ಶ್ರೀ ಶರಣ ಬಸವತಾತ ಪ್ರಕಾಶನ, ಅರಳಿಹಳ್ಳಿಯಿಂದ ಸಂಪಾದಿಸಿಕೊಟ್ಟಿದ್ದಾರೆ. ಇದೊಂದು ಲೇಖನಗಳ ಸಂಪಾದಿತ ಕೃತಿಯಾಗಿದೆ. ಇದರಲ್ಲಿ ಗುರುಪಾದ ಮರಿಗುದ್ದಿ ಅವರು ಎಂ.ಎಂ.ಕಲಬುರ್ಗಿ ಅವರ 'ಮಾರ್ಗ ಸಂಪುಟಗಳು' ಎಂಬ ಲೇಖನವನ್ನು ಬರೆದಿದ್ದಾರೆ. ಈ ಲೇಖನದಲ್ಲಿ ಎಂ.ಎಂ.ಕಲಬುರ್ಗಿ ಅವರ ಮೊದಲ ನಾಲ್ಕು ಮಾರ್ಗ ಸಂಪುಟಗಳಲ್ಲಿನ ಪ್ರಮುಖ ಲೇಖನಗಳ ಕುರಿತು ಚರ್ಚಿಸಿದ್ದಾರೆ. ಅದರಲ್ಲಿ ವಚನಸಂಬಂಧಿ ಲೇಖನದಲ್ಲಿ ಕೆಲವನ್ನು ಚರ್ಚಿಸಿದ್ದಾರೆ.

'ಬಸವಣ್ಣನವರ ವಂಶಜರ ಕವಿಳಾಸಪುರ', 'ವಚನಕಾರರು: ಭಾಷೆ–ಕನ್ನಡ ಭಾಷೆ ಮತ್ತು ವಚನ ಭಾಷೆ' ಮುಂತಾದ ಪ್ರಮುಖ ಲೇಖನಗಳ ಕುರಿತು ಮಾತ್ರ ಚರ್ಚಿಸಿದ್ದಾರೆ. ಎಲ್ಲಾ ವಚನಸಂಬಂಧಿ ಲೇಖನಗಳ ಕುರಿತು ಚರ್ಚಿಸಿಲ್ಲ. ಪ್ರಸ್ತುತ ಈ ಅಧ್ಯಯನದಲ್ಲಿ ವಚನ ಸಂಬಂಧಿ ಲೇಖನಗಳನ್ನು ಸುದೀರ್ಘವಾಗಿ ಚರ್ಚಿಸಲು ಪ್ರಯತ್ನಿಸಲಾಗಿದೆ.

ಎಂ.ಎಂ.ಕಲಬುರ್ಗಿ ಅವರು ಹತ್ಯೆಗೊಳಗಾದ ನಂತರ ಕೆಲವು ಕೃತಿಗಳು ಬೆಳಕಿಗೆ ಬಂದವು. ಕೆ.ಎಸ್.ಭಗವಾನ್ ಅವರ 'ಹುತಾತ್ಮ ಕಲಬುರ್ಗಿ', ಕಲ್ಯಾಣರಾವ್ ಜಿ. ಪಾಟೀಲ ಅವರ 'ನಾಡೋಜ ಎಂ.ಎಂ.ಕಲಬುರ್ಗಿ, ಡಾ.ವೀರಣ್ಣ ರಾಜೂರ ಅವರ 'ಮಹಾಮಾರ್ಗದ ರೂವಾರಿ ಎಂ.ಎಂ. ಕಲಬುರ್ಗಿ', 'ಬಸವ ಪಥ' ೪೩೨ನೇ ಸಂಚಿಕೆ ವಿಶೇಷವಾಗಿ ಎಂ.ಎಂ.ಕಲಬುರ್ಗಿ ಕುರಿತ ಲೇಖನಗಳು, 'ಕಲಬುರ್ಗಿ ನೆನಪು' ಶ್ಯಾಮಸುಂದರ ಬಿದರಕುಂದಿ ಅವರ ಸಂಪಾದನ ಕೃತಿ. ಹೀಗೆ ಹಲವು ಕೃತಿಗಳಲ್ಲಿ ಹಲವು ಲೇಖಕರ ಲೇಖನಗಳಿವೆ. ಇವುಗಳಲ್ಲಿ ಸಾಕಷ್ಟು ಅಂಶಗಳು ಎಂ.ಎಂ.ಕಲಬುರ್ಗಿ ಅವರೊಡನೆಯ ಒಡನಾಟ ಕುರಿತಂತೆ ಇವೆ. ಕೆಲವು ಲೇಖನಗಳು ಮಾತ್ರ ವಚನ ಕೃತಿಗಳ ಸಮೀಕ್ಷೆ ಕೊಡಲಾಗಿದೆ. ಹಾಗೆಯೇ ಕೆಲವು ಲೇಖನಗಳು ಬಹುಭಾಷಾ ಯೋಜನೆಯ ಕುರಿತಂತೆ ಮಾತ್ರ ಇದೆ. ವಚನ ಸಾಹಿತ್ಯಕ್ಕೆ ಸಂಬಂಧಿಸಿದ ವಿವರವಾದ ಚರ್ಚೆಗಳು ಯಾವ ಲೇಖನದಲ್ಲೂ ಕಂಡುಬಂದಿಲ್ಲ. ಈ ಮೇಲೆ ಸಮೀಕ್ಷೆ ಮಾಡಿದ ಅಧ್ಯಯನ, ಕೃತಿ ಹಾಗೂ ಲೇಖನಗಳಲ್ಲಿ ವಚನ ಸಾಹಿತ್ಯ ಕುರಿತಾದ ಎಂ.ಎಂ.ಕಲಬುರ್ಗಿ ಅವರ ಸಾಧನೆಯನ್ನು ಅನುಷಂಗಿಕವಾಗಿ ಚರ್ಚಿಸಲಾಗಿದೆ. ಪ್ರಸ್ತುತ ನನ್ನ ಪ್ರಬಂಧದಲ್ಲಿ ವಚನ ಸಾಹಿತ್ಯದ ಒಟ್ಟು ಸಾಧನೆಯನ್ನು ನಿರೂಪಿಸುವ ಪ್ರಯತ್ನ ಮಾಡಲಾಗಿದೆ.

**ಅಡಿಟಿಪ್ಪಣಿಗಳು**

೧. ಡಾ.ಎಂ.ಎಂ.ಕಲಬುರ್ಗಿ, ಮಹಾಮಾರ್ಗ, ಪು.೮೪೪.

೨. ಡಾ.ಎಫ್.ಟಿ.ಹಳ್ಳಿಕೇರಿ, ಎನ್.ಬಿ.ವಿರೂಪಾಕ್ಷಿ(ಸಂ), ಡಾ.ಎಂ.ಎಂ.ಕಲಬುರ್ಗಿ ಮಾರ್ಗದ ಮಹಾವಾಕ್ಯಗಳು, ಸಂಪಾದಕರ ನುಡಿ.

೩. ಡಾ.ಕರೀಗೌಡ ಬೀಚನಹಳ್ಳಿ, ಬಸವಣ್ಣ: ಪುನರ್ಲೇಖ, ಲೇಖಕರ ಮಾತು.

೪. ಡಾ.ವೀರಣ್ಣ ದಂಡೆ, ಎಂ.ಎಂ.ಕಲಬುರ್ಗಿ ಅವರ ಸಂಶೋಧನ ಸಾಹಿತ್ಯ, ಪು.೬೩.

೫. ಡಾ.ರಾಮಕೃಷ್ಣ ಮರಾಠೆ, ಕನ್ನಡದ ಮಹಾಮಾರ್ಗ ಡಾ.ಎಂ.ಎಂ.ಕಲಬುರ್ಗಿ, ಪು.೧೨೩.

೬. ಡಾ.ಎಂ.ಎಂ.ಕಲಬುರ್ಗಿ, ಮಾರ್ಗ, ಸಂಪುಟ ೫, ಪು.೨೫೧.

೭. ಡಾ.ಎಂ.ಎಂ.ಕಲಬುರ್ಗಿ, ಮಾರ್ಗ, ಸಂ.೧, ಪು.೨೬೯.

## ಅಧ್ಯಾಯ: ಮೂರು

# ಎಂ.ಎಂ. ಕಲಬುರ್ಗಿ : ವಚನ ಸಾಹಿತ್ಯ ಶೋಧ

ಪಾಶ್ಚಾತ್ಯ ವಿದ್ವಾಂಸರಿಂದ ಶಾಸನ, ಕಡತಗಳು, ಕೈಫಿಯತ್ತುಗಳು, ಹಸ್ತಪ್ರತಿಗಳ ಶೋಧಕಾರ್ಯ ಆರಂಭವಾಗಿ ಇವರಿಂದ ಹಲವಾರು ಸಾಹಿತ್ಯಿಕ ಹಾಗೂ ಚಾರಿತ್ರಿಕ ಕೃತಿಗಳು ಬೆಳಕು ಕಂಡಿವೆ. ಆದರೆ ವಚನ ಸಾಹಿತ್ಯವನ್ನು ಮಾತ್ರ ಪಾಶ್ಚಾತ್ಯರು ನಿರ್ಲಕ್ಷಿಸಿದರು. ಅದಕ್ಕೆ ಕಾರಣ ಅವರ ಧರ್ಮ ತತ್ವಗಳನ್ನೇ ವಚನ ಸಾಹಿತ್ಯ ಹೋಲುತ್ತದೆ ಎಂಬ ಭಾವನೆ ಅವರಲ್ಲಿತ್ತು ಎಂಬುದು ಹಲವು ಮೂಲಗಳಿಂದ ತಿಳಿದುಬರುತ್ತದೆ. ಪಾಶ್ಚಾತ್ಯರ ಪ್ರಭಾವಕ್ಕೊಳಗಾದ ದೇಶಿವಿದ್ವಾಂಸರು ಸಂಶೋಧನಾಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ಹಲವು ಕೃತಿಗಳನ್ನು ಹೊರತಂದಿದ್ದಾರೆ. ಅದರಲ್ಲೂ ಪಾಶ್ಚಾತ್ಯ ವಿದ್ವಾಂಸರು ನಿರ್ಲಕ್ಷಿಸಿದ್ದ ವಚನ ಸಾಹಿತ್ಯದ ಕಡೆಗೆ ದೇಶಿ ವಿದ್ವಾಂಸರು ಹೆಚ್ಚಿನ ಗಮನ ಹರಿಸುವ ಮೂಲಕ ವಚನ ಸಾಹಿತ್ಯವನ್ನು ಸಾಧ್ಯವಾದಷ್ಟು ಸಂಪಾದನೆ ಮಾಡಲು ಶ್ರಮಿಸಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ವಚನ ಸಾಹಿತ್ಯ ಶೋಧದಲ್ಲಿ ಕೆಲವು ವಿದ್ವಾಂಸರು ತಮ್ಮನ್ನು ತೊಡಗಿಸಿಕೊಂಡಿದ್ದರೂ ಫ.ಗು.ಹಳಕಟ್ಟಿ ಅವರಷ್ಟು ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅಳಿವಿನ ಹಂಚಿನಲ್ಲಿದ್ದ ಹಸ್ತಪ್ರತಿಗಳನ್ನು ಶೋಧಿಸಿ, ಸಂಗ್ರಹಿಸಿ, ಪರಿಷ್ಕರಿಸಿ, ಪ್ರಕಟಿಸಿರಲಿಲ್ಲ. ಹಾಗಾಗಿ ಫ.ಗು.ಹಳಕಟ್ಟಿ ಅವರನ್ನು 'ವಚನ ಸಾಹಿತ್ಯ ಪಿತಾಮಹ' ಎಂದು ಕರೆಯುತ್ತಾರೆ. ನಂತರ ವಚನ ಸಾಹಿತ್ಯ ಶೋಧ, ಪರಿಷ್ಕರಣೆ ಮತ್ತು ಸಂಪಾದನೆಗಳಿಗೆ ಹೊಸದಿಕ್ಕು ತಂದವರು ಶಿ.ಶಿ.ಬಸವನಾಳರು. ಇವರನ್ನೇ ಅನುಸರಿಸಿ ಸಂಪಾದನಾ ಕಾರ್ಯಗಳಿಗೆ ಕೈ ಹಾಕಿದವರು. ಎಲ್.ಬಸವರಾಜು, ಎಸ್.ಎಸ್.ಭೂಸನೂರಮಠ, ಆರ್.ಸಿ.ಹಿರೇಮಠ, ಎಂ.ಎಸ್.ಸುಂಕಾಪುರ, ಹೊಸಹಳ್ಳಿ ಪ್ರಭುಸ್ವಾಮಿಗಳು, ಉತ್ತಂಗಿ ಚೆನ್ನಪ್ಪ, ಎಚ್.ದೇವಿರಪ್ಪ, ಎನ್.ಎಂ.ಹುಣಿಶ್ಯಾಳ ಮುಂತಾದವರು ಇವರ ನಂತರ ಬಸವನಾಳರ ಪರಂಪರೆಯಲ್ಲಿ ಮುಂದುವರಿದವರು ಎಂ.ಎಂ.ಕಲಬುರ್ಗಿ, ವಿ.ಶಿವಾನಂದ, ಎಸ್.ವಿದ್ಯಾಶಂಕರ್, ಬಿ.ವ್ಹಿ.ಶಿರೂರ, ವೀರಣ್ಣ ರಾಜೂರ, ಬಿ.ಆರ್.ಹಿರೇಮಠ,

ಎಸ್.ಉಮಾಪತಿ, ಎಸ್.ಶಿವಣ್ಣ, ಬಿ.ವ್ಹಿ.ಮಲ್ಲಾಪುರ ಮುಂತಾದ ವಿದ್ವಾಂಸರ ತಂಡವೇ ವಚನ ಸಾಹಿತ್ಯದ ಶೋಧ, ಸಂಗ್ರಹ–ಸಂಪಾದನೆ ಮತ್ತು ಪ್ರಕಟಣೆಯ ಕಾರ್ಯದಲ್ಲಿ ದುಡಿದರು. ಮುಂದೆ ಗದುಗಿನ ತೋಂಟದಾರ್ಯ ಮಠದ ಕಾರ್ಯ, ಸರಕಾರದ ಯೋಜನೆಗಳು ಹೀಗೆ ಫ.ಗು.ಹಳಕಟ್ಟಿ ಅವರ ನಂತರದ ಕಾಲದಲ್ಲಿ ವಚನ ಸಾಹಿತ್ಯದ ಅಧ್ಯಯನ ಸಾಗಿ ಬಂದಿತು. ಈ ರೀತಿಯ ವಚನ ಸಾಹಿತ್ಯದ ಶೋಧ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ದುಡಿದು ಸಾಕಷ್ಟು ವಚನಗಳನ್ನು ಬೆಳಕಿಗೆ ತಂದವರಲ್ಲಿ ಎಂ.ಎಂ.ಕಲಬುರ್ಗಿ ಅವರು ಪ್ರಮುಖರಾಗಿದ್ದಾರೆ. ೧೯೬೨ರಲ್ಲಿ ಕನ್ನಡ ವಿಭಾಗದಲ್ಲಿ 'ಸಮಗ್ರ ವಚನ–ವಾಙ್ಮಯ ಸಂಶೋಧನ ಪ್ರಕಟಣ' ಯೋಜನೆಯಲ್ಲಿ ಸಹಾಯಕ ಸಂಶೋಧಕರಾಗಿ ಸೇರಿಕೊಂಡು ತಮ್ಮ ಗುರುಗಳಾದ ಆರ್.ಸಿ. ಹಿರೇಮಠ ಅವರ ಮಾರ್ಗದರ್ಶನದಲ್ಲಿ ಸಂಶೋಧನ ಕಾರ್ಯದಲ್ಲಿ ತೊಡಗಿಕೊಂಡರು. ಅಲ್ಲಿ ಒಂದು ವರ್ಷಗಳ ಕಾಲ ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಸ್ತಪ್ರತಿಗಳ ಸಂಗ್ರಹ, ಸೂಚೀಕರಣ, ವಚನಗಳ ನಕಲು, ಪರಿಷ್ಕರಣ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ಈ ಯೋಜನೆಯಿಂದ 'ಚೆನ್ನಬಸವಣ್ಣನವರ ವಚನಗಳು'(೧೯೬೫) ಸಮಗ್ರ ಸಂಪುಟವು ಪ್ರಕಟವಾಗುವಲ್ಲಿ ಶ್ರಮ ವಹಿಸಿದರು. ನಂತರ ಅದೇ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕ ವೃತ್ತಿಯ ಜೊತೆಗೆ ಹಲವು ಕ್ಷೇತ್ರಗಳಲ್ಲಿ ಸಂಶೋಧನೆ ಕೈಗೊಂಡರು. ಎಂ.ಎಂ.ಕಲಬುರ್ಗಿ ಅವರು ಹೀಗೆ ಹಲವು ಕ್ಷೇತ್ರಗಳಲ್ಲಿ ಸಂಶೋಧನೆ ಕೈಗೊಂಡಿದ್ದರೂ ವಚನ ಸಾಹಿತ್ಯ ಕ್ಷೇತ್ರದಲ್ಲಿ ಇತರ ಕ್ಷೇತ್ರಗಳಿಗಿಂತ ಅಧಿಕವಾಗಿ ದುಡಿದಿದ್ದಾರೆ.

ಒಂದು ಅಂದಾಜಿನ ಪ್ರಕಾರ ಎಂ.ಎಂ.ಕಲಬುರ್ಗಿ ಅವರ ೧೨೧ ಕೃತಿಗಳಲ್ಲಿ ೨೧ ಕೃತಿಗಳು, ಒಟ್ಟು ೮೬೮ ಲೇಖನಗಳಲ್ಲಿ ೧೨೩ ಲೇಖನಗಳು ವಚನ ಸಾಹಿತ್ಯಕ್ಕೆ ಸಂಬಂಧಿಸಿವೆ. ಎಂ.ಎಂ.ಕಲಬುರ್ಗಿ ಅವರಿಗೆ ವಚನ ಸಾಹಿತ್ಯದಲ್ಲಿ ಆಸಕ್ತಿ ಎಷ್ಟಿತ್ತೆಂಬುದಕ್ಕೆ ಅವರ ಮೊದಲ ಲೇಖನ 'ಬಸವಣ್ಣನವರ ಜೀವನ ಚರಿತ್ರೆ' ಹಾಗೂ ಕೊನೆಯ ಲೇಖನ 'ನಾಲ್ಕು ಜಾತಿವಿಡಿದು ಬಂದ ಜಂಗಮವೇ ಶ್ರೇಷ್ಠ?'. ಈ ಎರಡು ಲೇಖನಗಳು ವಚನ ಸಾಹಿತ್ಯಕ್ಕೆ ಸಂಬಂಧಿಸಿದವು ಗಳಾಗಿರುವುದೇ ಸಾಕ್ಷಿ. ಇದೊಂದು ವಿಶೇಷವಾಗಿ ಕಂಡುಬರುತ್ತದೆ. ಅಷ್ಟೇ ಅಲ್ಲದೇ ಇವರ ಪ್ರಕಟವಾದ ಮೊದಲ ಕೃತಿ 'ಬಸವಸ್ತೋತ್ರದ ವಚನಗಳು'(೧೯೭೬). ಇದು ವಚನ ಸಾಹಿತ್ಯಕ್ಕೆ ಸಂಬಂಧಿಸಿರುವುದು ವಿಶೇಷವಾಗಿ ಕಂಡುಬರುತ್ತದೆ. ಎಂ.ಎಂ.ಕಲಬುರ್ಗಿ ಅವರು ಒಬ್ಬ ಪ್ರಾಧ್ಯಾಪಕರಾಗಿದ್ದುಕೊಂಡು ಹೊಸ ಶೋಧದಲ್ಲಿ ತಮ್ಮನ್ನು ತೊಡಗಿಸಿಕೊಂಡಂತವರು. ದಿನದ ಹೆಚ್ಚು ಸಮಯ ಹೊಸತನ್ನು ಹುಡುಕಾಡುವ, ಹೊಸತನ್ನು ಚಿಂತಿಸುವಲ್ಲಿಯೇ ಕಳೆಯುತ್ತಿದ್ದರು. ವಚನ ಸಾಹಿತ್ಯದ ಬಗ್ಗೆ ಹೆಚ್ಚು ಒಲವುಳ್ಳವರಾಗಿದ್ದ ಎಂ.ಎಂ.ಕಲಬುರ್ಗಿ ಅವರು ಶೋಧ, ಸಂಗ್ರಹ, ಸಂಕಲನ ಮತ್ತು ಸಂಪಾದನೆಗಾಗಿ ತಮ್ಮ ಸಮಯವನ್ನು ಮೀಸಲಿಟ್ಟಿದ್ದರು. ಫ.ಗು.ಹಳಕಟ್ಟಿ

ಅವರಿಂದ ಮೊದಲ್ಗೊಂಡು ಎಂ.ಎಂ.ಕಲಬುರ್ಗಿ ಅವರನ್ನು ಒಳಗೊಂಡಂತೆ ಹಲವಾರು ಪರಿಷ್ಕರಣ ಕಾರ್ಯ ನಡೆದಿದ್ದರೂ ವಚನಗಳ ಸಂಖ್ಯಾ ನಿರ್ಣಯದಲ್ಲಿ ಬದಲಾವಣೆ ಕಂಡುಬರುತ್ತಲಿದೆ. ಏಕ ಪುರಾತನರ ವಚನ ಕಟ್ಟುಗಳು, ಸಕಲ ಪುರಾತನರ ವಚನಕಟ್ಟು ಹಾಗೆಯೇ ವಚನಕಾರರನ್ನು ಕುರಿತು ವೀರಶೈವ ಕೃತಿಗಳನ್ನೊಳಗೊಂಡ ಹಸ್ತಪ್ರತಿಗಳಲ್ಲಿ ಎಷ್ಟೋ ವಚನಗಳು ಮತ್ತು ಸ್ವರವಚನಗಳು ಹುದುಗಿಕೊಂಡಿರುತ್ತವೆ. ಅಂತಹ ಹಸ್ತಪ್ರತಿಗಳನ್ನು ಹಾಗೂ ಕೃತಿಗಳನ್ನು ಒಳಹೊಕ್ಕು ಸೂಕ್ಷ್ಮವಾಗಿ ಗಮನಿಸುತ್ತ ಅಭ್ಯಾಸ ಮಾಡುವ ವರಿಗೆ ಎಷ್ಟೋ ಹೊಸ ವಚನಗಳು ಗೋಚರವಾಗುತ್ತವೆ. ಈ ರೀತಿಯ ಸೂಕ್ಷ್ಮ ಅಧ್ಯಯನದಲ್ಲಿ ತೊಡಗಿಕೊಂಡು ಹೊಸಶೋಧಕ್ಕೆ ಕಾರಣರಾದವರಲ್ಲಿ ಎಂ.ಎಂ.ಕಲಬುರ್ಗಿ ಅವರು ಪ್ರಮುಖರಾಗಿದ್ದಾರೆ. ಹೊಸದಾಗಿ ದೊರೆತಂತಹ ಹಸ್ತಪ್ರತಿಗಳನ್ನು ಸಂಪಾದನೆ ಮಾಡುವುದರ ಜೊತೆಗೆ ಈಗಾಗಲೇ ಇತರರಿಂದ ಸಂಪಾದನೆಗೊಂಡ ಕೃತಿಗಳನ್ನು ಹಾಗೆಯೇ ಅವರ ಬಳಸಿದ ಪ್ರತಿಗಳನ್ನು ಅಧ್ಯಯನ ಮಾಡುವ ಮೂಲಕ ಅಲ್ಲಿ ದೊರೆತ ವಚನಗಳ ಸಂಖ್ಯಾ ನಿರ್ಣಯದಲ್ಲಿ ವ್ಯತ್ಯಾಸ ಗುರುತಿಸುವ ಮೂಲಕ ಹೊಸ ವಚನಗಳನ್ನು ಹೆಕ್ಕಿ ತೆಗೆಯುವ ಕೆಲಸವನ್ನು ಮಾಡಿದ್ದಾರೆ. ಅಂತಹ ಶೋಧವನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಫ.ಗು.ಹಳಕಟ್ಟಿ ಅವರಿಂದ ಮೊದಲ್ಗೊಂಡು ಈಗಾಗಲೇ ಸಾಕಷ್ಟು ವಿದ್ವಾಂಸರು ಬಸವಣ್ಣ, ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮ ಹಾಗೂ ಇತರ ವಚನಕಾರರ ವಚನಗಳನ್ನು ಹಾಗೆಯೇ ಅವರಿಗೆ ಸಂಬಂಧಿಸಿದ ಕೃತಿಗಳನ್ನು ಹಸ್ತಪ್ರತಿಗಳ ಮೂಲಕ ಶೋಧ ಮಾಡುವ ಮೂಲಕ ಪ್ರಕಟಿಸಿದ್ದಾರೆ. ಆದರೂ ಎಂ.ಎಂ.ಕಲಬುರ್ಗಿ ಅವರು ಈ ವಚನಕಾರರ ಕುರಿತಂತೆ ಮತ್ತಷ್ಟು ಅಧ್ಯಯನ ಮಾಡುವ ಅಗತ್ಯವಿದೆ ಎಂದು ಅರಿತು ಹಸ್ತಪ್ರತಿಗಳ ಹುಡುಕಾಟಕ್ಕೆ ಕೈಹಾಕಿದ ಸಂದರ್ಭದಲ್ಲಿ ಪ್ರಕಟವಾಗದಿರುವ ಹಲವು ಹೊಸ ವಚನಗಳು ದೊರೆತಿವೆ. ಅವುಗಳನ್ನು ಈ ಕೆಳಕಂಡಂತೆ ಗಮನಿಸಲಾಗಿದೆ.

೧. 'ಚೆನ್ನಬಸವಣ್ಣನವರ ಷಟ್‌ಸ್ಥಲವಚನ ಮಹಾಸಂಪುಟ' ೧. ಚೆನ್ನಬಸವರಾಜದೇವರ ಷಟ್‌ಸ್ಥಲ ವಚನ, ೨. ಚೆನ್ನಬಸವೇಶ್ವರ ದೇವರು ನಿರೂಪಿಸಿದ ಅನುಭವ ಷಟ್‌ಸ್ಥಲದ ವಚನಗಳು, ೩. ಚೆನ್ನಬಸವಣ್ಣನವರ ಷಟ್‌ಸ್ಥಲದ ನಿರ್ಣಯ ಎಂಬ ಕೃತಿಯು ಮೂರು ಬಗೆಯ ಷಟ್‌ಸ್ಥಲ ಕ್ರಮದಿಂದ ಕೂಡಿದ ೩ ವಚನ ಕೃತಿಗಳ ಸಂಯುಕ್ತ ಸಂಪುಟವಾಗಿದೆ.

ಈ ಮೇಲಿನ ಮೂರು ಕೃತಿಗಳಲ್ಲಿ 'ಚೆನ್ನಬಸವೇಶ್ವರ ದೇವರು ನಿರೂಪಿಸಿದ ಅನುಭಾವ ಷಟ್‌ಸ್ಥಲದ ವಚನಗಳು' ಕೃತಿ ಮೊದಲೇ ಪ್ರಕಟಗೊಂಡಿದ್ದು, ಉಳಿದಂತಹ ಎರಡು ಕೃತಿಗಳು ಅಪ್ರಕಟಿತಾಗಿದ್ದು, ಎಂ.ಎಂ.ಕಲಬುರ್ಗಿ ಅವರ ಸಂಪಾದಕತ್ವದಲ್ಲಿ ಮೊದಲಬಾರಿಗೆ ಪ್ರಕಟಗೊಳ್ಳು

ತ್ತಲಿವೆ. ಈ ಮೂರು ಕೃತಿಗಳಲ್ಲಿ ಹೊಸ ವಚನಗಳನ್ನು ಎಂ.ಎಂ.ಕಲಬುರ್ಗಿ ಅವರು ಮೊದಲ ಬಾರಿಗೆ ಶೋಧಿಸಿ ಪ್ರಕಟಿಸಿರುವುದು ವಿಶೇಷವಾಗಿದೆ.

ಚೆನ್ನಬಸವರಾಜದೇವರ ಷಟ್‌ಸ್ಥಲ ವಚನ ಕೃತಿಯು ಭಕ್ತನ ಭಕ್ತಿ, ಭಕ್ತನ ಪ್ರಸಾದಿ ಸ್ಥಲವಿವೇಚನೆಯಿಂದ ಕೂಡಿದ ೮೭೧ ವಚನಗಳ ಸಂಕಲನ ಕೃತಿಯಾಗಿದೆ. ಈ ಕೃತಿಯು ಚೆನ್ನಬಸವಣ್ಣನವರ ಕೃತಿಗಳಲ್ಲಿಯೇ ದೊಡ್ಡದಾಗಿರುವುದು ವಿಶೇಷ ಸಂಗತಿ. ಬಸವಣ್ಣ ಮತ್ತು ಅಲ್ಲಮಪ್ರಭುಗಳ ವಚನ ಕಟ್ಟುಗಳಿಗೆ ಸಮಾನವಾಗಿರುವ ಚೆನ್ನಬಸವಣ್ಣನವರ ಈ ಕೃತಿಯ ಪ್ರಕಟಣೆ ಅವಶ್ಯಕ ಆಗಬೇಕಾಗಿರುವುದೆಂದು ಆ ಸಂದರ್ಭದಲ್ಲಿಯೇ ಅದರ ಅಧ್ಯಯನಕ್ಕೆ ತೊಡಗಿದರು. ಮೈಸೂರಿನಲ್ಲಿ 'ಚೆನ್ನಬಸವರಾಜದೇವರ ಷಟ್‌ಸ್ಥಲ ವಚನ' ಹೆಸರಿನ ತಾಳೆಗರಿ ಪ್ರತಿಯನ್ನು ತರಿಸಿಕೊಂಡು ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟಿಸಿದ 'ಚೆನ್ನಬಸವಣ್ಣ ನವರ ವಚನಗಳು'(ದ್ವಿ.ಆ.) ಕೃತಿಯನ್ನು ಪರಿಷ್ಕರಣಕ್ಕಾಗಿ ಅವಶ್ಯವಿದ್ದಲ್ಲಿ ಮಾತ್ರ ಬಳಸಿಕೊಳ್ಳುವ ಮೂಲಕ ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಪರಿಷ್ಕರಣಕ್ಕಾಗಿ ಬಳಸಿಕೊಂಡ ಕೃತಿಯಲ್ಲಿರುವ ವಚನಗಳು ಈ ತಾಳೆಗರಿ ಪ್ರತಿಯಲ್ಲಿ ಕಂಡುಬರುವುದನ್ನು ಚೌಕ ಕಂಸಿನಲ್ಲಿ ಸಂಖ್ಯೆ ಮೂಲಕ ಕೊಟ್ಟಿದ್ದಾರೆ. ಚೌಕ ಕಂಸಿನಲ್ಲಿ ಈ ರೀತಿಯಲ್ಲಿ ಸೂಚಿಸದೇ ಇರುವ ವಚನಗಳನ್ನು ಹೊಸವಚನಗಳೆಂದು ಎಂ.ಎಂ. ಕಲಬುರ್ಗಿ ಅವರು ಪ್ರಸ್ತಾವನೆಯಲ್ಲಿ ತಿಳಿಸಿದ್ದಾರೆ. ಈ ಕೃತಿಯಲ್ಲಿ ೮೧ ವಚನಗಳು ಹೊಸದಾಗಿ ಶೋಧಿಸಲ್ಪಟ್ಟವು ಎಂದಿದ್ದಾರೆ. ಆದರೆ ಚೌಕ ಕಂಸಿನಲ್ಲಿ ಸೂಚಿಸದೆ ಇರುವಂತಹ ವಚನಗಳ ಸಂಖ್ಯೆ ೭೩. ಹಾಗಾಗಿ ಈ ಕೃತಿಯ ಮೂಲಕ ೭೩ ಹೊಸ ವಚನಗಳನ್ನು ಎಂ.ಎಂ.ಕಲಬುರ್ಗಿ ಅವರು ಶೋಧಿಸಿದ್ದಾರೆ.

ವಚನಗಳ ಸಂಖ್ಯೆ ೧೧, ೨೦, ೧೦೫, ೧೩೨, ೧೪೧, ೧೫೨, ೨೦೮, ೨೪೫, ೨೬೯, ೨೭೩, ೨೯೦, ೨೯೨, ೨೯೩, ೩೯೫, ೩೯೬, ೪೨೮, ೪೪೧, ೪೯೮, ೫೩೫, ೫೪೩, ೫೫೯, ೫೬೨, ೫೬೩, ೬೮೫, ೬೮೮, ೭೦೦, ೭೦೧, ೭೦೭, ೭೦೯, ೭೧೧, ೭೧೩, ೭೧೮, ೭೨೦, ೭೨೭, ೭೩೬, ೭೪೦, ೭೪೪, ೭೪೮, ೭೫೨, ೭೫೭, ೭೫೮, ೭೬೧, ೭೭೦, ೭೭೧, ೭೭೬, ೭೮೮, ೭೮೯, ೭೯೧, ೭೯೨, ೭೯೩, ೭೯೬, ೭೯೮, ೭೯೯, ೮೦೦, ೮೦೩, ೮೦೫, ೮೧೦, ೮೧೨, ೮೧೭, ೮೧೮, ೮೨೩, ೮೨೪, ೮೨೫, ೮೨೭, ೮೩೬, ೮೩೭, ೮೩೮, ೮೩೯, ೮೪೩, ೮೪೪, ೮೫೦, ೮೫೨, ೮೫೫ ಹೀಗೆ ಈ ೭೩ ವಚನಗಳು ಬೇರೆ ಯಾವ ಕೃತಿಗಳಲ್ಲೂ ಪ್ರಕಟವಾಗದೆ ಎಂ.ಎಂ.ಕಲಬುರ್ಗಿ ಅವರಿಂದ ಬೆಳಕುಕಂಡ ಹೊಸ ವಚನಗಳಾಗಿವೆ.

ಚೆನ್ನಬಸವೇಶ್ವರದೇವರು ನಿರೂಪಿಸಿದ ಅನುಭಾವ ಷಟ್‌ಸ್ಥಲದ ವಚನಗಳು ಕೃತಿಯು ಭಕ್ತನ ಆಚಾರ ಲಿಂಗ, ಭಕ್ತನ ಶಿವಲಿಂಗ... ಈ ರೀತಿಯ ಅನುಭಾವಸ್ಥಲ ಪದ್ಧತಿಯ

ವಚನಗಳನ್ನು ಸಂಕಲಿಸಿದ ಷಟ್‌ಸ್ಥಲ ಕೃತಿ ಇದಾಗಿದೆ. ಈ ಕೃತಿಯು ಚೆನ್ನಬಸವಣ್ಣನವರ ಕೃತಿಗಳಲ್ಲಿಯೇ ಹೆಚ್ಚು ಜನಪ್ರಿಯವಾದದ್ದಾಗಿ ಹಲವು ಪ್ರಕಟಣೆಗಳನ್ನು ಕಂಡಿರುವುದನ್ನು ಪ್ರಸ್ತಾವನೆಯಲ್ಲಿ ಎಂ.ಎಂ.ಕಲಬುರ್ಗಿ ಅವರು ತಿಳಿಸಿರುತ್ತಾರೆ. "ಈ ಕೃತಿಯನ್ನು ೧೯೧೪ರಲ್ಲಿ ಬಳ್ಳಾರಿಯ ಶಿವಲಿಂಗ ಶೆಟ್ರು, ೧೯೨೬ರಲ್ಲಿ ಶ್ರೀ ಹಳಕಟ್ಟಿಯವರು ಪ್ರಕಟಿಸಿದ ಬಳಿಕ ಬಹಳ ದಿನಗಳವರೆಗೆ ಪ್ರಕಟವಾಗಿರಲಿಲ್ಲ. ಡಾ.ಆರ್.ಸಿ.ಹಿರೇಮಠರು ಪ್ರಕಟಿಸಿದ್ದರೂ ಮಧ್ಯೆ ಮಧ್ಯೆ ಹೊಸದಾಗಿ ಲಭಿಸಿದ ವಚನಗಳನ್ನು ಸೇರಿಸಿರುವುದರಿಂದ ಈ ಕಟ್ಟಿನ ಮೂಲ ಚೌಕಟ್ಟು ತನ್ನ ಸ್ವರೂಪವನ್ನು ಕಳೆದುಕೊಂಡಿದೆ"[೧] ಎಂದಿದ್ದಾರೆ. ಈ ಕೃತಿಯ ಮೊದಲು ಬಳ್ಳಾರಿ ಶೆಟ್ಟರಿಂದ ನಂತರ ಹಳಕಟ್ಟಿ ಅವರಿಂದ ನಂತರ ಆರ್.ಸಿ.ಹಿರೇಮಠರಿಂದ ಪ್ರಕಟವಾಗುವ ಸಂದರ್ಭದಲ್ಲಿ ಹೊಸದಾಗಿ ಸಿಕ್ಕಂತಹ ವಚನಗಳನ್ನು ಸೇರಿಸುವುದರಿಂದ ಮೂಲರೂಪಕ್ಕೆ ಧಕ್ಕೆಯಾದ ಬಗೆಯನ್ನು ಹೇಳಿದ್ದಾರೆ. ಈ ಕೃತಿಯ ಪರಿಷ್ಕರಣಕ್ಕಾಗಿ ಎಂ.ಎಂ.ಕಲಬುರ್ಗಿ ಅವರು ಕನ್ನಡ ಅಧ್ಯಯನ ಪೀಠದ ತಾಳೆಗರಿ ಪ್ರತಿಯನ್ನು 'ಮಾ' ಸಂಕೇತದಿಂದ ಆಧಾರಪ್ರತಿಯಾಗಿ ಇಟ್ಟುಕೊಂಡು ಅವಶ್ಯಕತೆಗೆ ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟಣೆಯಾದ 'ಚೆನ್ನಬಸವಣ್ಣನವರ ವಚನಗಳು (ದ್ವಿಆ.)' ಕೃತಿಯನ್ನು ಭಿನ್ನ ಪಾಠಗಳಿಗಾಗಿ ಬಳಸಿಕೊಂಡಿದ್ದಾರೆ. ಈ ಆವೃತ್ತಿಯಲ್ಲಿ ಸಿಗುವ ಸಮಾನ ವಚನಗಳನ್ನು ಪ್ರಸ್ತುತ ಪರಿಷ್ಕರಣದ ವಚನಗಳ ಮುಂದೆ ಚೌಕ ಕಂಸಿನಲ್ಲಿ ಸೂಚಿಸಿದ್ದಾರೆ. ಇದರಲ್ಲಿ ಒಟ್ಟು ೩೨೨(೩೨೩?) ವಚನಗಳಿವೆ. ಇದರಲ್ಲಿ ೧, ೧೫೫, ೧೬೫, ೧೭, ೧೯೮, ೩೧೬ ಸಂಖ್ಯೆಯ ವಚನಗಳು ಹೊಸವಚನಗಳೆನ್ನಬಹುದು. ಇವುಗಳ ಮುಂದೆ ಚೌಕ ಕಂಸಿನಲ್ಲಿ ಯಾವುದೇ ಸಂಖ್ಯೆಗಳನ್ನು ಸೂಚಿಸಿಲ್ಲ. ಹಾಗಾಗಿ ಈ ವಚನಗಳು ಎಂ.ಎಂ.ಕಲಬುರ್ಗಿ ಅವರಿಂದ ಹೊಸದಾಗಿ ಬೆಳಕು ಕಂಡಿವೆ ಎನ್ನಬಹುದು.

ಚೆನ್ನಬಸವಣ್ಣನವರ ಷಟ್‌ಸ್ಥಲದ ನಿರ್ಣಯದ ಕೃತಿಯು ಭಕ್ತ, ಮಹೇಶ, ಪ್ರಸಾದಿ ಹೀಗೆ ಸರಳವಾಗಿ ೬ ಸ್ಥಳಗಳಲ್ಲಿ ೧೨೪ ಚೆನ್ನಬಸವಣ್ಣನವರ ವಚನಗಳನ್ನು ಸಂಕಲಿಸಿದ ಇನ್ನೊಂದು ಬಗೆಯ ಷಟ್‌ಸ್ಥಲದ ನಿರ್ಣಯ ಹೆಸರಿನ ಹೊಸ ಕೃತಿಯಾಗಿದೆ. ಈ ಕೃತಿಯ ಸಂಪಾದನೆಗೆ ಕನ್ನಡ ಅಧ್ಯಯನ ಪೀಠದ ತಾಳೆಗರಿಯನ್ನು 'ಮಾ' ಸಂಕೇತದಿಂದ ಆಧಾರಪ್ರತಿಯನ್ನಾಗಿ ಇಟ್ಟುಕೊಂಡು, ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಕಾಗದದ ಪ್ರತಿಯನ್ನು 'ಅ' ಸಂಕೇತದಿಂದ ಪಾಠಾಂತರಕ್ಕೆ ಅವಶ್ಯವಿದ್ದಲ್ಲಿ ಮಾತ್ರ ಬಳಸಿಕೊಂಡಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ ಚೆನ್ನಬಸವಣ್ಣನವರ ವಚನಗಳು(ದ್ವಿಆ.) ಕೃತಿಯನ್ನು ಪಾಠಾಂತರಕ್ಕಾಗಿ ಬಳಸಿಕೊಂಡಿದ್ದಾರೆ. ಈ ಆವೃತ್ತಿಯಲ್ಲಿ ಕಂಡುಬರುವ ಸಮಾನ ವಚನಗಳನ್ನು ಪ್ರಸ್ತುತ ಪರಿಷ್ಕರಣದ ಆಯಾ ವಚನಗಳ ಮುಂಚೆ ಚೌಕ ಕಂಸಿನಲ್ಲಿ ತೋರಿಸಿದ್ದಾರೆ. ಹಾಗೆ ತೋರಿಸದೇ

ಇರುವಂತಹವು ಹೊಸ ವಚನಗಳೆಂದು ಭಾವಿಸಬೇಕೆಂದು ಸೂಚನೆ ನೀಡಿದ್ದಾರೆ. ೭, ೩೫, ೪೬, ೫೭, ೫೮, ೬೦, ೧೦೧, ೧೧೦, ೧೧೧, ೧೦೪, ೧೧೫, ೧೧೬ ಈ ಸಂಖ್ಯೆಯ ವಚನಗಳು ಹೊಸ ವಚನಗಳು. ಈ ಕೃತಿಯಲ್ಲಿ ೧೨ ಹೊಸ ವಚನಗಳನ್ನು ಎಂ.ಎಂ.ಕಲಬುರ್ಗಿ ಅವರು ಶೋಧಿಸಿರುವುದು ವಿಶೇಷ ಸಂಗತಿಯಾಗಿದೆ.

ಈ ಮೇಲಿನ ಮೂರು ಕೃತಿಗಳಲ್ಲಿ ಕಂಡುಬಂದ ಹೊಸವಚನಗಳಲ್ಲಿ ಕೆಲವು ಮೂರು ಕೃತಿಗಳಲ್ಲಿ ಸಮಾನವಾಗಿ ಕಂಡುಬಂದಿವೆ. ಹೀಗೆ ಎಂ.ಎಂ.ಕಲಬುರ್ಗಿ ಅವರು ಚೆನ್ನಬಸವಣ್ಣನವರ ವಚನಶೋಧದಲ್ಲಿ ತೊಡಗಿಕೊಂಡು ಸುಮಾರು ವಚನಗಳನ್ನು ಶೋಧಿಸಿದ್ದಾರೆ.

ಹೀಗೆ ಚೆನ್ನಬಸವಣ್ಣನವರ ಷಟ್‌ಸ್ಥಲ ವಚನ ಮಹಾಸಂಪುಟದಲ್ಲಿ ಇರುವ ಮೂರು ಕೃತಿಗಳಲ್ಲಿ ಎರಡು ಅಪ್ರಕಟಿತ ಕೃತಿಗಳನ್ನು ಎಂ.ಎಂ.ಕಲಬುರ್ಗಿ ಅವರ ಸಂಶೋಧನೆಯನ್ನು, ಆ ಸಂಶೋಧನೆಯ ಹಿಂದಿನ ಶ್ರಮವನ್ನು ತಿಳಿಸುತ್ತದೆ. ಸದಾ ಹೊಸತನ್ನು ಕಂಡುಹಿಡಿಯಲು ಹಂಬಲಿಸುವ ಎಂ.ಎಂ.ಕಲಬುರ್ಗಿ ಅವರು ಚೆನ್ನಬಸವಣ್ಣನವರ ವಚನಗಳ ಶೋಧದಲ್ಲಿ ತೊಡಗಿಕೊಂಡಿರುವುದು ತಿಳಿದುಬರುತ್ತದೆ. ಬಸವಣ್ಣ ಮತ್ತು ಅಲ್ಲಮಪ್ರಭುವಿನ ವಚನ ಶೋಧಕ್ಕೆ ಸಾಕಷ್ಟು ವಿದ್ವಾಂಸರು ಶ್ರಮಿಸಿದ್ದಾರೆ. ಆದರೆ ಚೆನ್ನಬಸವಣ್ಣನವರ ವಚನಶೋಧದ ಕುರಿತಾಗಿ ಸಾಕಷ್ಟು ವಿದ್ವಾಂಸರು ಚರ್ಚಿಸಲು ಹೊರಟಿಲ್ಲ. ಕಾರಣವೇನೇ ಇದ್ದರೂ ಚೆನ್ನಬಸವಣ್ಣನ ಕುರಿತ ಅಧ್ಯಯನಗಳು ನಡೆಯುವುದು ಅವಶ್ಯವಿದೆ ಎಂದು ಭಾವಿಸಿ ಎಂ.ಎಂ.ಕಲಬುರ್ಗಿ ಅವರು ಚೆನ್ನಬಸವಣ್ಣನವರ ವಚನಗಳ ಶೋಧದಲ್ಲಿ ತೊಡಗಿದರು.

ಈ ಮೇಲಿನ ಮೂರು ಕೃತಿಗಳನ್ನು ಬಿಟ್ಟರೂ ಇನ್ನೂ ಪ್ರಕಟಿಸಬೇಕಾದ ಚೆನ್ನಬಸವಣ್ಣನವರ ಮೂರು ಕೃತಿಗಳು ಉಳಿದಿವೆ.

"೧. ಚೆನ್ನಬಸವಣ್ಣನವರ ೨೫೦ ವಚನಗಳನ್ನು ಚೆನ್ನವೀರಣ್ಣೊಡೆಯನು(೧೯೫೦), 'ಮಿಶ್ರಷಟ್‌ಸ್ಥಲದ ವಚನ' ಹೆಸರಿನಲ್ಲಿ ಸಂಕಲಿಸಿರುವುದಾಗಿ ಕರ್ನಾಟಕ ಕವಿಚರಿತೆ(ದ್ವಿ.ಸ.೧೯೭೩, ಪು.೩೮೫) ತಿಳಿಸುತ್ತದೆ. ಈ ಕಟ್ಟು ಈಗ ಲಭ್ಯವಿಲ್ಲ, ಶೋಧಿಸಬೇಕು. ೨. ಮದ್ರಾಸ್ ಓರಿಯಂಟಲ್ ಮ್ಯಾನ್‌ಸ್ಕ್ರಿಪ್ಟ್ ಲೈಬ್ರರಿಯಲ್ಲಿ ಚೆನ್ನಬಸವಣ್ಣನವರ ೧೮೦ ವಚನಗಳ ತಾಳೆಗರಿ ಪ್ರತಿ ಇರುವುದಾಗಿ ಆ ಸಂಸ್ಥೆಯ ಹಸ್ತಪ್ರತಿ ಸೂಚಿ(೫೬೦)ಯಲ್ಲಿ ಹೇಳಲಾಗಿದೆ. ಈ ಪ್ರತಿ ಈಗ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿದ್ದು, ಎಲ್ಲ ಗರಿಗಳು ಹುಳು ಕೊರೆದು ಹಾಳಾಗಿವೆ. ಆರು ಸ್ಥಲಗಳಲ್ಲಿ ಕ್ರಮವಾಗಿ ೪೨, ೩೫, ೭೯, ೧೦, ೧೨, ೨ ಹೀಗೆ ೧೮೦ ವಚನಗಳಿವೆ. ಇವುಗಳಲ್ಲಿ ಕೆಲವು ಹೊಸ ವಚನಗಳಿರುವುದನ್ನು ಗಮನಿಸಿದ್ದೇನೆ. ೩. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಚೆನ್ನಬಸವಣ್ಣನವರ 'ಮಿಶ್ರ ಷಟ್‌ಸ್ಥಲದ

ವಚನ' ಹೆಸರಿನ ಕೃತಿ(ಸೂಚಿ ೪೯೪) ಇರುವುದಾಗಿ ತಿಳಿದುಬರುತ್ತದೆ. ಇದರಲ್ಲಿ ೪೭ ವಚನಗಳಿವೆ. ಅಪ್ರಕಟಿತ ಈ ಮೂರು ಷಟ್‌ಸ್ಥಲ ಕೃತಿಗಳನ್ನು ಸಂಯುಕ್ತ ಸಂಪುಟವಾಗಿ ಪ್ರಕಟಿಸುವುದು ಅವಶ್ಯವಿದೆ"[೨] ಎಂದಿದ್ದಾರೆ. ಈ ಮಿಶ್ರಷಟ್‌ಸ್ಥಲ ವಚನ ಕೃತಿಗಳ ಜೊತೆಗೆ ಚೆನ್ನಬಸವಣ್ಣನವರ ಷಟ್‌ಸ್ಥಲ ವಚನ ಕೃತಿಗಳ ಜೊತೆಗೆ ಚೆನ್ನಬಸವಣ್ಣನವರ ಷಟ್‌ಸ್ಥಲೇತರ ಕೃತಿಗಳು ಸಿಗುವ ಸೂಚನೆಗಳಿವೆ. ಅವುಗಳನ್ನು ಸಂಕಲಿಸಬೇಕಾಗಿದೆ ಎಂದು ಈ ಎರಡು ಕೆಲಸಗಳನ್ನು ಮಾಡಿದರೆ ಚೆನ್ನಬಸವಣ್ಣನವರ ಸಮಗ್ರ ವಚನ ಸಂಪುಟಗಳು ಪ್ರಕಟವಾದಂತೆ ಆಗುತ್ತದೆ ಎನ್ನುವ ಸೂಚನೆಯನ್ನು ಸಂಶೋಧಕರಿಗೆ ನೀಡಿದ್ದಾರೆ. ಈ ಮೇಲೆ ಹೇಳಿದಂತೆ ಮಿಶ್ರಷಟ್‌ಸ್ಥಲ ಕೃತಿಗಳಲ್ಲಿ ಎರಡು ಕೃತಿಗಳನ್ನು ಸ್ವತಃ ಎಂ.ಎಂ.ಕಲಬುರ್ಗಿ ಅವರೇ ಶೋಧಿಸಿದರೆ ಉಳಿದ ಕೊನೆಯ ಕೃತಿಯನ್ನು ಜಿ.ಎ.ಶಿವಲಿಂಗಯ್ಯ ಅವರು ಸಂಪಾದಿಸುವ ಮೂಲಕ ಕಾರ್ಯವನ್ನು ಪೂರ್ಣಗೊಳಿಸಿರುವುದು ವಿಶೇಷ ಸಂಗತಿಯಾಗಿದೆ.

ವಚನ ಸಂಕಲನ ಸಂಪುಟ-೪ ಈ ಸಂಪಾದಿತ ಕೃತಿಯು ಮಿಶ್ರ ಷಟ್‌ಸ್ಥಲದ ವಚನ ಮತ್ತು ಟೀಕಿನ ಏಕೋತ್ತರ ಶತಸ್ಥಲ ಎಂಬ ಎರಡು ಕೃತಿಗಳಿಂದ ಕೂಡಿದ ಸಂಪಾದಿತ ಕೃತಿಯಾಗಿದೆ. ಇದರಲ್ಲಿ ಮಿಶ್ರಷಟ್‌ಸ್ಥಲ ವಚನ ಕೃತಿಯು ಚೆನ್ನಬಸವಣ್ಣನಿಗೆ ಸಂಬಂಧಿಸಿದೆ. 'ಮಿಶ್ರಷಟ್‌ಸ್ಥಲ ವಚನ' ಹೆಸರಿನ ಕೃತಿಯು ಚೆನ್ನಬಸವಣ್ಣನವರ ೪೭ ವಚನಗಳನ್ನೊಳಗೊಂಡಿದೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದಲ್ಲಿ ದೊರೆತ ಕಟ್ಟು ಇದಾಗಿದೆ. ಇದನ್ನೇ ಆಧಾರಪ್ರತಿಯಾಗಿ ಇಟ್ಟುಕೊಂಡು ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ 'ಚೆನ್ನಬಸವಣ್ಣನವರ ವಚನಗಳು'(ದ್ವಿ.ಆ.) ಕೃತಿಯನ್ನು ಪಾಠಪರಿಷ್ಕರಣಕ್ಕೆ ಬಳಸಿ ಕೊಂಡಿದ್ದಾರೆ. ಈ ಆಧಾರಪ್ರತಿಯಲ್ಲೂ ಕಂಡುಬಾರದ ಹಾಗೂ ಚೆನ್ನಬಸವಣ್ಣನ ಕುರಿತ ಇದುವರೆಗಿನ ಸಂಪಾದನ ಕೃತಿಗಳಲ್ಲಿ ಕಂಡುಬಾರದ 'ಎಂಟು ವಚನಗಳು' ಈ ಕೃತಿ ಸಂಪಾದನೆಯ ಮೂಲಕ ಎಂ.ಎಂ.ಕಲಬುರ್ಗಿ ಅವರಿಂದ ಬೆಳಕು ಕಂಡಿವೆ. ಇಲ್ಲಿ ಸಂಪಾದಕರು ೪೭ ವಚನಗಳಿಗೂ ಸಂಖ್ಯೆಗಳನ್ನು ನೀಡಿದ್ದಾರೆ. ಜೊತೆಗೆ ಅವುಗಳ ಮುಂದೆ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ದೊರೆತ 'ಚೆನ್ನಬಸವಣ್ಣನವರ ವಚನಗಳು'(ದ್ವಿ.ಆ.) ಪ್ರತಿಯಲ್ಲಿ ವಚನಗಳ ಸಂಖ್ಯೆಗಳನ್ನು ಚೌಕ ಕಂಸಿನಲ್ಲಿ ಸೂಚಿಸಿದ್ದಾರೆ. ಈ ರೀತಿಯ ಚೌಕ ಕಂಸಿನಲ್ಲಿ ಸೂಚಿಸದೇ ಇರುವ ೨, ೩, ೭, ೯, ೧೨, ೨೩, ೪೧, ೪೪ನೇ ವಚನಗಳು ಈ ಕೃತಿಯ ಮೂಲಕ ಪ್ರಥಮ ಸಲ ಬೆಳಕು ಕಂಡಿವೆ. ಆ ಹೊಸ ವಚನಗಳು ಈ ಕೆಳಕಂಡಂತಿವೆ.

೧. "ಪೃಥ್ವಿಯೆ ಭಕ್ತಸ್ಥಲ, ಮುಖನಾಸಿಕ, ಅದಕೆ ಆಚಾರಲಿಂಗ

ಅಪ್ಪು ಮಾಹೇಶ್ವರಸ್ಥಲ, ಮುಖ ಜಿಹ್ವೆ, ಅದಕ್ಕೆ ಗುರುಲಿಂಗ

ತೇಜ ಪ್ರಸಾದಿಸ್ಥಲ, ಮುಖನಯನ, ಅದಕ್ಕೆ ಶಿವಲಿಂಗ

ವಾಯು ಪ್ರಾಣಲಿಂಗ, ಮುಖ ಸ್ಪರುಶನ, ಅದಕ್ಕೆ ಜಂಗಮಲಿಂಗ

ಆಕಾಶ ಶರಣಸ್ಥಲ, ಮುಖ ಶ್ರೋತ್ರ, ಅದಕ್ಕೆ ಪ್ರಸಾದ ಲಿಂಗ

ಅತೀತ ಐಕ್ಯಸ್ಥಲ, ಮುಖ ತೃಪ್ತಿ, ಅದಕ್ಕೆ ಮಹಲಿಂಗ

ಇಂತೀ ಷಡುಸ್ಥಲಂಗಳುತ್ಪತ್ಯ ಕೂಡಲ ಚೆನ್ನಸಂಗಮದೇವಾ"[೩]

೨. "ಮಹಾಲಿಂಗವೆಂಬುದು ಅಭೇದ್ಯ ಸ್ವರೂಪು, ಅತರ್ಕ್ಯ ಸ್ವರೂಪಿ

....ನೇಷ್ಠೆಯಿಂದಿರಿಸಿಯ್ಯಾ ಕೂಡಲ ಚೆನ್ನಸಂಗಮದೇವಾ"[೪]

೩. "ಭಕ್ತನ ಘ್ರಾಣದಲ್ಲಿ ಆಚಾರಲಿಂಗ ಸಂಬಂಧ, ಭಕ್ತನ ಜಿಹ್ವೆಯಲ್ಲಿ

ಗುರುಲಿಂಗ ಸಂಬಂಧ... ಕೂಡಲ ಚೆನ್ನಸಂಗಮದೇವನು"[೫]

೪. "ಗುರುಶಿಷ್ಯ ಸಂಬಂಧವಾದುದಕ್ಕೆ ಏನು ದೃಷ್ಟವೆಂದೊಡೆ....

ಕಿಚ್ಚಿನೊಳಗೆ ಕೋಲ ಬಚ್ಚಿಟ್ಟಂತೆ ಇರಬೇಕಯ್ಯ"(ವ.೯)[೬]

೫. "ಹದಿನಾರು ತೆರವ ಭಕ್ತಿಯ ಮಾಡುವೆನು

ಕೂಡಲ ಚೆನ್ನಸಂಗಮದೇವಯ್ಯ ನೀವು ಮುಂತಾಗಿ"(ವ.೧೩)[೭]

೬. "ಲೌಕಿಕದನುಸಂಧಾನ ಗಮನಿಸದೆ ಅನ್ಯವ ಸುಟ್ಟವು

ಕೂಡಲ ಚೆನ್ನಸಂಗಮದೇವಾ ನಿಮ್ಮ ಶರಣನು"(ವ.೨೩)[೮]

೭. "ಹತ್ತಱಯೊಂದ ಕಳೆದು ಅಱುವತ್ತಾಯಿತ್ತು

....ಹತ್ತಱ ಮೇಲೆ ಹನ್ನೊಂದಱಂತಿರ್ದ ನೋಡಯ್ಯ"(ವ.೪೧)[೯]

೮. "ಮರಹು ಅರುಹಿನಲ್ಲಿ ಅಡಗಿ ಅರುಹು ಮರಹಿನಲ್ಲಡಗಿ

....ನಿಮ್ಮ ಶರಣರ ಇರವು, ಬಯಲು ಬೆ[ತ್ರಿ]೨ ಸಿದನಾ ಬಯಲರಿಯಂತೆ"(ವ.೪೪)"[೧೦]

ಈ ಮೇಲಿನ 'ಮಿಶ್ರಷಟ್‌ಸ್ಥಲದ ವಚನ' ಕೃತಿಯಲ್ಲಿನ ಎಂಟು ಚೆನ್ನಬಸವಣ್ಣನ ವಚನಗಳನ್ನು ಬೆಳಕಿಗೆ ತಂದ ಕೀರ್ತಿ ಮತ್ತು ಶ್ರೇಯಸ್ಸು ಎಂ.ಎಂ.ಕಲಬುರ್ಗಿ ಅವರಿಗೆ ಸಲ್ಲುತ್ತದೆ.

ವಚನ ಸಂಕಲನ ಸಂಪುಟ-೬ ಕೃತಿಯು ಸಹ ಚೆನ್ನಬಸವಣ್ಣನ ವಚನಗಳನ್ನೊಳಗೊಂಡ ಎರಡು ಕೃತಿಗಳಿಂದ ಕೂಡಿದ ಸಂಪಾದಿತ ಕೃತಿ. ಚೆನ್ನಬಸವಣ್ಣನಿಗೆ ಸಂಬಂಧಿಸಿದಂತೆ ಇನ್ನು

ಮೂರು ಕೃತಿಗಳ ಸಂಪಾದನಾ ಕಾರ್ಯದಲ್ಲಿ ಈಗಾಗಲೇ ವಚನ ಸಂಕಲನ ಸಂಪುಟ–೪ರಲ್ಲಿ 'ಮಿಶ್ರಷಟ್‌ಸ್ಥಲ ವಚನ' ಕೃತಿ ಬೆಳಕಿಗೆ ಬಂದಿದೆ. ಉಳಿದ ಎರಡು ಕೃತಿಗಳಾದ 'ಚೆನ್ನದಣ್ಣಾಯಕರ ವಚನ' ಮತ್ತು 'ಚೆನ್ನವೀರಣ್ಣೊಡೆಯರು ಸಂಕಲಿಸಿದ ಮಿಶ್ರಷಟ್‌ಸ್ಥಲದ ವಚನ' ಕೃತಿಗಳನ್ನು ಇಲ್ಲಿ ಪ್ರಕಟಿಸಲಾಗಿದೆ. ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಸಿಕ್ಕಂತಹ 'ಚೆನ್ನದಣ್ಣಾಯಕರ ವಚನ' ಹೆಸರಿನ ತಾಳೆಗರಿ ಪ್ರತಿ ಇದು ಮದ್ರಾಸ್ ಓರಿಯಂಟಲ್ ರಿಸರ್ಚ್ ಲೈಬ್ರರಿಯಿಂದ ಬಂದ ಪ್ರತಿ ಎಂದಿದ್ದಾರೆ. ಎಂ.ಎಂ.ಕಲಬುರ್ಗಿ ಅವರು ಈ ಪ್ರತಿಯನ್ನು ಶೋಧ ಮಾಡುವಾಗ ಅದು ಖಿಲವಾಗಿರುವುದನ್ನು ತಿಳಿಸುತ್ತ ಪ್ರಸಾದಿಸ್ಥಲದ ಪೂರ್ವಾರ್ಧದವರೆಗೆ ಮಾತ್ರ ಇದೆ, ಇದೊಂದು ಅಪೂರ್ಣ ಪ್ರತಿಯಾಗಿದ್ದರಿಂದ ಸ್ಥಲವ್ಯವಸ್ಥೆಯಲ್ಲಿ ಒಂದು ಕ್ರಮ ಬಂದಿಲ್ಲವೆಂದಿದ್ದಾರೆ. "ಇದರಲ್ಲಿ ಹೊಸ ೨೧ ವಚನಗಳಿದ್ದು, ೭, ೪೭, ೪೮, ೭೦, ೭೫, ೮೩, ೮೭, ೯೦, ೯೧, ೯೯, ೧೦೬, ೧೦೮, ೧೧೨, ೧೧೩, ೧೧೪, ೧೧೫, ೧೧೬, ೧೧೯, ೧೬೩, ೧೬೫, ೧೭೨ ಸಂಖ್ಯೆಗಳಲ್ಲಿವೆ. ಅಪೂರ್ಣವಾಗಿದ್ದರೂ ಖಿಲವಾಗಿದ್ದರೂ ಇದೊಂದು ಪ್ರತಿಯಾಗಿ ನಾಶವಾಗಬಾರದೆಂದು ಇಲ್ಲಿ ಪ್ರಕಟಿಸಲಾಗಿದೆ"[೧೧] ಎಂದಿದ್ದಾರೆ. ಈ ಪ್ರತಿ ಖಿಲವಾಗಿದ್ದರೂ ಹೊಸ ವಚನಗಳು ಸಿಕ್ಕ ಖುಷಿಯ ಜೊತೆಗೆ ಇದೊಂದು ಪ್ರತಿ ನಾಶವಾಗಬಾರದೆಂಬ ಕಾಳಜಿಯನ್ನು ನಾವು ಮೆಚ್ಚಬೇಕಾಗುತ್ತದೆ. ಆ ಹೊಸ ವಚನಗಳನ್ನು ಗಮನಿಸುವುದಾದರೆ

೧. "ಕರ್ಮಿಗೆ ಹಾವಾಗಿ ತೋಱುವ
ಕರ್ಮಿಗೆ ಹಲ್ಲಿಯಾಗಿ ತೋಱುವ
ಕರ್ಮಿಗೆ ಮೀನಾಗಿ ತೋಱುವ
ಕೂಡಲ ಚೆನ್ನಸಂಗಮನ ಶರಣಂಗೆ ಲಿಂಗ ಜಂಗಮವಾಗಿ
ತೋಱುವನಯ್ಯ, ಬಸವಣ್ಣ"(ವ.೬, ಪು.೨)

೨. "ನಿಂದಾಸ್ತುತಿಗಳ ಮಾಡುವ ದುರ್ವ್ಯಸನಿಗಳ
...... ಕೂಡಲ ಚೆನ್ನಸಂಗಮದೇವ"

ಈ ರೀತಿಯ ಚೆನ್ನಬಸವಣ್ಣನ ೨೧ ಹೊಸ ವಚನಗಳನ್ನು ಮೊದಲ ಬಾರಿಗೆ ಶೋಧಿಸಿ ಪ್ರಕಟಿಸಿರುವುದು ಅವರ ಸಂಶೋಧನ ತುಡಿತ ಹಾಗೂ ಹಿಡಿದ ಕೆಲಸವನ್ನು ಮಾಡಬೇಕೆಂಬ ಕರ್ತವ್ಯಪ್ರಜ್ಞೆ ಅವರಲ್ಲಿ ಎದ್ದು ಕಾಣುತ್ತದೆ. ಒಟ್ಟಾರೆಯಾಗಿ ಚನ್ನಬಸವಣ್ಣನವರ ೧೨೦ ಹೊಸ ವಚನಗಳನ್ನು ಎಂ.ಎಂ.ಕಲಬುರ್ಗಿ ಅವರು ಶೋಧಿಸಿರುವುದು ವಿಶೇಷವೆನಿಸಿದೆ.

'ಬಸವಣ್ಣನವರ ವಚನ ಸಂಪುಟ' ಈ ಕೃತಿಯನ್ನು ಎಂ.ಎಂ.ಕಲಬುರ್ಗಿ ಅವರು ಸಂಪಾದಿಸಿ ಕೊಟ್ಟಿದ್ದಾರೆ. ಈ ಕೃತಿ ಎರಡು ಕಾಂಡಗಳನ್ನು ಒಳಗೊಂಡಿದೆ. ಕಾಂಡ ಒಂದರಲ್ಲಿ

೯೬೦ ವಚನಗಳು, ಕಾಂಡ ಎರಡರಲ್ಲಿ ೪೫೪ ವಚನಗಳು ಒಟ್ಟಾರೆಯಾಗಿ ೧೪೧೪ ವಚನಗಳಿವೆ. ಈ ದ್ವಿತೀಯ ಆವೃತ್ತಿಯ ಮೂಲಕ ಸುಮಾರು ೬೧ ವಚನಗಳು ಪ್ರಪ್ರಥಮ ಬಾರಿಗೆ ಬೆಳಕು ಕಂಡಿವೆ.

"ಎಫ್.ಟಿ.ಹಳ್ಳಿಕೇರಿ ಅವರು 'ಬಸವವಣ್ಣನವರ ವಚನ ಸಂಪುಟ' ಕುರಿತು ಸಂಶೋಧನ ಕಿರುಪ್ರಬಂಧವನ್ನು 'ಬಸವಪಥ' ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ. ಸರ್ಕಾರದ ಆವೃತ್ತಿಯ ಕುರಿತು ಅಭಿಪ್ರಾಯಪಡುತ್ತ ಪ್ರಸ್ತುತ ಈ ಸಂಪುಟದಲ್ಲಿ ಬಸವಣ್ಣನವರ ೧೪೨೩(ಪ್ರಥಮ ಆವೃತ್ತಿ) ವಚನಗಳಿವೆ. ಅಂದರೆ ೬೦ ವಚನಗಳು ಪ್ರಥಮಸಲ ಹೊಸದಾಗಿ ಇಲ್ಲಿ ಸೇರ್ಪಡೆಯಾಗಿವೆ ಎಂದು ವಚನಗಳ ಅಕಾರಾದಿ ಪಟ್ಟಿ ನೀಡಿದ್ದಾರೆ. ಆ ಪಟ್ಟಿಯಲ್ಲಿರುವ ವಚನಗಳು ೬೧ ವಚನಗಳ ಅಕಾರಾದಿಯಿಂದ ಕೂಡಿದ್ದುದಾಗಿರುತ್ತದೆ. ಈ ೬೧ ವಚನಗಳಲ್ಲಿ ಅವರು ಹೇಳುವ 'ಶಿವ ಶಿವಯೆಂಬ ಮಂತ್ರವೆನಗೆ' ವಚನ ಸಂಖ್ಯೆ–೧೩೭೩ರಲ್ಲಿ ಈ ವಚನ ಹೊಸದಾಗಿ ಬೆಳಕು ಕಂಡಿದ್ದಲ್ಲ. ಇದು ಕನ್ನಡ ವಿಶ್ವವಿದ್ಯಾಲಯದ ಆವೃತ್ತಿಯ ವಚನ ಸಂಖ್ಯೆ ೧೦೩೦ರ ವಚನವೇ ಆಗಿರುತ್ತದೆ" ಎಂದಿದ್ದಾರೆ. ಮೊದಲ ಆವೃತ್ತಿಗೂ ಮತ್ತು ಉಳಿದ ೨ನೆಯ ಮತ್ತು ೩ನೆಯ ಆವೃತ್ತಿಗೂ ವಚನಗಳ ಸಂಖ್ಯೆಯಲ್ಲಿ ವ್ಯತ್ಯಾಸ ಕಂಡುಬಂದಿದೆ. ಪುನರಾವರ್ತಿಗೊಂಡ ಹಾಗೂ ಪ್ರಕ್ಷಿಪ್ತ ವಚನಗಳನ್ನು ತೆಗೆದುಹಾಕುತ್ತ ಬಂದಿದ್ದರಿಂದ ೨ನೆಯ ಆವೃತ್ತಿಯಲ್ಲಿ ೧೪೧೪ ವಚನಗಳು ಕಂಡುಬಂದರೆ ೩ನೆಯ ಆವೃತ್ತಿಯಲ್ಲಿ ೧೪೦೬ ವಚನಗಳು ಕಂಡು ಬರುತ್ತವೆ. ಎಫ್.ಟಿ.ಹಳ್ಳಿಕೇರಿ ಅವರ ಅಭಿಪ್ರಾಯವನ್ನು ಒಪ್ಪುತ್ತಾ ಉಳಿದಂತಹ ೬೦ ವಚನಗಳು ಹೊಸವೆನ್ನಬಹುದು. ಅಂಗದ ಮೇಲೆ ಲಿಂಗಸಾಹಿತ್ಯ(ವ.ಸಂ.೯೬೨, ೩ನೇ ಆವೃತ್ತಿ) ಅಂಗದಲ್ಲಿ ಅರ್ಪಿತವಾದ ಸುಖವು ಲಿಂಗದಲ್ಲಿ(ವ.ಸಂ.೯೬೪, ೩ನೇ ಆವೃತ್ತಿ). ಹೀಗೆ ಬಸವಣ್ಣನರ ೬೦ ಹೊಸ ವಚನಗಳನ್ನು ಎಂ.ಎಂ.ಕಲಬುರ್ಗಿ ಅವರು ಶೋಧಿಸಿರುವುದು ವಿಶೇಷವೆನಿಸುತ್ತದೆ.

ಸಿದ್ಧರಾಮನನ್ನು ಕುರಿತಂತೆ ಎಂ.ಎಂ.ಕಲಬುರ್ಗಿ ಅವರಿಗೂ ಮೊದಲೇ ಸಂಪಾದನ ಕಾರ್ಯ ಜರುಗಿದೆ. ಆರ್.ಸಿ.ಹಿರೇಮಠ ಅವರು 'ಸಿದ್ಧರಾಮೇಶ್ವರ ವಚನಗಳು', ಎಸ್.ವಿದ್ಯಾಶಂಕರ್ ಅವರು 'ಸಿದ್ಧರಾಮೇಶ್ವರ ವಚನ ಸಂಪುಟ' ಹಾಗೂ ತಿಪ್ಪೇರುದ್ರಸ್ವಾಮಿ ಅವರು 'ಸಿದ್ಧರಾಮನ ವಚನಗಳು' ಎಂಬ ಕೃತಿಗಳನ್ನು ಸಂಪಾದನೆ ಮಾಡಿದ್ದಾರೆ. ಆರ್.ಸಿ.ಹಿರೇಮಠ ಅವರು ಸಂಪಾದಿಸಿದ ಸಿದ್ಧರಾಮೇಶ್ವರ ವಚನಗಳಿಗಿಂತ ಹೆಚ್ಚಿನ ವಚನಗಳು ದೊರಕಿರುವುದಾಗಿ ಹೇಳಿದ್ದಾರೆ. ಇಷ್ಟೆಲ್ಲ ಸಂಪಾದನ ಕಾರ್ಯ ನಡೆದಿದ್ದರೂ ವಚನಶೋಧದಲ್ಲಿ ನಿರತರಾಗಿದ್ದ ಎಂ.ಎಂ.ಕಲಬುರ್ಗಿ ಅವರಿಗೆ ಸಿದ್ಧರಾಮನ ವಚನಕಟ್ಟು ದೊರಕುವ ಮೂಲಕ ಹೊಸ ವಚನಗಳನ್ನು ಬೆಳಕಿಗೆ ತರುವಲ್ಲಿ ಅವರ ಶ್ರಮ ಮೆಚ್ಚುವಂತಹದ್ದಾಗಿದೆ.

ತಿಪಟೂರು ತಾಲೂಕಿನ ಹೊನ್ನವಳ್ಳಿ ಕರಿಸಿದ್ಧ ದೇವರ ಮಠದಲ್ಲಿ ದೊರೆತ ಪ್ರತಿ ಇದಾಗಿದೆ. ಈ ಕೃತಿಯನ್ನು ಡಾ.ಸಾ.ಶಿ.ಮರುಳಯ್ಯ ಅವರ ಜೊತೆ ಸೇರಿ ಸಂಪಾದಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಈ ಕೃತಿಯನ್ನು ಪ್ರಕಟಿಸಿದೆ. ೬೦೦೦ ವಚನಗಳ ಹಸ್ತಪ್ರತಿ ಕಟ್ಟು ಇದಾಗಿದೆ. ಈ ಕಟ್ಟಿನಲ್ಲಿ ಅವರಿವರು ತಮಗೆ ಬೇಕಾದ ಹಸ್ತಪ್ರತಿಗಳನ್ನು ತೆಗೆದುಕೊಂಡು ಹೋಗಿದ್ದರಿಂದ ೧೩೨೫ ವಚನ ಮತ್ತು ಸ್ವರವಚನಗಳು ಮಾತ್ರ ಉಳಿದಿವೆ. ಇವುಗಳಲ್ಲಿ ಅನೇಕ ಹೊಸ ವಚನಗಳನ್ನು ಎಂ.ಎಂ.ಕಲಬುರ್ಗಿ ಅವರು ಶೋಧಿಸಿದ್ದಾರೆ. ಅಂತಹ ಒಂದು ಹೊಸ ವಚನ(೨೮)ಹೀಗಿದೆ.

> "ಓಂ ಜಯ ಪರಮೇಶ್ವರಂ ಪರಮಾತ್ಮಂ
> ಈಶ್ವರನುರ್ವಿಪರ್ವಿ ಅಡಗಿಕೊಂಡಿಪ್ಪನು
> ಒರ್ಬ್ಬಣಿಗೆಯಾಗಿ ಯೋಗಿಗಳ ಮನದ
> ಸಂಸಾರ ತೆಪ್ಪದೊಳಗೆ ಆನೀಗ ಅದ್ದು ಅಳಲು ತಿಪ್ಪನಯ್ಯಾ
> ಬೇಗ ಬಾರ ಬಾರಯ್ಯ ಬಾರ
> ವಜ್ರಲೇಪದಲ್ಲಿ ಬಿದ್ದಿದ್ದೇನೆ
> ಬೇಗ ಬಂದೆತತಯ್ಯಾ, ಎತ್ತಯ್ಯಾ ಕಪಿಲಸಿದ್ಧ ಮಲ್ಲಿನಾಥಯ್ಯ॥"[೧೮]

ಈ ರೀತಿಯ ಹಲವು ಹೊಸ ವಚನಗಳು ಈ ಕೃತಿಯಲ್ಲಿ ಮೊಟ್ಟಮೊದಲ ಬಾರಿಗೆ ಬೆಳಕು ಕಂಡಿವೆ.

ವಚನಗಳು ನಾಡಿನ ಆಸ್ತಿ. ಅವು ಒಂದೆಡೆ ಸಮಗ್ರವಾಗಿ ಸಾಮಾನ್ಯ ಜನತೆಗೆ ಸುಲಭವಾಗಿ ತಲುಪಿಸುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರದ ಆಶ್ರಯದಲ್ಲಿ 'ಸಮಗ್ರ ವಚನ ಸಾಹಿತ್ಯ' ಸಂಪುಟಗಳನ್ನು ಹೊರತಂದರು. ಈ ರೀತಿಯ ಸಮಗ್ರವಾಗಿ ಎಲ್ಲ ವಚನಗಳನ್ನು ಒಂದೆಡೆ ತಂದಿರುವವೆಂದುಕೊಂಡರೂ ಹೊಸತನ್ನು ಹುಡುಕುವ ಹಂಬಲ, ತುಡಿತ ಎಂ.ಎಂ. ಕಲಬುರ್ಗಿ ಅವರನ್ನು 'ಪರಮಾನಂದ ಸುಧೆ' ಎಂಬ ಹೊಸ ವಚನಕಟ್ಟು ಲಭಿಸುವಂತೆ ಮಾಡಿತು. ಇದು ನಿಪ್ಪಾಣಿ ನಗರದ ಶ್ರೀ ಅಪ್ಪಸಾಹೇಬ ಗುರುಬಸವರಾಜ ನಂದಿಮಠ ಅವರ ಮನೆಯಲ್ಲಿ ದೊರೆತ ಏಕೈಕ ಅಪ್ರಕಟಿತ ಹಸ್ತಪ್ರತಿಯಾಗಿದೆ. ೧೨ನೆಯ ಶತಮಾನದಿಂದ ೧೬ನೆಯ ಶತಮಾನದವರೆಗಿನ ೬೨ ಜನ ಶರಣರ ರಚನೆಗಳು ಇಲ್ಲಿವೆ. ಇವರಲ್ಲಿ ಅಂಕಿತವಿಲ್ಲದ ಎರಡು ಕಾಲಜ್ಞಾನ ವಚನಗಳು(೨೨೫, ೨೨೬) ಕಂಡುಬಂದಿವೆ. ಅವುಗಳನ್ನು ಗಮನಿಸುವುದಾದರೆ–

೧. ಎರಡು ಕರಂಗಳಂ ಮುಗಿದು ಬಿನ್ನೈಸುವ ವಚನ:

ಶರಣಾರ್ಥಿಯೆಂಬ ಸಮಯದಲ್ಲಿ ಉದಯವಾಗಲು...

...ಸಿದ್ಧರಾಮೇಶ್ವರ ದೇವರಿಗೆ ಬಿನ್ನೈಸುವ ವಚನ(೨೨೫)

೨. ಬಸವೇಶ್ವರನು ನಿಮ್ಮ ತೊತ್ತಿನ ಮಗಳೆಂದು

.... ಚೆನ್ನಬಸವೇಶ್ವರ ದೇವರು ನಿರೂಪಿಸಿದ ವಚನ"(೨೨೬)[೧೫]

ಈ ಕೃತಿಯಲ್ಲಿ ಬಸವಣ್ಣನ–೮, ಚೆನ್ನಬಸವಣ್ಣನ–೫೮, ಅಲ್ಲಮಪ್ರಭುವಿನ–೯೮, ಸಿದ್ಧಲಿಂಗನ–೯೫, ಉರಿಲಿಂಗ ಪೆದ್ದಿಯ–೩೨ ವಚನಗಳು ಹಾಗೆಯೇ ಅಕ್ಕಮಹಾದೇವಿ, ಅಮುಗೆ ರಾಯಮ್ಮ, ಗಜೇಶಮಸಣಯ್ಯಗಳ ಪುಣ್ಯಸ್ತ್ರೀ, ಬೊಂತಾದೇವಿ ಮತ್ತು ಮೋಳಿಗೆಯ ಮಹಾದೇವಿಯ ವಚನಗಳು ಕಂಡುಬಂದಿವೆ. ೧೨ನೆಯ ಶತಮಾಮಾನದ ವಚನಗಳು ಸಂಖ್ಯೆಯಲ್ಲಿ ಅಧಿಕವಾಗಿ ಕಂಡು ಬಂದರೂ ೧೬ನೆಯ ಶತಮಾನದ ತೋಂಟದ ಸಿದ್ಧೇಶ್ವರ ವಚನಗಳು ಪ್ರಮಾಣದಲ್ಲಿ ದೊಡ್ಡದಾಗಿ ಕಂಡುಬರುತ್ತವೆ. ಕರಸ್ಥಲ ವೀರಣ್ಣ, ಕರಸ್ಥಲದ ಮಲ್ಲಿಕಾರ್ಜುನ, ಸ್ವತಂತ್ರ ಸಿದ್ಧಲಿಂಗ, ಘನಲಿಂಗದೇವರ ಕೆಲವು ವಚನಗಳು ಕಂಡುಬರುತ್ತವೆ. ಆದರೆ ಈವರೆಗೆ ಗೊತ್ತಿರದ ಶೂನ್ಯನಾಥ, ಏಕೋರಾಮೇಶ್ವರಲಿಂಗ, ಧರ್ಮಸ್ವರೂಪ ಬಸವಣ್ಣ ಮುದ್ರಿಕೆಯ ವಚನಗಳು ಇಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಇದುವರೆಗೂ ಯಾವ ವಚನ ಸಂಕಲನದಲ್ಲಿಯೂ ಪ್ರಕಟವಾಗದಿರುವ ನಿಜಗುಣಶಿವಯೋಗಿಯ ೮ ಸ್ವರ ವಚನಗಳು(೨೮೭, ೪೬೯, ೪೭೧, ೪೭೩, ೪೭೪, ೪೭೬, ೪೭೭) ಇಲ್ಲಿ ಪ್ರಕಟವಾಗಿರುವುದು ವಿಶೇಷ ಸಂಗತಿಯಾಗಿದೆ. ಉದಾಹರಣೆಗೆ ಒಂದು ಸ್ವರ ವಚನವನ್ನು ನೋಡುವುದಾದರೆ

"ರಾಗ: ಶಂಕರಾಭರಣ

ಶಂಕರಾ ನೋಡಿ ನೀನೆನ್ನ ಪರಿಭವದ ಬಾಧೆಯನು

ಕೃಪೆಮಾಡು ಬೇಗದೊಳ್‌ಭಯವಿತ್ತು॥ಪ॥"[೧೬]

ಈ ರೀತಿಯ ನಿಜಗುಣ ಶಿವಯೋಗಿಯ ೮ ಸ್ವರವಚನಗಳನ್ನು ಹೊದಾಗಿ ಬೆಳಕಿಗೆ ತಂದ ಕೀರ್ತಿ ಎಂ.ಎಂ.ಕಲಬುರ್ಗಿ ಅವರಿಗೆ ಸಲ್ಲುತ್ತದೆ.

ಏಕೋತ್ತರ ಶತಸ್ಥಲ ಈ ಕೃತಿಯು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಹಸ್ತಪ್ರತಿ ಭಂಡಾರಕ್ಕೆ ಸಂಬಂಧಿಸಿದುದ್ದಾಗಿದೆ. ಇದನ್ನು ಭೂಸನೂರಮಠ ಅವರು ೧೯೭೪ರಲ್ಲಿ ಪ್ರಕಟಿಸಿದ್ದಾರೆ. ಇದನ್ನು ಎಂ.ಎಂ.ಕಲಬುರ್ಗಿ ಅವರು ವೀರಣ್ಣ ರಾಜೂರ ಅವರೊಡಗೂಡಿ ೨೦೧೪ರಲ್ಲಿ ಪ್ರಕಟಿಸಿದ್ದಾರೆ. ಈ ಕೃತಿಯನ್ನು ಸಂಪಾದನೆ ಮಾಡುವಾಗ ಭೂಸನೂರಮಠ ಅವರ ಸಂಪಾದನೆಯಲ್ಲಿ ಕಂಡುಬರದ ೧೦ ಹೊಸ ವಚನಗಳನ್ನು ಶೋಧಿಸಿರುವುದು ಗಮನಾರ್ಹವಾಗಿದೆ. ಅವುಗಳನ್ನು ಗಮನಿಸುವುದಾದರೆ–

೧. ಲಿಂಗವೆಂದೆನದವಂಗ — ಚೆನ್ನಬಸವಣ್ಣ

೨. ಆಯಿತ್ತು ಹೋಯಿತ್ತು — ಸಿದ್ಧರಾಮ

೩. ಹೆಸರಿಡಬಾರದ — ಸಿದ್ಧರಾಮ

೪. ದೇಹೇಂದ್ರಿಯಾದಿ — ಚೆನ್ನಬಸವಣ್ಣ

೫. ಐದು ಬ್ರಹ್ಮದಲ್ಲಿ — ಸಿದ್ಧರಾಮ

೬. ಭವದ ಬೇರು ಹರಿಯಲ್ಕೆ — ಸಿದ್ಧರಾಮ

೭. ಅಯ್ಯ ಬಂದನವ್ವ — ಸಿದ್ಧರಾಮ

೮. ಮಜ್ಜಕೆರೆಯ ಹೇಳಿದರೆ — ಸಿದ್ಧರಾಮ

೯. ಪ್ರಸಾದಿಯಾದಾತ — ಸಿದ್ಧರಾಮ

೧೦. ಅಂಗಲಿಂಗ — ಸಿದ್ಧರಾಮ"[೧೭]

ಹೀಗೆ ಭೂಸನೂರಮಠ ಅವರ ಪ್ರಕಟಣೆಯಲ್ಲಿಲ್ಲದ ೧೦ ಹೊಸ ವಚನಗಳನ್ನು ಶೋಧಿಸಿದ್ದಾರೆ. ಆದರೆ ಅವರ ಆವೃತ್ತಿಯ ೨೪ ವಚನಗಳು ಈ ಕೃತಿಯಲ್ಲಿ ಕಂಡುಬಂದಿಲ್ಲ ಎಂದು ೨೪ ವಚನ ಸಂಖ್ಯೆಗಳ ಜೊತೆಗೆ ಪುಟಸಂಖ್ಯೆಗಳನ್ನು ನಮೂದಿಸುವ ಮೂಲಕ ಪ್ರಸ್ತಾವನೆಯಲ್ಲಿ ಚರ್ಚಿಸಿದ್ದಾರೆ.

ಎಂ.ಎಂ.ಕಲಬುರ್ಗಿ ಅವರು ವಚನ ಕೃತಿ ಸಂಪಾದನೆಯ ಕಾರ್ಯದಲ್ಲಿ ಮಾತ್ರ ತೊಡಗದೆ ಇತರ ವಚನಸಂಬಂಧಿ ಅಧ್ಯಯನದಲ್ಲಿ ತೊಡಗಿಕೊಂಡ ಸಂದರ್ಭದಲ್ಲಿ ಕಂಡುಬಂದ ಹಲವು ವಚನಗಳು, ವಚನಕಾರರು ಹಾಗೆಯೇ ಪ್ರಕ್ಷಿಪ್ತ ವಚನಗಳನ್ನು ಮತ್ತು ವಚನಕಾರರನ್ನು ಶೋಧಿಸುವ ಕಾರ್ಯದಲ್ಲಿ ತೊಡಗಿರುವುದನ್ನು ಅವರ ಮಾರ್ಗ ಸಂಪುಟದ ಹಲವು ಲೇಖನಗಳು ತಿಳಿಸುತ್ತವೆ. ಅವುಗಳನ್ನು ಈ ಕೆಳಕಂಡಂತೆ ಗಮನಿಸಲಾಗಿದೆ.

೧೨ನೆಯ ಶತಮಾನದ ವಚನಕಾರರಲ್ಲಿ ಬೆಡಗಿನ ವಚನಕಾರ ಎಂದೇ ಪ್ರಖ್ಯಾತನಾದ ಅಲ್ಲಮಪ್ರಭುಗಳ ವಚನಗಳ ಕುರಿತಂತೆ ಸಾಕಷ್ಟು ಸಂಶೋಧನೆಗಳು ನಡೆದಿವೆ. ಅಲ್ಲಮನ ವಚನಗಳಿಗೆ ಸಂಬಂಧಿಸಿದಂತೆ ಹುಲಿಗೆರೆಯ ಮಹಾಲಿಂಗದೇವ ಹಾಗೂ ಮಗ್ಗೆಯ ಮಾಯಿ ದೇವನ ಕೃತಿಗಳು ಲಭ್ಯವಾಗಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸಿದ್ದಾರೆ. ಅದರಲ್ಲಿ "ಅಲ್ಲಮನ ೭೯೪ ವಚನಗಳನ್ನು ಷಟ್‌ಸ್ಥಲ ಕ್ರಮದಲ್ಲಿ ಜೋಡಿಸಿರುವ ಹುಲಿಗೆರೆಯ ಮಹಾಲಿಂಗದೇವನ(೧೫ನೇ) ಕೃತಿಯನ್ನು ಡಾ.ಫ.ಗು.ಹಳಕಟ್ಟಿ(೧೯೩೧), ಡಾ.ಎಲ್.ಬಸವರಾಜು (೧೯೬೦), ಡಾ.ಆರ್.ಸಿ.ಹಿರೇಮಠ(೧೯೬೮), ಡಾ.ಇಮ್ಮಡಿ ಶಿವಬಸವ ಸ್ವಾಮಿಗಳು(೧೯೮೬)

ಪರಿಷ್ಕರಿಸಿ ಪ್ರಕಟಿಸುತ್ತಾ ಬಂದಿದ್ದಾರೆ. ಕರ್ನಾಟಕ ಸರ್ಕಾರ ವಚನ ಸಂಪುಟಗಳಲ್ಲಿಯೂ (೧೯೯೩ ಮತ್ತು ೨೦೦೧) ಈ ಕೃತಿ ಪ್ರಕಟವಾಗಿದೆ"[೧೮] ಎಂದು ಗುರುತಿಸಿದ್ದಾರೆ. ಮಗ್ಗೆಯ ಮಾಯಿದೇವ 'ಪ್ರಭುಗೀತಾ' ಹೆಸರಿನಲ್ಲಿ ಸಂಸ್ಕೃತಕ್ಕೆ ಅನುವಾದಿಸಿರುವ ಅಪರೂಪದ ಕೃತಿಯನ್ನು ಶ್ರೀ ಸಿ.ಮಹಾದೇವಪ್ಪನವರು ೨೦೦೨ರಲ್ಲಿ ಪರಿಷ್ಕರಿಸಿ ಪ್ರಕಟಿಸಿರುವುದನ್ನು ಗುರುತಿಸಿದ್ದಾರೆ.

೧೫ನೆಯ ಶತಮಾನದ ಹುಲಿಗೆರೆಯ ಮಹಾಲಿಂಗದೇವ ೭೪೪ ವಚನಗಳನ್ನು ಹಾಗೂ ಮಗ್ಗೆಯ ಮಾಯಿದೇವ ೬೫೮ ವಚನಗಳನ್ನು ಷಟ್‌ಸ್ಥಲ ಕ್ರಮದಲ್ಲಿ ಜೋಡಿಸಿದ್ದರೂ ರಚನೆಯಲ್ಲಿ ಭಿನ್ನತೆ ಗುರುತಿಸಿರುವರು. ಕೃತಿಯ ಆರಂಭದಲ್ಲಿ ಇಬ್ಬರು ಪಿಂಡಸ್ಥಲ, ಪಿಂಡಜ್ಞಾನಸ್ಥಲ, ಮಾಯಾವಿಡಂಬನಸ್ಥಲ, ಸಂಸಾರ ಹೇಯಸ್ಥಲ, ಗುರುಕರುಣ ಸ್ಥಲಗಳನ್ನು ರಚನೆ ಮಾಡಿರುವರು. ನಂತರ ಮಹಾಲಿಂಗದೇವ ಅಲ್ಲಮನ ವಚನಗಳನ್ನು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಸ್ಥಳಗಳನ್ನಾಗಿ ವಿಂಗಡಿಸಿದ್ದಾನೆ. ಆದರೆ ಮಗ್ಗೆಯ ಮಾಯಿದೇವ ಸ್ಥಲವೆಂಬಂತೆ ಭಕ್ತಸ್ಥಲದಲ್ಲಿ ಜ್ಞಾನ, ಭಕ್ತ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯವೆಂದು. ಅದೇ ರೀತಿ ಮಹೇಶ ಸ್ಥಲದಲ್ಲಿ ಜ್ಞಾನಿ, ಪ್ರಸಾದಿ, ಭಕ್ತ, ಮಹೇಶ, ಪ್ರಾಣಲಿಂಗಿ, ಶರಣ, ಐಕ್ಯವೆಂದು, ಪ್ರಸಾದಿ ಸ್ಥಲದಲ್ಲಿ ಜ್ಞಾನಿ, ಪ್ರಸಾದಿ, ಭಕ್ತ, ಮಹೇಶ, ಪ್ರಾಣಲಿಂಗಿ, ಶರಣ, ಐಕ್ಯವೆಂದು. ಪ್ರಾಣಲಿಂಗಿಯ ಸ್ಥಲದಲ್ಲಿ ಜ್ಞಾನಿ, ಪ್ರಾಣಲಿಂಗಿ, ಭಕ್ತ, ಮಹೇಶ, ಪ್ರಸಾದಿ, ಶರಣ, ಐಕ್ಯ ಹೀಗೆ ಸ್ತರಗಳನ್ನು ಹೇಳಿದ್ದಾರೆ. ಹಾಗೆಯೇ ಕೊನೆಯಲ್ಲಿ ಬರುವ ಶರಣಸ್ಥಲ ಮತ್ತು ಐಕ್ಯಸ್ಥಲಗಳಲ್ಲಿ ಅವಾಂತರ ಸ್ಥಲಗಳನ್ನು ಕಲ್ಪಿಸಿರುವುದು ಯೋಚಿಸಬೇಕಾದ ವಿಷಯವೆಂದು ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯಿಸಿರುವುದು ಹೊಸ ಸಂಶೋಧಕರಿಗೆ ದಾರಿ ಮಾಡಿಕೊಟ್ಟಿದೆ. ಮಗ್ಗೆಯ ಮಾಯಿದೇವನ ಕೃತಿಯನ್ನು ವಿದ್ವಾಂಸರು ಸಂಪಾದಿಸಿ ಪ್ರಕಟಿಸಿದ್ದಾರೆ. ಈ ಪ್ರಕಟಣ ಕೃತಿಯಲ್ಲಿ ಕಂಡುಬಾರದ ಬಿಟ್ಟು ಹೋಗಿರುವ ಅಲ್ಲಮನ ನಾಲ್ಕು ಹೊಸ ವಚನಗಳನ್ನು ಎಂ.ಎಂ.ಕಲಬುರ್ಗಿ ಅವರು ಶೋಧಿಸಿರುವುದು ಅವರ ಸಂಶೋಧನೆಯ ಆಳವನ್ನು ತಿಳಿಸುತ್ತದೆ. ಹೊಸದಾಗಿ ಸಿಕ್ಕಿರುವಂತಹ ನಾಲ್ಕು ವಚನಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

೧. "ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನಧಾರ ಸಮಾಧಿಯೆಂಬ ಅಷ್ಟಾಂಗ ಯೋಗದಲ್ಲಿ ಅಳಿದು ಕೂಡುವುದೊಂದು ಯೋಗ, ಅಳಿಯದೆ ಕೂಡುವುದೊಂದು ಯೋಗ. ಈ ಎರಡರೊಳಗೆ ಅಳಿಯದೆ ಕೂಡುವ ಯೋಗವರಿದು ಗುಹೇಶ್ವರ"(೨೪೨)[೧೯]

೨. "ಮುನ್ನೆಂತಯಿತ್ತು, ಆಗದೆಂತಾಯಿತ್ತು, ತನ್ನ ತಾನು ಅರಸುತ್ತಿದ್ದಿತ್ತು
ತನ್ನ ಬಚ್ಚಿಟ್ಟ ಬಯಕೆಯ ನಿಧಾನವ ಕಂಡು

ತಾನೆ ಮಹವೆಂದು ತಿಳಿದು ನೋಡಾ!

ಗೋಗೇಶ್ವರಲಿಂಗ ತನ್ನುವ ತನ್ನಂತೆ ಮಾಡಿತ್ತು"(೫೩೬)[೨೦]

೩. "ಆಕಾಶ ಮಾರುತರಿಲ್ಲದ ಮುನ್ನ, ಅಂಬುಧಿ ಕಮಠರಿಲ್ಲದ ಮುನ್ನ

ಹರಿಬ್ರಹ್ಮಾದಿಗಳಾರಾರ ನಿಲವಿಲ್ಲದ ಮುನ್ನ,

ಹಿಮಕರನ ದಿನಕರರ ಸುಳುಹಿಲ್ಲದ ಮುನ್ನ

ಹಿಂದಿಲ್ಲ ಮುಂದಿಲ್ಲ ಮತ್ತೆ ಒಂದು ಇಲ್ಲದ ಮುನ್ನ

ಗೋಗೇಶ್ವರನಿದ್ದ ತನ್ನ ತಾನರಿಯಂತೆ"(೬೪೨)[೨೧]

೪. "ಪ್ರಾಣಲಿಂಗವುಳ್ಳಾತಂಗೆ ಪ್ರಾಣಲಿಂಗವೆಮಬ ವಾರ್ತೆ ಭಂಗ ನೋಡಾ

ಸಂಗನ ಬಸವಣ್ಣ

ಬೀದಿಯಲ್ಲಿ ಕೊಡನೊಡೆದು

ಬಯಲನುಡುಗಿದಡುಂಟೆ? ಹೇಳಾ

ಗೋಗೇಶ್ವರಲಿಂಗವ ಬೇರುಮಾಡಿ ಅರಸಲುಂಟೆ ಬಸವಣ್ಣ?"(೬೫೪)[೨೨]

ಮಗ್ಗೆಯ ಮಾಯಿದೇವನ ಕೃತಿಯಲ್ಲಿ ಪ್ರಕಟವಾಗದೇ ಇರುವ ನಾಲ್ಕು ವಚನಗಳು ಪೂರ್ಣಪ್ರಮಾಣದಲ್ಲಿ ದೊರಕಿರುವುದನ್ನು ಹೇಳಿದ್ದಾರೆ. ಇವುಗಳ ಜೊತೆಗೆ ಆರಂಭ ಚರಣದ ೨೦ ವಚನಗಳನ್ನು ಶೋಧಿಸಿ ಹೊಸವಚನಗಳ ಸಾಲಿಗೆ ಸೇರಿಸಿದ್ದಾರೆ. ಸಾಮಾನ್ಯವಾಗಿ ಈ ಮೇಲಿನ ಪೂರ್ಣಪ್ರಮಾಣದ ನಾಲ್ಕು ವಚನಗಳು ಹಾಗೂ ಮೊದಲ ಸಾಲಿನ ೨೦ ವಚನಗಳು ಪ್ರಕಟಣ ಕೃತಿಗಳಲ್ಲಿ ಕಂಡುಬಾರದೇ ಇರುವುದಕ್ಕೆ ಹಸ್ತಪ್ರತಿ ಖಿಲವಾಗಿರುವುದು ಇಲ್ಲವೇ ಲಿಪಿಕಾರರ ದೋಷವೇ ಕಾರಣವಿರಬಹುದು ಅಥವಾ ಪ್ರಕಟಣ ಕೃತಿಕಾರರ ಕಣ್ತಪ್ಪಿರುವುದಾಗಿರ ಬಹುದು. ಇಲ್ಲಿ ಮುಖ್ಯವಾಗಿ ೨೦ ವಚನಗಳ ಆರಂಭದ ಚರಣಗಳು ಮಾತ್ರ ನಮಗೆ ಗೋಚರಿಸಿರುವುದರಿಂದ ಆ ವಚನಗಳ ಅರ್ಥ, ಸ್ವರೂಪ ಪೂರ್ಣ ಪ್ರಮಾಣದಲ್ಲಿ ಲಭಿಸುವುದಿಲ್ಲ. ಪ್ರಕಟಿತ ಅಲ್ಲಮನ ವಚನಗಳ ಅಕಾರಾದಿಯಲ್ಲಿ ಇವು ಕಂಡುಬಂದಿಲ್ಲ ಎನ್ನುತ್ತಾ ಹೊಸವಚನಗಳ ಸಾಲಿಗೆ ಎಂ.ಎಂ.ಕಲಬುರ್ಗಿ ಹೀಗೆ ಸಿಕ್ಕಂತಹ ವಚನಗಳನ್ನು ಸೇರಿಸಿದ್ದಾರೆ. ೨೦ ಮೊದಲ ಚರಣದ ವಚನಗಳು ಈ ಕೆಳಗಿನಂತಿವೆ.

೧. ಬಂಡುಣಬಂದ ತುಂಬಿ ಹೇಳವು ನೋಡ(ವ.೧೭೫)

೨. ಸಂಘಟಿತ ತನು-ಮನ-ಪೃಥ್ವಿ(ವ.೧೯೦)

೩. ಅಂಡದೊಳಗಣ ಪಿಂಡ ಪಿಂಡಪ್ರಭಾವಿತರು(ವ.೩೧೩)

೪. ಎಡದಕ್ಕೆಯಲೊಂದು ಮಾಯವ ಹಿಡಿದುಕೊಂಡು(ವ.೪೦೦)

೫. ನಾದದಂತುಟಲ್ಲ ಬಿಂದು, ಬಿಂದುವಿನಂತಟಲ್ಲ(ವ.೪೧೬)

೬. ನಿಮ್ಮನೆ ನಿಮ್ಮನೆ ಮೆಚ್ಚಿಸಬಾರದು(ವ.೪೫೦)

೭. ಅಂತೆನೆಂಬುವನ ಅರಿವೆ ನುಂಗಿತ್ತು(ವ.೪೭೯)

೮. ಹೆಣ್ಣು, ಹೊನ್ನು, ಮಣ್ಣು, ತೊರೆದಾತ(ವ.೫೦೫)

೯. ಒಂದು ದ್ವೀಪದಲ್ಲಿ ತಲೆಯನಿರಿಸಿ(ವ.೫೦೯)

೧೦. ಗುರುವಿನ ಪ್ರಸಾದ ಶಿಷ್ಯಂಗೆ ಓಗರವಾದುದನರಿಯರು(ವ.೫೧೦)

೧೧. ನಿರಂತರ ಪತಾಳ, ಉರ್ಧ್ವದ ಪವನ ತ್ರಿಭುವನಗಿರಿಯೆಂಬ ಪರ್ವತವನೇರಿ ಕಾಯವೆಂಬ ಕದಳಿಯಹೊಕ್ಕು(ವ.೫೩೯)

೧೨. ಹುಟ್ಟಿ ಹುಟ್ಟಿ ಹೊಂದಲಿಲ್ಲ(ವ.೫೯೯)

೧೩. ನೆನೆಯ ನೆನೆಯ ಸಬುದವಿಲ್ಲ(ವ.೬೨೪)

೧೪. ಅರಿವನರಿದು ಮೆರೆದುನಿಂದು(ವ.೬೨೪)

೧೫. ಬಯಲಬಣ್ಣವಾಯಿತೆಂಬ(ವ.೬೪೩)

೧೬. ಭೂಮಿಗೆ ಬೀಜವುಂಟೆ(ವ.೬೪೪)

೧೭. ಅರಸುವಾತನುಳ್ಳಡೆ(ವ.೬೫೨)

೧೮. ಪಂಚತತ್ವದ ಪರಮಾನಂದ(ವ.೬೫೫)

೧೯. ಸತ್ತುಸಾಯದ ಬದುಕಿ ಬದುಕದ(ವ.೬೫೬)

೨೦. ಅರಿವರಾರೋ(ವ.೬೫೭)

ಎಂ.ಎಂ.ಕಲಬುರ್ಗಿ ಅವರು ಶೋಧಿಸಿದ ಮೊದಲ ಚರಣದ ಈ ೨೦ ವಚನಗಳು ಮೂಲತಃ ಸಂಸ್ಕೃತ ಅನುವಾದಗಳು. ಇವು ಪ್ರಸ್ತುತ 'ಪ್ರಭುಗೀತೆ'ಯಲ್ಲಿ ಸಿಗುತ್ತವೆ ಎಂದಿದ್ದಾರೆ. ಮೂಲ ಕನ್ನಡ ಪಠ್ಯಗಳು ಕಳೆದಿರುವುದರಿಂದ ಇವುಗಳನ್ನು ಹುಡುಕುವುದು ಅವಶ್ಯವಿದೆ ಎಂದು ಹೊಸ ಚಿಂತನೆಗೆ ಎಡೆ ಮಾಡಿಕೊಟ್ಟಿದ್ದಾರೆ. ೨೦ ಮೊದಲ ಚರಣದ ವಚನಗಳು

ಮಾತ್ರ ಸಿಗುವುದರಿಂದ ವಚನಗಳ ಅಂಕಿತದ ಸ್ಪಷ್ಟತೆಯ ಬಗ್ಗೆ ಗೊಂದಲವು ಉಂಟಾಗುವ ಸಾಧ್ಯತೆಗಳಿವೆ. ವಚನವು ಪೂರ್ಣ ಪ್ರಮಾಣದಲ್ಲಿ ಗೋಚರಿಸದೆ ಇರುವುದರಿಂದ ಅದರ ಅರ್ಥ ಮತ್ತು ಸ್ವರೂಪವು ತಿಳಿದಿಲ್ಲ. ಆ ವಚನದ ಉದ್ದೇಶ ಕುರಿತಂತೆ ಸ್ಪಷ್ಟ ಕಲ್ಪನೆಯು ಇಲ್ಲದಂದಾಗಿದೆ. ಹಾಗಾಗಿ ಆ ವಚನಗಳ ಪೂರ್ಣ ಪ್ರಮಾಣದ ಶೋಧದ ಅಗತ್ಯವಿದೆ. ಪ್ರಕಟಿತವಾದ ಕೃತಿಗಳ ಜೊತೆಗೆ ಮೂಲ ಹಸ್ತಪ್ರತಿಗಳನ್ನು ಜೊತೆಗಿಟ್ಟುಕೊಂಡು ಅಧ್ಯಯನ ಮಾಡಬಹುದಾಗಿದೆ. ಹಾಗಾಗಿ ಅಪೂರ್ಣ ವಚನಗಳು ಪೂರ್ಣ ಪ್ರಮಾಣದಲ್ಲಿ ದೊರೆಯುವಂತಾಗಿ ಅದಕ್ಕೊಂದು ಹೊಸ ರೂಪದ ಜೊತೆಗೆ ಸ್ಪಷ್ಟ ಚಿತ್ರಣ ಉಂಟಾಗುವ ಸಾಧ್ಯತೆಗಳಿವೆ.

'ತ್ರೈಲೋಚನ ಮನೋಹರ ಮಾಣಿಕೇಶ್ವರಲಿಂಗ ಮುದ್ರಿಕೆಯ ವಚನಗಳು' ಈ ಮುದ್ರಿಕೆಯ ವಚನಗಳು ಎಂ.ಎಂ.ಕಲಬುರ್ಗಿ ಅವರಿಗೆ ಹೊಸದಾಗಿ ಕಂಡುಬಂದ ಕಾರಣ ಆ ಮುದ್ರಿಕೆ ಹಾಗೂ ಅದರ ಕರ್ತೃ ಯಾರೆಂಬುದನ್ನು ತಿಳಿಯುವ ಹಿನ್ನೆಲೆಯಲ್ಲಿ ಶೋಧಕಾರ್ಯದಲ್ಲಿ ತೊಡಗಿರುವುದು ಕಂಡುಬರುತ್ತದೆ. ಆರ್.ನರಸಿಂಹಾಚಾರ್ಯರು ಕರ್ನಾಟಕ ಕವಿಚರಿತೆ ಸಂಪುಟದಲ್ಲಿ 'ತ್ರೈಲೋಚನ ಮನೋಹರ ಮಾಣಿಕೇಶ್ವರ ಲಿಂಗ' ಎಂಬ ಮುದ್ರಿಕೆಯನ್ನಾಗಲಿ ಅಥವಾ ಈ ಮುದ್ರಿಕೆಯ ವಚನಕಾರರನ್ನಾಗಲಿ ಸೂಚಿಸಿಲ್ಲ. ಆದರೆ ಫ.ಗು.ಹಳಕಟ್ಟಿ ಅವರು ಈ ಮುದ್ರಿಕೆಯನ್ನು ಸೂಚಿಸಿರುವರು. ಆದರೆ ವಚನಕಾರನ ಹೆಸರನ್ನಾಗಲಿ, ವಚನಗಳನ್ನಾಗಲಿ ಉದ್ಧರಿಸಿಲ್ಲ. ಆದರೆ ಇತ್ತೀಚೆಗೆ 'ವಿಶೇಷಾನುಭವ ಷಟ್‌ಸ್ಥಲ' ಹಾಗೂ 'ಲಿಂಗ ಚಿದಮೃತ ಬೋಧೆ' ಎರಡರಲ್ಲೂ ವಚನ ಮುದ್ರಿಕೆ ಕಂಡುಬರುತ್ತದೆ. ಆದರೆ ಕರ್ತೃವಿನ ಬಗ್ಗೆ ಪ್ರಸ್ತಾಪಿಸಿಲ್ಲ. ಅಂತ ವಚನವನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಆ ವಚನ ಈ ಕೆಳಗಿನಂತಿದೆ.

"ತಲೆ ಕೆಚ್ಚಲು, ಮೊಲೆ ನಾಗೆಯಾಗಿ
ಕೊಂಬೂರಿ ನಡೆದು, ಬೀದಗಱುವಾಯಿತ್ತು ಕಪಿಲೆ।
ಇದ ಕಱೆದುಣಲಱಿಯದೆ ಮಱುಗುತ್ತಲೈದಾರೆ!
ಇದನೇನೆಂಬ ತ್ರೈಲೋಚನ ಮನೋಹರ ಮಾಣಿಕೇಶ್ವರ ಲಿಂಗವೇ॥೧॥"[೨೧]

ಈ ವಚನದ ಕರ್ತೃವನ್ನು ಶೋಧಿಸ ಹೊರಟ ಎಂ.ಎಂ.ಕಲಬುರ್ಗಿ ಅವರಿಗೆ ಇದೇ ಮುದ್ರಿಕೆಯ ಬೇರೆ ೬ ವಚನಗಳನ್ನೊಳಗೊಂಡ 'ಬೊಮ್ಮಲಿಂಗದೇವರ ಕಾವ್ಯ' ಹೆಸರಿನ ಭಾಮಿನಿ ಷಟ್ಪದಿ ಗ್ರಂಥವೊಂದು ಲಭಿಸಿದೆ. "ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ ಒಂದು, ಕನ್ನಡ ಅಧ್ಯಯನ ಪೀಠದಲ್ಲಿ ಒಂದು, ಹೀಗೆ ಎರಡು ಕಾಗದ ಪ್ರತಿಗಳು ಸಿಗುತ್ತವೆ. ೭ ಸಂಧಿ, ೩೪೩ ಷಟ್ಪದಿ, ೬ ವಚನ, ೨ ಕಂದ ಹೀಗೆ ಒಟ್ಟು ೩೫೦ ಪದ್ಯಗಳ ಈ ಕೃತಿ ಬೊಮ್ಮಲಿಂಗನೆಂಬ ಶರಣನನ್ನು ಕುರಿತದ್ದು"[೨೨] ಎಂಬ ಎಂ.ಎಂ.ಕಲಬುರ್ಗಿ ಅವರ

ಮಾತಿನಲ್ಲಿ ಬೊಮ್ಮಲಿಂಗನೊಬ್ಬ ಶರಣ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಜೊತೆಗೆ ಹಂಜಿಗೆ ಗ್ರಾಮದ ಜನತೆ ಹೇಳುವಂತೆ ಸೊನ್ನಲಾಪುರದ ಸಿದ್ಧರಾಮನಿಗೂ ಬೊಮ್ಮಲಿಂಗನಿಗೂ ಭೆಟ್ಟಿ ಸಂಭವಿಸಿದ್ದ ಪಕ್ಷದಲ್ಲಿ ಈತನು ೧೨ನೆಯ ಶತಮಾನದ ಶಿವಶರಣನೆನ್ನಬೇಕಾಗುತ್ತದೆ. ಶಿವಶರಣ ರಾಗಲೀ ಶಿವಕವಿಗಳಾಗಲೀ ಈ ಹೆಸರನ್ನು ಎತ್ತಿಲ್ಲ. ಈಗ ಲಭಿಸಿರುವ ಪುರಾಣ 'ತ್ರೈಲೋಚನ ಮನೋಹರ ಮಾಣಿಕೇಶ್ವರ ಲಿಂಗ' ಮುದ್ರಿಕೆಯ ಆರು ವಚನಗಳನ್ನು ನೀಡುತ್ತದೆಯೇ ಹೊರತು ಅವುಗಳ ಕರ್ತೃವಿನ ಹೆಸರನ್ನು ಹೇಳುವುದಿಲ್ಲ. ಬಹುಶಃ ತ್ರೈಲೋಚನ ಮನೋಹರ ಮಾಣಿಕೇಶ್ವರಲಿಂಗದ ಭಕ್ತನಾದ ಬೊಮ್ಮಲಿಂಗನೇ ಇವುಗಳನ್ನು ಬರೆದಿರುವ ಸಂಭವವಿದೆ"[೨೩] ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಎಂ.ಎಂ.ಕಲಬುರ್ಗಿ ಅವರು ಬೊಮ್ಮಲಿಂಗದೇವರ ಕಾವ್ಯದಲ್ಲಿಯ ಹೊಸದಾಗಿ ಶೋಧಿಸಿದ ಆರು ವಚನಗಳನ್ನು ಇಲ್ಲಿ ಪಟ್ಟಿ ಮಾಡಿದ್ದಾರೆ.

೧. ತನ್ನ ಹಿತ್ತಲೊಳು. ಮ(ಋ) ಜೀವಣಿಗಿದ್ದು
ನಾ ರ ಬೇರುಗಳಿಗೆ ಹರಿವ ಮನುಜರಿಗೆ ನಾ ನೇನಂಬೇನಯ್ಯ?
ತನ್ನೊಳಗೆ ಶಿವಲಿಂಗವಿದ್ದು
ಅನ್ಯದೈವಕ್ಕೆಟಗುಟ ಕುನ್ನಿ ಮನುಜರಿಗೆ ನಾನೆಂತೆಂಬೆನಯ್ಯ?
ತ್ರೈಲೋಚನ ಮನೋಹರ ಮಾಣಿಕೇಶ್ವರಲಿಂಗ
ಪಾಪಿಯ ಕಣ್ಣಿಗೆ ಪುರುಷ ಕೆಲ್ಲಾದಂತೆ ಅಯ್ಯ ನೀ ನು(೧-೪೯)

೨. ನಿಂದೆಸ್ತುತಿಗಳಿಗೆ ಕಿವುಡನಾಗಿರಬೇಕು...

೩. ಜ್ಞಾನದ ಒರಳಿಗೆ ಏಕೋಭಾವದ ಒನಕೆಯನೆ ಕೊಂಡು...

೪. ಅಗ್ನಿಪುತ್ಥಳಿಗೆ ಚೆಣಳೂರಿದಡೇನು....

೫. ಘಾತ್ರಗಳು ಸಕೀಲವಾಗದ ಮುನ್ನಪುದಿಸಿ

೬. ಕೆರೆಯನಗಳುತ ಕೊರಕಡಿಯಲದೇಕೋ..."[೨೪]

ಈ ವಚನಗಳನ್ನು ಬೆಳಕಿಗೆ ತಂದ ಶ್ರೇಯಸ್ಸು ಎಂ.ಎಂ.ಕಲಬುರ್ಗಿ ಅವರಿಗೆ ಸಲ್ಲುತ್ತದೆ. ಈ ವಚನಗಳಲ್ಲಿ ಕಂಡುಬರುವ ವಚನಗಳ ರಚನಾರೀತಿ, ನಿರೂಪಣೆ, ಧ್ವನಿಶಕ್ತಿ ಮೊದಲಾದವುಗಳು ೧೨ನೆಯ ಶತಮಾನದ ಸೃಷ್ಟಿಯೆಂದು ಸ್ಪಷ್ಟಪಡಿಸುತ್ತವೆ ಎಂದಿದ್ದಾರೆ. ಜೊತೆಗೆ ಈ ಶರಣನ ಇತರ ವಚನಗಳನ್ನು ಸಂಗ್ರಹಿಸುವುದು, ಶಾಸ್ತ್ರಬದ್ಧವಾಗಿ ಸಂಪಾದಿಸುವುದು, ಹಂಜಿಗೆ ಗ್ರಾಮದ ಎಡಬಲದಲ್ಲಿ ಸಂಶೋಧನ ನಡೆಸುವುದು ತೀರ ಅವಶ್ಯವಿದೆ ಎಂಬ ಮಾತಿನಲ್ಲಿ ಇನ್ನು

ಸಂಶೋಧನ ತುಡಿತ ಎದ್ದು ಕಾಣುತ್ತದೆ. ಇನ್ನು ಹುಡುಕತೊಡಗಿದರೆ ಆ ಕರ್ತೃವಿನ ಸ್ಪಷ್ಟತೆ ಹಾಗೂ ಆತನ ಇನ್ನು ಅನೇಕ ವಚನಗಳು ಲಭಿಸುವ ಸಂಭವವಿದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುವ ಮೂಲಕ ಸಂಶೋಧಕರಿಗೆ ಸಲಹೆ ಸೂಚನೆಗಳನ್ನು ನೀಡಿದ್ದಾರೆ.

ಕೋಲಶಾಂತಯ್ಯನಿಂದ ಆರಂಭವಾಗುವ ಸಕಲಪುರಾತನರ ವಚನಗಳ ಕಟ್ಟನ್ನು ಹೋಲುವ ಒಂದು ತಾಳೆಗರಿ ಪ್ರತಿಯ ವಚನಸಂಕಲನ ಕೃತಿಯನ್ನು ಶೋಧಿಸಿದ್ದಾರೆ. ಇದು ಮದ್ರಾಸ್ ಗೌರ್ನಮೆಂಟ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿಯಲ್ಲಿ ದೊರೆತ ಹಸ್ತಪ್ರತಿಯಾಗಿದೆ. ಇದು ಹಸ್ತಪ್ರತಿ ಸೂಚಿ ೪, ನಂ.೪೯೮ ಎಂದು ಗುರುತಿಸಿದ್ದಾರೆ. ಇದು ಸುಮಾರು ೪೩ ವಚನಕಾರರ ವಚನಗಳನ್ನು ಒಳಗೊಂಡ ಅಪೂರ್ಣ ಕೃತಿಯಾಗಿದೆ. ಇದರಲ್ಲಿ 'ಮೊಳಿಗೆಯ್ಯಾ... ಯೋಗಿನಾಥ ಇವರ ವಚನಗಳನ್ನಲ್ಲದೆ ಪ್ರಸಾದಿ ಭೋಗಣ್ಣನ ವಚನಗಳನ್ನು ಒಳಗೊಂಡ ಅಪೂರ್ಣ ಕೃತಿಯಿದು' ಎಂದಿದ್ದಾರೆ. ಜೊತೆಗೆ ಇದೇ ಕಟ್ಟಿನಲ್ಲಿ ದಾಸಯ್ಯನ ವಚನಗಳನ್ನು(ಸೂಚಿ ಸಂಪುಟ ೪ರ ಸಂಖ್ಯೆ ೬೦೦) ಪರಿಚಯಿಸುತ್ತ ರಾಮನಾಥ ಅಂಕಿತದ ೫೧ ವಚನಗಳನ್ನು ಶೋಧಿಸಿದ್ದಾರೆ. 'ಅನುಭವವಿಲ್ಲದ ಈ ತನು...' 'ಕರಿಯನಿತ್ತಡೆ ಒಲ್ಲೆ...' 'ಒಡಲು ಗೊಂಡವ ಹಸಿವ....' ಎಂಬ ೩ ವಚನಗಳನ್ನು ಉದ್ಧರಿಸಿದ್ದಾರೆ. ಜೊತೆಗೆ ಬಸವಣ್ಣನ ವಚನಗಳನ್ನು ಈ ಕಟ್ಟಿನ ಕೊನೆಯಲ್ಲಿ ಉದ್ಧರಿಸಿರುವುದನ್ನು ಶೋಧಿಸಿದ್ದಾರೆ. ರಾಗ–ಮಲಹರಿ ಎಂಬ ಶಿರ್ಷಿಕೆಯಡಿ 'ಉತ್ತಮ ಕುಲದಲ್ಲಿ... ಶಿವದೋ!' ಈ ಕೊನೆಯ ವಚನಗಳೆಲ್ಲ ಪ್ರಾಸ ವಿಶಿಷ್ಟವಾಗಿವೆ. ಇಲ್ಲಿ 'ರಾಗ ಮಲಹರಿ' ಎಂಬ ಉಲ್ಲೇಖದ ಕಡೆ ಎಂ.ಎಂ.ಕಲಬುರ್ಗಿ ಅವರ ಗಮನ ಸೆಳೆದಿದೆ. "ಹಸ್ತಪ್ರತಿಗಳಲ್ಲಿ ರಾಗ ನಮೂದಿಸಿ ದಾಖಲಿಸುತ್ತಿದ್ದರೆಂದೂ ಇದರಿಂದ ವ್ಯಕ್ತವಾಗುತ್ತದೆ. ಈ ಹಸ್ತಪ್ರತಿಯನ್ನು ಪತ್ತೆ ಹಚ್ಚಿ ಎಲ್ಲ ವಚನಗಳನ್ನು ಪರಿಶೀಲಿಸುವುದು ಅಗತ್ಯವಿದೆ. ಇನ್ನೂ ಕೆಲವು ವಚನಗಳಿಗೆ ಇಲ್ಲಿ ರಾಗ ಬರೆಯಲಾಗಿದ್ದರೆ, ಪ್ರಾಚೀನ ಕಾಲದ ವಚನ ಸಂವಹನಕ್ಕೆ ಸಂಬಂಧಪಟ್ಟಂತೆ ಹೊಸ ಆಧಾರ ಲಭ್ಯವಾದಂತಾಗುತ್ತದೆ" ಎಂದು ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದನ್ನು ನೋಡಿದರೆ ಸಂಶೋಧನ ಆಲೋಚನ ಶಕ್ತಿ ಅರಿವಾಗುತ್ತದೆ.

ವಚನ ಸಾಹಿತ್ಯ ಕುರಿತಾದ ಹಸ್ತಪ್ರತಿಗಳಿಂದ ಪ್ರತಿ ಮಾಡುವ ಸಂದರ್ಭದಲ್ಲಿ ಉದ್ದೇಶ ಪೂರ್ವಕವಾಗಿ ಅಥವಾ ಉದ್ದೇಶರಹಿತವಾಗಿ ಪ್ರಕ್ಷಿಪ್ತ ವಚನಕಾರರು ಹಾಗೂ ಪ್ರಕ್ಷಿಪ್ತ ವಚನ ಗಳು ಹುಟ್ಟಿಕೊಂಡಿರುವ ಸಾಧ್ಯತೆಗಳನ್ನು ಗುರುತಿಸುವ ಪ್ರಯತ್ನವನ್ನು ಎಂ.ಎಂ.ಕಲಬುರ್ಗಿ ಅವರು ಮಾಡಿದ್ದಾರೆ.

ವಚನ ಸಾಹಿತ್ಯ ಸೃಜನ, ಸಂರಕ್ಷಣೆ ಮತ್ತು ಸಂಯೋಜನವೆಂಬ ೩ ಘಟ್ಟಗಳನ್ನು ಧಾಟಿ ಸಂಸ್ಕರಣ ಘಟ್ಟದಲ್ಲಿ ಬಂದು ನಿಂತಿದೆ. ಸೃಜನದ ನಂತರ ಸಂರಕ್ಷಣ ಘಟ್ಟದ 'ವಚನ ಸಂಗ್ರಹ'

ಕೃತಿಗಳಿಗೆ ಲಿಪಿಕಾರರಿಂದ ಭಿನ್ನಪಾಠಗಳು ಹಬ್ಬಿಕೊಂಡವು. ಸಂಯೋಜನ ಘಟ್ಟದ 'ವಚನ ಸಂಕಲನ' ಕೃತಿಗಳಲ್ಲಿ ಹೆಚ್ಚಿನದಾಗಿ ಪ್ರಕ್ಷಿಪ್ತ ವಚನಗಳು, 'ವಚನ ಸಂಪಾದನೆ' ಕೃತಿಗಳಲ್ಲಿ ಇನ್ನೂ ಹೆಚ್ಚಿನದಾಗಿ ಪ್ರಕ್ಷಿಪ್ತ ವಚನಕಾರರು ಸೇರಿಕೊಂಡರೆಂದು ಕಾಣುತ್ತದೆ. ಹೀಗಾಗಿ ಸಂಸ್ಕರಣ ಕ್ರಿಯಾ ಸಂದರ್ಭದಲ್ಲಿ ಯಾವುದೇ ವಿದ್ವಾಂಸ ಮೊದಲು ಮಾಡಬೇಕಾದುದ್ದು ಈ ಪ್ರಕ್ಷಿಪ್ತ ವಚನಗಳನ್ನು, ವಚನಕಾರರನ್ನು ಹೊರಗೆ ಇಡುವುದು. ಆ ಮೇಲೆ ಮಾಡಬೇಕಾದುದು ಭಿನ್ನ ಪಾಠಗಳನ್ನು ದೂರ ಸರಿಸುವುದು"[೨೫] ಎಂದು ವಚನ ಸಾಹಿತ್ಯದ ಸಂಪಾದನ ಕಾರ್ಯದಲ್ಲಿ ಸಂಪಾದಕನ ಕಾರ್ಯವನ್ನು ತಿಳಿಸುವಲ್ಲಿ ವಚನ ಸಾಹಿತ್ಯದ ಮೂಲರೂಪಕ್ಕೆ ಧಕ್ಕೆ ಬರಬಾರದೆಂಬ ಸದುದ್ದೇಶ ಎಂ.ಎಂ.ಕಲಬುರ್ಗಿ ಅವರ ಮಾತಿನಲ್ಲಿ ಅಭಿವ್ಯಕ್ತವಾಗಿರುವುದು ಗಮನಾರ್ಹವಾಗಿದೆ. "೨೦ನೆಯ ಶತಮಾನದ ಆದಿಭಾಗದಲ್ಲಿ ವಚನಸಾಹಿತ್ಯವನ್ನು ಪ್ರಕಟಿಸಿದ ವಿದ್ವಾಂಸರು ಪ್ರಾಚೀನ 'ವಚನ ಸಂಕಲನ' ಕೃತಿಗಳನ್ನು ಮೂಲರೂಪದಲ್ಲಿಯೇ ಸ್ವತಂತ್ರವಾಗಿ ಪ್ರಕಟಿಸಿದ್ದಾರೆ. ಇಂದಿನ ವಿದ್ವಾಂಸರಿಗೆ ಅವುಗಳಲ್ಲಿಯ ಪ್ರಕ್ಷಿಪ್ತವಚನ ನಿಜವಚನಗಳನ್ನು, ಪ್ರಕ್ಷಿಪ್ತ ವಚನಕಾರ ನಿಜ ವಚನಕಾರರನ್ನು ಗುರುತಿಸುವುದು ಕೆಲಮಟ್ಟಿಗೆ ಸುಲಭವಾಗುತ್ತಿದ್ದಿತು. ನಿಜವಚನಕಾರರನ್ನು ಇಟ್ಟುಕೊಂಡು ಅವರ ನಿಜವಚನಗಳನ್ನು ಈ ಎಲ್ಲ ಮೂಲಗಳಿಂದ ಪ್ರಕಟಿಸಲು ಅನುಕೂಲವಾಗುತ್ತಿತ್ತು. ಆದರೆ ಡಾ.ಫ.ಗು.ಹಳಕಟ್ಟಿ ಮೊದಲಾದ ವಿದ್ವಾಂಸರು ಹಾಗೆ ಮಾಡದೆ, ಪ್ರಾರಂಭದಲ್ಲಿಯೇ ಅನೇಕ ಮೂಲಗಳಿಂದ ವಚನಗಳನ್ನು ಆಯ್ದು, ಮಡಿವಾಳ ಮಾಚಿದೇವನ ವಚನ, ಸಿದ್ಧರಾಮೇಶ್ವರ ವಚನ ಇತ್ಯಾದಿ ಏಕವ್ಯಕ್ತಿ ವಚನ ಸಂಪುಟಗಳನ್ನೂ 'ವಚನಶಾಸ್ತ್ರ ಸಾರ' ಮೊದಲಾದ ಬಹುವ್ಯಕ್ತಿ ವಚನ ಸಂಪುಟಗಳನ್ನು ರೂಪಿಸಿ ಪ್ರಕಟಿಸಿದರು. ಇದರಿಂದಾಗಿ ಪ್ರಾರಂಭದಲ್ಲಿಯೇ ನಿಜವಚನಕಾರರ ಯಾದಿಯಲ್ಲಿ ಪ್ರಕ್ಷಿಪ್ತವಚನಕಾರರು ಸೇರಿಕೊಂಡುಬಿಟ್ಟರು; ನಿಜವಚನಗಳ ರಾಶಿಯಲ್ಲಿ ಪ್ರಕ್ಷಿಪ್ತ ವಚನಗಳು ಬೆರೆತುಹೋದವು"[೨೬] ಪ್ರಾರಂಭದಲ್ಲಿಯೇ ವಚನಗಳ ಸಂಗ್ರಹ ಕಾರ್ಯದಲ್ಲಿ ಹೇಗೆ ಪ್ರಕ್ಷಿಪ್ತವಚನಕಾರರು, ಪ್ರಕ್ಷಿಪ್ತವಚನಗಳು ಬೆರೆತು ಹೋಗಿವೆ ಎಂಬುದನ್ನು ಹೇಳಿದ್ದಾರೆ. ಹಾಗೆಯೇ ಮೊದಲು ವಚನ ಸಂಗ್ರಹಕಾರ್ಯದಲ್ಲಿ ತೊಡಗಿದ ಇವರು ತಾವು ಸಂಗ್ರಹಿಸಿದ ವಚನಗಳಿಗೆ ಆಕರಗಳನ್ನು ಕೊಡದಿರುವುದು ಕೂಡ ಈ ಗೊಂದಲಕ್ಕೆ ಕಾರಣ ವೆಂದಿದ್ದಾರೆ. ಫ.ಗು.ಹಳಕಟ್ಟಿ ಅವರ ಬಹುದೊಡ್ಡ ವಚನ ಸಂಪಾದನ ಕಾರ್ಯವನ್ನು ಕಂಡ ಆರ್.ನರಸಿಂಹಾಚಾರ್ ಅವರ ಕವಿಚರಿತೆಯ ಸಂಪುಟದಲ್ಲಿ ಪ್ರಕ್ಷಿಪ್ತ ವಚನಕಾರರು, ವಚನಗಳು ಸೇರಿಕೊಂಡವು. ಶರಣರ ಮೇಲಿನ ಭಕ್ತಿ ಫ.ಗು.ಹಳಕಟ್ಟಿ ಅವರ ಮೇಲಿನ ಗೌರವ ಮತ್ತು ಆರ್.ನರಸಿಂಹಾಚಾರ್ ಅವರ ಅಧಿಕಾರವಾಣಿಯ ಬಗೆಗಿನ ವಿಶ್ವಾಸ ಕಾರಣವಾಗಿ ಎಸ್.ಎಸ್.ಬಸವನಾಳ ಮುಂತಾದವರು ಪ್ರಕ್ಷಿಪ್ತವಚನಗಳ, ವಚನಕಾರರ ಬಗೆಗೆ ಗಮನ ಹರಿಸದೆ ಮುಂದುವರಿಸಿಕೊಂಡು ಬಂದಿದ್ದಾರೆ. ೨೦ನೆಯ ಶತಮಾನದಲ್ಲಿ ಪ್ರಕ್ಷಿಪ್ತ

ವಚನಗಳ ಬಗ್ಗೆ ಧ್ವನಿ ಕೇಳಿ ಬಂದರೂ ಯಾರು ಗಮನ ಹರಿಸಲಿಲ್ಲವೆಂಬುದನ್ನು ಮನಗಂಡ ಎಂ.ಎಂ.ಕಲಬುರ್ಗಿ ಅವರು ಪ್ರಕ್ಷಿಪ್ತವಚನಕಾರರು ಹಾಗೂ ಪ್ರಕ್ಷಿಪ್ತವಚನಗಳನ್ನು ಶೋಧಿಸುವ ಕೆಲಸದಲ್ಲಿ ನಿರತರಾಗಿರುವುದನ್ನು ಈ ಲೇಖನ ವ್ಯಕ್ತಪಡಿಸುತ್ತದೆ.

ಎಂ.ಎಂ.ಕಲಬುರ್ಗಿ ಅವರು ಪ್ರಕ್ಷಿಪ್ತವಚನಕಾರರನ್ನು ಎರಡು ರೀತಿಯಲ್ಲಿ ಗುರುತಿಸಲು ಪ್ರಯತ್ನಿಸಿದ್ದಾರೆ. ಶರಣರಲ್ಲಿ ವಚನ ಬರೆಯುವವರು ಇದ್ದಾರೆ, ಬರೆಯದವರು ಇದ್ದಾರೆ. ವಚನ ಬರೆಯದ ಶರಣರ ಹೆಸರಿನಲ್ಲಿ ಪ್ರಕ್ಷಿಪ್ತವಚನಗಳು ಹುಟ್ಟಿಕೊಂಡಿವೆ. ಇವರನ್ನು 'ಪ್ರಕ್ಷಿಪ್ತ ವಚನಕಾರರು–೧' ಎಂದು ಕಾಲ್ಪನಿಕ ವ್ಯಕ್ತಿಗಳ ಹೆಸರಿನಲ್ಲಿ ವಚನಗಳು ಹುಟ್ಟಿಕೊಂಡಿರುವುದನ್ನು 'ಪ್ರಕ್ಷಿಪ್ತವಚನಕಾರರು–೨' ಎಂದು ಗುರುತಿಸಿದ್ದಾರೆ. 'ವಚನ ಸಂಗ್ರಹ' ಸಂದರ್ಭ ಪ್ರಕ್ಷಿಪ್ತ ವಚನಕಾರರ, ಪ್ರಕ್ಷಿಪ್ತವಚನಗಳ ದಾಳಿಗೆ ಗುರಿಯಾಗಿಲ್ಲ, 'ವಚನ ಸಂಕಲನ' ಸಂದರ್ಭದಲ್ಲಿ ನಿಜವಚನಕಾರರ ಹೆಸರಿನಲ್ಲಿ ಪ್ರಕ್ಷಿಪ್ತವಚನಗಳು ಹುಟ್ಟಿಕೊಂಡಿರಬಹುದು. ಆದರೆ 'ವಚನ ಸಂಪಾದನೆ' ಸಂದರ್ಭದಲ್ಲಿ ಸಂವಾದ ರೀತಿಯ ವಚನಸಂಪಾದನ ಕಾರ್ಯದಲ್ಲಿ ವಿಷಯದ ಕೊರತೆಯೆನಿಸಿದಾಗ ಮೇಲೆ ಹೇಳಿದ ಎರಡೂ ರೀತಿಯ ಪ್ರಕ್ಷಿಪ್ತವಚನಕಾರರು ಹುಟ್ಟಿಕೊಂಡಿರುವ ಸಾಧ್ಯತೆಗಳಿವೆ ಎನ್ನುತ್ತ ಪ್ರಕ್ಷಿಪ್ತರೆನ್ನಲು ಕಾರಣಗಳನ್ನು ಈ ಮುಂದಿನಂತೆ ತಿಳಿಸಿದ್ದಾರೆ. "ಪ್ರಕ್ಷಿಪ್ತರೆನ್ನಲು ಕಾರಣವೆಂದರೆ, ಇವರ ಹೆಸರಾಗಲಿ, ವಚನಗಳಾಗಲಿ, ಅನೇಕ ಸಂಖ್ಯೆಯಲ್ಲಿ ಸಿಗುವ ಪ್ರಾಚೀನ ಬೇರೆ ವಚನ ಕೃತಿಗಳಲ್ಲಿ ಕಂಡುಬರದೆ ಒಂದು ಕೃತಿಯಲ್ಲಿ ವ್ಯತ್ಯಾಸ ತೋರಿಬರುವುದು ಮತ್ತು ಕೆಲವೊಮ್ಮೆ ತತ್ವವಿರೋಧಿಯಾಗಿರುವುದು."[೨೭] ಈ ಅಂಶಗಳನ್ನು ಆಧರಿಸಿ ಪ್ರಕ್ಷಿಪ್ತ ವಚನಕಾರರೆಂದು ಭಾವಿಸಬಹುದು ಎಂದಿದ್ದಾರೆ. ಎಂ.ಎಂ.ಕಲಬುರ್ಗಿ ಅವರು ಈ ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಕೆಲವು ಕೃತಿಗಳಲ್ಲಿ ಪ್ರಕ್ಷಿಪ್ತವಚನಕಾರರನ್ನು ಗುರುತಿಸುವ ಪ್ರಯತ್ನ ಮಾಡಿರುವುದನ್ನು ಈ ಕೆಳಕಂಡಂತೆ ನೋಡಲಾಗಿದೆ.

೧. ಮುಕ್ತಿ ಕಂಠಾಭರಣದಲ್ಲಿ ಕಂಡುಬರುವ ವಚನಕಾರರ ಸಂಖ್ಯೆ ೪೨, ಇದರಲ್ಲಿ ೧೦ ಜನ ಪ್ರಕ್ಷಿಪ್ತವಚನಕಾರರಿರುವಂತಿದೆ ಎಂದು ಹೆಸರು ಮತ್ತು ಮುದ್ರಿಕೆಯನ್ನು ನೀಡಿದ್ದಾರೆ. ಉದಾಹರಣೆಗೆ ಆಗಮ ಮೋಹಿನಿ–ಆಗಮ ಮೋಹಿನಿ, ಕಿರಾತ ಸಂಗಯ್ಯ–ಕಿರಾತ ಸಂಗಲಿಂಗ

೨. ಅಲ್ಲಮಪ್ರಭು ಸಿದ್ಧರಾಮನ ವಾದದ ವಚನಗಳು. ಈ ಕೃತಿಯಲ್ಲಿ ಕಂಡುಬರುವ ಒಟ್ಟು ವಚನಕಾರರ ಸಂಖ್ಯೆ ೫೯, ಇವುಗಳಲ್ಲಿ ಇರಬಹುದಾದ ಪ್ರಕ್ಷಿಪ್ತವಚನಕಾರರ ಸಂಖ್ಯೆ ೩೭ ಎಂದು ಅವರ ಹೆಸರು ಮತ್ತು ಮುದ್ರಿಕೆಯನ್ನು ನೀಡಿದ್ದಾರೆ. ಉದಾಹರಣೆಗೆ ಅನಂತದೇವ–ಅನಂತಗುರು ಅಲ್ಲಮಹಾಪ್ರಭು

೩. ಸಿದ್ಧರಾಮ ಶಾಂತಿಶೆಟ್ಟಿಯವರ ವಾದದ ವಚನಗಳು. ಕೃತಿಯಲ್ಲಿ ಒಟ್ಟು ವಚನಕಾರರ ಸಂಖ್ಯೆ ೨೧, ಇದರಲ್ಲಿ ಸಿದ್ಧರಾಮನನ್ನುಳಿದು ೨೦ ಜನ ಪ್ರಕ್ಷಿಪ್ತವಚನಕಾರರಿಬಹುದು ಎಂದು ಅವರ ಹೆಸರು ಮತ್ತು ಮುದ್ರಿಕೆಗಳನ್ನು ನೀಡಿದ್ದಾರೆ. ಉದಾಹರಣೆಗೆ ಕಲ್ಲವ್ವ–ಕಲ್ಲಿನಾಥ.

೪. ಶ್ರೀ ಪ್ರಭುಕೃತ ಮಡಿವಾಳಸ್ತೋತ್ರ ಇತ್ಯಾದಿ ಕೃತಿಯಲ್ಲಿ ಒಟ್ಟು ವಚನಕಾರರಲ್ಲಿ ೪೫ ಪ್ರಕ್ಷಿಪ್ತ ವಚನಕಾರರನ್ನು ಗುರುತಿಸಿ ಅವರ ಹೆಸರು ಹಾಗೂ ಮುದ್ರಿಕೆಗಳನ್ನು ನೀಡಿದ್ದಾರೆ. ಉದಾಹರಣೆಗೆ ಅಮರೇಶ್ವರದೇವ–ಅಮರೇಶ್ವರಲಿಂಗ.

ಮೇಲಿನ ವಿವರಣೆಯಿಂದ ೧೦+೩೭+೨೦+೪೫=೧೧೨ ಜನರನ್ನು ಪ್ರಕ್ಷಿಪ್ತ ವಚನಕಾರರೆಂದು ಎಂ.ಎಂ.ಕಲಬುರ್ಗಿ ಅವರು ಗುರುತಿಸಿದ್ದಾರೆ. ಶೂನ್ಯ ಸಂಪಾದನೆಯಂಥ ಕೃತಿಗಳಲ್ಲಿ ಪ್ರಕ್ಷಿಪ್ತ ವಚನಕಾರರ ದಾಳಿ ಸಾಮಾನ್ಯವಾಗಿ ಜರುಗಿರುತ್ತದೆ. ಹಾಗಾಗಿ ಇಂಥ ಸಂದರ್ಭದಲ್ಲಿ ಸಂಪಾದಕ ಎಚ್ಚರಿಕೆಯಿಂದ ಇರಬೇಕೆಂಬ ಸಲಹೆಯನ್ನು ನೀಡಿದ್ದಾರೆ. ಜೊತೆಗೆ "ಇವಲ್ಲದೆ ಇನ್ನೂ ಒಂದೆರಡು ಗ್ರಂಥಗಳ ವಿಷಯವಾಗಿ ನನಗೆ ಅನುಮಾನವಿದ್ದು, ಈ ಬಗ್ಗೆ ಅಧ್ಯಯನ ಪೂರ್ಣವಾದ ಬಳಿಕ ಇನ್ನೊಂದು ಲೇಖನ ಬರೆಯಬಹುದಾಗಿದೆ"[೨೮] ಎಂದು ಸೂಚಿಸಿದ್ದಾರೆ. ಈ ಮಾತಿನಲ್ಲಿ ಪ್ರಕ್ಷಿಪ್ತವಚನಕಾರರನ್ನು ಶೋಧಿಸುವ ಮೂಲಕ ನಿಜವಚನಕಾರರ ಮೌಲ್ಯವನ್ನು ಉಳಿಸುವ ಪ್ರಯತ್ನ ಎಂ.ಎಂ.ಕಲಬುರ್ಗಿ ಅವರ ವಚನಶೋಧದಲ್ಲಿ ಎದ್ದು ಕಾಣುತ್ತದೆ. ಎಂ.ಎಂ.ಕಲಬುರ್ಗಿ ಅವರ ವಚನ ಅಧ್ಯಯನದಲ್ಲಿ ತೊಡಗಿಸಿಕೊಳ್ಳುವ ಮೂಲಕ ಹಲವು ಹೊಸವಚನಗಳನ್ನು ಬೆಳಕಿಗೆ ತರುವುದರ ಜೊತೆಗೆ ಎಷ್ಟೋ ಪ್ರಕ್ಷಿಪ್ತವಚನಕಾರರನ್ನು, ವಚನಗಳನ್ನು ಗುರುತಿಸುವಲ್ಲಿ ಯಶಸ್ಸು ಕಂಡಿದ್ದಾರೆ.

**ಅಡಿಟಿಪ್ಪಣಿಗಳು**

೧. ಕಲಬುರ್ಗಿ ಎಂ.ಎಂ., ಚೆನ್ನಬಸವಣ್ಣವರ ಷಟ್‌ಸ್ಥಲ ವಚನ ಮಹಾಸಂಪುಟ, ಪ್ರಸ್ತಾವನೆ.

೨. ಅದೇ, ಪ್ರಸ್ತಾವನೆ.

೩. ಕಲಬುರ್ಗಿ ಎಂ.ಎಂ., ವಚನ ಸಂಕಲನ ಸಂಪುಟ ೪, ಪು.೬.

೪. ಅದೇ, ಪು.೬–೮.

೫. ಅದೇ, ಪು.೧೩–೧೪.

೬. ಅದೇ, ಪು.೧೫.

೭. ಅದೇ, ಪು.೧೬.

೮. ಅದೇ, ಪು.೧೯.

೯. ಅದೇ, ಪು.೨೫.

೧೦. ಅದೇ, ಪು.೨೬.

೧೧. ಕಲಬುರ್ಗಿ ಎಂ.ಎಂ., ವಚನ ಸಂಕಲನ ಸಂಪುಟ ೬, ಪ್ರಸ್ತಾವನೆ.

೧೨. ಅದೇ, ಪು.೨.

೧೩. ಅದೇ, ಪು.೪.

೧೪. ಕಲಬುರ್ಗಿ ಎಂ.ಎಂ. ಮಾರ್ಗ, ಸಂಪುಟ ೩, ಪು.೧೭೪.

೧೫. ಕಲಬುರ್ಗಿ ಎಂ.ಎಂ., ಪರಮಾನಂದ ಸುಧೆ, ಪು.೧೩೯–೧೪೦.

೧೬. ಅದೇ, ಪು.೧೯೭–೧೯೮.

೧೭. ಕಲಬುರ್ಗಿ ಎಂ.ಎಂ., ಏಕೋತ್ತರ ಶತಸ್ಥಲ, ಪ್ರಸ್ತಾವನೆ.

೧೮. ಕಲಬುರ್ಗಿ ಎಂ.ಎಂ., ಮಾರ್ಗ ಸಂಪುಟ ೩, ಪು.೧೭೬.

೧೯. ಅದೇ, ಪು.೧೭೭.

೨೦. ಅದೇ, ಪು.೧೭೭–೧೭೮.

೨೧. ಕಲಬುರ್ಗಿ ಎಂ.ಎಂ., ಮಾರ್ಗ ಸಂಪುಟ ೧, ಪು.೪೪೮.

೨೨. ಅದೇ, ಪು.೪೪೯.

೨೩. ಅದೇ, ಪು.೪೪೯–೪೫೦.

೨೪. ಅದೇ, ಪು.೧೫೦–೧೫೧.

೨೫. ಅದೇ, ಪು.೨೮೩.

೨೬. ಅದೇ, ಪು.೨೮೩.

೨೭. ಅದೇ, ಪು.೨೮೪.

೨೮. ಅದೇ, ಪು.೨೯೦.

# ಅಧ್ಯಾಯ: ನಾಲ್ಕು

## ಎಂ.ಎಂ. ಕಲಬುರ್ಗಿ: ವಚನ ಸಾಹಿತ್ಯ ಅಧ್ಯಯನ

೪.೧. ವಚನತತ್ವ–ಸಿದ್ಧಾಂತಗಳ ಅಧ್ಯಯನ
೪.೨. ವಚನಕಾರರ ಅಧ್ಯಯನ
೪.೩. ವಚನ ಕೃತಿಗಳ ಅಧ್ಯಯನ

# ಅಧ್ಯಾಯ: ನಾಲ್ಕು

# ಎಂ.ಎಂ. ಕಲಬುರ್ಗಿ: ವಚನ ಸಾಹಿತ್ಯ ಅಧ್ಯಯನ

ಸಂಶೋಧನ ತುಡಿತವನ್ನು ಹೊಂದಿದ ಎಂ.ಎಂ.ಕಲಬುರ್ಗಿ ಅವರು ಹಲವು ಹೊಸ ಹಸ್ತಪ್ರತಿಗಳನ್ನು ಹುಡುಕುವ ಮೂಲಕ ಹಲವು ವಚನ ಕೃತಿಗಳನ್ನು ಹಾಗೂ ಹೊಸ ವಚನಗಳನ್ನು ಬೆಳಕಿಗೆ ತಂದಿದ್ದಾರೆ. ಶೋಧ ಮತ್ತು ಸಂಪಾದನ ಕಾರ್ಯದಲ್ಲಿ ಮಾತ್ರ ತೊಡಗದೆ ಹಲವು ವಚನಗಳನ್ನು ಪಾಠಪರಿಷ್ಕರಣೆಯ ಮೂಲಕ ವಿಶ್ಲೇಷಿಸುವ, ವಚನಕಾರರ ಜೀವನ ಶೋಧವನ್ನು ಮಾಡುವುದರ ಜೊತೆಗೆ ವಚನ ಕೃತಿಗಳನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಈ ರೀತಿಯ ಅಧ್ಯಯನವನ್ನು ಮೂರು ನೆಲೆಯಾಗಿ ವರ್ಗೀಕರಿಸಿಕೊಂಡು ಅವರ ಅಧ್ಯಯನದ ಆಶಯವನ್ನು ನಿರೂಪಿಸಬಹುದಾಗಿದೆ.

## ೪.೧. ವಚನತತ್ತ್ವ–ಸಿದ್ಧಾಂತಗಳ ಅಧ್ಯಯನ

ಶಿವಶರಣರ ವಚನಗಳನ್ನು 'ನಿರ್ವಚನ' ಹೆಸರಿನಲ್ಲಿ ಅಧ್ಯಯನ ಮಾಡಿರುವ ಎಂ.ಎಂ. ಕಲಬುರ್ಗಿ ಅವರು ಪ್ರಭುತ್ವ–ಸಮಾಜ–ಸಾಹಿತ್ಯ–ತತ್ತ್ವ–ಆಚರಣೆ–ಭಾಷೆ ಆಕೃತಿಗಳ ನೆಲೆಗಳಲ್ಲಿ ವಚನಕಾರರ ಚಿಂತನೆಗಳನ್ನು ನಿರೂಪಿಸಿರುವುದರ ಮೂಲಕ ಮೌಲ್ಯ ಮತ್ತು ಆದರ್ಶಗಳ ಬಗ್ಗೆ ಶರಣರಿಗಿರಬಹುದಾದ ವೈಚಾರಿಕತೆಯನ್ನು ಅನಾವರಣಗೊಳಿಸಿದ್ದಾರೆ. ಹೀಗಾಗಿ ಎಂ.ಎಂ. ಕಲಬುರ್ಗಿ ಅವರ ವಚನಗಳ ಅಧ್ಯಯನದಲ್ಲಿ ಕೆಲವನ್ನು ಪರಾಮರ್ಶಿಸಬಹುದಾಗಿದೆ.

೧. ಸೂಳ್ನುಡಿ ಎಂದರೇನು?

೨. ಸೂಳ್ನುಡಿ–ವಚನ–ವಚನಾಗಮ

೩. ವಚನಕಾರರು: ಭಾಷೆ–ಕನ್ನಡ ಭಾಷೆ–ವಚನ ಭಾಷೆ

೪. ವಚನಗಾಯನ ಪ್ರಾಚೀನತೆ

೫. ದೇವಾಲಯ ಸಂಸ್ಕೃತಿ ನಿರಾಕರಣೆ

೨೯. ಲಿಂಗವಂತರು ತಾವು ಅಂಜಲೇಕೆ

೩೦. ಅಲ್ಲಿ ಉಂಬರೆ ಸಂಗ–ಇಲ್ಲಿ ಉಂಬರೆ ಸಂಗ

೩೧. ಜಂಗಮವೇ ಲಿಂಗವೆಂದು ನಂಬಿದೆ

೩೨. ಪೂಜೆ–ಮಾಟ

ಈ ಮೇಲಿನ ಎಲ್ಲ ಲೇಖನಗಳನ್ನು ತತ್ವಸಿದ್ಧಾಂತಗಳ ಹಿನ್ನೆಲೆಯಲ್ಲಿ ಕೆಳಗಿನಂತೆ ಗಮನಿಸಲಾಗಿದೆ.

ಎಂ.ಎಂ.ಕಲಬುರ್ಗಿ ಅವರು 'ಸೂಳ್ನುಡಿ ಎಂದರೇನು?' ಎಂಬ ಲೇಖನದಲ್ಲಿ ಸೂಳ್ನುಡಿ ಅರ್ಥವನ್ನು ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ. ವಚನ ಸಾಹಿತ್ಯ ಅಧ್ಯಯನದಲ್ಲಿ ನಿರತರಾದಾಗ ತತ್ವಸಿದ್ಧಾಂತಗಳಿಗೆ ಮಾತ್ರ ಗಮನ ಹರಿಸದೇ ಪಾಠಶುದ್ಧತೆಯ ಹಿನ್ನೆಲೆಯಲ್ಲಿ ಸಂಪಾದಿಸಿರುವುದು ವಿಶೇಷವೆನಿಸುತ್ತದೆ.

"ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ
ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ
ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ
ನಿಮ್ಮ ನಿತ್ತೆ ಕಾಣಾ ರಾಮನಾಥಾ!"[೧]

ಜೇಡರ ದಾಸಿಮಯ್ಯನ ಸುಪ್ರಸಿದ್ಧ ವಚನದಲ್ಲಿ ಸೂಳ್ನುಡಿ ಪದದ ಅರ್ಥವನ್ನು ಅದರ ಹಿನ್ನೆಲೆಯನ್ನು ಹಾಗೂ ಸೂಳ್ನುಡಿಗೂ ವಚನಕಾರರಿಗೂ ಇರಬಹುದಾದ ಸಂಬಂಧ ಕುರಿತು ಚರ್ಚಿಸಿದ್ದಾರೆ. ಸೂಳ್ನುಡಿ ಮಹಾತ್ಮರ ವಾಣಿ ಎಂಬ ಸಾಮಾನ್ಯ ಅರ್ಥವನ್ನು ಅದು ವಚನ ಸಾಹಿತ್ಯದ ಪ್ರಕಾರವೆಂದು ಹೇಳುತ್ತಾ ಬಂದಿದ್ದಾರೆಯೇ ಹೊರತು ವಚನಕಾರಿಗೂ ಸೂಳ್ನುಡಿಗೂ ಇರುವ ಸಂಬಂಧವನ್ನು ಸ್ಪಷ್ಟಪಡಿಸಲು ಯಾರೂ ಗಮನಹರಿಸಿಲ್ಲವೆಂದು ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ ಎಂ.ಎಂ.ಕಲಬುರ್ಗಿ ಅವರು ಸೂಳ್ನುಡಿ ಎಂದರೇನು ಎಂಬುದನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. 'ವಚನ' ಶಬ್ದಕ್ಕೆ ಗದ್ಯಪ್ರಕಾರ, ಲಯಾತ್ಮಕ ಗದ್ಯ ಎಂದು ಸೀಮಿತ ಅರ್ಥ ಕಲ್ಪಿಸುವ ಬದಲಿಗೆ ರೂಪಕ್ಕಿಂತ ಗುಣಕ್ಕೆ ಹೆಚ್ಚು ಮಹತ್ವ ಕೊಡಬೇಕೆಂದು ಚರ್ಚಿಸಿದ್ದಾರೆ. "ನಡೆ ಹೇಗೆ ಇರಲಿ, ನುಡಿ ಸುಂದರವಾದುದು ರಚನೆ, ನಡೆದಂತೆ ನುಡಿದುದು ವಚನವೆಂದು ನನ್ನ ಲೇಖನವೊಂದರಲ್ಲಿ ವಿವರಿಸಿದ್ದೇನೆ"[೨] ಎಂದು ಎಂ.ಎಂ.ಕಲಬುರ್ಗಿ ಅವರು ಹೇಳಿಕೊಂಡಿದ್ದಾರೆ. ಜೊತೆಗೆ ವಚನವೆಂಬುದು ಆತ್ಮಸಾಕ್ಷಿಯ ಬರವಣಿಗೆ, ಆತ್ಮಲಿಂಗದ ಮೇಲೆ ಆಣೆ ಇಟ್ಟು ವ್ಯಕ್ತಪಡಿಸಿದ ಬರವಣಿಗೆ ಎಂಬ ವಿಶಾಲ ಅರ್ಥವನ್ನು ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ

'ಸೂಳ್ನುಡಿ' ಅರ್ಥವನ್ನು ಬಿಡಿಸಿ ನೋಡಲು ಪ್ರಯತ್ನಿಸಿದ್ದಾರೆ. ಸೂಳ್+ನುಡಿ ಸರಳವಾಗಿ ಬಿಡಿಸಿ ನೋಡಬಹುದು. ಸೂಳ್ ಎಂದರೆ ಶ್ರಮ, ಸರದಿ ಎಂದಾಗುತ್ತದೆ. ಆದರೆ ಇದು ಅಷ್ಟೇ ಸಮಂಜಸವಾದ ಅರ್ಥ ನೀಡುವುದಿಲ್ಲ. ಹಳಗನ್ನಡದಲ್ಲಿ ಸುರುಳ್ ಪದಕ್ಕೆ 'ಪ್ರತಿಜ್ಞೆ ಮಾಡು' ಎಂಬರ್ಥವಿದೆ. ಶಬ್ದಮಣಿದರ್ಪಣದ ಧಾತು ಪ್ರಕರಣದಲ್ಲಿ 'ಸುರುಳ್ ಶಪಥೇ' ಎಂಬ ಅರ್ಥ ಕಂಡುಬರುವುದು. ಇವನ್ನು ಗಮನಿಸಿದಾಗ ಸೂರುಳ್+ನುಡಿ=ಸೂರುಳ್ನುಡಿ ಎಂಬುದು ವಚನ ಪದಕ್ಕೆ ಎಂ.ಎಂ.ಕಲಬುರ್ಗಿ ಅವರು ಮೇಲೆ ಹೇಳಿದ ವಿವರಣೆಗೆ ಹೊಂದಿಕೊಳ್ಳುವುದೆಂದು ಸೂರುಳ್ ಮೂಲದಿಂದ ಸೂಳ್ನುಡಿಗೆ ಅರ್ಥ ಬಂದಿರುವುದನ್ನು ಹಾಗೂ ಸೂರುಳ್ನುಡಿ ಎಂಬುದರ ಮಧ್ಯದ 'ರ'ಕರಗಿ 'ಸೂಳ್ನುಡಿ' ಆಗಿದೆಯೆಂದು ಇಟ್ಟುಕೊಳ್ಳ ಬೇಕಾಗುತ್ತದೆ ಎಂಬ ಅಭಿಪ್ರಾಯ ಬರುತ್ತದೆ.

"'ಸೂಳ್ನುಡಿ' ದ್ರಾವಿಡ ಪದ ವಚನವೆಂಬುದು ಸಂಸ್ಕೃತ ಪದ. ಇವುಗಳಲ್ಲಿ ಖಂಡಿತ ವಾಗಿಯೂ ಸೂಳ್ನುಡಿ ಪ್ರಾಚೀನ ಪ್ರಯೋಗ. ಆದುದರಿಂದ ತಮಿಳಿನ ಶಿವಭಕ್ತರ ವಚನಗಳಿಗೆ 'ಸೂಳ್ನುಡಿ' ಎಂದು ಕರೆಯುವ ಕಾಲಘಟ್ಟ ಮುಗಿದು ೧೨ನೇ ಶತಮಾನದಲ್ಲಿ 'ವಚನ'ವೆಂದು ಕರೆಯುವ ಘಟ್ಟ ಪ್ರಾರಂಭವಾಗಿರಬಹುದೆನಿಸುತ್ತದೆ."[೩] ಇವನ್ನು ಕುರಿತಂತೆ ರಚನೆ, ಸ್ವರೂಪಗಳನ್ನು ಶೋಧಿಸುವುದು ವಿದ್ವಾಂಸರ ಕಣ್ಣಮುಂದಿನ ಪ್ರಶ್ನೆಯಾಗಿ ನಿಂತಿದೆ ಎಂದು ಸಂಶೋಧನೆಗೆ ದಾರಿ ಮಾಡಿಕೊಟ್ಟಿದ್ದಾರೆ. ಶಿವಶರಣರು ತಮ್ಮ ವಚನಗಳಿಗೆ ತಮ್ಮ ಇಷ್ಟಲಿಂಗದ ಅಥವಾ ಸ್ಥಾವರಲಿಂಗದ ಹೆಸರುಗಳನ್ನು ಅಂಕಿತವಾಗಿ ಬಳಸಿಕೊಂಡಿದ್ದಾರೆ. ಜೇಡರದಾಸಿಮಯ್ಯನ ಅಂಕಿತ 'ರಾಮನಾಥ' ಹೆಸರಿನ(ಕಾಳಮುಖ ಸ್ಥಾವರಲಿಂಗ) ದೇಗುಲವು ಮದನೂರಿನಲ್ಲಿ ಕಂಡುಬರುವುದು. ಪ್ರಾರಂಭದಲ್ಲಿ ಕಾಳಾಮುಖರು ವಚನಗಳನ್ನು ಸೃಷ್ಟಿಸಿರುವ ಸಾಧ್ಯತೆಗಳಿವೆ. ಈಗ ಲಭ್ಯವಾಗಿರುವ ವಚನ ಸಾಹಿತ್ಯದಲ್ಲಿ ಅವರ ರಚನೆಗಳೂ ಸೇರಿಕೊಂಡಿವೆ ಎಂದು ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಸೂಳ್ನುಡಿ ಸಾಹಿತ್ಯವು ವಚನ ಸಾಹಿತ್ಯವೇ ಆಗಿದ್ದರೂ ರೂಪ ದೃಷ್ಟಿಯಿಂದ ವಚನಗಳಿಗಿಂತ ಹೆಚ್ಚು ಲಯಾತ್ಮಕವಾಗಿರ ಬಹುದು ಎನ್ನುತ್ತ ಇದಕ್ಕೆ ನಿದರ್ಶನವಾಗಿ ಜೇಡರದಾಸಿಮಯ್ಯನ ವಚನಗಳನ್ನು ನೋಡಬಹುದು ಎಂದಿದ್ದಾರೆ. ಹಾಗೆಯೇ ಚಿದಾನಂದ ಮೂರ್ತಿ ಅವರು ಸೂಳ್ನುಡಿ ಬಗೆಗಿನ ಅಭಿಪ್ರಾಯವನ್ನು ಇಲ್ಲಿ ಎಂ.ಎಂ.ಕಲಬುರ್ಗಿ ಅವರು ವ್ಯಕ್ತಪಡಿಸಿದ್ದಾರೆ. ಸೂಳ್ನುಡಿಗಳು ತ್ರಿಪದಿ ಲಯದಲ್ಲಿಯೇ ಇರುವ ಸಾಧ್ಯತೆಯಿದೆ. ಸರ್ವಜ್ಞನ ವಚನ(ತ್ರಿಪದಿ)ಗಳು ಆ ಪರಂಪರೆಯ ದೂರದ ಪ್ರತಿನಿಧಿಗಳಾಗಿರಬಹುದು ಎಂದಿದ್ದಾರೆ. ಸ್ಥಾವರಲಿಂಗ ಪೂಜಕನಾಗಿದ್ದ ಸಿದ್ಧರಾಮನ ವಚನಗಳಲ್ಲಿ ಲಯ ಹೆಚ್ಚು. ಈತನು ತ್ರಿಪದಿಗಳನ್ನು ಬರೆದುದು ಸರ್ವಶ್ರುತ ಎಂದಿದ್ದಾರೆ.

ಸೂಳ್ನುಡಿ–ವಚನ–ವಚನಾಗಮ ಎಂಬ ಲೇಖನದಲ್ಲಿ ಬಸವಪೂರ್ವದ 'ಸೂಳ್ನುಡಿಗಿಂತ ಬಸವಯುಗದ 'ವಚನಕ್ಕಿಂತ' ಬಸವೋತ್ತರ ಯುಗದ 'ವಚನಾಗಮ' ಹಂತ. ಹೀಗೆ ಈ ಮೂರು ಶಬ್ಧಗಳ ಅರ್ಥ, ಶಬ್ದಗಳ ಹಿಂದಿನ ಧೋರಣೆ, ರಚನೆಯ ಸ್ವರೂಪ ಕುರಿತು ಚರ್ಚಿಸಿದ್ದಾರೆ. ಬಸವಣ್ಣ ಒಂದೆಡೆ 'ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ ಉಪ್ಪನೀರನುಂಬವನ ವಿಧಿಯಂತೆ ಆಯಿತ್ತೆನ್ನ ಮತಿ' ಎಂಬ ವಾಕ್ಯ ಗಮನಿಸಿದಾಗ ಬಸವಣ್ಣನಿಗೂ ಮೊದಲು ವಚನ ಸಾಹಿತ್ಯ ಸೃಷ್ಟಿಯಾಗಿತ್ತೆಂದು ಹೇಳಲಾಗುತ್ತದೆ. ಅದೇ ರೀತಿ ಜೇಡರ ದಾಸಿಮಯ್ಯ 'ನಿಮ್ಮ ಶರಣರ ಸೂಳ್ನುಡಿಯ ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥ' ಎಂಬ ವಚನ ಗಮನಿಸಿದಾಗ ಆತನಿಗೂ ಮೊದಲು ವಚನ ರಚನೆ ನಡೆದಿತ್ತು, ಅವನು ಸೂಳ್ನುಡಿ ಎಂದು ಕರೆಯುತ್ತಿದ್ದರೆಂದು ತಿಳಿಸಲಾಗಿದೆ. ಸೂಳ್ನುಡಿ ಎಂಬುದು ಸೂರುಳ್(ಪ್ರತಿಜ್ಞೆ)+ನುಡಿ=ಸೂರುಳ್ನುಡಿ>ಸೂಳ್ನುಡಿಯೆಂದೆ ನಿಷ್ಪತ್ತಿಯನ್ನು ಊಹಿಸಿದ್ದರು. ಮತ್ತೆ ಮುಂದುವರಿದು ಸೂಳ್ನುಡಿ ಶಬ್ದವನ್ನು ಸೂಡ+ನುಡಿ ಎಂದು ಬಿಡಿಸಬಹುದಾಗಿದೆ. ಸಾಹಿತ್ಯ ಪರಿಷತ್ತಿನ ನಿಘಂಟಿನಲ್ಲಿ "ಸೂಡ(ನಾ)–ಸಂಗೀತ ಹಾಡು ಗೀತ; ಸೂಡ ಎಂಬ ದೇಶಿ ಶಬ್ಧವು ಹಾಡನ್ನು ನಿರ್ದೇಶಿಸುತ್ತದೆ ಎಂದಿದ್ದಾರೆ. ಸೂಡು+ನುಡಿ=ಸೂಳ್ನುಡಿ. ಸೂಡು ಎಂದರೆ ಕಟ್ಟು, ಬೌದ್ಧ ಸಾಹಿತ್ಯವನ್ನು ಪಿಟಿಕಾ(ಪೆಟ್ಟಿಗೆ, ಬುಟ್ಟಿ) ಎಂದು ಕರೆದಂತೆ ಅನುಭಾವಿಗಳ ಈ ಸಾಹಿತ್ಯವನ್ನು ಕನ್ನಡಿಗರು 'ಸೂಡು'ಎಂದು ಕರೆದಿರುವ ಸಾಧ್ಯತೆ ಇದೆ ಎಂದು ಸೂಡುನುಡಿ> ಸೂಟ್ನುಡಿ> ಸೂಳ್ನುಡಿ ಪದ ಆಕಾರ ಪಡೆದಿದೆ ಎಂದಿದ್ದಾರೆ. ಸೂಟ್ ಎಂಬ ರಾಳ ಘಟಿತ ಶಬ್ದವು ಸೂಳ್ ಎಂದೂ ಕುಳಘಟಿತವಾಗಿಯೂ ಪ್ರಾಚೀನ ಕೋಶಗಳಲ್ಲಿ ಸಿಗುತ್ತದೆ ಎಂದು ಪದನಿಷ್ಪತ್ತಿ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ಸೂಳ್ನುಡಿ ಪ್ರಕಾರ ಕರ್ನಾಟಕದಲ್ಲಿ ನಾಥ ಸಂಪ್ರದಾಯದವರ ಕೊಡುಗೆಯಾಗಿರುವ ಸಾಧ್ಯತೆ ಇದೆ ಎಂದಿದ್ದಾರೆ. ಶರಣರ ವಚನಗಳಿಗೆ ಮೂಲವೇ 'ಸೂಳ್ನುಡಿ' ಎನ್ನುತ್ತ ಈ ವಚನ ಹೆಸರಿಂದ ಈ ಪ್ರಕಾರ ಸಮೃದ್ಧವಾಗಿ ಬೆಳೆಯಿತು. ವಚನ ಸಾಹಿತ್ಯ ಇತಿಹಾಸದಲ್ಲಿ ಸುವರ್ಣಯುಗವೆನಿಸುವ ರೀತಿಯಲ್ಲಿ ಪುರುಷ–ಸ್ತ್ರೀ ವಚನಕಾರರು ಈಗ ಕೃಷಿಗೈದರು. ಶರಣರು ತಮ್ಮ ಹೊಸ ಸಿದ್ಧಾಂತಕ್ಕೆ ಈ ಸಾಹಿತ್ಯ ಪ್ರಕಾರವನ್ನು ಮಾಧ್ಯಮ ಮಾಡಿಕೊಂಡ ಕಾರಣ ಸಿದ್ಧಾಂತ ಸಾಹಿತ್ಯವೆಂದು ಕರೆಯುವುದು ಲೇಸು. ಈ ಕಾರಣದಿಂದ ಪ್ರಾಚೀನ ಕಾಲದಲ್ಲಿ ವಚನ ಸಾಹಿತ್ಯವನ್ನು ವಚನಶಾಸ್ತ್ರವೆಂದು ಕರೆದರೆಂದು ತೋರುತ್ತದೆ ಎಂಬ ಅಭಿಪ್ರಾಯವನ್ನು ತಿಳಿಸಿದ್ದಾರೆ. ಈ ವಚನ ರಾಶಿಯಲ್ಲಿ ಸಾಮಾಜಿಕ, ತಾತ್ವಿಕ, ಆಧ್ಯಾತ್ಮಿಕ ಮೂರು ಮಾದರಿಗಳು ಗೋಚರಿಸುತ್ತವೆ. ಈ ಮೂರಕ್ಕೂ ಕ್ರಮವಾಗಿ ಬಸವಣ್ಣ–ಚೆನ್ನಬಸವಣ್ಣ–ಪ್ರಭುದೇವರು ಉದಾಹರಣೆಯಾಗಿದ್ದಾರೆ ಎಂದಿದ್ದಾರೆ. ಪ್ರೌಢದೇವರಾಯನ ಕಾಲದಲ್ಲಿ ವಚನಾಗಮ ವೆಂದು ವಚನ ಸಾಹಿತ್ಯವನ್ನು ಕರೆದರು ಎಂದು ಅದಕ್ಕೆ ಕಾರಣವನ್ನು ನೀಡಲು ಪ್ರಯತ್ನಿಸಿದ್ದಾರೆ.

ನಾಥ ಪಂಥೀಯರಲ್ಲಿ 'ಸೂಳ್ನುಡಿ'ಯಾಗಿ ಹುಟ್ಟಿ ಲಿಂಗಾಯತ ಧರ್ಮೀಯರಲ್ಲಿ ವಚನವಾಗಿ ಬೆಳೆದು ಬಳಿಕ ವೀರಶೈವ ಮತೀಯರ ಕೈಯಲ್ಲಿ ವಚನಾಗಮವಾಗಿ ಈ ಸಾಹಿತ್ಯ ಪ್ರಕಾರ ತಿರುವು ಪಡೆಯುತ್ತ ಬಂದಿತು. ಅಂದರೆ ಅವಧೂತರದಲ್ಲಿ ಹುಟ್ಟಿದ ಈ ಸಾಹಿತ್ಯ ಅನುಭಾವಿಗಳ ಕೈಯಲ್ಲಿ ಬೆಳೆದು ಆಚಾರ್ಯರ ಮುಷ್ಠಿಯಲ್ಲಿ ನರಳಿತೆನಿಸುತ್ತದೆ" ಎಂದು ವಿವರಣಾತ್ಮಕವಾಗಿ ಎಂ.ಎಂ.ಕಲಬುರ್ಗಿ ಅವರು ಚರ್ಚಿಸಲು ಪ್ರಯತ್ನಿಸಿದ್ದಾರೆ.

'ವಚನ ಗಾಯನ ಪ್ರಾಚೀನತೆ' ಎಂಬ ಲೇಖನದಲ್ಲಿ ವಚನ ಗಾಯನ ಬೆಳೆದುಬಂದ ಬಗೆಯನ್ನು ಕುರಿತು ಚರ್ಚಿಸಿದ್ದಾರೆ. ಗದ್ಯ ಮತ್ತು ಪದ್ಯ ಎರಡೂ ರೂಪದಲ್ಲೂ ಕಂಡುಬರುವ ವಿಶಿಷ್ಟ ಪ್ರಕಾರವಾಗಿದೆ. ಈ 'ವಚನ'ವನ್ನು ಸುಶ್ರಾವ್ಯವಾಗಿ ಹಾಡುವ ಪದ್ಧತಿ ಈಗಲೂ ರೂಢಿಯಲ್ಲಿದೆ. ೧೨ನೆಯ ಶತಮಾನದ ಶಿವಶರಣ ಶಿವಶರಣೆಯರಿಂದ ರಚನೆಯಾದ ವಚನಗಳನ್ನು ಓದಲು ಬರುವಂತೆ ಬರೆದಿರುವರೆ? ಹಾಡಲು ಬರುವಂತೆ ಬರೆದಿರುವರೆ ಎಂಬ ವಾದವಿದೆ. ಆದರೂ ಕೂಡ ಹಾಡಿದರೆ ಹಾಡಾಗುವ, ಓದಿದರೆ ಗದ್ಯವಾಗುವುದು ವಚನ ಸಾಹಿತ್ಯದ ವೈಶಿಷ್ಟ್ಯತೆ ಎಂದರೆ ತಪ್ಪಾಗಲಾರದು. ಈ ವಚನಗಳನ್ನು ಮೊದಲು ಹಾಡಲು ಪ್ರಾರಂಭಿಸಿದ್ದೆ ಗದುಗಿನ ಪಂಚಾಕ್ಷರಿ ಗವಾಯಿಗಳು. ಇವರು ೧೯೩೨ರಲ್ಲಿ ತಮ್ಮ ಶಿಷ್ಯರಿಂದ ಸೊಲ್ಲಾಪುರದಲ್ಲಿ ಧ್ವನಿಗೂಡಿಸಿ ಹಾಡಿಸಿದ ಮೊದಲ ವಚನ 'ವೇದಪ್ರಿಯ ಶಿವನೆಂಬರು.....' ಎಂಬುದು ತಿಳಿದುಬರುತ್ತದೆ ಎಂದು ಎಂ.ಎಂ.ಕಲಬುರ್ಗಿ ಅವರು ಪ್ರಸ್ತಾಪಿಸಿದ್ದಾರೆ. ಇವರ ನಂತರ ಧ್ವನಿಮುದ್ರಣ ಮಾಡಿದ್ದು ೧೯೩೪-೩೫ ರಲ್ಲಿ ಎಚ್.ಎಂ.ವಿ. ಕಂಪನಿಯವರು. ಬಸವಣ್ಣನವರ "ನೀನೊಲಿದರೆ ಕೊರಡು ಕೊನರುವುದಯ್ಯ....." ಎಂಬ ವಚನದಿಂದ. ನಂತರ ಫ.ಗು.ಹಳಕಟ್ಟಿ ಅವರು ವಿಜಾಪುರದ ಸಿದ್ಧೇಶ್ವರ ಹೈಸ್ಕೂಲಿನ ಸಂಗೀತ ಶಿಕ್ಷಕರಾದ ಶ್ರೀ ಪಿ.ವಿ.ಪಾಟೀಲ ಅವರ ಮೂಲಕ ೧೯೩೮ರಲ್ಲಿ ವಚನಗಳನ್ನು ಸಂಗೀತಕ್ಕೆ ಅಳವಡಿಸಿದರು. 'ದಯೆವಿಲ್ಲದ ಧರ್ಮ ವಾವುದಯ್ಯ....' (ರಾಗ-ಪಟದೀಪ್, ತಾಳ-ತ್ರಿತಾಳ), 'ಚಕೋರಂಗೆ ಚಂದ್ರಮನ.....'(ರಾಗ-ಭೈರವಿ, ತಾಳ-ದಾದರು) ಮುಂತಾದ ವಚನಗಳನ್ನು ಹಿಂದೂಸ್ಥಾನಿ ಪದ್ಧತಿಯಲ್ಲಿ ಎಂ.ಎ.ವಿ. ಕಂಪನಿ ಮೂಲಕ ಧ್ವನಿಮುದ್ರಣ ಕಾರ್ಯ ನಡೆದಿದೆ. ಹಾಗೆಯೇ ಫ.ಗು.ಹಳಕಟ್ಟಿ ಅವರು ೭೫ ವಚನಗಳ್ನು ಆಯ್ದುಕೊಂಡು 'ಸಂಗೀತದಲ್ಲಿ ಶಿವಶರಣರು" ಎಂಬ ಕೃತಿಯನ್ನು ಮೊಟ್ಟಮೊದಲ ಬಾರಿಗೆ ಪ್ರಕಟಿಸಿರುವುದನ್ನು ತಿಳಿಸಿದ್ದಾರೆ. ೧೯೫೦ರ ಆರಂಭದಲ್ಲಿ ಮಲ್ಲಿಕಾರ್ಜುನ ಮನ್ಸೂರ, ಬಸವನಾಳ, ಅ.ನ.ಕೃ ಅವರ ಸಾಮೂಹಿಕ ಪ್ರಯತ್ನದಿಂದ ವಚನಗಳ ಗಾಯನಕ್ಕೆ ವೇಗ ಪ್ರಾಪ್ತಿ ಆಯಿತು. ಇದು ವಚನ ಗಾಯನದ ಇತಿಹಾಸ ಎಂದು ಎಂ.ಎಂ.ಕಲಬುರ್ಗಿ ಅವರು ತಮ್ಮ ಆಳವಾದ ಅಧ್ಯಯನದಿಂದ ತಿಳಿಸಿದ್ದಾರೆ. ಜೊತೆಗೆ ೭೫ ವಚನಗಳನ್ನು ಆಯ್ದುಕೊಂಡು

'ಸಂಗೀತದಲ್ಲಿ ಶಿವಶರಣರು' ಎಂಬ ಕೃತಿಯನ್ನು ಮೊಟ್ಟಮೊದಲ ಬಾರಿಗೆ ಶ್ರೀ ಹಳಕಟ್ಟಿ ಅವರು ಪ್ರಕಟಿಸಿರುವುದನ್ನು ಎಂ.ಎಂ.ಕಲಬುರ್ಗಿ ಅವರು ತಿಳಿಸಿದ್ದಾರೆ.

ಸಾಮಾನ್ಯವಾಗಿ 'ವಚನ' ಪ್ರಕಾರ ಹಾಡುಗಬ್ಬ ಮತ್ತು ಓದುಗಬ್ಬವಾಗಿದ್ದರೂ ಎಲ್ಲಾ ವಚನಗಳನ್ನು ಹಾಡಲು ಬರುವುದಿಲ್ಲ. ಯಾವ ವಚನಗಳಲ್ಲಿ ಪ್ರಾಸ ಲಯದಿಂದ ಕೂಡಿರುತ್ತವೋ ಅವುಗಳನ್ನು ಮಾತ್ರ ಹಾಡಲು ಬರುತ್ತದೆ. "ಹಾಡಲು ಬರುವ ವಚನಗಳನ್ನು ಗಮನಿಸಿಯೇ ಶಿ.ಶಿ.ಬಸವನಾಳರು ವಚನಗಳಲ್ಲಿ ಗದ್ಯದ ನಿರರ್ಗಳತೆ ಇಲ್ಲದಿದ್ದರೂ ಅದರ ಸರಳತೆ ಇದೆ. ಪದ್ಯದ ಕ್ರಮಬದ್ಧ ಛಂದೋಗತಿಗೆ ಬಹು ಸಮೀಪವರ್ತಿ ಅಗಿರುವುದರಿಂದ ಅಂತಹ ವಚನಗಳನ್ನು ಹೆಚ್ಚು ವ್ಯತ್ಯಾಸ ಮಾಡದೆ ಸರಾಗವಾಗಿ ಹಾಡಲು ಅನುಕೂಲವಾಗುವುದು ಕಂಡುಬರುತ್ತದೆ ಎಂದು ಹೇಳಿದ್ದಾರೆ."[೪] ಬಸವನಾಳರು ಬಸವಣ್ಣನವರ ಷಟ್‌ಸ್ಥಲ ವಚನಗಳು ಸಂಪುಟದಲ್ಲಿ ಹೇಳಿರುವ ಅಂಶವನ್ನು ಎಂ.ಎಂ.ಕಲಬುರ್ಗಿ ಅವರು ಒಪ್ಪಿಕೊಂಡಂತಿದೆ. ಸಿದ್ಧರಾಮ ಚರಿತೆಯಲ್ಲಿ ಕಂಡುಬರುವ ಹಲವು ಪದ್ಯಗಳಲ್ಲಿ ಕೆಲವೊಂದು ಲಯಬದ್ಧ ವಚನಗಳು ಅಂತರ್ಗತ ಗೊಂಡಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಶೋಧಿಸುವ ಮೂಲಕ ಅವುಗಳನ್ನು ಉಲ್ಲೇಖ ಮಾಡಿದ್ದಾರೆ. ಅವುಗಳನ್ನು ನೋಡುವುದಾದರೆ,

"೧. ಹಾಡಿದನೊಂದು ಗುರುವಚನ (೩–೩೬)

೨. ಹಾಡಿದ ಗೀತವ (೪–೨೮)

೩. ಹಾಡಿದನು ನೋಳ್ಪಾಗಳಂದು (೪–೨೯)

೪. ಗುರು ವಚನಮಂ ಹಾಡುತಿರಲು (೪–೭೩)

೫. ಹಾಡಿದಂ ಗೀತವ (೬–೬)

೭. ಕೃಪೆವೆರಸಿ ಹಾಡಿ (೭–೩೫)

೮. ಶುದ್ಧರಾಗಂ ಗೀತ ರವ (೭–೪೬)

೯. ಹಾಡುತಿಹ ಗುರು ನಿರೂಪಿತ ವಚನಂಗಳಿಂ (೮–೭೯)

೧೦. ವಚನಾಧ್ಯಾಯ ಸ್ತೋತ್ರಪಠನಂಗಳಿಂದ... ಶರಣಾಳಿ ಹಾಡುತ (೮–೯೨)

೧೧. ವಚನ ಹಾಡಿ (೯–೨೦)

೧೨. ವಚನ ದಿಗಂತದೊಳು ಹಾಡುತಿರೆ (೯–೨೭)

೧೩. ಹಾಡಿದನು ಗುರುವಚನವ (೯–೪೨)

೧೪. ಕರುವಾಗಿ ಹಾಡಿದೆ ಗೀತ (೯–೫೮)"[೫]

ಈ ರೀತಿಯ ಸಂಗೀತಕ್ಕೆ ಅಳವಡುವ ವಚನಗಳ ಉಲ್ಲೇಖಗಳನ್ನು ಹರಿಹರನ ರಗಳೆಗಳಲ್ಲಿ, ಪದ್ಮಣಾಂಕನ ಪದ್ಮರಾಜ ಪುರಾಣಗಳಲ್ಲಿ ಗುರುರಾಜನ ಸಂಸ್ಕೃತ ಪಂಡಿತರಾಧ್ಯ ಚರಿತೆಗಳಲ್ಲಿಲೂ ಕಂಡುಬರುತ್ತವೆ. ಇದು ಎಲ್ಲಾ ವಿದ್ವಾಂಸರಿಗೂ ಗೊತ್ತಿರುವ ವಿಷಯ ಎಂದು ಎಂ.ಎಂ.ಕಲಬುರ್ಗಿ ಅವರು ಹೇಳಿದ್ದಾರೆ. ಕೋಲಶಾಂತಯ್ಯನಿಂದ ಆರಂಭವಾಗುವ ಸಕಲ ಪುರಾತನರ ವಚನಗಳ ಕಟ್ಟನ್ನು ಹೋಲುವ ಒಂದು ತಾಳೆಗರಿ ಪ್ರತಿ ಮದ್ರಾಸ್ ಗವರ್ನಮೆಂಟ್ ಮ್ಯಾನ್ಯುಸ್ಕ್ರಿಪ್ಟ್ ಲೈಬ್ರರಿಯಲ್ಲಿ ಇರುವುದನ್ನು ಎಂ.ಎಂ.ಕಲಬುರ್ಗಿ ಅವರು ಗಮನಿಸಿರುವುದಾಗಿ ಹೇಳಿದ್ದಾರೆ. ಇದು ಅಪೂರ್ಣವಾಗಿರುವುದನ್ನು ಗುರುತಿಸಿ ವಚನಕಾರರ ಹೆಸರನ್ನು ಹೇಳುತ್ತ ಹಾಗೂ ಕೆಲವು ವಚನಗಳನ್ನು ಕುರಿತು ಚರ್ಚಿಸಿದ್ದಾರೆ. ಹಸ್ತಪ್ರತಿಸೂಚಿ–೪, ನಂ.೬೦೦ರ ಕೊನೆಯಲ್ಲಿ ಬಸವಣ್ಣನ ವಚನಗಳನ್ನು ಉದ್ಧರಿಸಿರುವುದನ್ನು ಹೇಳಿದ್ದಾರೆ. 'ರಾಗ–ಮಲಹರಿ' ಎಂಬುದು ಎಂ.ಎಂ.ಕಲಬುರ್ಗಿ ಅವರನ್ನು ಗಮನ ಸೆಳೆದಿದೆ. "ಪ್ರಾಚೀನ ಕಾಲದಲ್ಲಿ ವಚನಗಳನ್ನು ರಾಗಬದ್ಧವಾಗಿ ಹಾಡುತ್ತಿದ್ದರೆಂದೂ, ಹಸ್ತಪ್ರತಿಗಳಲ್ಲಿ ರಾಗ ನಮೂದಿಸಿ ದಾಖಲಿಸುತ್ತಿದ್ದರೆಂದೂ ಇದರಿಂದ ವ್ಯಕ್ತವಾಗುತ್ತದೆ. ಈ ಹಸ್ತಪ್ರತಿಯನ್ನು ಪತ್ತೆ ಹಚ್ಚಿ ಎಲ್ಲ ವಚನಗಳನ್ನು ಪರಿಶೀಲಿಸುವುದು ಅಗತ್ಯವಿದೆ ಎಂದು ಇನ್ನೂ ಕೆಲವು ವಚನಗಳಿಗೆ ಇಲ್ಲಿ ರಾಗ ಬರೆಯಲಾಗಿದೆ. ಪ್ರಾಚೀನ ಕಾಲದ ವಚನ ಸಂವಹನಕ್ಕೆ ಸಂಬಂಧಪಟ್ಟಂತೆ ಹೊಸ ಆಧಾರ ಲಭ್ಯವಾಗುತ್ತದೆ"[೬] ಎಂದಿದ್ದಾರೆ.

ವಚನಕಾರರು ಭಾಷೆ, ಕನ್ನಡ ಭಾಷೆ ಮತ್ತು ವಚನ ಭಾಷೆ ಎಂಬ ಲೇಖನದಲ್ಲಿ ಶರಣರ ಭಾಷೆಯ ಬಗೆಗೆ ತಳೆದ ನಿಲುವು ಹಾಗೂ ವಿಶಿಷ್ಟ ಪ್ರಯೋಗಗಳನ್ನು ವಚನಗಳ ನಿದರ್ಶನಗಳೊಂದಿಗೆ ವಿಶ್ಲೇಷಿಸಿದ್ದಾರೆ. ಭಾಷೆಯಲ್ಲಿ ಸತ್ಯ ಮತ್ತು ಸುಳ್ಳು ಎರಡು ಹುಟ್ಟುತ್ತದೆ. ಆದರೆ ಎಲ್ಲ ಮಹಾತ್ಮರಂತೆ ವಚನಕಾರರು 'ಹುಸಿಯ ನುಡಿಯಲು ಬೇಡ' ಎಂದಿದ್ದಾರೆ. ಸತ್ಯಕ್ಕೆ ಒಂದೇ ಮುಖ, ಸುಳ್ಳಿಗೆ ಅನೇಕ ಮುಖ ಎಂಬುದನ್ನು, ಸತ್ಯವನ್ನು ಸರಳ ರೀತಿಗೆ ಸುಳ್ಳನ್ನು ವಕ್ರರೀತಿಗೆ ಎಂ.ಎಂ.ಕಲಬುರ್ಗಿ ಅವರು ನಿರ್ದೇಶಿಸಿರುವುದು ಸರಿಯಾಗಿಯೇ ಇದೆ. ಸಾಮಾಜಿಕರಲ್ಲಿ ಬಳಕೆಯಾಗುವ ಈ ಸುಳ್ಳಿನ ಪ್ರಮಾಣವನ್ನು ಎಂ.ಎಂ.ಕಲಬುರ್ಗಿ ಅವರು ಚೆನ್ನಬಸವಣ್ಣನವರ ವಚನಗಳ ಮೂಲಕ ಸ್ಪಷ್ಟಪಡಿಸಿದ್ದಾರೆ.

"ಹುಸಿ ಅಂಕುರಿಸಿತ್ತು ಹೊಲೆಯನಲ್ಲಿ.....
ಹುಸಿ–ಹಣ್ಣಾಗಿ ತೊಟ್ಟು ಬಿಟ್ಟಿತ್ತು ಅರಸನಲ್ಲಿ"

ಎಂಬ ಹನ್ನೊಂದು ವಾಕ್ಯದಲ್ಲಿ ಹುಸಿ ಯಾವ ರೀತಿ ಅಡಗಿರುತ್ತದೆ ಎಂಬುದನ್ನು ತಿಳಿಸಿದರೆ, ಹೊಲೆಯನಲ್ಲಿ ಹುಸಿ ೧೦ರಲ್ಲಿ ೧ರಷ್ಟು ಇದ್ದರೆ, ಸೂಳೆಯಲ್ಲಿ ೧೦ಕ್ಕೆ ೧೦ರಷ್ಟು ಆದರೆ

ಅರಸನಲ್ಲಿ ೧೧ಕ್ಕೆ ೧೧ರಷ್ಟು ಹುಸಿ ಉತ್ಕೃಷ್ಟದ ಮುಖವಾಡ ಗೋಚರವಾಗುತ್ತದೆ ಎಂಬುದನ್ನು ಈ ವಚನ ತಿಳಿಸುತ್ತದೆ. ಇಲ್ಲಿ ಎಂ.ಎಂ.ಕಲಬುರ್ಗಿ ಅವರ ಸತ್ಯಪರವಾದ ನಿಲುವು ಎದ್ದು ಕಾಣುತ್ತದೆ. ಭಾಷೆ ಪಾವಿತ್ರ್ಯತೆ ಕುರಿತಂತೆ ಎಂ.ಎಂ.ಕಲಬುರ್ಗಿ ಅವರು "ನುಡಿದರೆ ಮುತ್ತಿನ ಹಾರದಂತೆ ಇರಬೇಕು...." ಎಂಬ ಮಾತಿನಲ್ಲಿ ನುಡಿ ಮುತ್ತಿನಷ್ಟು ಅಮೂಲ್ಯವಾಗಿರಬೇಕೆಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ.

ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ ಎಂಬ ಸಿದ್ಧಾಂತವನ್ನು ನಂಬಿದ ಶರಣರು ಬದುಕಿನ ಎಲ್ಲಾ ಕ್ಷೇತ್ರದಲ್ಲಿ ಕನ್ನಡ ಭಾಷಾ ಕ್ಷೇತ್ರವನ್ನು ಸ್ಥಗಿತತೆಯಿಂದ ಮುಕ್ತವಾಗಿಸುವ ಹೋರಾಟವನ್ನು ಕೈಗೆತ್ತಿಕೊಂಡರು.

"ಕಲ್ಲಿಯ ಹಾಕಿ, ನೆಲ್ಲವ ತಳೆದು
ಗುಬ್ಬಿಯ ಸಿಕ್ಕಿಸುವ ಕಳ್ಳನಂತೆ
ವಾಗದ್ವೈತವ ಕಲಿತು
ಸಂಸ್ಕೃತದ ಮಾತಿನ ಪಸರದ ಮುಂದಿಟ್ಟುಕೊಂಡು
ಮತ್ಸ್ಯನ ವಕ್ತ್ರದಲ್ಲಿ ಗ್ರಾಸವ ಹಾಕುವನಂತೆ
ಅದೇತರ ನುಡಿ? ಮಾತಿನ ಮತೆ, ಆತುರವೈರಿ ಮಾರೇಶ್ವರ"[೭]

ಈ ವಚನ ಸಂವಹನ ತೊಡಕಿನ ನೆಲೆಯಲ್ಲಿ ಶೋಷಣೆಯ ಮಾಧ್ಯಮ ನೆಲೆಯಲ್ಲಿ ಸಂಸ್ಕೃತವನ್ನು ನಿರಾಕರಿಸುತ್ತದೆ. ವೈಜ್ಞಾನಿಕವಾಗಿ ಸಂಸ್ಕೃತದ ದಾಳಿಯನ್ನು ನಿರಾಕರಿಸುವ ಅಪರೂಪದ ವಚನವಿದು ಎಂದು ಕನ್ನಡದ ಮೌಲ್ಯವನ್ನು ಎಂ.ಎಂ.ಕಲಬುರ್ಗಿ ಅವರು ಎತ್ತಿ ಹಿಡಿಯುವ ಪ್ರಯತ್ನ ಮಾಡಿದ್ದಾರೆ. ಕನ್ನಡ ಭಾಷೆಯನ್ನು ವಚನ ನಿರ್ವಚನಕ್ಕೆ ಸಮರ್ಥವಾಗಿ ಬಳಸಿಕೊಂಡ ಶರಣರ ಭಾಷಿಕ ನಿಲುವುಗಳ ಲಕ್ಷಣಗಳನ್ನು ಎಂ.ಎಂ.ಕಲಬುರ್ಗಿ ಅವರು ೮ ಹಂತಗಳಲ್ಲಿ ವಿವರಿಸಿದ್ದಾರೆ. ವ್ಯಕ್ತ ಪ್ರಧಾನ, ವಾಕ್ಯದ ಬಹುಭಾಷೆಗಳ ಬಳಕೆ, ವಾಕ್ಯದಲ್ಲಿ ವಿನ್ಯಾಸದ ಅನೇಕ ಸಾಧ್ಯತೆಗಳು, ವಾಕ್ಯದಲ್ಲಿ ಮಾತಿನ ಎಲ್ಲ ಕಾಕುಗಳ ಉಳಿಸಿಕೊಳ್ಳುವಿಕೆ, ವಾಕ್ಯದ ಭಾಗಗಳಲ್ಲಿ ಸಮಪ್ರಮಾಣ, ವಾಕ್ಯಗಳಲ್ಲಿ ಪುನರುಕ್ತತೆ, ಲಯಾತ್ಮಕ ವಾಕ್ಯಗಳ ರಚನೆ, ಹಿತಮಿತ ಪ್ರಾಸಯುಕ್ತ ವಾಕ್ಯರಚನೆ ಹೀಗೆ ಎಂ.ಎಂ.ಕಲಬುರ್ಗಿ ಅವರು ಶರಣರ ಬಗೆಗಿನ ವಚನಕಾರರ ಭಾಷೆ, ಕನ್ನಡ ಭಾಷೆ ಹಾಗೂ ವಚನ ಭಾಷೆ ಕುರಿತಂತೆ ಸುದೀರ್ಘವಾಗಿ ಈ ಲೇಖನದಲ್ಲಿ ನಮ್ಮೆದುರಿಗೆ ಬಿಚ್ಚಿಡಲು ಪ್ರಯತ್ನ ಮಾಡಿದ್ದಾರೆ. ಇದರಿಂದ ಅವರಿಗಿದ್ದ ಕನ್ನಡಪರ ವಚನಪರ ಧೋರಣೆ ಎದ್ದು ಕಾಣುತ್ತದೆ.

'ದೇವಾಲಯ ಸಂಸ್ಕೃತಿ ನಿರಾಕರಣೆ' ಎಂಬ ಲೇಖನದಲ್ಲಿ ಎಂ.ಎಂ.ಕಲಬುರ್ಗಿ ಅವರ ದೇವಾಲಯ ನಿರಾಕರಣೆಗೆ ಸಂಬಂಧಿಸಿದ ಬಹುಮುಖ್ಯ ಸಿದ್ಧಾಂತವನ್ನು ಪ್ರತಿಪಾದಿಸಲು ಪ್ರಯತ್ನಿಸಿದ್ದಾರೆ. ಗ್ರಾಮೀಣರಲ್ಲಿ ಗುಡಿಗಳ ವಿವರ ಕಾಣಬೇಕಾದರೆ ಶರಣರ ವಚನಗಳನ್ನು ನೋಡಬೇಕಾಗುತ್ತದೆ ಎಂದು ಅವುಗಳ ಮೂಲಕ ದೇವರ ಬಗೆಗಿನ ತಾತ್ಸಾರಗಳನ್ನು ನೀಡಲು ಪ್ರಯತ್ನಿಸಿದ್ದಾರೆ.

"ಮಡಕೆ ದೈವ ಮೊರದೈವ ಬೀದಿಯ ಕಲ್ಲುದೈವ ಕಾಣಿರೋ
ಹಣೆಗೆ ದೈವ, ಬಿಲ್ಲನಾರಿದೈವ ಕಾಣಿರೋ
ಕೊಳಗ ದೈವ, ಗಿಣ್ಣಿಲು ದೈವ ಕಾಣಿರೋ
ದೈವದೈವವೆಂದು ಕಾಲಿಡಲು ಇಂಬಿಲ್ಲ
ದೇವನೊಬ್ಬನೆ ಕೂಡಲಸಂಗಮದೇವ"[೮]

ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಮಾಹೇಶ್ವರನ ಜ್ಞಾನಿಸ್ಥಲದಿಂದ ಆಯ್ದು ಕೊಂಡಿದ್ದಾರೆ.

ಈ ವಚನದಲ್ಲಿ ಅಂದಿನ ಕಾಲದಲ್ಲಿ ಗ್ರಾಮೀಣ ಜನರು ಪೂಜಿಸುತ್ತಿದ್ದ ದೇವರ ಕಲ್ಪನೆ ನಿರೂಪಿತವಾಗಿದೆ. ಆಹಾರದ ಮಡಕೆ, ಹಸನು ಮಾಡುವ ಮೊರ, ಬೀದಿಯಲ್ಲಿ ಬಿದ್ದ ಕಲ್ಲು, ನೇಕಾರರು ಉಪಯೋಗಿಸುವ ಹಣೆಗೆ, ಬಿಲ್ಲ ಹೆದೆ, ಅಳತೆ ಮಾಡುವ ಕೊಳಗ, ಸಣ್ಣ ಗಿಂಡಿ, ಇತ್ಯಾದಿಗಳೂ ಅಂದು ದೇವರಾಗಿ ಬೆಳೆದಿದ್ದವು. ಮನೆಯಲ್ಲಿ ಅವು ತುಂಬಿ ತುಳುಕುತ್ತಿದ್ದವು ಎಂಬುದನ್ನು ಕಾಲಿಡಲು ಇಂಬಿಲ್ಲ ಎಂದು ಬಳಸಿರುವುದು, ಈಗಲೂ ಕೂಡ ಹಳ್ಳಿ ಪ್ರದೇಶದಲ್ಲಿ ಈ ಸಂಪ್ರದಾಯ ಉಳಿದುಕೊಂಡು ಬಂದಿದೆ. ಪ್ರಸ್ತುತ ಆಧುನಿಕ ತಂತ್ರಜ್ಞಾನದಿಂದಾಗಿ ಸಮಾಜದಲ್ಲಿ ಇವುಗಳ ಬದಲು ಬೇರೆ ವಸ್ತುಗಳ ಬಳಕೆ ರೂಢಿಯಲ್ಲಿದೆ. ಆದರೂ ಅವುಗಳನ್ನು ಹಬ್ಬಹರಿದಿನಗಳಲ್ಲಿ ಪೂಜನೀಯ ಭಾವನೆಯಲ್ಲಿ ಕಾಣುವ ವಾಡಿಕೆ ಈಗಲೂ ರೂಢಿಯಲ್ಲಿದೆ. 'ಕಾಲಿಡಲು ಇಂಬಿಲ್ಲ' ಎಂಬ ಮಾತನ್ನು ಇಲ್ಲಿ ಎಂ.ಎಂ.ಕಲಬುರ್ಗಿ ಅವರು ಅವು ದೇವರೇ ಅಲ್ಲವೆಂಬ ತಾತ್ಸಾರ ತಮಗಿರುವುದನ್ನು ಸ್ಪಷ್ಟಪಡಿಸುತ್ತದೆ ಎಂಬ ಮಾತು ಅವು ಪೂಜನೀಯವಾಗಿರಲಿಲ್ಲ ಎಂಬ ಮಾತು ವ್ಯಕ್ತವಾಗಿದೆ. ಆದರೆ ಕಾಯಕವೇ ಕೈಲಾಸ ಎಂಬ ಬಸವಣ್ಣನ ಮಾತಿನಂತೆ ಕಾಯಕ ಜೀವಿಗಳು ತಾವು ಮಾಡುವ ಕೆಲಸಗಳಲ್ಲಿ ತಾವು ಬಳಸುವ ವಸ್ತುಗಳನ್ನೇ ದೇವರೆಂದು ಪರಿಗಣಿಸಿದ್ದರು ಎಂಬ ಅಂಶ ಇಲ್ಲಿ ವ್ಯಕ್ತವಾಗುತ್ತದೆ.

ಇಲ್ಲಿ 'ಕಾಲಿಡಲು ಇಂಬಿಲ್ಲ' ಎಂಬ ಮಾತು ಅವು ದೇವರೇ ಅಲ್ಲ ಎಂಬ ತಾತ್ಸಾರ ಮನೋಭಾವಕ್ಕಿಂತ ದೇವರನ್ನು ತಮ್ಮ ಕೆಲಸದಲ್ಲಿ ಹಾಗೂ ಕೆಲಸಕ್ಕೆ ಬಳಸುವ ಸಾಮಗ್ರಿಗಳಲ್ಲಿ

ಕಾಣುತ್ತ, ಆ ದೇವರ ಕಲ್ಪನೆಯನ್ನು ಮನಸ್ಸಿನ ಭಾವನೆಗಳಲ್ಲಿ ದೇವರ ಭಾವನೆ ಅಡಗಿರುವುದನ್ನು ನಾವು ಗಮನಿಸಬಹುದಾಗಿದೆ. ಪ್ರಸ್ತುತ ದಿನಮಾನಗಳಲ್ಲಿ ಈ ಅಂಶಗಳನ್ನು ಬುಡಕಟ್ಟು ಸಮಾಜದಲ್ಲಿ ಹಾಗೂ ಹಳ್ಳಿ ಪ್ರದೇಶಗಳಲ್ಲಿ ಹೆಚ್ಚಾಗಿ ಕಾಣಬಹುದಾಗಿದೆ.

"ಹಾಳು ಮೊರಡಿಗಳಲ್ಲಿ ಊರದಾರಿಗಳಲ್ಲಿ
ಕೆರೆ ಬಾವಿ ಹೂಗಿಡ ಮರಗಳಲ್ಲಿ
ಗ್ರಾಮಮಧ್ಯದಲ್ಲಿ ಜಲಪಥ ಪಟ್ಟಣ ಪ್ರದೇಶದಲ್ಲಿ
ಹಿರಿಮೂಲದ ಪುರದಲ್ಲಿ ಮನೆಮಾಡಿ......"[೯]

ಈ ವಚನದಲ್ಲಿ ದೇವತೆಗಳ ನೆಲೆಗಿಂತ ಸ್ಥಳಗಳನ್ನು ಸೂಚಿಸಿರುವುದನ್ನು ಗಮನಿಸಬಹುದಾಗಿದೆ. ಕೊರಳಲ್ಲಿ, ನೆಲದಲ್ಲಿ ಅಷ್ಟೇ ಅಲ್ಲದೇ ದೇವರು ಮೈಮೇಲೆಯೂ ನೆಲೆ ಪಡೆದಿರುವುದನ್ನು ಪ್ರಸ್ತುತ ದಿನಮಾನಗಳಲ್ಲೂ ಆ ನಂಬಿಕೆಗಳು ಕಂಡುಬರುತ್ತವೆ. ಇಷ್ಟೇ ಅಲ್ಲದೆ ಗ್ರಾಮೀಣ ದೇವರುಗಳಿಗೆ ಅರ್ಪಿಸುವ ವಸ್ತುಗಳನ್ನು ಕುರಿತ ಒಂದು ವಚನವನ್ನು ಚರ್ಚೆಗೊಳಪಡಿಸಿದ್ದಾರೆ.

"ಕರೆವೆಮ್ಮೆಯ, ಹಸುಗೂಸು, ಉಸುರು ಬಾಣಂತಿ
ಕುಮಾರಿ, ಕೊಡಗೂಸೆಂಬರ ಹಿಡಿದುತಿಂಬ, ತಿರಿದುಂಬ
ಮಾರಯ್ಯ, ಬೀರಯ್ಯ, ಕೇಚರ ಗಾವಿಲ
ಅಂತರ ಟೆಂತರ ಕಾಳಯ್ಯ, ಬೀರಯ್ಯ ಧೂಳಯ್ಯ ಕೇತಯ್ಯ"[೧೦]

ಈ ದೇವತೆಗಳಿಗೆ ಜನರು ಅರ್ಪಿಸುತ್ತಿದ್ದ ವಸ್ತುಗಳು ಎಂದು ಹೇಳುತ್ತ ಕೊರಲು, ಬೆರಳು, ಮಡುಹು, ಮುಂಬಲ್ಲುಗಳನ್ನು ಅರ್ಪಿಸುತ್ತಿದ್ದರು ಎಂದಿದ್ದಾರೆ. ಜೊತೆಗೆ ಸಿಡಿ ಆಡುವ, ಕೆಂಡ ತುಳಿಯುವ ಮೊದಲಾದ ಆಚರಣೆಗಳು ರೂಢಿಯಲ್ಲಿದ್ದುದರ ಬಗ್ಗೆ ಚರ್ಚಿಸಿದ್ದಾರೆ. ಈ ರೀತಿಯ ಆಚರಣೆಗಳು ಪ್ರಸ್ತುತ ದಿನಮಾನಗಳಲ್ಲೂ ನಡೆಯುತ್ತಿರುವುದು ವಿಪರ್ಯಾಸದ ಸಂಗತಿ ಎಂದರೆ ತಪ್ಪಾಗಲಾರದು.

ಹೀಗೆ ಜನರ ಮೂಢನಂಬಿಕೆಗಳು ಜಾನಪದ ದೇವರ ಸುತ್ತ ಬೆಳೆದುನಿಂತಿದ್ದವು. ಹಾಗೆಯೇ ಅರ್ಚಕನಿಲ್ಲದಿದ್ದರೂ ಅಜ್ಞಾನ ಜನತೆ ಸ್ವಯಂ ಘೋಷಣೆಯಿಂದ ನಿರ್ಮಾಣ ಮಾಡಿಕೊಂಡಿದ್ದರೆಂದು ಬಂದಿದ್ದಾರೆ. ಈ ರೀತಿಯ ಆಚರಣೆಗಳು ಪ್ರಸ್ತುತದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಅತಿ ಹೆಚ್ಚಾಗಿ ಕಂಡುಬಂದರೂ ನಗರಪ್ರದೇಶಗಳಲ್ಲೂ ಸ್ವಲ್ಪಮಟ್ಟಿಗೆ ಕಂಡುಬರುತ್ತಲಿರುವುದು ವಿಪರ್ಯಾಸದ ಸಂಗತಿಯಾಗಿದೆ. ಸಾಮಾನ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ದೇವತೆಗಳ ದೇವಾಲಯವೇ ಹೆಚ್ಚಾಗಿ ಕಂಡುಬರುತ್ತವೆ. ಎಷ್ಟೋ ದೇವಾಲಯಗಳಲ್ಲಿ ಅರ್ಚಕರ ಕೊರತೆ ಉಂಟಾಗಿ ಪೂಜೆ ಪುನಸ್ಕಾರಗಳು ನಿಲ್ಲಲು ಕಾರಣ ಅರ್ಚಕರ ಉತ್ಪನ್ನದ ಕೊರತೆ. ಉತ್ಪನ್ನಕ್ಕಾಗಿ

ನಗರ ಪ್ರದೇಶಗಳಿಗೆ ವಲಸೆ ಹೋಗಿರುವುದೇ ಕಾರಣ. "ಅರ್ಚಕರಿಗೆ ದೇವರ ಮೇಲೆ ಭಕ್ತಿ ಮುಖ್ಯವಲ್ಲ ಉತ್ಪನ್ನದ ಮೇಲಿನ ಆಸಕ್ತಿ ಮುಖ್ಯವೆಂದು ಸ್ಪಷ್ಟವಾಗುತ್ತದೆ"[೧೧] ಎಂದು ಎಂ.ಎಂ.ಕಲಬುರ್ಗಿ ಅವರ ಮಾತಿನಲ್ಲಿ ನಿಜಾಂಶವಡಗಿರುವುದನ್ನು ಗಮನಿಸಬಹುದಾಗಿದೆ. ಒಟ್ಟಾರೆಯಾಗಿ ಈ ಲೇಖನದಲ್ಲಿ ದೇವರ ಹೆಸರಲ್ಲಿ ನಡೆಯುವ ಆಚರಣೆಗಳನ್ನು ನಿರಾಕರಿಸುವುದನ್ನು ಚರ್ಚಿಸುತ್ತ ಜೊತೆಗೆ ಅರ್ಚಕರು ಕೂಡ ದೇವರ ಮೇಲಿನ ಭಕ್ತಿಗಿಂತ ಅವರ ಜೀವನ ಸಾಗಿಸಲು ಬೇಕಾದ ಉತ್ಪನ್ನದ ಕಡೆಗೆ ಗಮನ ಇರುವುದನ್ನು ಹೇಳಿದ್ದಾರೆ. ಇಲ್ಲಿ ದೇವರ ನಿರಾಕರಣೆಯ ಅಂಶಗಳು ಎದ್ದುತೋರುವಂತೆ ಎಂ.ಎಂ.ಕಲಬುರ್ಗಿ ಅವರು ಅರ್ಥೈಸಲು ಪ್ರಯತ್ನಿಸಿದ್ದಾರೆ.

'ಇಷ್ಟಲಿಂಗ' ಲೇಖನದಲ್ಲಿ ಇಷ್ಟಲಿಂಗ 'ವೀರಶೈವರ ಕೇಂದ್ರತತ್ವ'. ಈ ತತ್ವವನ್ನು ಕುರಿತಂತೆ ಸ್ಪಷ್ಟ ಚಿತ್ರಣವನ್ನು ಕಲ್ಪಿಸಿಕೊಡುವಲ್ಲಿ ವಿದ್ವಾಂಸರು ಶ್ರಮಿಸಿದರು ಸಂದೇಹಗಳಿಂದ ಕೂಡಿವೆ. ಅದನ್ನು ಗಮನಿಸಿದ ಎಂ.ಎಂ.ಕಲಬುರ್ಗಿ ಅವರು ಇಷ್ಟಲಿಂಗ ಕುರಿತಂತೆ ಹಲವಾರು ಸಂದೇಹಗಳನ್ನು ದೂರವಿಡುವ ಹಿನ್ನೆಲೆಯಲ್ಲಿ ಈ ಲೇಖನದಲ್ಲಿ ಚರ್ಚಿಸಿದ್ದಾರೆ. ಇಷ್ಟಲಿಂಗ ಶಬ್ದದ ಮೂಲ ಅರ್ಥ ಮತ್ತು ಆ ಅರ್ಥದ ವಿಕಾಸಗಳನ್ನು ಬೇರೆ ರೀತಿಯಲ್ಲಿ ಶೋಧಿಸಲು ಮನಸ್ಸು ಮಾಡಿರುವುದಾಗಿ ತಾವೇ ಸ್ವತಃ ಹೇಳಿಕೊಂಡಿದ್ದಾರೆ. "೧. ಇಷ್ಟಾರ್ಥವನ್ನು ಪೂರೈಸುವ ಲಿಂಗವೇ ಇಷ್ಟಲಿಂಗವೆಂದು ಸಾಮಾನ್ಯವಾಗಿ ಹೇಳುತ್ತಾರೆ. ಆದರೆ ಸ್ಥಾವರಲಿಂಗವೂ ತನ್ನ ಭಕ್ತಿಗೆ ಇಷ್ಟಾರ್ಥವನ್ನು ಕೊಡುವುದರಿಂದ ಅದೂ ಅವರ ಇಷ್ಟಲಿಂಗವೇ ಎನಿಸಿ, ವೀರಶೈವರ 'ಇಷ್ಟಲಿಂಗ' ಪದಕ್ಕೆ ಅರ್ಥನಿರ್ದಿಷ್ಟತೆ ಇಲ್ಲದೆ ಹೋಗುತ್ತದೆ. ೨. ಇಷ್ಟ=ಪೂಜೆ, ಪೂಜಿಸಲ್ಪಡುವುದು ಇಷ್ಟ. ಈ ಲಿಂಗವೇ ಇಷ್ಟಲಿಂಗವೆಂದು ಮಗ್ಗೆಯ ಮಾಯಿದೇವ ವಿವರಣೆ ನೀಡುತ್ತಾನೆ. ಆದರೆ ಇಂಥ ಅಪರಿಚಿತ ಶಬ್ದಾರ್ಥವನ್ನವಲಂಬಿಸಿ ಒಂದು ಜನಪ್ರಿಯ ತತ್ವದ ಹೆಸರು ರೂಢಿಗೊಳ್ಳುವುದು ಅಸಂಭವ. ೩. ಭಾವಲಿಂಗ, ಪ್ರಾಣಲಿಂಗಗಳಲ್ಲಿಯ ಭಾವ, ಪ್ರಾಣ ಶಬ್ದಗಳು ದೇಹದ ಭಾಗವನ್ನು ಸೂಚಿಸುವಂತೆ ಇಷ್ಟಲಿಂಗದಲ್ಲಿಯ ಇಷ್ಟವೆಂಬುದು ದೇಹದ ಭಾಗವನ್ನು ಸೂಚಿಸದೆ ಪ್ರತ್ಯೇಕ ನಿಲ್ಲುತ್ತದೆ. ಇಂಥ ಸಂದರ್ಭದಲ್ಲಿ ಉರಿಲಿಂಗ ಪೆದ್ದಿಗಳು(೧೪೦೬) "ಶ್ರೀ ಗುರುಲಿಂಗವನ್ನು ಪ್ರಾಣವನೇಕೀಭವಿಸಿ ಪ್ರಾಣಲಿಂಗವಾದನಾಗಿ, ಅಂಗದ ಮೇಲೆ ಬಿಜಯಂಗೈದು ಅಂಗಲಿಂಗ ವಾದನು ಎನ್ನುತ್ತ ಇಷ್ಟಲಿಂಗಕ್ಕೆ 'ಅಂಗಲಿಂಗ'ವೆಂದು ಕರೆದಿರುವುದು ಸೂಕ್ತವಾದದ್ದು. ಇದು ಕ್ವಚಿತ್(Rare) ಪ್ರಯೋಗವೇ ಸರಿ."[೧೨] ಈ ರೀತಿ ಹಲವಾರು ಸಂದೇಹಗಳನ್ನು ಗುರುತಿಸಿದ ಎಂ.ಎಂ.ಕಲಬುರ್ಗಿ ಅವರು ಅದರ ಮೂಲಾರ್ಥ ಶೋಧದಲ್ಲಿ ತೊಡಗಿರುವುದು ಈ ಲೇಖನದಲ್ಲಿ ತಿಳಿದುಬರುತ್ತದೆ. "ಇಷ್ಟಲಿಂಗ"ದ ಪರಿಕಲ್ಪನೆಯನ್ನು ನಾಲ್ಕು ನೆಲೆಯಲ್ಲಿ ಶೋಧಿಸಲು ಪ್ರಯತ್ನ ಮಾಡಿದ್ದಾರೆ.

೧. ಸ್ಥಾವರಲಿಂಗ ತತ್ವದ ಇಷ್ಟಲಿಂಗ.

೨. ಸ್ಥಾವರಲಿಂಗ ತತ್ವದ ಇಷ್ಟಲಿಂಗದ ಧಾರಣೆ.

೩. ಇಷ್ಟಲಿಂಗ–ಆಯುಕ್ತಲಿಂಗ

೪. ಸ್ಥಾವರಲಿಂಗ–ಜಂಗಮಲಿಂಗ.

**೧. ಸ್ಥಾವರಲಿಂಗದ ಇಷ್ಟಲಿಂಗ:** ಸಾಮಾನ್ಯವಾಗಿ ಗ್ರಾಮಗಳಲ್ಲಿ ಶಿವೋಪಾಸಕರಿಗಾಗಿ ಒಂದು ಲಿಂಗ ಸ್ಥಾಪಿತವಾಗಿರುತ್ತದೆ. ಅದನ್ನು ಸ್ಥಾವರಲಿಂಗ ಎನ್ನಬಹುದು. ಆ ಊರಿನ ಒಬ್ಬ ವ್ಯಕ್ತಿ ಬೇರೊಂದು ಊರಿಗೆ ಅನ್ಯ ಕಾರ್ಯದ ನಿಮಿತ್ತ ವಲಸೆ ಹೋದರೆ ಆ ಊರಿನ ಸ್ಥಾವರಲಿಂಗ ಅವನ ಸಾರ್ವಜನಿಕ ಲಿಂಗವಾದರೆ, ಅವನು ಬಿಟ್ಟುಬಂದ ಊರಿನದು ಅವನಿಗೆ ಇಷ್ಟಲಿಂಗ. ಹೀಗಿರುವಾಗ ಒಂದು ಸಣ್ಣ ಗಾತ್ರದ ಲಿಂಗವನ್ನು ಮನೆಯ ಜಗುಲಿಯ ಮೇಲಿಟ್ಟು ಪೂಜಿಸುತ್ತಿರಬಹುದು. ಹಾಗೆಯೇ ವರ್ಷಕ್ಕೊಮ್ಮೆ ತಮ್ಮ 'ಇಷ್ಟಲಿಂಗ'ದ ದರ್ಶನಕ್ಕೆಂದು ಮನೆದೇವತೆಯ ಅಥವಾ ಕುಲದೇವರ ದರ್ಶನಕ್ಕೆ ತಮ್ಮ ಊರಿಗೆ ತೆರಳುತ್ತಾರೆ ಎಂಬುದನ್ನು ಒಂದು ಉದಾಹರಣೆ ಮೂಲಕ ತಿಳಿಸಿದ್ದಾರೆ.

"ಕೊಂಡಗುಳಿ ಕೇಶಿರಾಜ ಕಲ್ಯಾಣದಲ್ಲಿ ಮಂತ್ರಿವೃತ್ತಿ ಕೈಗೊಂಡವನು. ಅವನ ಮಟ್ಟಿಗೆ ಹೇಳುವುದಾದರೆ ಆತನ ಸಾರ್ವಜನಿಕ ಲಿಂಗ ಕಲ್ಯಾಣದ ತ್ರಿಪುರಾಂತಕೇಶ್ವರ, ಇಷ್ಟಲಿಂಗ ಅವನ ಗ್ರಾಮವಾದ ಕೊಂಡಗುಳಿಯಲ್ಲಿಯ ಸೋಮೇಶ್ವರ" ಎಂದಿದ್ದಾರೆ. ಹಾಗೆಯೇ ಇಷ್ಟವಾಗಿರುವ ಸ್ಥಾವರಲಿಂಗದ ಕುರುಹನ್ನು ಜಗುಲಿಯ ಮೇಲಿಟ್ಟು ಪೂಜಿಸುವ ಸಂಪ್ರದಾಯ ರೂಢಿಯಲ್ಲಿತ್ತು ಎಂಬುದನ್ನು ಉದಾಹರಣೆ ಮೂಲಕ ತಿಳಿಸಲು ಪ್ರಯತ್ನಿಸಿದ್ದಾರೆ.

"ಬಸವಣ್ಣನವರ ಜನನ ಸಂದರ್ಭದಲ್ಲಿ ಬಾಗೇವಾಡಿಗೆ ಬಂದ ಜಾತವೇದಿಗಳು

"ಇಷ್ಟಕೃತಾರ್ಥ ಬಂದೊಲಿದಿತ್ತೆವಾಗಿ ತ।
ನ್ನಿಷ್ಟಲಿಂಗಮದಕ್ಕು, ಈ ಲಿಂಗಮಂ ಸಿಂಹ।
ವಿಷ್ಟರದೊಳಟ್ಟರ್ಚಿಸು...."[೧೩]

ಎಂದು ಹೇಳಿ ಒಂದು ಲಿಂಗವನ್ನು ದಯಪಾಲಿಸುತ್ತದೆ. ಇಂತ ತಮಗೆ ಇಷ್ಟವಾಗಿರುವ ಇಂತಹ ಸ್ಥಾವರಲಿಂಗವನ್ನು ಜಗುಲಿಯ ಮೇಲಿಟ್ಟು ಪೂಜಿಸುವುದು ಇವೆಲ್ಲ ಸ್ಥಾವರಲಿಂಗ ತತ್ವದ ಇಷ್ಟಲಿಂಗಗಳೆಂಬುದನ್ನು ಮರೆಯಬಾರದೆಂದಿದ್ದಾರೆ.

**೨. ಸ್ಥಾವರಲಿಂಗತ್ವದ ಇಷ್ಟಲಿಂಗದ ಧಾರಣೆ:** ಸ್ಥಾವರಲಿಂಗದ ಸಂಕೇತವಾದ ಜಗುಲಿಯ ಮೇಲಿನ ಇಷ್ಟಲಿಂಗವನ್ನು ಪ್ರವಾಸ ಸಂದರ್ಭದಲ್ಲಿ ತನ್ನ ಜೊತೆಗೆ ಕೊಂಡೊಯ್ಯುತ್ತಿರಬೇಕು.

ಅಂತಹ ಸಂದರ್ಭದಲ್ಲಿ ಇದನ್ನು ಸಣ್ಣ ಪೆಟ್ಟಿಗೆಯಲ್ಲಿ ಅಥವಾ ಕರಡಿಗೆಯಲ್ಲಿ ಇಟ್ಟುಕೊಂಡು ಹೋಗುತ್ತಿರಬಹುದು. ಅಲ್ಲಿ ಪೂಜೆಯ ಅನುಕೂಲಕ್ಕಾಗಿ ನೆಲದ ಮೇಲೆಯೇ ಅಥವಾ ಅಂಗೈ ಮೇಲೆಯೇ ಇಟ್ಟು ಪೂಜಿಸುತ್ತಿರಬಹುದು. ಇಂತಹ ಅಂಶಗಳನ್ನು ಎಂ.ಎಂ.ಕಲಬುರ್ಗಿ ಅವರು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. "ಕೊಂಡಗುಳಿ ಕೇಶಿರಾಜನು ಪ್ರವಾಸ ಸಂದರ್ಭದಲ್ಲಿ ಲಿಂಗವನ್ನು ಒಯ್ದು, ತೆಲುಗು ಬೊಮ್ಮಯ್ಯನ ಮನೆಯಲ್ಲಿ ನೆಲದ ಮೇಲಿಟ್ಟು ಪೂಜಿಸಿದ ಉಲ್ಲೇಖ ಹರಿಹರನ ರಗಳೆಗಳಲ್ಲಿ ಬರುವಂತೆ ಆತನು ಅಂಗೈಯೊಳಿಟ್ಟು ಪೂಜಿಸುತ್ತಿದ್ದನೆಂಬ ಸೂಚನೆಯೂ ಆತನ ಕಂದಪದ್ಯಗಳಿಂದ ವ್ಯಕ್ತವಾಗುತ್ತದೆ"[೧೪] ಎಂದು ಹೇಳಿದ್ದಾರೆ. ಮತ್ತೆ ಮುಂದುವರಿದು "ಕೇರಳದಲ್ಲಿ ಕಟ್ಟಿಕೊಂಡರೂ ಕಂದದಲ್ಲಿ ಪೂಜಿಸಿದರೂ ಇಷ್ಟಲಿಂಗ ಹೆಸರಿನಿಂದ ಕರೆದರೂ ಈ ಸ್ಥಿರಲಿಂಗಪೂಜೆ ಇಷ್ಟಲಿಂಗವು ಶರಣರ ಇಷ್ಟಲಿಂಗದಿಂದ ತಾತ್ವಿಕವಾಗಿ ಭಿನ್ನವಾಗಿದೆ"[೧೫] ಎಂದಿದ್ದಾರೆ. ಸಾಮಾನ್ಯವಾಗಿ ಪ್ರತಿಯೊಬ್ಬರು ಶರಣರ ಮುದ್ರಿಕೆಗಳು ಅವರವರ ಗ್ರಾಮಗಳ ಸ್ಥಾವರಲಿಂಗಗಳಾಗಿವೆ. ಜೇಡರದಾಸಿಮಯ್ಯನ ಗ್ರಾಮವಾದ ಮುದನೂರಿನಲ್ಲಿ ಆತನ ವಚನ ಮುದ್ರಿಕೆಯಾದ ರಾಮನಾಥ, ಸಿದ್ಧರಾಮನ ಗ್ರಾಮವಾದ ಸೊಲ್ಲಾಪುರದಲ್ಲಿ ಆತನ ವಚನ ಮುದ್ರಿಕೆಯಾದ ಕಪಿಲಸಿದ್ಧ ಮಲ್ಲಿಕಾರ್ಜುನ ಹೆಸರಿನ ಸ್ಥಾವರಲಿಂಗ, ಪುಲಿಗೆರೆಯ ವರದ ಸೋಮೇಶ್ವರದ ಎಂಬ ಮುದ್ರಿಕೆಯಲ್ಲಿ ಪುಲಿಗೆರೆ ಗ್ರಾಮಸೂಚಿ. 'ಏಲೇಶ್ವರ ಲಿಂಗ' ಎಂಬ ಮುದ್ರಿಕೆಯಲ್ಲಿ ಏಲೇಶ್ವರ ಎಂಬ ಗ್ರಾಮನಾಮದಿಂದಲೇ ಸ್ಥಾವರಲಿಂಗವನ್ನು ಸೂಚಿಸಿದರೂ ಲಕ್ಷಿಸಬೇಕಾದ ಸಂಗತಿಗಳಾಗಿವೆ ಎಂದಿದ್ದಾರೆ. "ವಚನಗಳ ಮುದ್ರಿಕೆ ಇಷ್ಟಲಿಂಗವನ್ನು ಸೂಚಿಸು ತ್ತಿದ್ದರೂ ಮೂಲತಃ ಅದು ಸ್ಥಾವರಲಿಂಗ ತತ್ವದ ಇಷ್ಟಲಿಂಗವೇ ಆಗಿರುವಂತಿದೆ. ಆದುದರಿಂದ ಮುದ್ರಿಕೆ ಬಳಸಿ ವಚನ ರಚಿಸುವ ಉಪಕ್ರಮ ಸ್ಥಾವರಲಿಂಗ ಪೂಜಕರಿಂದಲೇ ಆದರೆ ಕರ್ನಾಟಕದ ಮಟ್ಟಿಗೆ ಲಕುಲೀಶ ಪಾಶುಪತ ಮೊದಲಾದವರಿಂದಲೇ ಪ್ರಾರಂಭವಾಗಿರು ವಂತಿದೆ"[೧೬] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**೩. ಇಷ್ಟಲಿಂಗ–ಆಯುತ್ತಲಿಂಗ** : ಲೋಕಗತ ಶಿವಚೈತನ್ಯದ ಕುರುಹಾದ ಸ್ಥಾವರಲಿಂಗದ ಪೂಜೆಯ ಬದಲಿಗೆ ವ್ಯಕ್ತಿಗತ ಶಿವಚೈತನ್ಯದ ಕುರುಹಾದ ಆಯುತ್ತಲಿಂಗದ ಆರಾಧನೆಯು ಕಾಲಕ್ರಮದಲ್ಲಿ ರೂಢಿಗೊಂಡಿತು ಎನ್ನುತ್ತ ಇವೆರಡರ ಅರ್ಥಸ್ಪಷ್ಟತೆಯನ್ನು ಎಂ.ಎಂ.ಕಲಬುರ್ಗಿ ಅವರು ತಿಳಿಸಲು ಪ್ರಯತ್ನಿಸಿದ್ದಾರೆ. 'ಆಯುತ್ತಲಿಂಗ' ಪದವನ್ನು ವೀರಶೈವದ ಪರವಾಗಿ ಅರ್ಥೈಸಲು ಬರುವಂತೆ 'ಇಷ್ಟಲಿಂಗ' ಪದವನ್ನು ಅರ್ಥೈಸಲು ಬರುವುದಿಲ್ಲ. ಹೀಗಾಗಿ ಅಂದು ಲಿಂಗಾಯತರು ಎದೆಯ ಮೇಲೆ ಧರಿಸುವ ಲಿಂಗಕ್ಕೆ 'ಇಷ್ಟಲಿಂಗ' ಎನ್ನುವುದಕ್ಕಿಂತ 'ಆಯುತ್ತಲಿಂಗ'ವೆನ್ನುವುದು

ಈ ಧರ್ಮದ ಪರಿಭಾಷೆಯ ದೃಷ್ಟಿಯಿಂದ ಹೆಚ್ಚು ಯೋಗ್ಯ. ಈ ಲಿಂಗವನ್ನು ಆಯುತ್ತ ಮಾಡಿಕೊಂಡವನೇ ಲಿಂಗಾಯತ್ತವಂತ>ಲಿಂಗಾಯತವಂತ. ಇಂಥ ಪದಪ್ರಯೋಗವನ್ನು ಕೊಂಡಗುಳಿ ಕೇಶಿರಾಜನ ಕಂದದಲ್ಲಿ ಕಾಣಬಹುದಾಗಿದೆ. ಈ ಪ್ರಯೋಗವೇ ಜನರೂಢಿಯಲ್ಲಿ 'ಲಿಂಗಾಯತ' ಎಂದು ಮೊಟಕುಗೊಂಡಿದೆ"[೧೭] ಎಂದು ಅರ್ಥೈಸಲು ಪ್ರಯತ್ನಿಸಿದ್ದಾರೆ.

ಇಷ್ಟಲಿಂಗವೆನ್ನುವುದು ಕೇವಲ ವೈಯಕ್ತಿಕ ಸ್ಥಾವರ ಲಿಂಗವನ್ನಾಗಿ ಸೂಚಿಸುತ್ತದೆ. ಆದ್ದರಿಂದ ಶರಣಧರ್ಮದಲ್ಲಿ 'ಇಷ್ಟಲಿಂಗ' ಸರಿಯಾದ ಪದವಲ್ಲ ಎನ್ನುತ್ತಾರೆ. ಹಾಗೆಯೇ ಎಂ.ಎಂ.ಕಲಬುರ್ಗಿ ಅವರು ವೀರಶೈವರ 'ಆಯುತ್ತ ಲಿಂಗ'ಕ್ಕೆ ಶೈವರ ಇಷ್ಟಲಿಂಗ ಹೆಸರೇಕೆ ಬಂತು ಎಂಬ ಪ್ರಶ್ನೆಗೆ ಉತ್ತರವಾಗಿ ಮೇಲೆ ಹೇಳಿದಂತೆ ಅವರು ಪ್ರವಾಸದ ಅನುಕೂಲಕ್ಕಾಗಿ ಮಾಡಿಕೊಂಡ ಬಾಹ್ಯ ಬದಲಾವಣೆಗಳೇ ಕಾರಣ ಎಂದಿದ್ದಾರೆ. ಈ ರೀತಿಯ ಬಾಹ್ಯ ಬದಲಾವಣೆಯ ಲಕ್ಷಣಗಳು ವೀರಶೈವರ 'ಆಯುತ್ತ ಲಿಂಗ'ದ ಬಾಹ್ಯ ಲಕ್ಷಣಗಳು ಒಂದೇ ಆಗಿದ್ದರೂ ಅವುಗಳ ಅರ್ಥ ತಾತ್ವಿಕವಾಗಿ ಭಿನ್ನವಾಗಿದೆ ಎನ್ನುತ್ತಾರೆ. ಸ್ಥಾವರಲಿಂಗದಲ್ಲಿ ಇಷ್ಟವಾಗಿರುವ ಲಿಂಗ, ಇಷ್ಟವಾಗಿರದ ಲಿಂಗ ಎಂಬ ಆಯ್ಕೆಗೆ ಅವಕಾಶವಿದ್ದರೆ, 'ಆಯತ್ತಲಿಂಗ'ದಲ್ಲಿ ಆಯ್ಕೆಗೆ ಅವಕಾಶವಿಲ್ಲ ಎಂಬುದನ್ನು ಲಕ್ಷಿಸಬೇಕೆಂದಿದ್ದಾರೆ. ಇಲ್ಲಿ ಎಂ.ಎಂ.ಕಲಬುರ್ಗಿ ಅವರ ಆಳವಾದ ಅಧ್ಯಯನ ಶೋಧ ನಮಗೆ ಎದ್ದು ಕಾಣುತ್ತದೆ.

**೪. ಸ್ಥಾವರಲಿಂಗ–ಜಂಗಮಲಿಂಗ:** ಮೇಲೆ ಗಮನಿಸಿದಂತೆ ಸ್ಥಾವರಲಿಂಗ–ಇಷ್ಟಲಿಂಗ ಎರಡು ವಿರುದ್ಧ ಪದಗಳಂತೆ ಕಂಡರೂ ಸ್ಥಾವರಲಿಂಗ–ಜಂಗಮಲಿಂಗ ಎಂಬುದು ನಿಜ ಅರ್ಥದಲ್ಲಿ ವಿರುದ್ಧ ಶಬ್ದಗಳು. ಜಂಗಮಲಿಂಗ ಎಂಬುದು ಶೈವ ಮತ್ತು ವೀರಶೈವದಲ್ಲಿ ಬೇರೆ ಬೇರೆ ಅರ್ಥ ಹೊಂದಿರುವುದನ್ನು ಎಂ.ಎಂ.ಕಲಬುರ್ಗಿ ಅವರು ತಿಳಿಸಿದ್ದಾರೆ. "ಜಂಗಮಲಿಂಗವೆಂಬುದು ಶೈವದಲ್ಲಿ ಮೊದಮೊದಲು ಧರ್ಮಪ್ರಚಾರದ ಹೊಣೆ ಹೊತ್ತು ಸಂಚರಿಸುವ ಜ್ಞಾನಿ ವ್ಯಕ್ತಿಗೆ, ಬರಬರುತ್ತ ಪುರೋಹಿತ ವರ್ಗಕ್ಕೆ ಅನ್ವಯಿಸುತ್ತಿದ್ದರೆ, ವೀರಶೈವ ಸಂವಿಧಾನವನ್ನು ಒಪ್ಪಿಕೊಂಡ ಸಮಾಜದ ಎಲ್ಲ ಪ್ರಜೆಗಳಿಗೂ ಅನ್ವಯಿಸುತ್ತದೆ"[೧೮] ಎನ್ನುವಲ್ಲಿ ವೀರಶೈವ ಮುಕ್ತ ಸಮಾಜ ಎಂಬುದನ್ನು ಇಲ್ಲಿ ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. ಶೈವಧರ್ಮದಲ್ಲಿ ಮೇಲ್ವರ್ಗದವರಿಗೆ ಮಾತ್ರ ಅನ್ವಯಿಸಿದರೆ ವೀರಶೈವಧರ್ಮದಲ್ಲಿ ಆ ರೀತಿಯ ಸೀಮಿತ ಜನತೆಗಷ್ಟೇ ಎಂಬ ನಿರ್ಬಂಧವಿಲ್ಲದೇ ಮುಕ್ತ ಸ್ವಾತಂತ್ರ್ಯ ಎಂಬುದು ಇಷ್ಟವಾಗಿರುವ ಸ್ಥಾವರಲಿಂಗವನ್ನು ಸೂಚಿಸುವ ಪದವಾಗಿದ್ದು, ಆಮೇಲೆ ಬಾಹ್ಯಲಕ್ಷಣಗಳ ಹೋಲಿಕೆಯ ಭ್ರಾಂತಿಯಿಂದ ಶರಣಧರ್ಮದ ಆಯುತ್ತಲಿಂಗಕ್ಕೂ ಅದು ಬಳಕೆಯಾಗುತ್ತ ಬಂದ ಪದವಾಗಿದೆ."[೧೯] ಈ ಕಾರಣದಿಂದಲೇ

ವಿದ್ವಾಂಸರಿಗೆ 'ಇಷ್ಟಲಿಂಗ' ಪದಕ್ಕೆ ಶರಣಧರ್ಮ ಪರಿಭಾಷೆಯ ಮೂಲಕ ಸರಿಯಾದ ಅರ್ಥವನ್ನು ಕೊಡಲು ಸಾಧ್ಯವಾಗಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

'ಭಕ್ತಿಯ ಮರುಳ' ಎಂಬ ಲೇಖನದಲ್ಲಿ ಜಾನಪದ ದೇವತೆ 'ಮಲ್ಲಯ್ಯ' ಅಥವಾ ಮೈಲಾರ' ದೇವರ ಭಕ್ತಿಯ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ 'ಮುಂಗಸೂಳಿ' ಎಂಬ ಗ್ರಾಮದಲ್ಲಿ ಕಂಡುಬರುತ್ತದೆ. ಅದರಲ್ಲಿ ಈ ದೇವರ ಭಕ್ತರಲ್ಲಿ ಪುರುಷರಿಗೆ 'ವಗ್ಗಯ್ಯ(ವಾಗ್ಯ)' ಎಂದೂ, ಸ್ತ್ರೀಯರಿಗೆ 'ಮರುಳೇರು' ಎಂದು ಕರೆಯುತ್ತಾರೆ. ಈ ಸ್ತ್ರೀಯರು ಎಲ್ಲಮ್ಮನ ಜೋಗತಿಯನ್ನು ಹೋಲುತ್ತಾರೆ. ಆದರೆ ಕೊಳಲು ಅರ್ಥದ ಮುರಳಿ(ಮುರಲಿ)ಗೂ ಸಂಬಂಧ ವಿರಲಿಕ್ಕಿಲ್ಲ ಎಂಬ ಪ್ರಶ್ನೆಯು ಎಂ.ಎಂ.ಕಲಬುರ್ಗಿ ಅವರಿಗೆ ಒಗಟಾಗಿ ಪರಿಣಮಿಸಿರು ವುದಾಗಿ ತಾವೇ ಹೇಳಿಕೊಂಡು 'ಮರುಳೇರು' ಎಂಬ ಶಬ್ದದ ಅರ್ಥ ಶೋಧದಲ್ಲಿ ತೊಡಗಿಕೊಳ್ಳುತ್ತಾರೆ.

"ಒಕ್ಕೂದ ಮುಕ್ಕುದನುಂಡು ಕಿವಿ ವಿಡಿದಾಡುವೆ
ಶರಣರ ಮನೆಯ ಲೆಂಗಿಯ ಡಿಂಗರಿಗ ನಾನು,
ಕೂಡಲಸಂಗನ ಶರಣರ ಮನೆಯ ಭಕ್ತಿಯ ಮರುಳ ನಾನು.

ಭವ ಭವದಲ್ಲಿ ನಿಮ್ಮ ಜಂಗಮವೆ ಶರಣಯ್ಯಾ
ಅವರುಂಟು ಮಿಕ್ಕುದ ಉಡುಗಿ,
ಒಕ್ಕ ಪ್ರಸಾದವನಾಯ್ದುಕೊಂಬ ಮರುಳ ನಾನಯ್ಯಾ,
ನಮ್ಮ ಕೂಡಲಸಂಗನ ಶರಣರ ರಿಣವ ನಾ ಹಿಂಗಲಾರೆ."[೨೦]

ಈ ಎರಡೂ ವಚನಗಳಲ್ಲಿ ಬರುವ 'ಮರುಳ' ಪದದ ಅರ್ಥದ ಮೂಲವನ್ನು ಮೈಲಾರಲಿಂಗ ದೇವರ ವಕ್ಕಲಾದ ಗೊರವಗೊಗ್ಗಯ್ಯ ಸಂಪ್ರದಾಯದಲ್ಲಿ ಬರುವ 'ಮರುಳೇರು' (ಮರುಳರು) ಇವರನ್ನು ಸೂಚಿಸುತ್ತದೆ ಎಂಬುದು ಎಂ.ಎಂ.ಕಲಬುರ್ಗಿ ಅವರು ಗುರುತಿಸುತ್ತಾರೆ. ಗೊರಬರು 'ದೋಣಿ'(ಮರದ ಬಟ್ಟಲು)ಯಲ್ಲಿ ಬಾಳೆಹಣ್ಣು, ಹಾಲು, ಬೆಲ್ಲ ಮುಂತಾದ ಪದಾರ್ಥವನ್ನು ಹಾಕಿ ರಸಾಯನ ಮಾಡಿ ಅದರ ಸುತ್ತ ಗೊರವರು ಕುಣಿಯುತ್ತ ಕೈಯಿಂದ ಮುಟ್ಟದೆ ಬಾಯಿಯಿಂದ ಅದನ್ನು ತಿನ್ನುತ್ತಾರೆ. ಉಳಿದದ್ದನ್ನು ಪ್ರಸಾದವಾಗಿ ಹಂಚುತ್ತಾರೆ. ಇದನ್ನೇ ಬಸವಣ್ಣನವರು ತಮ್ಮ ವಚನದಲ್ಲಿ ಒಕ್ಕುದ ಮಿಕ್ಕುದನುಂಟು ಕಿವಿವಿಡಿದಾಡುವ ಶರಣರಾದ ಮರುಳ ನಾನು ಎಂದು ಹೇಳಿಕೊಳ್ಳುವುದು ಮೈಲಾರಲಿಂಗನ ಸಂಪ್ರದಾಯದವರನ್ನೇ ಈ 'ಮರುಳ' ಎಂಬ ಪದ ಸೂಚಿಸುತ್ತದೆ ಎಂದು ಹೇಳುತ್ತಾರೆ.

ಮೈಲಾರಲಿಂಗನ ಸಂಪ್ರದಾಯದಲ್ಲಿ ಬರುವ 'ಮರುಳೇರು' ಎಂಬುದು ದೇವರ ಭಕ್ತಿಗೆ ಮರುಳಾಗಿರುವವರು ಅಥವಾ ದೇವರಿಗೆ ಮರುಳಾಗಿರುವವರು ಎಂಬುದನ್ನು ಅರ್ಥೈಸುವ

ಎಂ.ಎಂ.ಕಲಬುರ್ಗಿ ಅವರು ವಚನದಲ್ಲಿ ಉಲ್ಲೇಖವಾದ 'ಮರುಳ' ಒಂದು ಪದಕ್ಕೆ ಒಂದು ಧಾರ್ಮಿಕ ಸಂಪ್ರದಾಯದ ಹಿನ್ನೆಲೆಯಲ್ಲಿ ಕಟ್ಟಿಕೊಟ್ಟಿರುವುದು ಹಾಗೂ ಒಂದು ಆಚರಣಾ ಪರಂಪರೆಯಲ್ಲಿ ಬಂದಂತಹ ಒಂದು ಸಮುದಾಯದಲ್ಲಿ ರೂಢಿಯಲ್ಲಿದ್ದ ಜಾನಪದ ಆಚರಣೆಯ ವಿಧಿಗಳನ್ನು ಬಸವಣ್ಣನವರು ಇಲ್ಲಿ ಬಳಸಿದ್ದಾರೆ ಎಂದು ಎಂ.ಎಂ.ಕಲಬುರ್ಗಿ ಅವರು ತಿಳಿಸಿದ್ದಾರೆ.

"ಭಕ್ತರತಿಯ ವಿಕಳತೆಯ ಮುಕುತಿಯನೇನ ಬೆಸಗೊಂಬೆನಯ್ಯಾ
ಕಾಮಿಗುಂಟೆ ಲಜ್ಜೆ ನಾಚಿಕೆ?
ಕಾಮಿಗುಂಟೆ ಮಾನಾಪಮಾನವು?
ಕೂಡಲಸಂಗನಿಗೊಲಿದ ಮರುಳನನೇನ ಬೆಸಗೊಂಬಿರಯ್ಯ(೫೧೪)"[೨೧]

ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಭಕ್ತನ ಐಕ್ಯಸ್ಥಲದಿಂದ ಆಯ್ದುಕೊಂಡಿದ್ದಾರೆ.

ಈ ವಚನದಲ್ಲಿ ಕಾಮವಿರಳತೆ ಮತ್ತು ಮರುಳರ ಪ್ರಸ್ತಾಪವಿದೆ. ಬಹುಶಃ ಇದು ಇಂದಿನ ಮರುಳೇರಲ್ಲಿ ಪ್ರಚಲಿತವಿರುವ ಅಸಾಮಾಜಿಕ ಕಾಮವ್ಯಾಪಾರವನ್ನೇ ಧ್ವನಿಸುತ್ತಿರಬಹುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಒಟ್ಟಾರೆಯಾಗಿ "ಬಸವಣ್ಣನವರ ಈ ವಚನಗಳು ಮೈಲಾರ ಸಂಪ್ರದಾಯದ ೧. 'ಮುರುಳೇರು' ಎಂಬ ಭಕ್ತಿವರ್ಗ, ೨. ಗೊಗ್ಗಯ್ಯಗಳ ದೋಗಿಸೇವೆ, ೩. ಕಿವಿವಿಡಿದಾಡುವ ಕುಣಿತ, ೪. ವಿಕೃತ ಕಾಮ ಇವುಗಳನ್ನು ಸೂಚಿಸುವುವೆಂದು ತೋರುತ್ತದೆ"[೨೨] ಎಂದಿದ್ದಾರೆ.

'ಜಂಗಮ' ಎಂಬ ಲೇಖನದಲ್ಲಿ ಜಂಗಮ ಪದದ ಕುರಿತು ಚರ್ಚಿಸಿದ್ದಾರೆ. ವಚನ ಕಾಲಘಟ್ಟದೊಳಗೆ ಜಂಗಮ ಎಂಬ ಪದವು ವಿಶೇಷ ಅರ್ಥದಲ್ಲಿ ಬಳಕೆಗೊಂಡಿದೆ. ಜಂಗಮ ವೆನ್ನುವುದು ವ್ಯಕ್ತಿಯಲ್ಲಿ ಸಮಷ್ಟಿ ಭಾಗವಾಗಿ ಸಮಾಜವನ್ನು ಪ್ರತಿನಿಧಿಸುವಂತಹ ಪದವಾಗಿದೆ. ಗುರು, ಲಿಂಗ, ಜಂಗಮ, ಪ್ರಸಾದ, ಕಾಯಕ ಮತ್ತು ದಾಸೋಹಗಳು ವೀರಶೈವದ ಅರ್ಥಪೂರ್ಣ ಪರಿಭಾಷೆಗಳೆನಿಸಿವೆ. ಸಂಸ್ಕೃತ ಪದಗಳಾದ ಇವುಗಳನ್ನು ಬಸವಾದಿ ಪ್ರಮಥರು ಹೊಸ ಅರ್ಥದಲ್ಲಿ ಬಳಸಿದರು. ಎಲ್ಲಾ ಧರ್ಮಗಳಂತೆ ೧೫ನೇ ಶತಮಾನದ ಹೊತ್ತಿಗೆ ಲಿಂಗಾಯತ 'ಧರ್ಮ'ವೂ 'ಮತ'ವಾಗಿ ನಿಂತು, ಮುಂದೆ 'ಜಾತಿ'ಯಾಗಿ ಬೆಳೆಯಲು ಈ ಶಬ್ದಗಳಿಗೆ ಬೇರೊಂದು ಅರ್ಥಪರಿಕಲ್ಪನೆ ಪ್ರಾಪ್ತವಾಗಿರುವಂತಿದೆ. ಹೀಗೆ ಪರಿವರ್ತನೆಗೆ ಗುರಿಯಾದವುಗಳಲ್ಲಿ ಇಂದು ಜಾತಿವಾಚಿಯಾಗಿ ನಿಂತು, ವೀರಶೈವ ಸಮಾಜದಲ್ಲಿ ಪುರೋಹಿತ ಹಕ್ಕು ಸ್ಥಾಪಿಸುತ್ತಿರುವ "ಜಂಗಮ ಪದವೂ ಒಂದು ಎಂದು ಎಂ.ಎಂ.ಕಲಬುರ್ಗಿ ಅವರು ಹೇಳಿದ್ದಾರೆ. ಎಂ.ಎಂ. ಕಲಬುರ್ಗಿ ಅವರು ಜಂಗಮ ಎಂಬ ಪದವನ್ನು ಜಗತ್ತು ಸಮಾಜವೆಂದೇ ಅರ್ಥೈಸಿದ್ದಾರೆ. ಜೀವಜಗತ್ತು ಸ್ಥಾವರಗೊಳ್ಳುವ ಮೂಲಕ ಬದುಕಿನ ಮೌಲ್ಯಗಳನ್ನು ಕಳೆದುಕೊಂಡು ಸಾಗುತ್ತದೆ.

ಅದಕ್ಕಾಗಿ ಜಂಗಮ ಜೀವಜಗತ್ತಿನ ವ್ಯವಸ್ಥೆಯನ್ನು ಬದಲಿಸುವ ಶಕ್ತಿಯಾಗಿ ಬದುಕಿನ ತತ್ವ ಸಿದ್ಧಾಂತವಾಗಿ ಬಳಕೆಗೆ ಬಂದಿದೆ. 'ಜಂಗಮ'ದ ಮೂಲ ಅರ್ಥವನ್ನು ೧೨ನೆಯ ಶತಮಾನದ ಶರಣರ, ಅದರಲ್ಲಿಯೂ ಬಸವಣ್ಣನವರ ವಚನಗಳ ಮೂಲಕ ಶೋಧಿಸಲು ಪ್ರಯತ್ನಿಸಿದ್ದಾರೆ.

ಬಸವಣ್ಣನವರ 'ಷಟ್‌ಸ್ಥಲದ ವಚನಗಳು' ಕೃತಿಗೆ ಸಂಬಂಧಪಟ್ಟ ೯೬೯ ವಚನಗಳಲ್ಲಿ 'ಜಂಗಮ' ಪದ ಬಳಕೆಯಾದುದು ೧೩೧ ವಚನಗಳಲ್ಲಿ. ಈ ಪ್ರಯೋಗಗಳನ್ನು ಕಣ್ಣ ಮುಂದೆ ಹರಡಿಕೊಂಡು ಸೂಕ್ಷ್ಮಪರೀಕ್ಷೆ ನಡೆಸಿದರೆ 'ಜಂಗಮ' ಪದದ ಮೂಲಕ ಈ ಕೆಳಗಿನ ಸಂಗತಿಗಳನ್ನು ಪ್ರತಿಪಾದಿಸುವರೆಂದು ತಿಳಿದುಬರುತ್ತದೆ ಎಂದಿದ್ದಾರೆ.

"೧. 'ಸ್ಥಾವರ', 'ಜಂಗಮ' ಪದಗಳ ಅರ್ಥಭೇದವನ್ನು ಸ್ಪಷ್ಟಪಡಿಸುತ್ತ, 'ಜಂಗಮ'(ಚಲನಶೀಲತೆ) ವನ್ನೇ ತಮ್ಮ ಸಮಗ್ರ ವೈಚಾರಿಕತೆಯ ಕೇಂದ್ರವನ್ನಾಗಿ ಗ್ರಹಿಸುವುದು.

೨. ವೀರಶೈವಧರ್ಮವು ಜೀವ, ಜಗತ್ತುಗಳ ಸಂಬಂಧವನ್ನು ಕುರಿತು ವಿವೇಚಿಸುತ್ತ, ಜೀವವು 'ಜಂಗಮ'ವಾಗಬೇಕೆಂದು ಪ್ರತಿಪಾದಿಸುವುದು.

೩. ಹಾಗೆಯೇ ತಾವು ಜೀವಿಸುತ್ತಿರುವ ಜಗತ್ತೂ(ಸಮಾಜ) ಜಂಗಮವಾಗಬೇಕೆಂದು ಪ್ರತಿ ಪಾದಿಸುವುದು.

೪. ತಮಗೆ ಪ್ರಾಣವಾಗಿರುವ ಗುರುಲಿಂಗ ಜಂಗಮತ್ರಯದಲ್ಲಿ 'ಜಂಗಮ'ದ ಮಹತ್ವವನ್ನು ಗುರುತಿಸಿ ಹೇಳುವುದು."[೨೩]

ಈ ನಾಲ್ಕೂ ಸಂದರ್ಭಗಳಲ್ಲಿ 'ಜಂಗಮ' ಪದವನ್ನು ಹೇಗೆ ಬಳಸಿಕೊಂಡಿದ್ದಾರೆಂದು ಎಂ.ಎಂ.ಕಲಬುರ್ಗಿ ಅವರು ನಾಲ್ಕು ನೆಲೆಗಳಲ್ಲಿ ಗುರುತಿಸಲು ಪ್ರಯತ್ನಿಸಿದ್ದಾರೆ. 'ಸ್ಥಾವರ ಜಂಗಮ', 'ಜಂಗಮ ಜೀವ', 'ಜಂಗಮ ಜಗತ್ತು' ಮತ್ತು 'ಜಂಗಮ ಮಹತ್ವ' ಎಂಬ ಶೀರ್ಷಿಕೆಗಳ ಅಡಿಯಲ್ಲಿ ಸ್ಥಾವರ ಜಂಗಮದ ಭಿನ್ನತೆಯ ತತ್ವಗಳು, ಸೂಕ್ಷ್ಮ, ಸ್ಥೂಲ, ಕಾರಣ ತತ್ವಸಿದ್ಧಾಂತಗಳ ವಿವರಣೆ, ಜಂಗಮ ಜಗತ್ತಿನಲ್ಲಿ ಭಕ್ತನ ಸ್ಥಾನ, ಕರ್ತವ್ಯಗಳು, ಜಂಗಮನು ಸರ್ವವಿಧದಲ್ಲೂ ಅಭೇದ ಕಲ್ಪನೆಯುಳ್ಳವನು ಎಂಬ ಹಲವಾರು ವಿವರಣೆಗಳನ್ನು ನೀಡುತ್ತಾರೆ. ಗುರುವಿನ ಮೂಲಕ ಸದ್ಗತಿಯನ್ನು ಪಡೆಯಬಹುದೆಂಬ ಭಾರತೀಯ ತತ್ವಸಿದ್ಧಾಂತವನ್ನು ನಾವು ಒಪ್ಪಿಕೊಂಡಿದ್ದರೂ ಗುರುವಿಗೂ ಮಿಗಿಲಾದ, ವಿಶೇಷ ಸ್ಥಾನವನ್ನು ಜಂಗಮ ಪಡೆದಿದ್ದಾನೆ ಎಂಬ ವಚನಕಾರರ ಅಭಿಪ್ರಾಯವನ್ನು ಎಂ.ಎಂ.ಕಲಬುರ್ಗಿ ಅವರು ಸಮರ್ಥಿಸಿದ್ದಾರೆ. ನಾನು ಎಂ.ಎಂ.ಕಲಬುರ್ಗಿ ಬರಹಗಳ ವಾಚಿಕೆಯ ಸಂಪಾದಕರು ಎಂ.ಎಂ.ಕಲಬುರ್ಗಿ ಅವರ ಜಂಗಮ ಪರಿಕಲ್ಪನೆಯನ್ನು ಕುರಿತು ಹೀಗೆ ಹೇಳಿದ್ದಾರೆ. ವಚನಕಾರರಿಗೆ ಜಂಗಮವೆಂದರೆ ಜಾತಿ ಅಥವಾ ವರ್ಗಸೂಚಕವಾಗಿರಲಿಲ್ಲ. ಜಂಗಮವೆಂದರೆ ಇಡೀ ಭಕ್ತ ಸಮಾಜವೇ ಆಗಿತ್ತು. ಹಲವಾರು

ವಚನಗಳಲ್ಲಿ ಈ ಪದವು ಬಳಕೆಯಾದ ರೀತಿಯನ್ನು ವಿಶ್ಲೇಷಿಸಿ ಕಲಬುರ್ಗಿ ಅವರು ನೀಡುವ ವ್ಯಾಖ್ಯಾನವು ಸರಿಯಾಗಿದೆ ಎನ್ನಿಸುತ್ತದೆ" ಎಂಬ ಮಾತಿನಲ್ಲಿ ಸತ್ಯವಡಗಿದೆ. ಕಾಲಾಂತರದಲ್ಲಾದ ರಾಜಕೀಯ, ಸಾಮಾಜಿಕ ಬದಲಾವಣೆಗಳಿಂದ ಜಂಗಮ ಮೂಲ ಪ್ರಜ್ಞೆಯ ಅರ್ಥವನ್ನು ಕಳೆದುಕೊಂಡಿದೆ. ವಚನ ಕಾಲದಲ್ಲಿ ನಪುಂಸಕ ಅರ್ಥದಲ್ಲಿ ಬಳಕೆಯಾಗಿದ್ದು ಅದೊಂದು ತತ್ವವಾಚಿಯಾಗಿ, ಜೀವನ ಸಿದ್ಧಾಂತವಾಗಿ ಬದುಕಿನ ಭಾಗವೆಂಬ ಅರ್ಥದಲ್ಲಿ ಬಳಕೆಗೊಂಡಿತ್ತು ಎಂಬುದು ವಿಶೇಷವೆನಿಸುತ್ತದೆ.

'ವಚನ ಸಾಹಿತ್ಯ ಮತ್ತು ಜೀವನಮೌಲ್ಯಗಳು' ಎಂಬ ಲೇಖನದಲ್ಲಿ ಮನುಷ್ಯನಲ್ಲಿ ಅದರ್ಶ ಮತ್ತು ಮೌಲ್ಯವನ್ನು ಬೆಳೆಸುವುದು ಸಾಹಿತ್ಯದ ಒಂದು ಭಾಗವಾಗಿರುವುದನ್ನು ನಿರೂಪಿಸಲು ಪ್ರಯತ್ನಿಸಿದ್ದಾರೆ. ಅದನ್ನು ನಮ್ಮ ಹಲವು ಸಾಹಿತ್ಯ ಪ್ರಕಾರಗಳಲ್ಲಿ ಅಭಿವ್ಯಕ್ತಿಸುತ್ತ ಬಂದಿರುವುದು ಕಾಣಬಹುದು. ಆದರೆ ವಚನ ಸಾಹಿತ್ಯದಲ್ಲಿ ಆ ಕಾರ್ಯ ತುಂಬಾ ತೆರೆದ ಮನಸ್ಸಿನಿಂದ ನಡೆದಿದೆ. "ಎಲ್ಲಾ ಕಾಲ, ಎಲ್ಲಾ ದೇಶ, ಎಲ್ಲಾ ಜನಾಂಗಗಳಿಗೆ ಅನ್ವಯಿಸುವ ಜೀವನ ಸತ್ಯಗಳು ಆದರ್ಶ, ಒಂದು ಕಾಲ, ಒಂದು ದೇಶ, ಒಂದು ಜನಾಂಗಕ್ಕೆ ಅನ್ವಯಿಸುವ ಜೀವಸತ್ವಗಳು ಮೌಲ್ಯಗಳು"[೨೪] ಎಂದು ವ್ಯಾಖ್ಯಾನಿಸುವ ಎಂ.ಎಂ.ಕಲಬುರ್ಗಿ ಅವರು ವಚನ ಸಾಹಿತ್ಯವು ಅಸಮಾನತೆ, ಪಾರತಂತ್ರ್ಯ, ಅಸೋದರತ್ವಗಳಿಗೆ ಅವಕಾಶ ಮಾಡಿಕೊಟ್ಟು ಶೋಷಣೆಗೆ ಕಾರಣವಾಗಿದ್ದ ಈ 'ಸ್ಥಾವರಮೌಲ್ಯ'ವನ್ನು ಧಿಕ್ಕರಿಸಿ ಜಂಗಮಮೌಲ್ಯವನ್ನು ಎತ್ತಿಹಿಡಿಯಲು ವಚನ ಸಾಹಿತ್ಯ ಜೀವನದ ಅನೇಕ ಕ್ಷೇತ್ರಗಳಿಗೆ ಅನ್ವಯಿಸಿ ಹೇಳುತ್ತದೆ. "ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ"[೨೫] ಎಂಬ ಶರಣರ ಮಾತು ಇರಬಹುದು. "ಕೂಟಕ್ಕೆ ಸತಿ–ಪತಿಯೆಂಬ ನಾಮವಲ್ಲದೆ ಅರಿವಿಂಗೆ ಬೇರೊಂದು ಒಡಲುಂಟೆ"[೨೬] ಎಂದು ಆಯ್ದಕ್ಕಿ ಲಕ್ಕಮ್ಮ ಗಂಡನಿಗೆ ಹಾಕುವ ಪ್ರಶ್ನೆ ಸ್ತ್ರೀ ಸಮಾಜದ ಒಟ್ಟು ಧೋರಣೆಯನ್ನು ಧ್ವನಿಸುತ್ತದೆ.

ವಚನ ಸಾಹಿತ್ಯದ ಕಾಲದಲ್ಲಿ ಪುರುಷರೇ ಅಕ್ಷರಜ್ಞಾನದಿಂದ ವಂಚಿತರಾಗಿದ್ದ ಕಾಲದಲ್ಲಿ ನೂರಾರು ಜನ ಸ್ತ್ರೀಯರು ಅದರಲ್ಲಿಯೂ ದಲಿತವರ್ಗದ ಸ್ತ್ರೀಯರು ಸಾಹಿತ್ಯ ನಿರ್ಮಿತಿಯಲ್ಲಿ ತೊಡಗಿದ್ದು ಬಹುದೊಡ್ಡ ಸಾಮಾಜಿಕ ಮೌಲ್ಯವಾಗಿದೆ. ಅಷ್ಟು ಮಾತ್ರವಲ್ಲ ಗಂಡು–ಹೆಣ್ಣಿನ ಸಮಾನತೆ ಜಾತಿಯ ಪ್ರಶ್ನೆ, ನ್ಯಾಯ–ನೀತಿ, ಪವಿತ್ರ–ಅಪವಿತ್ರ ಮುಂತಾದ ವಿಷಯಗಳಲ್ಲಿ ಸಮಾನತೆಯನ್ನು ಆದರ್ಶ ಮೌಲ್ಯವನ್ನು ಸ್ಥಾಪಿಸುವ ಆಶಯ ವಚನ ಸಾಹಿತ್ಯದಲ್ಲಿ ಕಾಣಬಹುದು. ಇದನ್ನು ಎಂ.ಎಂ.ಕಲಬುರ್ಗಿ ಅವರು ಈ ಲೇಖನದ ಉದ್ದಕ್ಕೂ ಅನೇಕ ಉದಾಹರಣೆಗಳ ಸಮೇತವಾಗಿ ಅತ್ಯಂತ ವಸ್ತುನಿಷ್ಠವಾಗಿ ವಚನ ಸಾಹಿತ್ಯವು ನಿರ್ವಹಿಸಿದಂತಹ ಮೌಲ್ಯಪ್ರಜ್ಞೆಗಳನ್ನು ವಿಶ್ಲೇಷಿಸಿದ್ದಾರೆ.

'ದಾಸೋಹ : ಐತಿಹಾಸಿಕ ಅಗತ್ಯದ ಸೃಷ್ಟಿ' ಎಂಬ ಲೇಖನದಲ್ಲಿ ೧೨ನೇ ಶತಮಾನದಲ್ಲಿ 'ದಾಸೋಹ' ಕುರಿತಂತೆ ಚಿತ್ರಣವನ್ನು ಎಂ.ಎಂ.ಕಲಬುರ್ಗಿ ಅವರು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ. "ಜಂಗಮವೆಂದರೆ ವೀರಶೈವ ತತ್ವನಿಷ್ಠವ್ಯಕ್ತಿ, ಇಲ್ಲವೇ ವ್ಯಕ್ತಿಸಮುದಾಯ, ಈ 'ಜಂಗಮ'ಕ್ಕೆ ದಾಸೋಹ ನಡೆಸದ ಹೊರತು ವ್ಯಕ್ತಿಯೊಬ್ಬ ವೀರಶೈವನೆನಿಸಲಾರ. ಯಾವುದೇ ತತ್ವ, ಅದರಲ್ಲೂ ಇಷ್ಟು ಮಹತ್ವದ್ದಾಗಿರುವ ದಾಸೋಹದಂಥ ಜನಪರ ತತ್ವ ಮೂಡಿಬರಲು ಸಮಕಾಲೀನ ಪರಿಸರದ ಒತ್ತಡ ಮುಖ್ಯ ಕಾರಣವಾಗಿರುತ್ತದೆ."[೨೭] ಇಲ್ಲಿ ಮುಖ್ಯವಾಗಿ ವೀರಶೈವ ಸಂಪ್ರದಾಯದ ಪ್ರಮುಖ ಆಚರಣಾ ಭಾಗವಾಗಿರುವ ದಾಸೋಹ ಪರಿಕಲ್ಪನೆಯನ್ನು ಜಾರಿಗೆ ತಂದದ್ದು ಇತಿಹಾಸದ ಸಾಂದರ್ಭಿಕ ಒತ್ತಡದಿಂದ ಎಂದು ಈ ಲೇಖನದಲ್ಲಿ ಸ್ಪಷ್ಟಪಡಿಸಿದ್ದಾರೆ. ಭಾರತೀಯ ಪರಂಪರೆಯಲ್ಲಿ 'ದಾನ' ವ್ಯವಸ್ಥೆಯು ಜಾರಿಯಲ್ಲಿತ್ತು. ಈ ದಾನವು ಸಮಾಜದ ಆರ್ಥಿಕ ಅಸಮಾನತೆಯನ್ನು ನಿರ್ಮಿಸುವ ಪ್ರಬಲ ಮಾಧ್ಯಮವಾಗಿ ಬೆಳೆದಿತ್ತು. ರಾಜವರ್ಗ ಮತ್ತು ಪುರೋಹಿತ ವರ್ಗವು ಧನ-ಧಾನ್ಯವನ್ನು ದಾನದ ಹೆಸರಿನಲ್ಲಿ ಪಡೆದು ಆ ವರ್ಗವು ವೈಭವಯುತ ಜೀವನ ನಡೆಸುವುದು ಇತಿಹಾಸದ ಉದ್ದಕ್ಕೂ ಕಾಣಬಹುದು. ಇದನ್ನು ಸ್ಪಷ್ಟಪಡಿಸಲು ಸುಮಾರು ೨೫ ಸಾವಿರ ಶಾಸನಗಳಲ್ಲಿ ೨೦ ಸಾವಿರ ದಾನಶಾಸನಗಳಿವೆ. ಇದು ಅಂದಿನ ಸಮಾಜದಲ್ಲಿ ಬಹುದೊಡ್ಡ ಆರ್ಥಿಕ ಚಟುವಟಿಕೆಯಾಗಿತ್ತು. 'ದಾನ' ಕ್ರಿಯೆಯೆಂಬುದು ಒಂದು ವಸ್ತುವಿನ ಮೇಲಿನ ತನ್ನ ಹಕ್ಕನ್ನು ಇನ್ನೊಬ್ಬರಿಗೆ ಬಿಟ್ಟುಕೊಡುವುದಾಗಿದೆ.

"ಇಲ್ಲಿ ನನ್ನ ಹಕ್ಕನ್ನು ಬಿಟ್ಟುಕೊಟ್ಟೆನೆಂಬ 'ಅಹಂಭಾವ' ದಾತೃವಿಗೆ ನನಗೆ ಹಕ್ಕು ಬಿಟ್ಟುಕೊಟ್ಟನೆಂಬ 'ದೈನ್ಯಭಾವ' ಯಾಚಕನಿಗೆ ಉಂಟಾಗುವುದು ಸಹಜ. ಈ ಉಭಯಭಾವ ಸೂತಕಗಳಿಲ್ಲದೆ ಜರುಗುವ ಪರಸ್ಪರ ವಿನಿಮಯ ಕ್ರಿಯೆಯಲ್ಲಿ ದಾಸೋಹ ಇಲ್ಲಿ ವಸ್ತುವಿನ ಮೇಲೆ ನನ್ನ ಹಕ್ಕು ಇಲ್ಲ, ನಿನ್ನ ಹಕ್ಕು ಇಲ್ಲ; ಶಿವನ ಹಕ್ಕು ಇದೆಯೆಂಬ ಭಾವದಿಂದ ಕೊಡು-ಕೊಳ್ಳುವಿಕೆ ನಡೆಯುತ್ತದೆ."[೨೮]

ವೀರಶೈವತತ್ವದ ಪ್ರಕಾರ ಜಂಗಮಮುಖದಲ್ಲಿ ಲಿಂಗವನ್ನು ತೃಪ್ತಿಪಡಿಸಬೇಕು. ಅವಕ್ಕೆ ಮಾಧ್ಯಮ 'ದಾಸೋಹ' ಎಂದಿದ್ದಾರೆ. ಹೀಗೆ ಜಂಗಮದಾಸೋಹ ಕ್ರಿಯೆಯು ಲಿಂಗವನ್ನು ಸಾಕ್ಷಾತ್ಕರಿಸಿಕೊಳ್ಳುವುದಕ್ಕೆ ಒಂದು ಸಾಧನವಾಗಿದೆ ಎಂದಿದ್ದಾರೆ. ವೀರಶೈವದಲ್ಲಿರುವ 'ತ್ರಿವಿಧ ದಾಸೋಹ' ಎಂಬ ಪಾರಿಭಾಷಿಕ ಪದವನ್ನು ಕುರಿತು ಚರ್ಚಿಸಿದ್ದಾರೆ. ತ್ರಿವಿಧವೆಂದರೆ ತನು, ಮನ, ಧನ ಇವುಗಳನ್ನು ಸರಿಯಾಗಿ ಕ್ರಮವಾಗಿ ಗುರು, ಲಿಂಗ, ಜಂಗಮಕ್ಕೆ ಅರ್ಪಿಸುವುದು ತ್ರಿವಿಧದಾಸೋಹವಲ್ಲ, ಬದಲಾಗಿ ಇಡಿಯಾಗಿ ಜಂಗಮಕ್ಕೆ ಅರ್ಪಿಸುವುದು 'ತ್ರಿವಿಧ ದಾಸೋಹ' ಎಂಬ ಸಂದೇಹ ತಲೆದೋರುತ್ತಿದೆ. ಇದನ್ನು ವಿದ್ವಾಂಸರು ಸಮಾಲೋಚಿಸಬೇಕೆಂದು ಹೇಳಿದ್ದಾರೆ.

ವಚನಗಳಿಗೆ ದಾಸೋಹ ಕುರಿತ ಚರ್ಚೆ ಸಂದರ್ಭದಲ್ಲಿ ತನು, ಮನ, ದನಕ್ಕೆ ಅರ್ಥ, ಪ್ರಾಣ, ಅಭಿಮಾನದಂತ ಪದಗಳನ್ನು ಸಮಾನವಾಗಿ ಬಳಸಲಾಗಿರುವ ಪದಗಳೆನಿಸುತ್ತವೆ. ಇಲ್ಲಿ ಅರ್ಥವೆಂದರೆ ಧನ, ಪ್ರಾಣವೆಂದರೆ ತನುವೆಂದು, ಅಭಿಮಾನವೆಂದರೆ ಮನ ಎಂದು ಅರ್ಥೈಸಿಕೊಳ್ಳಬೇಕಾಗುತ್ತದೆ ಎನ್ನುತ್ತ ವಿಶಿಷ್ಟ ರೀತಿಯ ದಾಸೋಹವನ್ನು ಕುರಿತು ಉದಾಹರಣೆ ಮೂಲಕ ಚರ್ಚಿಸಿದ್ದಾರೆ.

"ಅರ್ಥ ಪ್ರಾಣ ಅಭಿಮಾನದ ಕೊಟ್ಟನೆಂಬರಲ್ಲದೆ,
ತನ್ನ ಕೊಟ್ಟ ಭಕ್ತದನಾದನೂ ಕಾಣೆ.
ದಾನ ತನ್ನ ವಸ್ತುವ ಕೊಟ್ಟನಲ್ಲದೆ,
ತನ್ನ ಕೊಟ್ಟುದಿಲ್ಲ.
ಸಿರಿಯಾಳ ತನ್ನ ಮಗನ ಕೊಟ್ಟನಲ್ಲದೆ,
ತನ್ನ ಕೊಟ್ಟುದಿಲ್ಲ.
ಬಲ್ಲಾಳ ಎನ್ನ ವಧುವ ಕೊಟ್ಟನಲ್ಲದೆ,
ತನ್ನ ಕೊಟ್ಟುದಿಲ್ಲ."[೨೯]

ಶೈವದಲ್ಲಿ ಅರ್ಥ, ಪ್ರಾಣ, ತ್ಯಾಗ, ಅಭಿಮಾನ ಪದಗಳು ಕಂಡುಬರುತ್ತವೆ. ಅರ್ಥ ದಾಸೋಹಕ್ಕಾಗಿ ಜೇಡರ ದಾಸಿಮಯ್ಯ ವಸ್ತ್ರತ್ಯಾಗ, ಪ್ರಾಣ ದಾಸೋಹಕ್ಕೆ ಸಿರಿಯಾಳನ ಪುತ್ರತ್ಯಾಗ, ಅಭಿಮಾನ ದಾಸೋಹಕ್ಕೆ ಸಿಂಧುಬಲ್ಲಾಳನ ಪತ್ನಿತ್ಯಾಗಗಳ ನಿದರ್ಶನ ಈ ಮೇಲಿನ ವಚನಗಳಲ್ಲಿ ಕಂಡುಬರುವುದನ್ನು ಹೇಳಿದ್ದಾರೆ. ಆದರೆ ವೀರಶೈವರಲ್ಲಿ ಶೈವ ಆಚರಣೆಯಂತೆ ಸ್ವಸ್ತ್ರೀಯನ್ನು ಜಂಗಮಕ್ಕೆ ಕೊಡುವ ಆಚರಣೆಗೆ ಮನ್ನಣೆ ಇಲ್ಲ ಎನ್ನುತ್ತ "ಛಲಬೇಕು ಶರಣನಿಗೆ ಪರಸತಿ ಯನೊಲ್ಲೆನೆಂಬ' ಎಂಬ ವಚನವನ್ನು ಉದಾಹರಣೆ ಕೊಡುವ ಮೂಲಕ ಸ್ಪಷ್ಟವಾಗಿ ತಿಳಿಸಿದ್ದಾರೆ.

ಹೀಗೆ ದಾಸೋಹ ಪರಿಕಲ್ಪನೆಯು ರಾಜ–ಪುರೋಹಿತ ವರ್ಗವೆಂಬ ಪರಂಪರಾಗತ ಶೈವವಾದವು ಅಳಿದು ಲಿಂಗದ ಮುಖ 'ಜಂಗಮ' ಅಂದರೆ 'ಜನವರ್ಗ'ವೆಂಬ ಪ್ರಗತಿಪರ ವೀರಶೈವವಾದವು ಬೆಳೆಯಿತು ಎಂದು ಹೇಳುವ ಎಂ.ಎಂ.ಕಲಬುರ್ಗಿ ಅವರು ದಾಸೋಹ ಪರಿಕಲ್ಪನೆಯು ವೀರಶೈವ ಮತದ ಶ್ರೇಷ್ಠ ಹಾಗೂ ಆದರ್ಶ ಆಚರಣಾ ಮಹತ್ವವನ್ನು ಆ ಮೂಲಕ ವೀರಶೈವ ಧರ್ಮದ ಶ್ರೇಷ್ಠತೆಯನ್ನು ಎತ್ತಿಹಿಡಿಯುವ ಪ್ರಯತ್ನವನ್ನು ಮಾಡಿದ್ದಾರೆ. ಈ 'ದಾಸೋಹ ತತ್ವ'ವನ್ನು ಕುರಿತಂತೆ 'ನಾನು ಕಲಬುರ್ಗಿ ಎಂ.ಎಂ. ಬರಹಗಳ ವಾಚಿಕೆ'ಯ ಸಂಪಾದಕರು "ಜಂಗಮಕ್ಕೆ 'ಧನ' ಅರ್ಪಿಸಬೇಕೆಂಬ, 'ದಾಸೋಹ' ನಡೆಸಬೇಕೆಂಬ ಮಾತುಗಳು ವೀರಶೈವದಲ್ಲಿ ಮೇಲಿಂದ ಮೇಲೆ ಕೇಳಿಬರುತ್ತವೆ. ಹೀಗಾಗಿ 'ಜಂಗಮ' ಮತ್ತು 'ಧನ'ಗಳಿಗೆ ಸಂಬಂಧಿಸಿದ ಯಾವುದೋ ಒಂದು ಶೋಷಣೆ ರೂಪದ ಆರ್ಥಿಕ ಚಟುವಟಿಕೆಗೆ ಬದಲು,

ಈ ದಾಸೋಹತತ್ವ ಹುಟ್ಟಿಕೊಂಡಿರಬಹುದೆನಿಸುತ್ತದೆ. ಆ ಶೋಷಣೆ ರೂಪದ ಆರ್ಥಿಕ ಚಟುವಟಿಕೆ ಮತ್ತಾವುದೂ ಅಲ್ಲ, 'ದಾನ', ಅಂದರೆ ಶೋಷಣೆ ರೂಪದ ದಾನವ್ಯವಸ್ಥೆಯನ್ನು ಸದೆಬಡಿಯಲು 'ದಾಸೋಹತತ್ವ'ವನ್ನು ಶರಣರು ಅನುಷ್ಠಾನಕ್ಕೆ ತಂದರು"[೨೯] ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

೧೨ನೇ ಶತಮಾನದಲ್ಲಿ ದಾನ ಅತ್ಯಂತ ಪ್ರಚಲಿತವಿದ್ದ ಸಂದರ್ಭದಲ್ಲಿ ಅದು ಒಂದು ರೀತಿಯ ಶೋಷಣೆಯ ಮಾರ್ಗವಾಗಿ ಬೆಳೆದಿತ್ತು. ಆಗ ತಮಗೆ ಮುಕ್ತಿ ದೊರೆಯುತ್ತದೆ ಎಂಬ ಮೂಢನಂಬಿಕೆಯಿಂದ ಜನರು ಷೋಡಶ ದಾನಗಳನ್ನು ಕೊಡಲು ಪ್ರಾರಂಭಿಸಿದರು. ಅದನ್ನು ಹೊಡೆಯಲು ಬಸವಣ್ಣನವರು ದಾಸೋಹತತ್ವವನ್ನು ತರಬೇಕಾಯಿತು. ದಾಸೋಹ ಮಾಡಬೇಕಾದರೆ ಕಾಯಕ ಮಾಡಬೇಕು. ಜಗತ್ತಿನಲ್ಲಿ ಯಾವ ವಸ್ತುವಿನ ಮೇಲೆ ಯಾರಿಗೂ ಹಕ್ಕಿಲ್ಲ. ದೇವರು ಕೊಡುವುದು ದಾನ, ನಾವು ಇತರರಿಗೆ ಕೊಡುವುದು ದಾಸೋಹ. ಹಾಗಾಗಿ ಲಿಂಗಾಯತ ಧರ್ಮದ ಮೂಲಭೂತ ತತ್ವ ದಾಸೋಹ ಎಂಬುದು ಎಂ.ಎಂ.ಕಲಬುರ್ಗಿ ಅವರ ಚಿಂತನೆಯಾಗಿದೆ.

'ದೃಷ್ಟಿಯಾರೆ–ದೃಷ್ಟಿವಾರಿ' ಎಂಬ ಲೇಖನದಲ್ಲಿ ಎಂ.ಎಂ.ಕಲಬುರ್ಗಿ ಅವರು 'ದೃಷ್ಟಿಯಾರೆ' ಎಂದು ಬಳಕೆಯಾಗಿರುವ ವಚನವೊಂದನ್ನು ಎತ್ತಿಕೊಂಡು ಅದರ ಸರಿಯಾದ ಮೂಲ ಪಾಠವನ್ನು ಪರಿಷ್ಕರಿಸಲು ವೀರಶೈವ ಧರ್ಮದ ಒಂದು ವ್ರತಾಚರಣೆಯ ಹಿನ್ನೆಲೆಯಲ್ಲಿ ದೃಷ್ಟಿವಾರಿ ಪದವೆ ಸರಿಯಾದ ಮೂಲಪಾಠ ಎಂದು ಪತ್ತೆ ಹಚ್ಚುತ್ತಾರೆ.

"ಕಟ್ಟಿದಿರಿನಲ್ಲಿ ಶಿವಭಕ್ತನ ಕಂಡು
ದೃಷ್ಟಿ 'ಯಾರೆ' ಶರಣೆಂದಡೆ
ಹುಟ್ಟೇಳು ಜನ್ಮದ ಪಾಪ–ಬಿಟ್ಟು ಹೋಹುದು ನೋಡಾ."[೩೦]

ಇಲ್ಲಿ 'ದೃಷ್ಟಿಯಾರೆ' ಎಂಬುದಕ್ಕೆ 'ಕಣ್ತುಂಬ' ಎಂಬ ಅರ್ಥ ಸ್ಪಷ್ಟವಾಗಿಯೇ ಇದೆ. ಹೀಗಿದ್ದು 'ದೃಷ್ಟಿವಾರಿ' ಇತ್ಯಾದಿ ಭಿನ್ನಪಾಠಗಳೇಕೆ ಹುಟ್ಟಿಕೊಂಡವು? ಎಂಬ ಪ್ರಶ್ನೆ ಏಳುವುದು ಸಹಜ; ಇದಕ್ಕೆ ಎಂ.ಎಂ.ಕಲಬುರ್ಗಿ ಅವರು ಕೊಡುವ ಸಮರ್ಥನೆ ಈ ಕೆಳಕಂಡಂತೆ ಒಂದು ನಿದರ್ಶನವನ್ನು, ಸರಿಯಾದ ಸಕಾರಣವನ್ನು ಕೊಡುತ್ತಾರೆ.

'ದೃಷ್ಟಿವಾರಿ' ಪದಕ್ಕೆ ಶೈವ ಪರಂಪರೆಯಲ್ಲಿ ವಿಶಿಷ್ಟ ಅರ್ಥವಿದೆ. ಶಿವಲಿಂಗದ ಮುಂದೆ ಇರುವ ನಂದಿಯನ್ನು ಹರಿಹರ 'ದೃಷ್ಟಿವಾರಿಯು ದೃಢಚಿತ್ತ' ಎಂದು ಕರೆದುದು ಎಲ್ಲರಿಗೂ ಗೊತ್ತು. 'ದೃಷ್ಟಿವಾರಿ' ಎಂಬುದು ದೇವಾಲಯದಲ್ಲಿ ಶಿವಲಿಂಗವನ್ನೇ ನೋಡುತ್ತ ಕುಳಿತುಕೊಳ್ಳುವ

ವ್ರತ. ಹೀಗೆ ನೋಡುವಾಗ ತನಗೂ ಶಿವಲಿಂಗಕ್ಕೂ ಮಧ್ಯೆ ಬಂದವರನ್ನು ಸಂಹರಿಸುವುದು ಈ ವ್ರತದ ಪರಾಕಾಷ್ಠತೆಯೆಂದು ಬಸವರಾಜದೇವರ ರಗಳೆಯ ಕಠಿಣ ಪದಗಳಿಗೆ ಅರ್ಥ ಬರೆಯುತ್ತ ಟಿ.ಎಸ್.ವೆಂಕಣ್ಣಯ್ಯ ಹೇಳಿದ್ದಾರೆ"[೩೧] ಎಂದು ಉಲ್ಲೇಖಿಸಿ, ಇಂತಹ ವ್ರತವು ಧಾರ್ಮಿಕ ಮತ್ತು ಲೌಕಿಕ ಕ್ಷೇತ್ರಗಳಲ್ಲಿ ಬಳಕೆಯಾಗುವ ಪದವೆಂದು ಹೇಳುವ ಎಂ.ಎಂ.ಕಲಬುರ್ಗಿ ಅವರು ಲೌಕಿಕ ಕ್ಷೇತ್ರದವರೆಗೆ ಇದರ ಬಳಕೆ ವ್ಯಾಪಿಸಿದೆ ಎಂದು ಗುರುತಿಸುತ್ತಾರೆ. "ಶಿವಲಿಂಗ ದೇವನ ದೃಷ್ಟಿವಾರಿ ನೋಡದವನ"[೩೨] ಎಂಬುದು ಧಾರ್ಮಿಕ ಕ್ಷೇತ್ರಕ್ಕೆ 'ಶಿವಭಕ್ತನ ಕಂಡು ದೃಷ್ಟಿವಾರಿ ಶರಣೆಂದೆಡೆ' ಎಂಬುದು ಲೌಖಿಕ ಕ್ಷೇತ್ರಕ್ಕೆ ಸಂಬಂಧಪಟ್ಟ ವಾಕ್ಯಗಳಾಗಿರುವುದು ಒಂದು ವಿಶೇಷ" ಎಂದು ಹೇಳುವ ಎಂ.ಎಂ.ಕಲಬುರ್ಗಿ ಅವರು ವೀರಶೈವ ಮತತತ್ವದ ಸಾಂಪ್ರದಾಯಿಕ ಆಚರಣೆಯ, ಭಾಗವಾಗಿ ಗುರ್ತಿಸುತ್ತಾರೆ.

'ವೀರಶೈವ ಸ್ವರವಚನ ಸಾಹಿತ್ಯ' ಎಂಬ ಲೇಖನದಲ್ಲಿ ವಚನ ಮತ್ತು ಸ್ವರವಚನ ಕುರಿತಂತೆ ಚರ್ಚಿಸಿದ್ದಾರೆ. ಯಾವುದೇ ಸಾಹಿತ್ಯ ಪ್ರಕಾರವನ್ನು ಅದರ 'ರೂಪ' ಇಲ್ಲವೆ 'ವಸ್ತು'ವನ್ನು ಗಮನಿಸಿ ಹೆಸರಿಸಲಾಗುತ್ತದೆ. ಆದರೆ ಶರಣರ 'ವಚನ' ಎನ್ನುವುದು ಕೇವಲ ಗದ್ಯವಲ್ಲವಾಗಿ ರೂಪವನ್ನು ಸೂಚಿಸುವುದು. ಹಾಗೆಯೇ ಒಂದೇ ರೀತಿಯ ವಸ್ತುವನ್ನು ಬಳಸಿಲ್ಲವಾಗಿ ವಸ್ತುವನ್ನೂ ಸೂಚಿಸುವುದಿಲ್ಲ. ಹಾಗಾದರೆ ಇದು ಸೂಚಿಸುವುದು ಏನನ್ನು ಎನ್ನುವ ಪ್ರಶ್ನೆಗೆ ಉತ್ತರವಾಗಿ ಎಂ.ಎಂ.ಕಲಬುರ್ಗಿ ಅವರು ಸರಿಯಾದ ವಿಶ್ಲೇಷಣೆ ಮಾಡುವ ಮೂಲಕ ಸಮರ್ಥನೆ ಮಾಡಿಕೊಂಡಿದ್ದಾರೆ. ಅದೇನೆಂದರೆ, "ಬಹುಶಃ ವಚನದಲ್ಲಿ ಏನು ಹೇಳಿದ್ದಾರೆ? ಹೇಗೆ ಹೇಳಿದ್ದಾರೆ? ಮುಖ್ಯವಲ್ಲ. ಯಾರು ಹೇಳಿದ್ದಾರೆ? ಮುಖ್ಯ ಕವಿಯ ನುಡಿಯಾಗಿರುವ ಅದು ಅವನ ನಡೆಯನ್ನು ಅಪೇಕ್ಷಿಸುತ್ತದೆ. ಅಂದರೆ ಶುದ್ಧ ನಡೆಯುಳ್ಳವನ ನುಡಿ ಮಾತ್ರ ವಚನ ಎನಿಸಿಕೊಳ್ಳುತ್ತದೆ. ಶರಣರ ದೃಷ್ಟಿಯಲ್ಲಿ 'ವಚನ' ಶಬ್ದಕ್ಕೆ ಇದ್ದ ಅರ್ಥವಿದು"[೩೨] ಎಂದು ಸರಿಯಾದ ರೀತಿಯಲ್ಲಿ ಅರ್ಥೈಸಿದ್ದಾರೆ. ಮತ್ತೆ ಕೆಲವರು ವಚನಗಳಲ್ಲಿ ಇರುವ ಸಾಹಿತ್ಯ ಗುಣ ಸ್ವರವಚನಗಳಲ್ಲಿ ಇಲ್ಲ ಎಂಬ ಪ್ರಶ್ನೆಗೂ ಸರಿಯಾದ ರೀತಿಯಲ್ಲಿ ಅರ್ಥೈಸುತ್ತಾರೆ. "ಮೂಲತಃ ಸ್ವರವಚನವು ಗೀತ ಮಾಧ್ಯಮದ ಸಾಹಿತ್ಯ, ಗೀತಾ ಮಾಧ್ಯಮವನ್ನು ಬಿಟ್ಟು ಜೀವನ ಮಾಧ್ಯಮದ ಮೂಲಕ ನೋಡಿದರೆ ಅವುಗಳ ಸತ್ವ–ಪರಿಣಾಮಗಳಲ್ಲಿ ಕೊರತೆ ಕಾಣುವುದು ಸಹಜ."[೩೪] ಹೀಗೆ ವಚನ ಎಂದರೆ ಏನು? ವಚನ ಹಾಗೂ ಸ್ವರವಚನಗಳ ವಿಶಿಷ್ಟತೆ ಏನು ಎಂಬುದನ್ನು ಅತ್ಯಂತ ತರ್ಕಬದ್ಧವಾಗಿಯೂ ಮತ್ತು ಚಿಂತನಪ್ರಧಾನವಾಗಿಯೂ ಮಂಡಿಸುತ್ತಾರೆ.

‘ಅಸ್ಪೃಶ್ಯತೆಯ ನಿರ್ಮೂಲನ: ಶರಣರ ಕಾರ್ಯ ವಿಧಾನ’ ಎಂಬ ಲೇಖನದಲ್ಲಿ ಎಂ.ಎಂ.ಕಲಬುರ್ಗಿ ಅವರು ಅಸ್ಪೃಶ್ಯತೆಯ ನಿರ್ಮೂಲನೆಯ ಬಗ್ಗೆ ವಚನ ಚಳುವಳಿ ಹೇಗೆ ಸಕ್ರಿಯವಾಗಿ ತೊಡಗಿತು ಎನ್ನುವುದರ ಬಗ್ಗೆ ವಿವರಿಸಿದ್ದಾರೆ. ವೀರಶೈವ ಆಸ್ತಿಕ ಧರ್ಮವಾಗಿದ್ದರೂ ಜೀವಜಗತ್ತುಗಳ ಬಗ್ಗೆ ಬಹಳಷ್ಟು ಒತ್ತುಕೊಟ್ಟು ವಾಸ್ತವ ಧರ್ಮವೆನಿಸಿತು. ಜನ ಬದುಕಬೇಕು ಎಂಬುದರತ್ತ ಒಲವು ಜಾಸ್ತಿ. ಈ ಕಾರಣದಿಂದಾಗಿ ವರ್ಗಭೇದ, ವರ್ಣಭೇದ, ಲಿಂಗಭೇದ ಮೊದಲಾದ ಸಾಮಾಜಿಕ ಸಮಸ್ಯೆಗಳಿಗೆ ಧಾರ್ಮಿಕ ಚೌಕಟ್ಟಿನಲ್ಲಿ ಪರಿಹಾರಗಳನ್ನು ಹುಟ್ಟು ಹಾಕಿತು. ವೀರಶೈವ ಕೇವಲ ವಿಚಾರಪ್ರಧಾನವಾಗಿರದೇ ಅದು ಆಚಾರಪ್ರಧಾನ ಧರ್ಮವಾಗಿದೆ. ಇದನ್ನು ಕ್ರಿಯಾಜ್ಞಾನ ಸಾಮರಸ್ಯ ಅಂದರೆ ಲಿಂಗಾಂಗ ಸಾಮರಸ್ಯವೆಂದು ವೀರಶೈವ ಹೇಳುತ್ತದೆ ಎಂದಿದ್ದಾರೆ. “ಇಲ್ಲಿ ಜ್ಞಾನ(ವಿಚಾರ) ಶುದ್ಧಿಯೇ ಅಂತರಂಗಶುದ್ಧಿ, ಕ್ರಿಯಾ(ಆಚಾರ) ಶುದ್ಧಿಯೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲಸಂಗಮಯ್ಯನನೊಲಿಸುವ ಪರಿ” ಎಂಬ ದೋರಣೆಯು ವಚನ ಚಳುವಳಿಯ ಮೂಲ ಮಂತ್ರವಾಗಿದೆ.

ಅಸ್ಪೃಶ್ಯರಿಗೆ ‘ಹೊಲೆಯ’; ‘ಮಾದಿಗ’ ಎಂಬ ಇತ್ಯಾದಿ ಕೀಳಸ್ತರಗಳಿಗೆ ಬದಲಾಗಿ ‘ಪಿರಿಯ ಮಾಹೇಶ್ವರರು’ ಎಂದು ಕರೆಯುವುದರ ಮೂಲಕ ಮಾನಸಿಕ ಹಿಂಸೆಯನ್ನು ತೊಡೆದು ಹಾಕಲು ಪ್ರಯತ್ನಿಸಿದರು. ಅವರವರ ಜನರ ಶ್ರಮಕ್ಕೆ ತಕ್ಕಂತೆ ಅಂದರೆ ಬೌದ್ಧಿಕ ಶ್ರಮ ದೈಹಿಕ ಶ್ರಮವನ್ನು ಅವಲಂಬಿಸಿ ಮೇಲು, ಕೀಳು ಎಂಬ ಭೇದ ಭಾವ ಏರ್ಪಟ್ಟಿತ್ತು. ಈ ರೀತಿಯ ಕಸುಬಿನ ಆಧಾರದ ಮೇಲೆ ಜಾತಿಗಳು ಹುಟ್ಟಿಕೊಂಡಿದ್ದರಿಂದ ಇಂತಹದ್ದನ್ನು ತಡೆಯಲು ಎಲ್ಲ ಶ್ರಮವನ್ನು ‘ಕಾಯಕ’ದ ಹೆಸರಿನಲ್ಲಿ ನಡೆಯತೊಡಗಿದವು. “ಕಾಸಿಕಮ್ಮಾರನಾದ, ಬೀಸಿ ಮಡಿವಾಳನಾದ, ಹಾಸನಿಕ್ಕಿ ಸಾಲಿಗನಾದ, ವೇದವನೋದಿ ಹಾರುವನಾದ.”[೩೫] ಇಂತಹ ವಚನಗಳನ್ನು ರಚಿಸುವ ಮೂಲಕ ವೃತ್ತಿಯ ಬಗೆಗೆ ಇದ್ದ ಕೀಳು ಭಾವನೆಯನ್ನು ಹೋಗಲಾಡಿಸಿದರು. ಇವುಗಳಿಗಿಂತ ಮುಖ್ಯವಾಗಿ ಸಹಭೋಜನವನ್ನು ಅನುಸರಿಸಲು ಸಾರಿದರು. ಕುಲಜರು ಅಂತ್ಯಜರ ಮನೆಯಲ್ಲಿ ಊಟ ಮಾಡುವುದು, ಉಚ್ಚಕುಲದ ವಚನಕಾರರು ಮುಕ್ತವಾಗಿ ಹೊಲಗೇರಿಗೆ ಹೋಗುತ್ತಿದ್ದರು. ಅಲ್ಲಿ ಪ್ರಸಾದ ಸ್ವೀಕರಿಸುತ್ತಿದ್ದರು. ಈ ಪದ್ಧತಿಯನ್ನು ಕಾರ್ಯರೂಪಕ್ಕೆ ತಂದವರೆ ಬಸವಣ್ಣ. ಶಿವನಾಗಮಯ್ಯನ ಮನೆಯಲ್ಲಿ ಅಸ್ಪೃಶ್ಯವೆನಿಸಿದ ಶಿವ ಕೆಂಭಾವಿ ಭೋಗಣ್ಣನ ಮನೆಯಲ್ಲಿ ಊಟ ಮಾಡಿದ ಘಟನೆಗಳು ಈ ಮಾತಿಗೆ ನಿದರ್ಶನ ಎಂದು ಎಂ.ಎಂ.ಕಲಬುರ್ಗಿ ಅವರು ಹೇಳುತ್ತಾ “ಸಹಪಂಕ್ತಿ ಭೋಜನ ಅಂದಿನ ಕಾಲದಲ್ಲಿ ಅಪರಾಧವೆಂಬುದನ್ನೂ ಕಡೆಗಣಿಸಿ ಶರಣರು ಮುನ್ನಡೆದರು. ಅಸ್ಪೃಶ್ಯರು ಈ ಬಗೆಯ ಒಡನಾಟ ಅಪರಾಧವಲ್ಲವೆಂದೂ ಬಹಿರಂಗವಾಗಿ ವಾದ ಹೂಡಿದರು. ಪ್ರತಿವಾದ ಹೂಡಿದ ಪುರೋಹಿತರನ್ನೂ ಅವರಿಗೆ

ಬೆಂಬಲ ನೀಡಿದ ಅರಸರನ್ನೂ ಖಂಡಿಸಿ ತಮ್ಮ ನಿಲುವನ್ನು ಸಮರ್ಥಿಸಿಕೊಂಡರು."[೩೫] ಸಹಪಂಕ್ತಿ ಭೋಜನದ ಮೂಲಕ ಪ್ರಭುತ್ವಶಾಹಿತ್ವವನ್ನು ಧಿಕ್ಕರಿಸುವ ಮೂಲಕ ಸಮಾನತೆ ತರಲು ಮುಂದಾದರು. ಜೊತೆಗೆ ಅಸ್ಪೃಶ್ಯರಿಗೂ ಲಿಂಗದೀಕ್ಷೆ, ಗುರುಕರುಣೆ ಮುಕ್ತವಾಗಿ ನಡೆಯುವ ಅವಕಾಶಗಳನ್ನು ಒದಗಿಸಿಕೊಟ್ಟರು. ವಚನ ಚಳುವಳಿ ಮಾಡಿದ ಇನ್ನೊಂದು ಮುಖ್ಯ ಕಾರ್ಯವೆಂದರೆ ಅಂತರ್‌ಜಾತಿ ವಿವಾಹ. ಮಧುವಯ್ಯನ ಮಗಳಿಗೂ ಹಾಗೂ ಹರಳಯ್ಯನ ಮಗನಿಗೂ ಮದುವೆ ಮಾಡುವುದರ ಮೂಲಕ ಅಂತರ್‌ಜಾತಿ ಪ್ರೇಮವಿವಾಹ ಮಾಡಲು ಮುಂದಾಗಿ ಅಸ್ಪೃಶ್ಯತೆಯ ಬೇರಿಗೆ ಕೈಹಾಕಿ ಬುಡಸಮೇತ ಕೀಳುವ ಪ್ರಯತ್ನ ಮಾಡಿದರು.

ಸ್ಪರ್ಶ, ಸಹಭೋಜನ, ರಕ್ತಸಂಬಂಧಗಳೆಂಬ ಲೌಖಿಕ ನಡತೆಗಳ ಜೊತೆಗೆ ಅಸ್ಪೃಶ್ಯತೆಯನ್ನು ಗೌರವಿಸುವುದರಲ್ಲೂ ಶರಣರು ಹೃದಯವಂತಿಕೆಯಿಂದ ಮೆರೆದರು. "ಕಂಡ ಭಕ್ತರಿಗೆ ಕೈಮುಗಿಯುವಾತನೇ ಭಕ್ತ"[೩೮] ಮೊದಲಾದ ವಚನಗಳ ಮೂಲಕ ಇತರರನ್ನು ಗೌರವ ಭಾವದಿಂದ ಕಾಣಬೇಕೆಂಬ ಸಮಾನತೆಯ ತತ್ವ ಶರಣರಲ್ಲಿ ಬಸವಣ್ಣ ಕಾರ್ಯರೂಪಕ್ಕೆ ತಂದರು. ಡೋಹರ ಕಕ್ಕಯ್ಯ 'ಶರಣು' ಹೇಳಿದರೆ ಬಸವಣ್ಣ ಪ್ರತಿಯಾಗಿ 'ಶರಣು ಶರಣು' ಹೇಳಿದುದನ್ನು ಇಲ್ಲಿ ನೆನೆಯಬೇಕು ಎಂಬ ಮಾತಿನಲ್ಲಿ ಎಂ.ಎಂ.ಕಲಬುರ್ಗಿ ಅವರು ಸಮಾನತೆಯ ಸಾರ್ವಭೌಮ ಬಸವಣ್ಣನ ತತ್ವ ಆದರ್ಶಗಳನ್ನು ಎತ್ತಿಹಿಡಿಯುವ ಪ್ರಯತ್ನ ಮಾಡಿದ್ದಾರೆ. ಹೀಗೆ ವಿವಿಧ ರೀತಿಯಲ್ಲಿ ಅಸ್ಪೃಶ್ಯತೆಯ ನಿವಾರಣೆಗೆ ಕಾರಣವಾದ ಐತಿಹಾಸಿಕ ಸಂಗತಿಗಳನ್ನು ಬಸವಣ್ಣನ ತತ್ವ ಆದರ್ಶಗಳನ್ನು; ಸಾಮಾಜಿಕ ಸಮಾನತೆಯ ಮೌಲ್ಯವನ್ನು ಎತ್ತಿ ಹಿಡಿಯುವ ಪ್ರಯತ್ನ ಮಾಡಿದ್ದಾರೆ.

ಬಲಿದಾನ ಮರಣ ಸಂಪ್ರದಾಯಕ್ಕೆ ಶರಣರ ಪ್ರತಿಕ್ರಿಯೆ ಎಂಬ ಲೇಖನದಲ್ಲಿ ಬಲಿದಾನ ಹಾಗೂ ಮರಣ ಸಂಪ್ರದಾಯ ಪದ್ಧತಿಯನ್ನು ಶರಣರು ಖಂಡಿಸಿದ ಬಗೆಯನ್ನು ಕುರಿತು ಚರ್ಚಿಸಿದ್ದಾರೆ. ಪ್ರಾಚೀನ ಕಾಲದಿಂದಲೂ ಪಾರಂಪರಿಕವಾಗಿ ನಡೆದುಕೊಂಡು ಬಂದ ಬಲಿದಾನವು ಅತ್ಯಂತ ಕ್ರೂರವಾದ ಪದ್ಧತಿಯಾಗಿದೆ. ಇದು ಕೇವಲ ಪ್ರಾಣಿ–ಪಕ್ಷಿಗಳಲ್ಲದೆ, ಮನುಷ್ಯರನ್ನು ಬಲಿ ಕೊಡುವ ಅಥವಾ ಬಲಿಯಾಗುವ ರೂಢಿಯು ಇತಿಹಾಸದುದ್ದಕ್ಕೂ ಬೆಳೆದುಬಂದಿದೆ. ವೈದಿಕ ಸಂಪ್ರದಾಯದ ಬಳುವಳಿಯಾಗಿ ಅನೇಕ ಬಗೆಯ ಅನೈಸರ್ಗಿಕ ಮರಣಗಳು ಜೀವನ ಮೌಲ್ಯದ ಹೆಸರಿನಲ್ಲಿ ಪ್ರಾಚೀನ ಭಾರತದ ತುಂಬ ಬೆಳೆದುನಿಂತಿದ್ದವು. ದೇವರ ಹೆಸರಿನಲ್ಲಿ ಹಾಗೂ ವ್ಯಕ್ತಿಗಳ ಹೆಸರಿನಲ್ಲಿ ಬೆಲೆಯುಳ್ಳ ಪ್ರಾಣವನ್ನು ಕಳೆದುಕೊಳ್ಳುವುದರ ಮೂಲಕ ಆಚರಿಸಿ ಕೊಳ್ಳುತ್ತಿದ್ದರು. ಎಂ.ಎಂ.ಕಲಬುರ್ಗಿ ಅವರು ಈ ಬಲಿದಾನದಲ್ಲಿ ಧಾರ್ಮಿಕ ಬಲಿದಾನ,

ಲೌಕಿಕ ಬಲಿದಾನ ಎಂದು ಗುರ್ತಿಸಿ ಲೌಕಿಕ ಬಲಿದಾನದಲ್ಲಿ ಮಾಸ್ತಿಮರಣ, ವೇಳೆವಾಳಿ ಮರಣಭೇದಗಳ್ನು ಗುರುತಿಸುತ್ತಾರೆ.

"ಧಾರ್ಮಿಕ ಬಲಿದಾನ ಮರಣಗಳು ದೇವರ ಸಂಪ್ರೀತಿಗಾಗಿ ಸ್ವರ್ಗ ಲಾಭಕ್ಕಾಗಿ ಒಳ್ಳೆಯ ಪುರ್ನರ್ಜನ್ಮಕ್ಕಾಗಿ ತಾವೇ ಮಾಡಿಕೊಳ್ಳುವ ಜೀವಹತ್ಯೆಗಳಾಗಿವೆ."[೩೮] ಇದರ ವಿರುದ್ಧ ಅನೇಕ ವಚನಕಾರರು ಪ್ರಶ್ನೆಯನ್ನೆತ್ತುತ್ತಾರೆ. ಅಂತಹ ವಚನಗಳಲ್ಲಿ ಒಂದು ವಚನ ಹೀಗಿದೆ.

"ಲಿಂಗಬಿದ್ದರೆ ಸಮಾಧಿಯ ಕೊಂಡೆನೆಂಬಿರಿ
ಗುರುಸತ್ತರೇಕೆ ಸಮಾಧಿಯ ಕೊಳ್ಳಿರಣ್ಣಾ?.......
ಲಿಂಗಬೀಳಬಲ್ಲುದೆ? ಪೃಥ್ವಿ ತಾಳಬಲ್ಲುದೆ?.......
ಲಿಂಗದ ಕೂಡೆ ಸಮಾಧಿಯ ಕೊಂಡೆನೆಂದೆಂಬ ಭಕ್ತರಿಗೆ
ನಾಯಕ ನರಕ ತಪ್ಪದು, ನಿಃಕಳಂಕ ಮಲ್ಲಿಕಾರ್ಜುನ ಪ್ರಭುವೆ."[೩೯]

ತಾವು ಆರಾಧಿಸುವ ಲಿಂಗವು ತನ್ನ ಕೈಯಿಂದ ಜಾರಿ ಭೂಮಿಗೆ ಬಿದ್ದರೆ ಅದರ ಪ್ರಾಯಶ್ಚಿತವಾಗಿ ಆತ್ಮಹತ್ಯೆ ಮಾಡಿಕೊಳ್ಳುವ ಭಕ್ತರನ್ನು ಈ ವಚನವು ಛೇಡಿಸುತ್ತದೆ. ಆ ಮೂಲಕ ಲಿಂಗಕ್ಕಿಂತಲೂ ಆತ್ಮಲಿಂಗ ಪರಿಶುದ್ಧವಾಗಿರುವ ಭಕ್ತಿಯು ಶ್ರೇಷ್ಠ ಎಂದು ಈ ವಚನವು ಸಾರುತ್ತದೆ. ಹೀಗೆ ಧಾರ್ಮಿಕ ಅಥವಾ ಧರ್ಮದ ಹೆಸರಿನಲ್ಲಿ ಆಗುವ ಬಲಿದಾನವು ಎಷ್ಟು ಅವೈಜ್ಞಾನಿಕ ಮತ್ತು ಅಜ್ಞಾನಯುತವಾದುದು ಎಂದು ವೀರಶೈವ ಚಳುವಳಿಯು ಸಾರುತ್ತದೆ ಎಂಬುದನ್ನು ಎಂ.ಎಂ.ಕಲಬುರ್ಗಿ ಅವರು ಧಾರ್ಮಿಕ ಹಿನ್ನೆಲೆಯ ವಚನಗಳ ಸಹಾಯದಿಂದ ವಿವರಿಸುತ್ತಾರೆ.

ಲೌಕಿಕ ಜೀವನದಲ್ಲಿ ಮನುಷ್ಯರು ಬಲಿಯಾಗುವ ಕೆಟ್ಟ ಸಂಪ್ರದಾಯ ಭಾರತೀಯ ಸಮಾಜದಲ್ಲಿ ಕಾಣಬಹುದು. ಬಸವಣ್ಣನವರ ಪರಿಸರದಲ್ಲಿ ಪ್ರಚಲಿತವಿದ್ದ ಲೌಖಿಕ ಮರಣಗಳಾದ ಮಾಸ್ತಿಮರಣ, ವೇಳೆವಾಳಿ ಮರಣಗಳಾದ ವಿಷಯವಾಗಿ ಶರಣರಲ್ಲಿ ನೇರ ವಿರೋಧ ಕಂಡುಬರದಿದ್ದರೂ ಇವು ಅವರಿಗೆ ಸಮ್ಮತವಿರಲಿಲ್ಲವೆಂದು ಧ್ವನಿತವಾಗುತ್ತದೆ.

ಮಾಸ್ತಿಮರಣ ಗಂಡನ ಚಿತೆಯೊಡನೆ ಸಹಗಮನ ಇಲ್ಲವೆ ಗಂಡ ಸತ್ತ ಸುದ್ದಿ ಕೇಳಿ ಬೇರೆ ಚಿತೆಯಲ್ಲಿ ಅನುಗಮನ ಈ ಎರಡು ಬಗೆಯಲ್ಲಿ ಮರಣ ಹೊಂದುತ್ತಿದ್ದರು. ಇಂತಹ ಆಚರಣೆಗಳನ್ನು ಶಿವಶರಣರು ಖಂಡಿಸಿರುವುದು ಹಾಗೂ ಅದರ ವಿರುದ್ಧ ಧ್ವನಿ ಎತ್ತಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಗುರ್ತಿಸುತ್ತಾರೆ.

"ಗಂಡ ಸತ್ತನೆಂದು ಗಂಡನೊಡನೆ ಕೆಂಡವ ಬೀಳುವೆನೆಂದು
ಮುಂಡವೀರಸ್ತ್ರೀ ತಾನು ದಂಡೆಯ ಕಟ್ಟಿಕೊಂಡು ಖಂಡೆಯವಪಿಡಿದು

ತಂಡತಂಡದ ಜನರ ಮುಂದೆ ಮೆರೆದುಕೊಂಡು ಬಂದು
ಕಿಚ್ಚಿನ ಹೊಂಡವ ಕಂಡು ಹೆದರಿ ಹಿಮ್ಮೆಟ್ಟಿದರೆ
ಅವಳಿಗದೆ ಭಂಗವಲ್ಲದೆ ಶೃಂಗಾರ ಮೆರೆವುದೆ ಅಯ್ಯ?
ಪತಿಲಿಂಗ ಸತಿಶರಣ ತನ್ನ ಪತಿವ್ರತಾ ಭಾಷೆಯ ನುಡಿದು
ನಡೆಯಲ್ಲಿ ತಪ್ಪಿದಡೆ ಅವನ ಭಂಗಕ್ಕೆ ತುದಿಮೊದಲಿಲ್ಲ ನೋಡಾ
ಅಖಂಡೇಶ್ವರಾ."[೬೦]

ಈ ವಚನ ಮಾಸ್ತಿಯ ಧೈರ್ಯವನ್ನು ಉಪಮಾನಕ್ಕಾಗಿ ಬಳಸಿದರೂ 'ಲಂಡಸ್ತ್ರೀ', 'ಪುಂಡವೀರಸ್ತ್ರೀ' ಎಂಬ ಮಾತುಗಳಲ್ಲಿ ಈ ಪದ್ಧತಿಯ ಬಗೆಗಿನ ಶರಣರ ತಿರಸ್ಕಾರವನ್ನು ಗುರುತಿಸಬಹುದಾಗಿದೆ.

ಒಡೆಯನ(ಒಡತಿಯ) ಶುಭಪ್ರಸಂಗ ಇಲ್ಲವೆ ಮರಣ ಪ್ರಸಂಗದಲ್ಲಿ ಸೇವಕ(ಸೇವಕಿ) ಅನುಸರಿಸುವುದು ವೇಳೆವಾಳಿ ಮರಣವಾಗಿದೆ. ಪ್ರತಿಜ್ಞಾರೂಢರಾದ ಇವರು ಪ್ರಾಚೀನ ಕರ್ನಾಟಕ ದಲ್ಲಿ ವೈಯಕ್ತಿಕವಾಗಿ, ಸಾಮೂಹಿಕವಾಗಿ ಇಂಥ ಬಲಿದಾನಕ್ಕೆ ಸಂತೋಷದಿಂದ ಆಹುತಿಯಾಗು ತ್ತಿದ್ದರು. ಈ ಸಂಪ್ರದಾಯವನ್ನು ಶರಶಣರು ತಿರಸ್ಕರಿಸಿದ್ದಾರೆ.

ಭಾಷೆಗೇರಿಸಿ ತನುಲಿಂಗಲಗದ ಲಿಂಗ ಓಸರಿಸಿತ್ತಯ್ಯಾ
ಆತ ವೀರನೆನಿಸುವ ಲಿಂಗಕ್ಕೆ ದೂರ ಜಂಗಕ್ಕೆ ದೂರ
ಪ್ರಸಾದಕ್ಕೆ ದೂರವಾಗಿ ವ್ರತಗೇಡಿಯಹನು ಕಾಣಿರಣ್ಣಾ
ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಇವನು
ಬ್ರಹ್ಮೇತಿಕಾರನೆನಿಸುವನ"[೬೧]

ಎಂಬ ಈ ವಚನದ ಮೂಲಕ ನೇರವಾಗಿ ತಿರಸ್ಕರಿಸುವ ಶರಣರು ಇಂತಹ ವೇಳೆವಾಳಿ ಪದ್ಧತಿಯನ್ನು ಖಂಡಿಸುತ್ತಾರೆ.

ಹೀಗೆ ಎಂ.ಎಂ.ಕಲಬುರ್ಗಿ ಅವರು ಧಾರ್ಮಿಕ ಮತ್ತು ಲೌಕಿಕ ಹೆಸರಿನಿಂದ ನಡೆಯುವ ಆತ್ಮಹತ್ಯಾ ಅಥವಾ ಬಲಿದಾನಗಳ ಬಗ್ಗೆ ಶರಣರು ಹೇಗೆ ಅವರ ವಿರುದ್ಧ ಧ್ವನಿಯನ್ನು ಎತ್ತಿದ್ದಾರೆ ಎಂದು ಉದಾಹರಣೆ ಸಹಿತ ವಿಶ್ಲೇಷಿಸುತ್ತಾರೆ.

ಶರಣರು ಕಟ್ಟಬಯಸಿದ ಸ್ತ್ರೀ ಸಮಾಜ ಭಾರತದಂತಹ ಸಾಮಾಜಿಕ ವ್ಯವಸ್ಥೆಯಲ್ಲಿ ವರ್ಣಭೇದ, ವರ್ಗಭೇದ ಮತ್ತು ಲಿಂಗಭೇದವು ನಿರಂತರವಾಗಿ ಮಾನವ ಜೀವನದಲ್ಲಿ ದೊಡ್ಡ ಕಂದಕವನ್ನು ಉಂಟು ಮಾಡುತ್ತ ಬಂದಿದೆ. ಅದರಲ್ಲಿಯೂ ಲಿಂಗತಾರತಮ್ಯವು ನಮ್ಮ

ಸಮಾಜವನ್ನು ಬಲವಾಗಿ ಕಾಡಿರುವ ಅಂಶವಾಗಿದ್ದು, ಇದರ ಪರಿಣಾಮವಾಗಿ ಮಹಿಳೆಯರ ಪಾಡು ಅತ್ಯಂತ ಶೋಚನೀಯವಾಗಿದ್ದು ಅವಳು ಪ್ರಾಪಂಚಿಕವಾಗಿ ಪಾರಮಾರ್ಥಿಕವಾಗಿ ಅಪ್ರಧಾನಳಾದವಳು. ಅವಳನ್ನು ಪುರುಷಪ್ರಧಾನ ಸಮಾಜ ಕಡೆಗಣಿಸುತ್ತಾ ಬಂದಿದ್ದು ಶೂದ್ರಾತಿ ಶೂದ್ರಳಂತೆ ಸಮಾಜದ ಕಟ್ಟಕಡೆಯ ಅಸ್ಪೃಶ್ಯನಿಗಿಂತಲೂ ಕೀಳಾಗಿ ಕಾಣಲಾಗುತ್ತಿತ್ತು.

ಪುರುಷ ಮಹಿಳೆಯನ್ನು ಎಲ್ಲಾ ಕ್ಷೇತ್ರಗಳಲ್ಲಿಯೂ ಅಪ್ರಧಾನಗೊಳಿಸಿ, ಅಸಹಾಯಕಗೊಳಿಸಿ ಇತಿಹಾಸದುದ್ದಕ್ಕೂ ಅವಳನ್ನು ಶೋಷಣೆಯ ವಸ್ತುವನ್ನಾಗಿಸಿಕೊಳ್ಳುತ್ತ ಬಂದಿರುವನು. "ಎಲ್ಲಿ ಸ್ತ್ರೀಯರು ಪೂಜೆಗೊಳ್ಳುತ್ತಾರೋ ಅಲ್ಲಿ ದೇವತೆಗಳು ಸುಪ್ರೀತರಾಗುತ್ತಾರೆ" ಎಂಬಂತೆ ಕೇವಲ ಬಾಯಿಮಾತಿನ ಘೋಷಣೆಯಾಗಿದ್ದಿತು. ಆದರೆ ಶರಣರು ಮಾತ್ರ ಪ್ರಾಪಂಚಿಕ ಸ್ತರ ಮತ್ತು ಪಾರಮಾರ್ಥಿಕ ಸ್ತರಗಳೆರಡರಲ್ಲಿಯೂ ಅವಳಿಗೆ ಪುರುಷ ಸಮಾನ ಸ್ಥಾನವನ್ನು ದೊರಕಿಸಿಕೊಟ್ಟ ಕಾರಣ ಕರ್ನಾಟಕದಲ್ಲಿ ಏಕೆ ಸಮಗ್ರ ಭಾರತದಲ್ಲಿಯೇ ಶರಣರು ಸ್ತ್ರೀಸ್ವಾತಂತ್ರ್ಯದ ಪ್ರಥಮ ಚಳುವಳಿ ಎನಿಸಿಕೊಳ್ಳುತ್ತದೆ. ವೈದಿಕ ಸ್ತ್ರೀ ಮನುವಿನ ಧರ್ಮಶಾಸ್ತ್ರದಿಂದ ಬಿಗಿಸಲ್ಪಟ್ಟು ಪ್ರಾಪಂಚಿಕ ಕ್ಷೇತ್ರದಲ್ಲಿ ಶೂದ್ರ ಪಾರಮಾರ್ಥಿಕ ಕ್ಷೇತ್ರದಲ್ಲಿ ಮಾಯೆ ಎನಿಸಿದ್ದಳು. ಇಂತಹ ಬಂಧನದಿಂದ ವೀರಶೈವ ಸಂಪ್ರದಾಯದ ವಚನಕಾರರು ಸ್ತ್ರೀಯನ್ನು ಪಾರು ಮಾಡಿದರು.

ಶರಣರು ಸ್ತ್ರೀಯನ್ನು ಪಾರಮಾರ್ಥಿಕ ಸ್ತರದಲ್ಲಿ ಸ್ತ್ರೀ ಪುರುಷರಲ್ಲಿ ಆತ್ಮಭೇದವಿಲ್ಲ. ಸ್ತ್ರೀ ಮಾಯೆಯಲ್ಲ ಎಂದು ಹೇಳಿ "ಮನದ ಮುಂದಣ ಆಸೆಯೇ ಮಾಯೆ" ಎಂದು ಹೇಳಿ ಸ್ತ್ರೀಯನ್ನು ದೈವತ್ವಕ್ಕೇರಿಸಿದರು. ಅದೇ ರೀತಿ ಪ್ರಾಪಂಚಿಕ ಸ್ತರದಲ್ಲಿ ಸ್ತ್ರೀಯು ಕೇವಲ ಅವಳ ಋತುಚಕ್ರ ಅಥವಾ ಮುಟ್ಟಿನಿಂದಾಗಿ ಅವಳನ್ನು ಅತ್ಯಂತ ಅಪವಿತ್ರೀಕರಿಸಲಾಗಿತ್ತು. ಆದರೆ ಶರಣರು ಇದಕ್ಕೆ ವಿರುದ್ಧವಾಗಿ "ಸತಿ ಭಕ್ತೆಯಾದರೆ ಹೊಲೆಗಂಜಲಾಗದು" ಎಂದು ಹೇಳುವುದರ ಮೂಲಕ ಅಪವಿತ್ರ ಭ್ರಾಂತಿಯಿಂದ ಮುಕ್ತಗೊಳಿಸಿದರು ಮತ್ತು ಪರಸ್ತ್ರೀಯನ್ನು ಮಾತೃ ಸಮಾನ ಕಾಣುವ ಮನೋಭಾವ ಉಂಟು ಮಾಡಿದರು.

ಇದರ ಬಗ್ಗೆ ವೀರಶೈವಧರ್ಮ ಪುರುಷನಿಗೆ ಪದೇ ಪದೇ ಎಚ್ಚರಿಕೆ ನೀಡಿತು. "ಸ್ವಸ್ತ್ರೀ ಇದ್ದಂತೆ ಪರಸ್ತ್ರೀಯರಿಗೆ ಅಳುಪುಟ ಸತ್ತಸಾಯ ಭಕ್ಷಿಸುವ ಹಡಕಿಗರನೇನೆಂಬೆನ್ಯ ರಾಮನಾಥ" ಎನ್ನುವ ವಚನಕಾರರು ಸಮಾಜದಲ್ಲಿ ಸ್ತ್ರೀಯರಿಗೆ ಒಂದು ಗೌರವದ ಸ್ಥಾನವನ್ನು ತಂದುಕೊಡುವಲ್ಲಿ ವಚನ ಚಳುವಳಿಯು ಪ್ರಮುಖ ಪಾತ್ರ ವಹಿಸಿದೆ ಎಂಬುದನ್ನು ಎಂ.ಎಂ.ಕಲಬುರ್ಗಿ ಅವರು ಸರಿಯಾಗಿಯೇ ಗುರುತಿಸುತ್ತಾರೆ.

'ಬಸವಣ್ಣನವರಿಂದ ತಿಳಿದುಬರುವ ಒಂದು ಐತಿಹಾಸಿಕ ಸತ್ಯ!' ಎಂಬ ಲೇಖನದಲ್ಲಿ

"ಕೃತಯುಗದಲ್ಲಿ ಕೇತಾರವೆಂಬ ಮೂಲಸ್ಥಾನ
ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ

ದ್ವಾಪರಯುಗದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ
ಕಲಿಯುಗದಲ್ಲಿ ಪರ್ವತನೆಂಬ ಮೂಲಸ್ಥಾನ
ನಾನಾ ಸ್ಥಾನಂಗಳ ಮುಟ್ಟದೆ ಮೂಲಸ್ಥಾನ
ಜಂಗಮವೆ ಲಿಂಗವೆಂದು ನಂಬಿದೆ
ಕೂಡಲಸಂಗಮದೇವಾ."[೪೨]

ಎಂ.ಎಂ.ಕಲಬುರ್ಗಿ ಅವರು ಬಸವಣ್ಣನು 'ಸ್ಥಾವರಲಿಂಗ'ವನ್ನು ನಿರಾಕರಿಸಿ 'ಜಂಗಮತ್ವ'ದ ಮಹತ್ವ ಸಾರಿದಂತಹ ವಚನವಿದಾಗಿದೆ. ಇದು ಅಪ್ರತ್ಯಕ್ಷವಾಗಿ ಇಂದಿನ ಗುರುವರ್ಗದ ಪೀಠ ಪರಂಪರೆಯ ಇತಿಹಾಸದ ಮೇಲೆ ಬೆಳಕು ಚೆಲ್ಲಿರುವುದನ್ನು ಪ್ರಸ್ತುತ ಲೇಖನದಲ್ಲಿ ಚರ್ಚಿಸಲಾಗಿದೆ.

'ಬಸವಣ್ಣನವರ ಮೂರು ವಚನ–ನಿರ್ವಚನ' ಎಂಬ ಲೇಖನದಲ್ಲಿ ಹೆಸರೇ ಸೂಚಿಸುವಂತೆ ಮೂರು ವಚನಗಳನ್ನು ಕುರಿತಂತೆ ಚರ್ಚಿಸಲಾಗಿದೆ. ಮಾಡುವ ನೀಡುವ ನಿಜಗುಣ ಎಂಬ ಪರಿಕಲ್ಪನೆಯಡಿಯಲ್ಲಿ,

"ಮಾಡಿ ಮಾಡಿ ಕೆಟ್ಟರೋ ಮನವಿಲ್ಲದೆ
ನೀಡಿ ನೀಡಿ ಕೆಟ್ಟರೋ ನಿಜವಿಲ್ಲದೆ
ಮಾಡುವ ನೀಡುವ ನಿಜಗುಣವುಳ್ಳೊಡೆ
ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವ."[೪೩]

ಮಾಡುವ ನಿಜಗುಣವೆಂದರೆ 'ಕಾಯಕ', ನೀಡುವ ನಿಜಗುಣವೆಂದರೆ 'ದಾಸೋಹ' ಎಂಬ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ನಿಜಗುಣವೆಂದರೆ ಸತ್ಯಶುದ್ಧಿ ಅಥವಾ ಪ್ರಾಮಾಣಿಕತೆ ಎಂದರ್ಥ. ಈ ಹಿನ್ನೆಲೆಯಲ್ಲಿ ಮೇಲಿನ ವಚನವನ್ನು ವಿಶ್ಲೇಷಣೆಗೊಳಪಡಿಸಿದ್ದಾರೆ.

ಹೆಂಡದ ಮಡಕೆಯ ಹೊರಗೆ ತೊಳೆದಂತೆ ಎಂಬ ಶೀರ್ಷಿಕೆಯಡಿಯಲ್ಲಿ ವಚನ ಕುರಿತಂತೆ ಚರ್ಚಿಸಿದ್ದಾರೆ.

"ಗಂಡ ಶಿವಲಿಂಗದೇವರ ಭಕ್ತ
ಹೆಂಡತಿ ಮಾರಿ ಮಸಣಿಯ ಭಕ್ತೆ
ಗಂಡ ಕೊಂಬುದು ಪಾದೋದಕ ಪ್ರಸಾದ
ಹೆಂಡತಿ ಕೊಂಬುದು ಸುರೆ ಮಾಂಸ
ಭಾಂಡ ಭಾಜನ ಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಕೆಯ ಹೊರಗೆ ತೊಳೆದಂತೆ ಕೂಡಲಸಂಗಮದೇವಾ."[೪೪]

ಈ ವಚನ ಕುರಿತಂತೆ ಎಂ.ಎಂ.ಕಲಬುರ್ಗಿ ಚರ್ಚಿಸಿದ್ದಾರೆ. ಗಂಡ ಶಿವಲಿಂಗದೇವರ ಭಕ್ತಿನಾಗಿ ಪಾದೋದಕ ಪ್ರಸಾದ ಕೊಳ್ಳುವಲ್ಲಿ, ಹೆಂಡತಿ ಮಾರಿಮಸಣಿಯ ಭಕ್ತೆಯಾಗಿ ಸುರೆ ಮಾಂಸ ಕೊಳ್ಳುತ್ತಿದ್ದರೆ, ಹೆಂಡ ತುಂಬಿದ ಮಡಕೆಯನ್ನು ಹೊರಗೆ ತೊಳೆದರೆ ಏನು ಪ್ರಯೋಜನವಾಗದು ಎಂಬ ಅಂಶವನ್ನು ತಿಳಿಸಲು ಇಚ್ಛಿಸಿದ್ದಾರೆ.

"ನೇಮವ ಬಿಡದಿರೆಲಮೋ" ಎಂಬ ಶೀರ್ಷಿಕೆಯಡಿಯಲ್ಲಿ

ಒಡನೆ ಹುಟ್ಟಿದುದಲ್ಲ, ಒಡನೆ ಬೆಳೆದುದಲ್ಲ
ಎಡೆಯಲಾದ ಒಂದು ಉಡುಗೆಯನ್ನುಟ್ಟು
ಸಡಲಿದಡೆ ಲಜ್ಜೆ ನಾಚಿಕೆಯಾಯಿತ್ತೆಂಬ
ನುಡಿ ದಿಟವಾಯಿತ್ತು ಲೌಕಿಕದಲ್ಲಿ
ಹಡೆದ ಗುರುಕರುಣದೊಡನೆ ಹುಟ್ಟಿದ ನೇಮವನು ಬಿಡದಿರೆಲವೋ
ಬಿಟ್ಟಡೆ ಕಷ್ಟ, ಕೂಡಲಸಂಗಮದೇವನಡಸಿ
ಕೆಡಹುವ ನಾಯಕ ನರಕದಲ್ಲಿ."[೪೫]

'ನೇಮನಿಷ್ಠೆ'ಯ ಪ್ರತಿಪಾದನೆಯು ಈ ವಚನದ ವಸ್ತುವಾಗಿದೆ. ಗುರುಕರುಣದ ಜೊತೆಯಲ್ಲಿಯೇ ಹುಟ್ಟಿದ 'ನೇಮ'ವನ್ನು ಬಿಡದಿರು. ಒಂದು ವೇಳೆ ಬಿಟ್ಟರೆ ಕೂಡಲಸಂಗಮದೇವನು ನರಕದಲ್ಲಿ ಹಾಕುತ್ತಾನೆ. ಎಂ.ಎಂ.ಕಲಬುರ್ಗಿ ಅವರು ಗುರುಕರಣೆ, ಕರುಣೆಯನ್ನು ಅನುಗ್ರಹಿಸುವಲ್ಲಿ ನೀಡುವ ನೇಮ ಹಾಗೂ ನೇಮ ಪ್ರತಿಪಾಲನೆ, ಲಿಂಗಾಯತದಲ್ಲಿ ಗುರುಕರುಣೆಗೆ ಅಗ್ರಸ್ಥಾನವಿದೆ ಎಂಬ ಅಂಶವನ್ನು ಕುರಿತಂತೆ ಎಂ.ಎಂ.ಕಲಬುರ್ಗಿ ಅವರು ಚರ್ಚಿಸಿದ್ದಾರೆ.

'ಕಾಯಕ ಸಿದ್ಧಾಂತದ ಆಯಾಮಗಳು' ಎಂಬ ಲೇಖನದಲ್ಲಿ ಕಾಯಕದ ವಿವಿಧ ಆಯಾಮಗಳನ್ನು ಕುರಿತು ಚರ್ಚಿಸಿದ್ದಾರೆ. "ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯಾ" ಎಂದು ಬಸವಣ್ಣ ದಾಸೋಹ ಸಿದ್ಧಾಂತವನ್ನು ಹೇಳುತ್ತ ದಾಸೋಹದ ತಾಯಿಬೇರು ಕಾಯಕ ಸಿದ್ಧಾಂತ ಎನ್ನುತ್ತ ಕಾಯಕವನ್ನು ೬ ಆಯಾಮಗಳಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ. ೧. ಕಾಯಕ: ಕಡ್ಡಾಯ, ೨. ಕಾಯಕ: ದೈವಿಕ, ೩. ಕಾಯಕ: ತಾರತಮ್ಯ ರಹಿತ, ೪. ಕಾಯಕ: ಐಚ್ಛಿಕ, ೫. ಕಾಯಕ: ಅಧಿಕಫಲ ನಿರಪೇಕ್ಷಿತ, ೬. ಕಾಯಕ: ದಾಸೋಹ ಸಹಿತ. ಕಾಯಕ: ಕಡ್ಡಾಯ ಎಂಬ ಭಾಗದಲ್ಲಿ ಮನುಷ್ಯನ ಮೂಲಭೂತ ಅವಶ್ಯಕತೆಗಳಲ್ಲಿ ಅನ್ನವು ಒಂದು. ಇದನ್ನು ಆತ ಬೇರೆಯವರಿಂದ ಅಪೇಕ್ಷೆಗೊಳಗಾಗದೇ ತಾನೇ ಸ್ವತಃ ಕಾಯಕ ಮಾಡುವ ಮೂಲಕ ಪಡೆದುಕೊಳ್ಳಬೇಕು. 'ಅನ್ನವೇ ದೇವರು' ಎಂದು ನಮ್ಮ ಪ್ರಾಚೀನರು ಹೇಳಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಚರ್ಚಿಸುತ್ತ "ದೈವರೂಪದ ಕಾಯಕದಿಂದ ಗಳಿಸಿದ ಅನ್ನ

ಮಾತ್ರ ದೇವರೆನಿಸಿಕೊಳ್ಳುತ್ತದೆ. ಅನ್ಯ ಮಾರ್ಗದಿಂದ ಗಳಿಸಿದ್ದು ದೇವರಾಗುವುದಿಲ್ಲ"[೪೫] ಎಂಬ ಮಾತಿನಲ್ಲಿ ಅಕ್ಷರಶಃ ಸತ್ಯವಡಗಿರುವುದನ್ನು ನಾವು ನೋಡಬಹುದಾಗಿದೆ. ಶರಣರು ಈ ಕಾಯಕತತ್ವವನ್ನು ಅರಿತು ತಾವು ಅಳವಡಿಸಿಕೊಂಡು ತಮ್ಮ ವಚನಗಳಲ್ಲಿ ಕಾಯಕದ ಮಹತ್ವವನ್ನು ಕಟ್ಟಿಕೊಟ್ಟಿರುವುದು ವಿಶೇಷ ಎನ್ನಬಹುದು. "ಕೃತ್ಯ ಕಾಯಕವಿಲ್ಲದವರು ಭಕ್ತರಲ್ಲ(ಕಾಳವ್ವೆ), ಕಾಯವಿಡಿದಿಹನ್ನಬರ ಶಿವಭಕ್ತಂಗೆ ಕಾಯಕವೇ ಕೈಲಾಸ, ಕಾಯಕವಿಲ್ಲದವರ ಅರಿವು ಮಾಯ ವಾಗಿತ್ತು(ಅರಿವಿನ ಮಾರಿತಂದೆ), 'ಶಿವಯೋಗಿಯ ಶರೀರಂ ವೃಥಾ ಸವೆಯಲಾಗದು, ಅನು ಗೊಂಬನಿತು ಕಾಯಕಂ ನಡೆಯುತಿರಬೇಕು(ಸಿದ್ಧರಾಮ)"[೪೬] ಈ ವಚನಗಳಲ್ಲಿ ಕಾಯಕ ಸಿದ್ಧಾಂತದ ಮೌಲ್ಯವನ್ನು ಪ್ರತಿಬಿಂಬಿಸಿದ್ದಾರೆ. ಮುಂದುವರಿದು "ಒಂದು ವೇಳೆ ಬುದ್ಧನು ಭೇಟಿಯಾದರೆ, ಧ್ಯಾನಾದಿಗಳಿಗಿಂತ ಕೆಲಸದ ಸಂದೇಶವನ್ನೇ ಹೆಚ್ಚು ಕೊಡಬೇಕಾಗಿತ್ತು ಎಂದು ಅವನನ್ನು ಕೇಳುತ್ತೇನೆ ತುಕಾರಾಮ್ ಜ್ಞಾನದೇವ ಭೆಟ್ಟಿಯಾದರೂ ಇದನ್ನೇ ಹೇಳುತ್ತೇನೆ ಎಂಬ ಗಾಂಧೀಜಿ ಯವರ ಮಾತಿನಲ್ಲಿ ಕಾಯಕದ ಮಹತ್ವ ಎದ್ದು ಕಾಣುತ್ತದೆ" ಎನ್ನುವಲ್ಲಿ ಗಾಂಧೀಜಿ ಅವರ ಕಾಯಕದ ಮಹತ್ವ ಎದ್ದು ತೋರುತ್ತದೆ. ದೀರ್ಘಕಾಲ ತಪಸ್ಸು ಕೈಗೊಂಡ ಬುದ್ಧ ಆಗಲಿ, ಉಳಿದ ಸಂತರಾಗಲಿ ಕೆಲಸದ ಸಂದೇಶವನ್ನು ಹೆಚ್ಚು ಉಪದೇಶಿಸಿಲ್ಲ. ಇವರೆಲ್ಲ ಸಾಧಿಸದೆ ಇರುವ ಕಾಯಕದ ಪರಿಕಲ್ಪನೆಯನ್ನು ಶರಣರು ಸಾಧಿಸಿದರು ಎಂಬ ಎಂ.ಎಂ.ಕಲಬುರ್ಗಿ ಅವರ ಮಾತನ್ನು ನಾವೆಲ್ಲ ಒಪ್ಪಬೇಕಾಗುತ್ತದೆ. 'ಕೂತು ತಿನ್ನುವವನಿಗೆ ಕುಡಿಕೆ ಹೊನ್ನು ಸಾಲದು' ಎಂಬ ಗಾದೆ ಮಾತಿನಂತೆ ಪ್ರತಿಯೊಬ್ಬರು ಕಾಯಕದಲ್ಲಿ ನಿರತನಾಗಿ ತನ್ನ ಆಹಾರವನ್ನು ತಾನೇ ಸಂಪಾದಿಸಬೇಕೆಂಬ ಸಂದೇಶ ಶರಣ ನೀಡಲು ಪ್ರಯತ್ನಿಸಿದ್ದಾರೆ.

ಕಾಯಕ: ದೈವಿಕ ಎಂಬ ಭಾಗದಲ್ಲಿ ಕಾಯಕ ದೈವಿ ಸ್ವರೂಪ, ಲಿಂಗಪೂಜಾ ತಲ್ಲೀನತೆ, ಕಾಯಕ ತಲ್ಲೀನತೆ ಎರಡು ಒಂದೇ ಎಂದು ಶರಣರು "ಕಾಯಕದಲ್ಲಿ ನಿರತನಾಗಿದ್ದಾಗ ಲಿಂಗಪೂಜೆಯನ್ನಾದರೂ ಮರೆಯಬೇಕು ಎನ್ನುತ್ತಾರೆ. ಲಿಂಗವು(ಶಿವನು) ಕೈಲಾಸದಲ್ಲಿರುವಂತೆ, ಕಾಯಕದಲ್ಲಿಯೂ ಇರುವ ಕಾರಣ ಅವರು ಕಾಯಕವೇ(ಶಿವನ) ಕೈಲಾಸವೆಂದು ನುಡಿದರು."[೪೭] ಕೆಲಸವೇ ಒಂದು ದೈವಿಸ್ವರೂಪ. ಕಾಯಕದಲ್ಲಿಯೇ ದೇವರನ್ನು ಕಾಣಬೇಕೆಂಬ ತತ್ವ ಶರಣರದ್ದಾಗಿತ್ತು. ಲಿಂಗಾಯತರಲ್ಲಿ ಈ ಕಾಯಕ ಕೇವಲ ಭೌತಿಕ ಕ್ರಿಯೆಯಲ್ಲಿ ಜ್ಞಾನಕ್ರಿಯೆಗಳ ಸಹಯೋಗದ ಮೂಲಕ ಕಾಯಕ ಜರುಗಬೇಕು. ಅದಕ್ಕೆ ಕಾಯಕದ ಅಮ್ಮಿದೇವನ ಒಂದು ವಚನವನ್ನು ಉದಾಹರಣೆ ನೀಡಿ ಅರ್ಥೈಸಲು ಪ್ರಯತ್ನಿಸಿದ್ದಾರೆ. "ಹೊರಗಣ ಸ್ತ್ರೀ ಆತ್ಮದೊಳಗಣ ಜ್ಞಾನ–ಇಂತೀ ಉಭಯವನಂದು, ಕಾಯಕವನೊಡಗೂಡಿ ಮಾಡಬೇಕು ಹದಿನೆಂಟು ಕಾಯಕ"[೪೮] ಹಾಗೆಯೇ ಕಾಳವ್ವೆ ಕೂಡ "ಸತ್ಯಶುದ್ಧವಿಲ್ಲದುದು ಕಾಯಕವಲ್ಲ" ಎಂಬ ಮಾತು ಕೂಡ

ಒಳಗೊಂದು ಹೊರಗೊಂದು ಕ್ರಿಯೆ ನಡೆಯುವುದಕ್ಕಿಂತ ಮೊದಲು ಆತ್ಮಶುದ್ಧಗೊಳಿಸಿಕೊಂಡು ನಂತರ ಭೌತಿಕ ಕ್ರಿಯೆ ಜರುಗಬೇಕು ಎಂಬ ತತ್ವ ಶರಣರದ್ದಾಗಿದೆ. ಜೊತೆಗೆ ಕಾಯಕದಿಂದ ಜಂಗಮಕ್ಕೆ ದಾಸೋಹ ಕೂಡ ಮಾಡಬೇಕು. ಕಾಯಕ ಮಾಡದೇ ದಾಸೋಹ ಮಾಡಿದರೆ ಅದು ಸರಿಯಲ್ಲ. “ಭಕ್ತರು ಕಾಯಕವೆಂದು ದಾಯಗಾರಿಕೆಯಲ್ಲಿ ತಂದು ದಾಸೋಹವ ಮಾಡಬಹುದೇ?” ಎನ್ನುತ್ತಾಳೆ ಲಕ್ಕಮ್ಮ. ಹಾಗೆಯೇ ವ್ಯಕ್ತಿ ತಾನು ಬದುಕಲು ಅಲ್ಲ ಸಮಾಜ ಬದುಕಿಸಲು ಕಾಯಕ ಮಾಡಲೇಬೇಕು ಎಂದು ‘ಕಾಯಕದ ನಿರತನಾದರೆ ಜಂಗಮ ಮುಂದಿದ್ದರೂ ಹಂಗು ಹರಿಯಬೇಕು’ ಎಂದು ವಿಶ್ಲೇಷಿಸಲು ಎಂ.ಎಂ.ಕಲಬುರ್ಗಿ ಅವರು ಪ್ರಯತ್ನಿಸಿದ್ದಾರೆ.

ಕಾಯಕ: ತಾರತಮ್ಯ ಎಂಬ ಭಾಗದಲ್ಲಿ ಕಾಯಕದಲ್ಲಿ ತಾರತಮ್ಯ ಕೂಡ ಇರಬಾರದೆಂಬುದು ಶರಣರ ಅಭಿಮತವಾಗಿತ್ತು. ಕೃತಕ ತಾರತಮ್ಯವನ್ನು ಅಲ್ಲಗಳೆದು, ವೃತ್ತಿಗಳಲ್ಲಿ ಸಮಾನತೆ ತರಲು ಪ್ರಯತ್ನಿಸಿದರು.

“ಕಾಸಿ ಕಮ್ಮಾರನಾದ,
ಬೀಸಿ ಮಡಿವಾಳನಾದ,
ಹಾಸನಿಕ್ಕಿ ಸಾಲಿಗನಾದ”[೪೯]

ಎನ್ನುತ್ತ ‘ವೇದವನೋದಿ ಹಾರುವನಾದ’ ಎನ್ನುತ್ತ ಬೌದ್ಧಿಕ ಶ್ರಮವನ್ನು ಈ ಸಾಲಿನಲ್ಲಿ ನಿಲ್ಲಿಸಿದ್ದಷ್ಟೇ ಅಲ್ಲದೇ ಅಲ್ಪಶ್ರಮದ ಸಾಲಿಗೇ(ನೇಕಾರ), ಅಧಿಕಶ್ರಮದ ಕಮ್ಮಾರ ಇಬ್ಬರನ್ನು ಒಂದೇ ಪಾತಳಿಯಲ್ಲಿ ಪರಿಭಾವಿಸಿದರು. ಇವೆಲ್ಲ ಕ್ರಿಯಾವ್ಯತ್ಯಾಸಗಳೇ ಹೊರತು ಶ್ರೇಷ್ಠ-ಕನಿಷ್ಠ ಎಂಬುದಲ್ಲ ಎಂಬ ಅಭಿಪ್ರಾಯವನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ.

ಕಾಯಕ: ಐಚ್ಛಿಕ ಎಂಬ ಭಾಗದಲ್ಲಿ ಯಾವುದೇ ಜಾತಿಯ, ಯಾವುದೇ ವೃತ್ತಿ ಮಾಡಲು ಮುಕ್ತ ಅವಕಾಶ ದೊರಕಿಸಿಕೊಟ್ಟರು. ಉದಾ: ಮೋಳಿಗೆ ಮಾರಯ್ಯ ಆಡಳಿತದ ಬದಲು ಕಟ್ಟಿಗೆ ಕಾಯಕ ಕೈಗೊಂಡದ್ದು ನಿದರ್ಶನವೆನಿಸಿದೆ. ನಂತರ ಶರಣರು ಕೇವಲ ತಮ್ಮ ಅಂಕಿತನಾಮದಿಂದ ಅಷ್ಟೇ ಅಲ್ಲದೇ ವೃತ್ತಿನಾಮದಿಂದಲೂ ಗುರುತಿಸಿಕೊಂಡರು. ವ್ಯಕ್ತಿನಾಮಕ್ಕಿಂತ, ವೃತ್ತಿನಾಮಕ್ಕೆ ಹೆಚ್ಚು ಮಹತ್ವ ಇದೆ ಎಂಬ ಧೋರಣೆ ಕೂಡ ಅವರಲ್ಲಿ ಕಂಡುಬಂದಿತು. ಉದಾ: ಮಡಿವಾಳ ಮಾಚಯ್ಯ.

ಕಾಯಕ: ಅಧಿಕಫಲ ನಿರಪೇಕ್ಷಿತ ಭಾಗದಲ್ಲಿ ಮಾಡಿದ ಕೆಲಸಕ್ಕೆ ತಕ್ಕಷ್ಟು ಫಲ ಅಪೇಕ್ಷಿಸಬೇಕು. ಅಧಿಕವಾದ ಫಲ ನಿರೀಕ್ಷಿಸಿದರೆ ಅದು ಕಾಯಕಕ್ಕೆ ಮಾಡುವ ದೊಡ್ಡ ಅವಮಾನ ಎಂಬ ತತ್ವ ಶರಣರಲ್ಲಿತ್ತು. “ಹಾಗದ ಕಾಯಕವ ಮಾಡಿ, ಹಣವಡ್ಡವ ತಾ ಎಂಬಲ್ಲಿ ಸತ್ಯದ ಕಾಯಕವುಂಟೆ?

ಭಕ್ತರಲ್ಲಿ ಕಾಯಕಕ್ಕೆ ಕಡಿಮೆಯಾಗಿ ತಾ ಎಂಬುದು ಅಮರೇಶ್ವರ ಲಿಂಗಕ್ಕೆ ಚಿತ್ತಶುದ್ಧ ಕಾಯಕ"[೫೦] ಎಂದು ಆಯ್ದಕ್ಕಿ ಮಾರಯ್ಯ" ಹೇಳಿದ್ದಾನೆ.

'ಕಾಯಕ: ದಾಸೋಹ ಸಹಿತ' ಎಂಬ ಭಾಗದಲ್ಲಿ ಕಾಯಕದ ಪರಿಕಲ್ಪನೆ ಸಾರ್ಥಕ ಪಡೆಯಬೇಕಾದರೆ ದಾಸೋಹ ಅಗತ್ಯ. ದಾಸೋಹದಲ್ಲಿ ಪರ್ಯವಸನಗೊಳ್ಳದ ಹೊರತು ಕಾಯಕವು ಕಾಯಕವಾಗುವುದಿಲ್ಲ ಎಂಬ ಅಭಿಪ್ರಾಯ ಶರಣರಲ್ಲಿತ್ತು. "ಗುರುವಿಗೆ ತನುದಾಸೋಹ, ಲಿಂಗಕ್ಕೆ ಮನದಾಸೋಹ, ಜಂಗಮಕ್ಕೆ ಧನದಾಸೋಹ ಜರುಗಬೇಕೆಂಬ 'ತ್ರಿವಿಧ ದಾಸೋಹ' ನುಡಿಗಟ್ಟು ಶರಣಧರ್ಮದಲ್ಲಿ ತುಂಬ ಮಹತ್ವ ಪಡೆದಿದೆ"[೫೦] ಎಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ. ಈ ಕಾಯಕ ಪರಿಕಲ್ಪನೆಯನ್ನು "ಆಯಾಮಗಳ ಮೂಲಕ ಅದರ ಮಹತ್ವವನ್ನು ನಮ್ಮೆದುರಿಗೆ ಬಿಚ್ಚಿಡಲು ಎಂ.ಎಂ.ಕಲಬುರ್ಗಿ ಅವರು ಪ್ರಯತ್ನಿಸಿರುವುದು ವಿಶೇಷವೆನಿಸುತ್ತದೆ. ಕಾಯಕ ಮಾಡದ ಹೊರತು, ಕಾಯಕದ ಮೂಲಕ ದಾಸೋಹ ಮಾಡದ ಹೊರತು ಯಾವೊಬ್ಬ ವ್ಯಕ್ತಿಯು ಪರಿಪೂರ್ಣನೆನಿಸಲಾರ ಎಂಬ ಅಂಶ ಅಭಿವ್ಯಕ್ತಗೊಂಡಿದೆ.

ಶರಣರು ಕುಟುಂಬ ಎಂಬ ಲೇಖನದಲ್ಲಿ ಸ್ತ್ರೀಪುರುಷರ ಸ್ಥಾನಮಾನವನ್ನು ಕುರಿತು ಚರ್ಚಿಸಿದ್ದಾರೆ. ಭಾರತೀಯ ಸಮಾಜ ಪುರುಷಪ್ರಧಾನ ವ್ಯವಸ್ಥೆಯಿಂದ ಕೂಡಿದ್ದು, ಸ್ತ್ರೀಯನ್ನು ಹೆಣ್ಣು, ಮಾಯೆ, ಕೀಳು ಎಂಬಂತೆ ಕಾಣುತ್ತಿದ್ದರು. ಆದರೆ ಶರಣರು 'ಹೆಣ್ಣು–ಮಾಯೆಯಲ್ಲ, ಮನದ ಮುಂದಣ ಆಸೆಯೇ ಮಾಯೆ', 'ಆತ್ಮ ಹೆಣ್ಣೂ ಅಲ್ಲ, ಗಂಡೂ ಅಲ್ಲ', 'ಸತಿ ಭಕ್ತೆಯಾದೊಡೆ ಹೊಲೆಗಂಜಲಾಗದು' ಎಂದು ಹೆಣ್ಣನ್ನು ಗಂಡಿನ ಸ್ಥಾನಕ್ಕೆ ಎತ್ತಿದರು. ವ್ಯಕ್ತಿಯಾಗಿರುವ ಹೆಣ್ಣು ಕುಟುಂಬವ್ಯವಸ್ಥೆಯಲ್ಲಿ ಮಗಳು, ಹೆಂಡತಿ, ತಾಯಿಯೆಂಬ ಸದಸ್ಯೆಯಾಗುತ್ತಾಳೆ. ಅರ್ಥ, ಅಧಿಕಾರ ಇತ್ಯಾದಿ ಭೌತಿಕ ಸೌಲಭ್ಯಗಳಿಂದ ವಂಚಿತಳಾದ ಸ್ತ್ರೀ ಪರಾಧೀನ ಸ್ಥಿತಿಯಲ್ಲಿ ಬದುಕುತ್ತಾಳೆ. ಶರಣರ ಪಂಚಸೂತ್ರ ಸಿದ್ಧಾಂತಗಳಿಂದಾಗಿ ಅವಳು ಈ ಪರಾಧೀನತೆಯಿಂದ ಮುಕ್ತಳಾಗುತ್ತಾಳೆ.

"ಉಂಬುದು ಊಡುವುದು ಶಿವಾಚಾರ
ಕೊಂಬುದು ಕೊಡುವುದು ಕುಲಾಚಾರವೆಂಬ
ಅನಾಚಾರಿಯ ಮುಖವನೋಡಲಾಗದು"

ಎಂದು ಚೆನ್ನಬಸವಣ್ಣನವರು

"ಉಂಬಲ್ಲಿ ಉಡುವಲ್ಲಿ ಕುಲವಳಿಯಿತ್ತೆಂಬರು
ಕೊಂಬಲ್ಲಿ ಕೊಡುವಲ್ಲಿ ಕುಲವನೆಣಿಸುವರು"

ಎಂದು ಬಸವಣ್ಣನವರು ಧಾರ್ಮಿಕ ಶಿವಾಚಾರ ಮತ್ತು ಕೌಟುಂಬಿಕ ಕುಲಾಚಾರ ಒಂದೇ ಇರಬೇಕೆಂದು ಸಾರಿದ್ದಾರೆ. ಒಂದೊಂದು ಕುಟುಂಬಗಳಲ್ಲಿ ಒಬ್ಬೊಬ್ಬರು ಒಂದೊಂದು ಧರ್ಮಕ್ಕೆ ಒಕ್ಕಲಾಗುತ್ತಿದ್ದರು. ಕುಟುಂಬದಲ್ಲಿ ಒಬ್ಬೊಬ್ಬರು ವಿಭಿನ್ನ ವಿಧಿಕ್ರಿಯೆಗಳನ್ನು ಆಚರಿಸುತ್ತಿದ್ದರು. ಇಂಥವರನ್ನು ನೋಡಿ ಬಸವಣ್ಣ

"ಗಂಡ ಶಿವಲಿಂಗದೇವರ ಭಕ್ತ
ಹೆಂಡತಿ ಮಾರಿಮಸಣಿಯ ಭಕ್ತೆ.
ಗಂಡ ಕೊಂಬುದು ಪಾದೋದಕ ಪ್ರಸಾದ
ಹೆಂಡತಿ ಕೊಂಬುದು ಸುರೆಮಾಂಸ.
ಭಾಂಡ ಭಾಜನಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಕೆಯ ಹೊರಗೆ ತೊಳದಂತೆ ಕೂಡಲಸಂಗಮದೇವಾ"[೫೧]

ಎಂಬ ವಚನವನ್ನು ಹೇಳಿದ್ದಾರೆ. ಇದು ಕೆಳವರ್ಣದ ಕುಟುಂಬಗಳನ್ನು ಕುರಿತದ್ದಾಗಿದೆ. ಮೇಲುವರ್ಣದವರಿಗೆ ಮತಾಂತರದ ಅವಶ್ಯಕತೆಯೇ ಇರುವುದಿಲ್ಲ. ಹೀಗಾಗಿ ಮೇಲುವರ್ಗದವರ ಹೆಂಡತಿ ಕೆಳವರ್ಗವನ್ನು ಪ್ರವೇಶಿಸಿ ಮಾರಿಮಸಣಿಯರ ಭಕ್ತೆಯಾಗುವುದು ಅಸಂಭವ. ಈ ರೀತಿಯ ವಿಭಿನ್ನ ಆಚರಣೆಗಳಿಂದಾಗಿ ಕೆಳವರ್ಗದ ಗಂಡ-ಹೆಂಡಿರ ನಡುವೆ ಭಿನ್ನಾಭಿಪ್ರಾಯ ತಲೆದೋರಿ ಅವರ ಶಾಂತಿ ಹಾಳಾಗುತ್ತದೆ. ಹಾಗಾಗಿ ಬಸವಣ್ಣ ಒಂದು ಕುಟುಂಬದ ಎಲ್ಲಾ ಸದಸ್ಯರು ಒಂದು ಧರ್ಮ ಸ್ವೀಕಾರ ಮಾಡುವ ಮೂಲಕ ಒಂದು ಸಿದ್ಧಾಂತವನ್ನು ಬದುಕಲು ಉಪದೇಶಿಸಿರುವುದನ್ನು ಎಂ.ಎಂ.ಕಲಬುರ್ಗಿ ಅವರು ನಮ್ಮೆದುರಿಗೆ ಬಿಚ್ಚಿಡಲು ಪ್ರಯತ್ನಿಸಿದ್ದಾರೆ. ಶಿವ ಮತ್ತು ಭಕ್ತರ ಭಕ್ತಿಯಂತೆ ಗಂಡ ಮತ್ತು ಹೆಂಡತಿಯರ ನಡುವಿನ ಪ್ರೀತಿ ಪವಿತ್ರವಾಗಿರಬೇಕು, ದೈವಿಕವಾಗಿರಬೇಕು ಎಂಬುದು ಶರಣರ ನಿಲುವಾಗಿತ್ತು. ಈ ನಿರ್ದೇಶನಕ್ಕೆ ಅಲ್ಲಮನ ವಚನವನ್ನು ನೋಡುವುದಾದರೆ

"ಸತಿ-ಪತಿಯೆಂಬ ಅಂಗಸುಖ ಹಿಂಗಿ ಲಿಂಗವೇ ಪತಿಯಾದ ಬಳಿಕ
ಸತಿಗೆ ಪತಿಯುಂಟೇ? ಪತಿಗೆ ಸತಿಯುಂಟೇ?
ಪಾಲುಂಡು ಮೇಲುಂಬರೇ?"[೫೨]

ಹೀಗೆ ವ್ಯಕ್ತಿಗಳು ಸದಸ್ಯರಾಗಿ ಕುಟುಂಬದಲ್ಲಿ ಬಾಳುವ ರೀತಿಯನ್ನು ದೈವಿಕ ರೀತಿಯಲ್ಲಿ ಪ್ರತಿಪಾದಿಸಿದ್ದಾರೆ.

ಮಾದಾರ ಚೆನ್ನಯ್ಯನ ಮನೆಯ ಮಗ ನಾನಯ್ಯ! ಎಂಬ ಲೇಖನವು ಬಸವಣ್ಣ ವಚನದ ಕೊನೆಯ ಸಾಲನ್ನು ಶೀರ್ಷಿಕೆಯಾಗಿ ಇಟ್ಟುಕೊಂಡು ವೈದಿಕಶಾಹಿ ವಿರೋಧವನ್ನು ಬಸವಣ್ಣ ತನ್ನ ವಚನದಲ್ಲಿ ವ್ಯಕ್ತಪಡಿಸಿದ ಬಗೆಯನ್ನು ಚರ್ಚಿಸುವ ಪ್ರಯತ್ನ ಮಾಡಿದ್ದಾರೆ.

"ವೇದಕ್ಕೆ ಒರೆಯ ಕಟ್ಟುವೆ;
ಶಾಸ್ತ್ರಕ್ಕೆ ನಿಗಳವನಿಕ್ಕುವೆ;
ತರ್ಕದ ಬೆನ್ನಬಾರನೆತ್ತುವೆ;
ಆಗಮದ ಮೂಗ ಕೊಯಿವೆ;
ನೋಡಯ್ಯ ಮಹಾದಾನಿ ಕೂಡಲಸಂಗಮದೇವಾ
ಮಾದಾರ ಚೆನ್ನಯ್ಯನ ಮನೆಯಮಗ ನಾನಯ್ಯ!"[೫೪]

ಪ್ರಸ್ತುತ ಈ ವಚನ ವೈದಿಕದ ಭೌದ್ಧಿಕತೆಗೆ ಸಂಬಂಧಿಸಿದ ವಸ್ತುವನ್ನುಳ್ಳ ವಚನವಾಗಿದೆ. ವೈದಿಕದ ಬೌದ್ಧಿಕ ವಿಚಾರಗಳನ್ನು ಖಂಡಿಸುವ ನೆಲೆಯಲ್ಲಿ ಶೂದ್ರವರ್ಗದ ಬದುಕಿನ ಸಾಮಾಜಿಕ ಚಿತ್ರಣವನ್ನು ನೀಡಿದ್ದಾರೆ. ಇಲ್ಲಿ ವೇದ, ಶಾಸ್ತ್ರ, ತರ್ಕ ಮತ್ತು ಆಗಮಗಳ ತಿರಸ್ಕರಣೆ ಇದೆ. ಈ ವಚನವನ್ನು ಎಂ.ಎಂ.ಕಲಬುರ್ಗಿ ಅವರು ವರ್ಗ–ವರ್ಣದ ಹಿನ್ನೆಲೆಯಲ್ಲಿ ಹಾಗೂ ಕಾಯಕದ ಹಿನ್ನೆಲೆಯಲ್ಲಿ ನೋಡುವ ಪ್ರಯತ್ನ ಮಾಡಿದ್ದಾರೆ. ವೇದ, ಶಾಸ್ತ್ರ, ತರ್ಕ ಮತ್ತು ಆಗಮ ಪದಗಳು ಬ್ರಾಹ್ಮಣತ್ವವನ್ನು, ಮಾದಾರ ಚೆನ್ನಯ್ಯನ ಮನೆಯ ಮಗ ನಾನಯ್ಯ ಎಂಬುದು ಶೂದ್ರವರ್ಗವನ್ನು ಪ್ರತಿನಿಧಿಸುವುದು ಎಂದಿದ್ದಾರೆ. ಇಲ್ಲಿ ಎಂ.ಎಂ.ಕಲಬುರ್ಗಿ ಅವರು ಪ್ರತಿಭಟಿಸುವ ನೆಲೆಯಲ್ಲಿ ಎರಡು ವರ್ಗಗಳನ್ನು ಮುಖಾಮುಖಿಗೊಳಿಸಿದ್ದಾರೆ. ಒರೆಯನ್ನು ಕಟ್ಟುವುದು, ನಿಗಳವನ್ನಿಕ್ಕುವುದು, ಬೆನ್ನಬಾರನೆತ್ತುವುದು, ಮೂಗ ಕೊಯ್ಯುವುದು ಇವೆಲ್ಲ ಶೂದ್ರವರ್ಗದವರು ನಿಭಾಯಿಸುವಂತಹ ಕೆಲಸಗಳು. ಆದರೆ ಈ ವಚನದಲ್ಲಿ ಬದುಕಿನ ನಿರ್ವಹಣೆಗಾಗಿ ಬಳಸಿಕೊಳ್ಳದೆ ವೈದಿಕ ಜೈನ ಸಂಪತ್ತಾದ ವೇದ, ಶಾಸ್ತ್ರ, ಪುರಾಣ, ತರ್ಕ, ಆಗಮಗಳನ್ನು ಖಂಡಿಸುತ್ತಾ ವೃತ್ತಿ ನೆಲೆಯಲ್ಲಿ ವಿವರಿಸಿದ್ದಾರೆ. ಅವರು ನೇರವಾಗಿ ಖಂಡಿಸದೇ ಅವರ ಬ್ರಾಹ್ಮಣತ್ವವನ್ನು ಪೋಷಿಸುವಂತಹ ವಿದ್ಯಾಸಾಮಗ್ರಿಗಳನ್ನು ಖಂಡಿಸಿದ್ದಾರೆ. ಅವು ಗಳಿಂದಾಗುವ ಅನಾಹುತಗಳನ್ನು ತಪ್ಪಿಸುವ ಸಲುವಾಗಿ ಅವುಗಳನ್ನು ಮುಚ್ಚಿಡುವ ಪ್ರಯತ್ನ ಮಾಡಿದ್ದಾರೆ. ವೇದ, ಶಾಸ್ತ್ರ, ತರ್ಕ ಮುಂತಾದವುಗಳು ಮಾನವ ಜನಾಂಗವನ್ನು ಶೋಷಣೆ ಮಾಡುತ್ತಾ ಬಂದಿವೆ. ಇವುಗಳನ್ನಿಟ್ಟುಕೊಂಡು ಕೆಳವರ್ಗದವರಿಗೆ ನೀಡುತ್ತಿದ್ದ ಹಿಂಸಾಪ್ರವೃತ್ತಿಯ ಶಿಕ್ಷೆಗಳಾದ ಮೂಗನ್ನು ಕೊಯ್ಯುವುದು, ಕಿವಿಯಲ್ಲಿ ಕಾದ ಸೀಸವನ್ನು ಹೊಯ್ಯುವುದು ಇಂತಹ ಶಿಕ್ಷೆಗಳನ್ನು ಬ್ರಾಹ್ಮಣತ್ವಕ್ಕೂ ಕೂಡ ನೀಡಬೇಕೆಂದು ಈ ವಚನ ಸ್ಪಷ್ಟಪಡಿಸುತ್ತದೆ.

ಧರ್ಮಶಾಸ್ತ್ರಗಳಲ್ಲಿ ಅಡಗಿರುವ ಮಾನವ ಹಿತಕರ ಮೂಲಾಂಶಗಳನ್ನು ಬದಿಗೊತ್ತಿ ವೈದಿಕಶಾಹಿ ತನಗೆ ಬೇಕಾದಂತೆ ರೂಪಿಸಿಕೊಂಡು ಆಚರಣೆಗೆ ತಂದ ಮೌಲ್ಯಗಳ ವಿರುದ್ಧ ಬಂಡೆದ್ದು, ಧರ್ಮಶಾಸ್ತ್ರಗಳ ಮೂಲ ಅಂಶಗಳನ್ನು ಪ್ರಸ್ತುತಪಡಿಸುವ ಕುರಿತು ಈ ವಚನದಲ್ಲಿ ಪ್ರತಿಭಟನೆಯ ಸ್ವರೂಪದಲ್ಲಿ ವಿಸ್ತರಿಸಿದ್ದಾರೆ.

ಈ ಮೇಲಿನ ವಚನಕ್ಕೆ ಪೂರಕವಾಗಿ ಎಂ.ಎಂ.ಕಲಬುರ್ಗಿ ಅವರು ಇದೇ ವಸ್ತುವನ್ನು ಒಳಗೊಂಡ ಇನ್ನೊಂದು ವಚನವನ್ನು ಇದರೊಂದಿಗೆ ಚರ್ಚಿಸಿದ್ದಾರೆ.

"ವೇದ ನಡನಡ ನಡುಗಿತ್ತು
ಶಾಸ್ತ್ರವಾಗಲಿ ಕೆಲಸಕ್ಕೆ ಸಾರಿದ್ದಿತಯ್ಯಾ
ತರ್ಕತರ್ಕಿಸಲರಿಯದೆ ಮೂಗವಟ್ಟಿದ್ದಿತಯ್ಯಾ
ಆಗಮ ಹೆರತೊಲಗಿ ಆಗಲಿ ಇದ್ದಿತಯ್ಯಾ
ನಮ್ಮ ಕೂಡಲಸಂಗಯ್ಯನು
ಚೆನ್ನಯ್ಯನ ಮನೆಯಲುಂಡ ಕಾರಣ!"[೫೫]

ವೇದಕ್ಕೆ ಹೊರೆಯ ಕಟ್ಟುವೆ ಎಂಬ ವಚನದಲ್ಲಿ ಮಾದಾರ ಚೆನ್ನಯ್ಯನ ಮನೆಯ ಮಗ ನಾನು ಎಂಬಲ್ಲಿ ಬಸವಣ್ಣನ ಭಕ್ತಿಪೂರ್ವಕವಾದ ವಿನಯ ಕಂಡುಬರುತ್ತದೆ. ಆದರೆ ಈ ವಚನದಲ್ಲಿ ಕೂಡಲಸಂಗಯ್ಯನು ಚೆನ್ನಯ್ಯನ ಮನೆಯಲುಂಡ ಎನ್ನುವಲ್ಲಿ ಹಿಂದಿನಿಂದ ಬಂದಂತಹ ಆಚರಣೆಗಳನ್ನು ಮುರಿದು ತನ್ನ ಅಚಲಭಕ್ತಿಯಿಂದ ಶಿವನನ್ನೇ ಮನೆಗೆ ಕರೆಸಿಕೊಂಡ ಭಕ್ತಿಗುಣ ಎದ್ದು ಕಾಣುತ್ತದೆ.

"ವೀರಶೈವರಲ್ಲಿ ಕಸುಬುಗಳಿಗೆ 'ಕಾಯಕ'ದ ಅರ್ಥವಿದೆ. ಇವರು ಕಾಯಕದಲ್ಲಿ ಕೈಲಾಸವನ್ನು ನಂಬಿದವರು. ಇವರ ಈ ನಂಬಿಕೆಯೇ ಹೀಗೆ ಅವಹೇಳನೆಗೆ ಗುರಿಯಾದಾಗ ತಪ್ತಭಾವ, ಜ್ವಾಲೆಯಂತೆ ವ್ಯಕ್ತವಾದುದು ಸಹಜವೇ ಆಗಿದೆ."[೫೬] ಕಾಯಕವೇ ಕೈಲಾಸ ಎಂದು ಸಾರಿದ ಬಸವಣ್ಣನು ಮೇಲ್ವರ್ಗದ ಪುರೋಹಿತರು ಕೆಳವರ್ಗದವರನ್ನು ಅವರ ವೃತ್ತಿಯ ಹಿನ್ನೆಲೆಯಲ್ಲಿ ಹೀಯಾಳಿಸಿದಾಗ ಬಸವಣ್ಣನ ಪ್ರತಿಭಟನಾತ್ಮಕ ನೆಲೆಯನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸಿದ್ದಾರೆ. ಮಾದಿಗರು ಸವರ್ಣೀಯರಿಗೆ "ನಿನ್ನ ಮನೆಯ ಮಗ ನಾನು" ಎಂದು ನುಡಿಯುವುದು ಸಾಮಾನ್ಯ ರೂಢಿ. ಬಸವಣ್ಣ ಇದಕ್ಕೆ ವಿರುದ್ಧವಾಗಿ 'ಮಾದಾರ ಚೆನ್ನಯ್ಯನ ಮನೆಯ ಮಗ ನಾನು' ಎಂದು ನುಡಿದು ವರ್ಣನಿರ್ಮೋಹ, ಗುಣವ್ಯಾಮೋಹಗಳನ್ನು ಸ್ಪಷ್ಟಪಡಿಸಿದ್ದು, ವರ್ಣಪ್ರಧಾನ ಸಮಾಜವನ್ನು ಪ್ರತಿಭಟಿಸಿ ಗುಣಪ್ರಧಾನ ಸಮಾಜವನ್ನು ಕಟ್ಟಲು ಬಯಸಿದ ಅವನ ಕ್ರಾಂತಿಯ ಕೇಂದ್ರಬಿಂದುವನ್ನು ಇಲ್ಲಿ ಗುರುತಿಸಬಹುದಾಗಿದೆ."[೫೭]

ಅನಾದಿಕಾಲದಿಂದಲೂ ಜೀತದಾಳು ಪದ್ಧತಿ ರೂಢಿಯಲ್ಲಿದೆ. ಮಾದಿಗರು ಸವರ್ಣೀಯರ ಮನೆಯ ಆಳಾಗಿ ದುಡಿಯುತ್ತಿದ್ದರು. ಅವರನ್ನು ಮನೆಯ ಮಗ ಎಂದು ಕರೆಯುತ್ತಿದ್ದರು. ಆದರೆ ಇಲ್ಲಿ ವಿರುದ್ಧವೆಂಬಂತೆ ಬಸವಣ್ಣ ಬ್ರಾಹ್ಮಣನಾಗಿದ್ದು ಕೂಡ ಮಾದಾರ ಚೆನ್ನಯ್ಯನ ಮನೆಯ ಮಗ ನಾನು ಎನ್ನುವಲ್ಲಿ ವರ್ಣಪ್ರಧಾನ ಸಮಾಜವನ್ನು ಧಿಕ್ಕರಿಸುವುದು ಕಂಡುಬರುತ್ತದೆ. ವರ್ಣಪ್ರಧಾನ ಸಮಾಜದಲ್ಲಿ ಪ್ರತಿಭಟಿಸುವ ಮೂಲಕ ಗುಣಪ್ರಧಾನವದ ಸಮಾಜವನ್ನು ಕಟ್ಟಲು ಬಯಸುವ ಬಸವಣ್ಣನ ತತ್ವದಲ್ಲಿ ಸಮಾನತೆ ಎಂಬುದು ಎದ್ದು ಕಾಣುತ್ತದೆ. ಬಸವಣ್ಣನ ಪರಂಪರೆ ನಿರಾಕರಣೆ, ಸಮಾನತೆಯ ತತ್ವವನ್ನು ಎತ್ತಿಹಿಡಿಯುವ ಪ್ರಯತ್ನವನ್ನು ಎಂ.ಎಂ.ಕಲಬುರ್ಗಿ ಅವರು ಮಾಡಿದ್ದಾರೆ.

"ಉದಕದೊಳಗೆ ಬಚ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತು
ಸಸಿಯೊಳಗಣ ರಸದ ರುಚಿಯಂತಿದ್ದಿತ್ತು
ನನೆಯೊಳಗಣ ಪರಿಮಳದಂತಿದ್ದಿತ್ತು
ಕೂಡಲಸಂಗಮದೇವ, ಕನ್ನೆಯ ಸ್ನೇಹದಂತಿದ್ದಿತ್ತು"[೫೮]

ಈ ವಚನ ವಿಶ್ಲೇಷಣೆ ಮಾಡುವ ಸಂದರ್ಭದಲ್ಲಿ ಕೊನೆಯ ಸಾಲಿನ 'ಕನ್ನೆಯ ಸ್ನೇಹದಂತಿದ್ದಿತು' ಎಂಬ ಶೀರ್ಷಿಕೆಯಡಿ ಕೂಡಲಸಂಗಮ ದೇವನ ಪರಿಯನ್ನು ಕುರಿತು ಚರ್ಚಿಸುವ ಪ್ರಯತ್ನ ಮಾಡಿದ್ದಾರೆ.

ಈ ವಚನವು ಬಸವಣ್ಣನವರ 'ಷಟ್ಸ್ಥಲ ವಚನ' ಕೃತಿಯ ಪ್ರಥಮ ವಚನವಾಗಿದೆ. "ಅಂಗದಲ್ಲಿ ಲಿಂಗ ಹುದುಗಿರುವ ರೀತಿಯನ್ನು ಹೇಳುವುದು ಇದರ ಉದ್ದೇಶ" ಎಂದಿದ್ದಾರೆ.

ಈ ವಚನದಲ್ಲಿ ಎಂ.ಎಂ.ಕಲಬುರ್ಗಿ ಅವರು 'ಬಯ್ಕೆ', 'ಕೂಡಲಸಂಗಮದೇವ' ಮತ್ತು 'ಕನ್ನೆಯ ಸ್ನೇಹದಂತಿದ್ದಿತ್ತು' ಎಂಬ ಮೂರು ಪದಗಳಿಗೆ ಪಾಠಾಂತರಗಳನ್ನು ಗುರುತಿಸಿದ್ದಾರೆ. ಹಸ್ತಪ್ರತಿ ಲಿಪಿಗೊಳಿಸುವ ಸಂದರ್ಭದಲ್ಲಿ 'ಬಯ್ಕೆ' ಎಂಬುದನ್ನು ಬೈಕೆ ಎಂದು, ಮತ್ತೊಬ್ಬ 'ಬೆಂಕಿ' ಎಂಬ ಪಾಠವನ್ನು ಸೇರಿಸಿದ್ದಾರೆ. ಇಲ್ಲಿ 'ಬೆಂಕಿಯ ಕಿಚ್ಚು' ಎಂದಾಗ ದ್ವಿರುಕ್ತಿದೋಷ ಕಂಡುಬರುವುದರಿಂದ ಈ ಪಾಠವನ್ನು ತ್ಯಜಿಸಬೇಕಾಗುವುದೆಂದು ಎಂ.ಎಂ.ಕಲಬುರ್ಗಿ ಅವರು ತಿಳಿಸಿದ್ದಾರೆ. 'ಬಯಕೆ' ಎಂಬ ಬೇರೊಂದು ಪಾಠಕ್ಕೆ ಅರ್ಥಸಂಬಂಧದ ಸಲುವಾಗಿ 'ಉದಕ'ಕ್ಕೆ ಬದಲಾಗಿ 'ಉದರ' ಎಂಬುದನ್ನು ಲಿಪಿಕಾರ ಊಹೆಯಿಂದ ಸೃಷ್ಟೀಕರಿಸಿಕೊಂಡಿದ್ದಾನೆ. ಇಲ್ಲಿ 'ಬಯ್ಕೆ'ಯು ಕವಿಪಾಠವಾಗಿದೆ. 'ಬಯ್ಕೆಯ ಕಿಚ್ಚು' ಎಂಬುದಕ್ಕೆ ನೀರಿನಲ್ಲಿ ರಹಸ್ಯವಾಗಿ ಅಡಗಿರುವ ಅಗ್ನಿ ಎನ್ನುತ್ತಾ ಅದಕ್ಕೆ 'ವಡಬಾಗ್ನಿ' ಎಂಬ ವಿಶಾಲಾರ್ಥವನ್ನು ಪರಿಶೀಲಿಸಿ 'ವಡಬಾಗ್ನಿ' ಎಂಬುದು ಸಮುದ್ರದಲ್ಲಿ ಅಡಗಿರುವ ಬೆಂಕಿ ಎಂಬ ಅರ್ಥವನ್ನು ಎಂ.ಎಂ.ಕಲಬುರ್ಗಿ ಅವರು

ಗುರುತಿಸಿದ್ದಾರೆ. ಮೂಲಪಾಠವಾಗಿರುವ 'ಕೂಡಲಸಂಗಮದೇವ', 'ಕನ್ನೆಯ ಸ್ನೇಹದಂತಿದ್ದಿತ್ತು' ಎಂಬುದು ಜನಬಳಕೆಯಲ್ಲಿ 'ಕೂಡಲಸಂಗಮದೇವಾ ಕನ್ನೆಯ ಸ್ನೇಹದಂತಿದ್ದಿತು' ಎಂದಾಗಿದೆ. ಕರ್ತೃ ಸ್ಥಾನದಲ್ಲಿ 'ಕೂಡಲಸಂಗಮದೇವ' ಪದವನ್ನು ಇಟ್ಟುಕೊಂಡರೆ, ಕೂಡಲಸಂಗಮನೆಂಬ ದೈವವು ಕನ್ಯೆಯ ಸ್ನೇಹದಂತಿದ್ದಿತು ಎಂಬ ಸರಿಯಾದ ಅರ್ಥ ಹೊರಡುವುದರಿಂದ ಮೇಲೆ ಸ್ವೀಕರಿಸಿದುದೆ ಶುದ್ಧಪಾಠವೆಂದು ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯಪಡುತ್ತಾರೆ.

ಈ ವಚನದ ಪ್ರಧಾನ ಆಶಯ ಕಂಡುಬರುವುದು ಕೊನೆಯ ಸಾಲಿನಲ್ಲಿ. ವಚನದ ನಾಲ್ಕು ಸಾಲುಗಳಲ್ಲೂ ಕಂಡುಬರುವ 'ಇದ್ದಿತ್ತು' ಎಂಬುದು ನಪುಂಸಕಲಿಂಗವಾಚಿ ಕ್ರಿಯಾಪದದಿಂದ ದೇವರಿಗೆ ನಪುಂಸಕಲಿಂಗ ಭಾವವನ್ನು ಆರೋಪಿಸಲಾಗಿದೆ ಎಂದು ಅದಕ್ಕೆ ಎರಡು ಕಾರಣಗಳನ್ನು ಕೊಡುತ್ತಾರೆ. "ದೇವರು ಪುಲ್ಲಿಂಗವೂ ಅಲ್ಲ, ಸ್ತ್ರೀಲಿಂಗವೂ ಅಲ್ಲ; ಪುಲ್ಲಿಂಗವೂ ಹೌದು, ಸ್ತ್ರೀ ಲಿಂಗವೂ ಹೌದು."[೫೯] ಇಲ್ಲಿ ದೈವಕ್ಕೆ ನಪುಂಸಕ ಲಿಂಗತ್ವವನ್ನು ಆರೋಪಿಸಿದುದು ಔಚಿತ್ಯಪೂರ್ಣ ವಾಗಿದೆ" ಎಂದಿದ್ದಾರೆ. ಇಲ್ಲಿ ಎಂ.ಎಂ.ಕಲಬುರ್ಗಿ ಅವರ ಮಾತನ್ನು ಒಪ್ಪಬೇಕಾಗುತ್ತದೆ. ದೇವರು ನಿರಾಕಾರಿ, ಅದಕ್ಕೆ ನಾವು ಒಂದು ರೂಪವನ್ನು ಕೊಟ್ಟಿದ್ದೇವೆ. ಪ್ರತಿಯೊಬ್ಬರಲ್ಲೂ ಅಂದರೆ ಸ್ತ್ರೀಪುರುಷರೆಂಬ ಭೇದಭಾವ ಇಲ್ಲದೇ ಎಲ್ಲರ ಮನದಲ್ಲೂ ದೇವರಿದ್ದಾನೆ. ದೇವರಿಗೆ ರೂಪಕೊಟ್ಟ, ದೇವರ ಲಿಂಗಪರಿಕಲ್ಪನೆಯನ್ನು ಬಸವಣ್ಣ ನಿರಾಕರಿಸಿರುವ ಬಗೆಯನ್ನು ಹೇಳಿದ್ದಾರೆ.

ಹಾಗೆಯೇ ಮುಂದುವರಿದು ಇದು ದಂಡಸ್ಥಲದ ವಚನವಿದು ಎನ್ನುತ್ತಾ, ಪಿಂಡ(ಭ್ರೂಣ)ದಲ್ಲಿ ಜ್ಞಾನ ಎಚ್ಚರವಾದ ಸ್ಥಳ ಎಂದಿದ್ದಾರೆ. ಆ ಸ್ಥಿತಿಯಲ್ಲಿರುವವನಿಗೆ ತನ್ನಲ್ಲಿ ಚೈತನ್ಯವಿದೆಯೆಂಬ ಪರಿವೆಯೇ ಇಲ್ಲದಾಗ ಲಿಂಗಪ್ರಜ್ಞೆ ಎಲ್ಲಿಂದ ಬರಬೇಕೆಂದು ಪ್ರಶ್ನಿಸುತ್ತಾರೆ. ಈ ಮೇಲಿನ ಎರಡು ದೃಷ್ಟಿಯಿಂದ ದೇವರನ್ನು ನಪುಂಸಕಲಿಂಗವೆಂದು ಕರೆದುದು ಅರ್ಥವತ್ತಾಗಿದೆ ಎಂದಿದ್ದಾರೆ. ದೇವರು ನಪುಂಸಕ ಎಂದಿದ್ದರೂ ಕನ್ನೆಯ ಸ್ನೇಹ ಎಂದು ಬಳಸಿರುವುದರಲ್ಲಿ ಸತ್ಯವಡಗಿದೆ. "ವೀರಶೈವದಲ್ಲಿ ಶರಣಸತಿ ಲಿಂಗಪತಿಯ ಬಗೆಗಿನ ಕಾಮವು; ಕನ್ನೆಯಲ್ಲಿ ಪುರುಷನ ಬಗೆಗಿನ ಕಾಮದಂತೆ ಅಡಗಿರುತ್ತದೆ. ಕನ್ಯೆಯ ಯುಕ್ತ ಮನಸ್ಥಿತಿಯಲ್ಲಿ ಲಿಂಗಪತಿಯ ಹಂಬಲ ಮೂಡುತ್ತದೆ. ಈ ದೃಷ್ಟಿಯಿಂದಲೂ ಪ್ರಸ್ತುತ ವಾಕ್ಯ ಅರ್ಥಪೂರ್ಣವೆನಿಸುತ್ತದೆ"[೬೦] ಎಂದಿದ್ದಾರೆ.

ಈ ವಚನದಲ್ಲಿ ಕಿಚ್ಚು(ತೇಜ), ರಸ(ಅಪ್ಪು), ಪರಿಮಳ(ಪೃಥ್ವಿ)ಗಳು ಪಂಚಭೂತ ತತ್ವದ ಕೊನೆಯ ಮೂರು ಘಟ್ಟಗಳು ಎಂದಿದ್ದಾರೆ. ಹಾಗೆಯೇ ಮುಂದುವರಿದು "ಈ ವಚನವು ತೇಜತ್ವದಿಂದ ಪ್ರಾರಂಭವಾಗಿ, ಅಮೃತತ್ವವಾಗಿ ಪೃಥ್ವಿತತ್ವಕ್ಕೆ ಬಂದು ನಿಂತಿದೆ"[೬೧] ಎಂದು ವಿಶ್ಲೇಷಿಸಿರುವುದು ಅರ್ಥಪೂರ್ಣವಾಗಿದೆ. ಇಲ್ಲಿ ಅಸ್ಪಷ್ಟತೆಯಿಂದ ಸ್ಪಷ್ಟತೆಯ ಕಡೆಗೆ ಸಾಗಿದ

ಪರಿಯನ್ನು ತಿಳಿಸಿದ್ದಾರೆ. ದೇವರ ಬಗೆಗಿನ ನಿಲುವನ್ನು ಮೂರು ಅಂಶಗಳಲ್ಲಿ ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. ನೀರಿನಲ್ಲಿ ಬೆಂಕಿ ಇರುವುದು ಹೇಗೆ ಅಸಾಧ್ಯವೋ, ಸಸಿಯೊಳಗೆ ರಸವನ್ನು ಭಾವಿಸುವುದು ಹೇಗೆ ಸಾಧ್ಯವೋ, ಮೊಗ್ಗಿನಲ್ಲಿ ಪರಿಮಳವನ್ನು ಭಾವಿಸುವುದು ಇನ್ನು ಸಾಧ್ಯವೋ ಹಾಗೆ ದೇವರ ನಿಲುವು ಪಿಂಡದಲ್ಲಿ ಅಸ್ಪಷ್ಟ, ಸ್ಪಷ್ಟಾಸ್ಪಷ್ಟ ಮತ್ತು ಸ್ಪಷ್ಟ ಎಂದು ದೇವರ ನಿಲುವನ್ನು ಸ್ಪಷ್ಟೀಕರಿಸಿದ್ದಾರೆ. ವೀರಶೈವ ತತ್ವದ ಪ್ರಕಾರ ಶಿವನಿರುವ ಬಗೆಯನ್ನು ವಿವರಿಸಿದ್ದಾರೆ. ತನುವಿನಲ್ಲಿ ಕಾರಣ, ಸೂಕ್ಷ್ಮ ಮತ್ತು ಸ್ಥೂಲಗಳಿರುತ್ತವೆ. ಅವುಗಳನ್ನು ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗಗಳಿಗೆ ಹೋಲಿಸಿ ಅಲ್ಲಿ ಶಿವನಿರುವನೆಂಬ ತತ್ವನಿರೂಪಣೆ, ಕಲ್ಪಿತ ನಿರ್ವಹಣೆಗಳು ಓದುಗರನ್ನು ಆಶ್ಚರ್ಯಗೊಳಿಸುತ್ತವೆ ಎಂದಿದ್ದಾರೆ. ಪ್ರಭುದೇವ, ಚೆನ್ನಬಸವಣ್ಣ ಮುಂತಾದವರು ಪಿಂಡಸ್ಥ ಶಿವನ ವರ್ಣನೆಯನ್ನು ಮಾಡಿದ್ದರೂ ಬಸವಣ್ಣ ಪಿಂಡಸ್ಥಶಿವನ ವರ್ಣನೆಯಲ್ಲಿ ಕಲಾತ್ಮಕ ಸೃಷ್ಟಿ ಎದ್ದು ಕಾಣುತ್ತದೆ ಎಂಬ ಎಂ.ಎಂ.ಕಲಬುರ್ಗಿ ಅವರ ಮಾತು ಔಚಿತ್ಯಪೂರ್ಣ ವಾಗಿದೆ. ಈ ಮೇಲಿನ ವಚನವನ್ನು ಚರ್ಚಿಸುವ ಸಂದರ್ಭದಲ್ಲಿ ಪಾಠಾಂತರ ಗುರುತಿಸುವ ಮೂಲಕ ಅಧ್ಯಯನ ಮಾಡುವುದು ವಿಶೇಷವಾಗಿ ಕಂಡುಬರುತ್ತದೆ.

"ಕರಿ ಘನಃ ಅಂಕುಶ ಕಿರಿದೆನ್ನಬಹುದೆ? ಬಾರದಯ್ಯಾ
ಗಿರಿ ಘನಃ ವಜ್ರ ಕಿರಿದೆನ್ನಬಹುದೆ? ಬಾರದಯ್ಯಾ
ತಮಂಧ ಘನಃ ಜ್ಯೋತಿ ಕಿರಿದೆನ್ನಬಹುದೆ? ಬಾರದಯ್ಯಾ
ಮರಹು ಘನಃ ನಿಮ್ಮ ನೆನೆವ ಮನ ಕಿರಿದೆನ್ನಬಹುದೆ?
ಬಾರದಯ್ಯ, ಕೂಡಲಸಂಗಮದೇವಾ!"[೬೨]

"ಕರಿಯಂಜುವುದಂಕುಶಕ್ಕಯ್ಯಾ;
ಗಿರಿಯಂಜುವುದು ವಕ್ರಕ್ಕಯ್ಯಾ;
ತಮಂಧಮಂಜುವುದು ಜ್ಯೋತಿಗಯ್ಯಾ;
ಕಾನನವಂಜುವುದು ಬೇಗೆಗಯ್ಯಾ;
ಪಂಚಮಹಾಪಾತಕವಂಜುವುದು ಕೂಡಲಸಂಗನ ನಾಮಕ್ಕಯ್ಯಾ!"[೬೩]

ಈ ಮೇಲಿನ ಎರಡೂ ವಚನಗಳು ಬಸವಣ್ಣನವರ 'ಪಿಂಡಜ್ಞಾನಸ್ಥಲ' ಮತ್ತು 'ಪಂಚಾಕ್ಷರಿ ಸ್ಥಲ'ಕ್ಕೆ ಸಂಬಂಧಿಸಿದ ವಚನಗಳು. ಎರಡನೇ ವಚನದಲ್ಲಿನ ಕಾನನವಂಜುವುದು ಬೇಗೆಗಯ್ಯಾ ಎಂಬ ಸಾಲನ್ನು ಬಿಟ್ಟರೆ ಎರಡೂ ವಚನಗಳಲ್ಲಿನ ಭಾವದ ಸಂಖ್ಯೆ ಮತ್ತು ಕ್ರಮಸಂಖ್ಯೆ ಒಂದೇ ಆಗಿದ್ದರೂ ಅವುಗಳ ಅಭಿಪ್ರಾಯ ಮತ್ತು ರಚನೆಯಲ್ಲಿ ರೂಪವ್ಯತ್ಯಾಸವನ್ನು ಎಂ.ಎಂ. ಕಲಬುರ್ಗಿ ಅವರು ಗುರುತಿಸುವ ಹಿನ್ನೆಲೆಯಲ್ಲಿ ಈ ಎರಡೂ ವಚನಗಳನ್ನು ಚರ್ಚೆಗೆ ಎತ್ತಿಕೊಂಡಿದ್ದಾರೆ.

ಎಂ.ಎಂ.ಕಲಬುರ್ಗಿ ಅವರು ಬಸವಣ್ಣನವರ ಅನೇಕ ವಚನಗಳಲ್ಲಿ ಪ್ರಶ್ನೆರೂಪದ ವಚನಗಳು ಸಿಗುತ್ತವೆ. ಅವುಗಳಿಗಿಂತ ಭಿನ್ನವಾದ ಪ್ರಶ್ನೋತ್ತರವನ್ನು ಒಳಗೊಂಡ ಸ್ವಗತ ಮಾದರಿಯ ವಿಶೇಷ ವಚನವಿದಾಗಿದೆ ಎಂದಿದ್ದಾರೆ. ಜೊತೆಗೆ ಈ ವಚನವು ಏಕಪಾತ್ರಾಭಿನಯದಂತೆ ಅಭಿನಯಶೈಲಿಯನ್ನು ಹೊಂದಿರುವ ಅಂಶವನ್ನು ಗುರುತಿಸುತ್ತಾರೆ. ಆತ್ಮಸಾಕ್ಷಿಯಾಗಿಟ್ಟುಕೊಂಡು ಪ್ರಶ್ನೋತ್ತರಗಳನ್ನು ನಡೆಸಿ ಕೊನೆಗೆ "ಮರಹುಘನಃ ನಿಮ್ಮ ನೆನೆವ ಮನ ಕಿರಿದೆನ್ನಬಹುದೆ? ಬಾರದಯ್ಯ" ಎಂಬ ನಿಲುವಿಗೆ ಬಸವಣ್ಣ ಬಂದುನಿಂತ ಬಗೆಯನ್ನು ವ್ಯಕ್ತಪಡಿಸಿದ್ದಾರೆ.

ಹಿಂದೂ ಪರಂಪರೆಯಲ್ಲಿ ಕರಿ, ಗಿರಿ, ತಮಂಧಗಳು ಅನುಕ್ರಮವಾಗಿ ಮದ, ಜಡ, ಅಜ್ಞಾನಗಳಿಗೆ ಸಂಕೇತವಾಗಿವೆ. ಈ ಕರಿ, ಗಿರಿ, ತಮಂಧಗಳನ್ನು ದೋಷಗಳೆನ್ನುತ್ತಾ, ಇವೆಲ್ಲವೂ ಘನವಾದವು. ಇವುಗಳನ್ನು ಹೊಡೆದೋಡಿಸುವಂತಹವು ಲಘುವಾದವುಗಳು ಎಂದಿದ್ದಾರೆ. ಇವೆರಡರ ವೈರುಧ್ಯಗಳಲ್ಲಿ 'ಬಾರದಯ್ಯಾ' ಎಂಬ ಪದದ ಬಳಕೆಯಿಂದ ಅನಲ್ಪ ಅಲ್ಪವಾಗಿ, ಅಲ್ಪ ಅನಲ್ಪವಾಗಿ ಪಲ್ಲಟಗೊಳ್ಳುತ್ತವೆ. ಕರಿ, ಗಿರಿ, ತಮಂಧಗಳು ಘನವಸ್ತುಗಳಾಗಿದ್ದರೂ ಅವು ಲಘುವಸ್ತುಗಳ ಹಿಡಿತಕ್ಕೆ ಬರುವ ತತ್ವವು ಇಲ್ಲಿದೆ.

ಬಸವಣ್ಣನವರು ಮೇಲಿನ ವಚನದ ವೈರುಧ್ಯಗಳನ್ನು ಬಳಸಿಕೊಂಡು ಮತ್ತೊಂದು ವಚನವನ್ನು ರಚನೆ ಮಾಡಿದ್ದಾರೆ. ಆದರೆ ಇವೆರಡೂ ರಾಚನಿಕವಾಗಿ ಸಾಮ್ಯವಾಗಿ ಕಂಡುಬಂದರೂ ಅರ್ಥದಲ್ಲಿ ವ್ಯತ್ಯಾಸದಿಂದ ಕೂಡಿವೆ. "ಎರಡನೇ ವಚನ ಲೋಕಬೋಧೆಯಾಗಿದ್ದು ಇದನ್ನು ಹೇಳಿಕೆ ಸಾಹಿತ್ಯ ಅದರಲ್ಲೂ ಪ್ರಚಾರ ಸಾಹಿತ್ಯ ವರ್ಗಕ್ಕೆ ಸೇರಿಸಬೇಕಾಗುತ್ತದೆ. ಧರ್ಮಪ್ರಚಾರವೇ ಅದರ ಪ್ರಧಾನ ಗುರಿ"[೬೧] ಎಂದಿದ್ದಾರೆ. ಈ ವಚನ ಲೋಕಬೋಧೆಗೆ ಸಂಬಂಧಿಸಿದ್ದರೂ ಕೂಡ ಇದರಲ್ಲಿ ಎದ್ದು ಕಾಣುವ ಅಂಶ ಧರ್ಮಪ್ರಚಾರವೆಂದಿದ್ದಾರೆ.

"ನೀರಿಗೆ ನೈದಿಲೆಯೇ ಶೃಂಗಾರ... ನೊಸಲಿಗೆ ವಿಭೂತಿಯೇ ಶೃಂಗಾರ..." ಎಂಬ ಬಸವಣ್ಣನವರ ವಚನ ವಿಭೂತಿ ಮಹಾತ್ಮೆಯನ್ನು ಸಾರಿ ಹೇಳುವಂತೆ ಇದು 'ಮಂತ್ರಮಹಾತ್ಮೆ'ಯನ್ನು ಸಾರಿ ಹೇಳುತ್ತದೆ ಎಂದಿದ್ದಾರೆ. ಬಸವಣ್ಣ ವೀರಶೈವ ತತ್ವ ಪ್ರತಿಪಾದಕರಾಗಿ ತಮ್ಮ ವಚನಗಳಲ್ಲಿ ಷಟ್‌ಸ್ಥಲಗಳ ಬಗ್ಗೆ ಪ್ರಸ್ತಾಪ ಮಾಡಿದ್ದಾರೆ. 'ಕರಿ, ಗಿರಿ, ತಮಂಧ, ಕಾನನಗಳೆಂಬ ಘನವಸ್ತುಗಳನ್ನು ಅಂಕುಶ, ವಜ್ರ, ಜ್ಯೋತಿ, ಬೇಗೆ ಎಂಬ ಲಘು ವಸ್ತುಗಳು ಅಂಜಿಸುತ್ತವೆ ಎನ್ನುತ್ತಾ ಪಂಚಮಹಾ ಪಾತಕವಂಜುವುದು ಕೂಡಲಸಂಗಮ ನಾಮಕ್ಕಯ್ಯ' ಎಂಬುದನ್ನು ಸಮರ್ಥಿಸಿದ್ದಾರೆ.

ವೀರಶೈವ ಮತ್ತು ವೀರಶೈವೇತರ ಗ್ರಂಥಗಳಲ್ಲಿ ಒಮ್ಮತವಿಲ್ಲದಿದ್ದರೂ ವೀರಶೈವರಿಗೆ ಗುರುವಿನಲ್ಲಿ ನರವಾರ್ತೆ, ಲಿಂಗದಲ್ಲಿ ಪಾಷಾಣವಾರ್ತೆ, ಜಂಗಮದಲ್ಲಿ ಜಾತಿವಾರ್ತೆ, ಪ್ರಸಾದದಲ್ಲಿ ರುಚಿವಾರ್ತೆ, ಪಾದೋದಕದಲ್ಲಿ ಜಲವಾರ್ತೆಗಳೇ ಪಂಚಮಹಾಪಾತಕಗಳೆಂದು ಹೇಳುತ್ತಾ;

'ಶಿವಾಯನಮಃ' ಎಂಬುದೇ 'ಪಂಚಾಕ್ಷರಿ ಮಂತ್ರ' ಎಂದಿದ್ದಾರೆ. ಮೇಲೆ ತಿಳಿಸಿದ ಪಂಚಮಹಾ ಪಾತಕಗಳನ್ನು ಸೀಳಬೇಕಾದರೆ ಪಂಚಾಕ್ಷರಿ ಮಂತ್ರದಿಂದ ಮಾತ್ರವೇ ಸಾಧ್ಯ ಎಂಬುದು ವಚನದ ಮುಖ್ಯ ಉದ್ದೇಶವಾಗಿದೆ. ಸಾಮಾನ್ಯವಾಗಿ ಬಸವಣ್ಣನವರ ಅನೇಕ ವಚನಗಳಲ್ಲಿ 'ಕೂಡಲಸಂಗಮ ದೇವಾ', 'ಕೂಡಲಸಂಗಮ ದೇವಯ್ಯಾ' ಎಂದು ಮುಂತಾಗಿ ಬಳಸುತ್ತಿದ್ದುದು ಕಂಡುಬಂದಿದೆ. ಆದರೆ ಪಂಚಾಕ್ಷರಿ ಮಂತ್ರದ ಉದ್ದೇಶವನ್ನಿಟ್ಟುಕೊಂಡು ಈ ವಚನವನ್ನು ರಚನೆ ಮಾಡಿದ ಬಸವಣ್ಣ 'ಕೂಡಲಸಂಗ' ಎಂದು ಬಳಸಿರುವುದು ವಿಶೇಷವಾಗಿ ಕಂಡುಬರುತ್ತದೆ. 'ಕೂಡಲಸಂಗ' ಎಂಬ ಐದು ಅಕ್ಷರ ಕೂಡ ಪಂಚಾಕ್ಷರಿ ಮಂತ್ರವನ್ನು ಪ್ರತಿಪಾದಿಸುವ ಅಂಶವಾಗಿದೆ.

"ಕೊಡೆವಿಡಿಯೆ, ಕುದುರೆಯ ದೃಢವುಳ್ಳ ರಾವುತನೇರೆ
ಕೊಡೆ ಕೋಟಿ ಶೂರರು ಹನ್ನಿಬ್ಬರಯ್ಯಾ
ಚಂದ್ರಕಾಂತದ ಗಿರಿಯ ಗಜ ಬಂದು ಮೂದಲಿಸೆ
ಅರಿದು ಕೊಲುವೊಡೆ ಅವುಗಳ ಕಲಿತನವ ನೋಡಾ
ಆವಿಗೆಯಲೊದವಿದ ಪುತ್ಥಳಿಯ ರೂಹಿನಂತಾಯಿತ್ತು
ಕೂಡಲಸಂಗಮದೇವಾ ನಿಮ್ಮ ಹೆಸರಿಲ್ಲದ ಹೆಸರು"[೬೫]

ಬಸವಣ್ಣನವರ ಈ ವಚನ 'ಸಂಸಾರ ಹೇಯಸ್ಥಲ'ದ್ದಾಗಿದೆ. ಲಿಪಿಕಾರರಿಂದ ಮೂಲಪಾಠಕ್ಕೆ ಧಕ್ಕೆ ಉಂಟಾಗಿದ್ದು ಪಾಠಾಂತರಗಳಿದ್ದು ಪಾಠದೃಷ್ಟಿಯಿಂದ ಬಹುಮಟ್ಟಿಗೆ ಸುಭದ್ರತೆಯಿಂದ ಕೂಡಿದೆ ಎಂದಿದ್ದಾರೆ.

ಪಿಂಡಸ್ಥಲದ ನಂತರ ಬರುವುದೇ ಸಂಸಾರ ಹೇಯಸ್ಥಲ. ಈ ವಚನ ಸಂಸಾರ ಹೇಯಸ್ಥಲದ್ದೇ ಆಗಿದೆ. ಅದನ್ನು ಕುರಿತು "ಸಂಸಾರವನ್ನು ಗೆಲ್ಲುವ ನಾನು ಅಸಮರ್ಥ, ಗೆಲ್ಲುವೆನೆಂಬುದು ವ್ಯರ್ಥ ಹೋರಾಟ; ಈಗ ನನಗೆ ನಿನ್ನ ಜ್ಞಾನತೃಷೆಯುಂಟಾಗಿದ್ದು, ಸಂಸಾರಬಂಧ ಕಾರಣವಾಗಿ ನಿನ್ನನ್ನು ದೊರಕಿಸಿಕೊಂಡು ದೊರಕಿಸಿಕೊಳ್ಳುವ ಸ್ಥಿತಿಯಲ್ಲಿದ್ದೇನೆ" ಎಂದಿದ್ದಾರೆ. ಸಂಸಾರದಲ್ಲಿ ಕಷ್ಟ-ಸುಖ ಸಹಜ. ಕಷ್ಟಗಳೇ ಎದುರಾದಾಗ ಸಂಸಾರ ಎಂಬುದು ಪಾಷಾಣವಾಗಿ ಗೋಚರಿಸುತ್ತದೆ. ಆದ್ದರಿಂದ ಬಿಡುಗಡೆ ಹೊಂದಲು ಸತತ ಪ್ರಯತ್ನಪಟ್ಟರೂ ಅದು ವ್ಯರ್ಥವಾಗುತ್ತದೆ. ಇದರಿಂದ ಮುಕ್ತಿ ದೊರಕಬೇಕಾದರೆ ಕೂಡಲಸಂಗಮನಿಂದ ಮಾತ್ರ ಸಾಧ್ಯ ಎಂಬ ತತ್ವವು ಈ ವಚನದಲ್ಲಿ ಅಡಗಿದೆ.

ಕೊಡವಿಡಿಯೆ ಅಂದರೆ ಸಾಮಾನ್ಯವಾಗಿ ವೀರರು ಯುದ್ಧಕ್ಕೆ ಹೊರಡುವಾಗ ಅವರಿಗೆ ಗೌರವಾರ್ಥವಾಗಿ ಕುದುರೆ ಮೇಲೆ ಕುಳಿತ ವೀರರಿಗೆ ಕೊಡೆಯನ್ನು ಹಿಡಿಯುತ್ತಿದ್ದರು. ದೃಢವುಳ್ಳ

ರಾವುತನ ಹಿಂದೆ ಅಸಂಖ್ಯಾತರು ಕೊಡೆಗಳನ್ನು ಹಿಡಿದು ಬರುವುದು ಸಾಮಾನ್ಯವಾಗಿತ್ತು. ಅವರೆಲ್ಲರೂ ಯುದ್ಧದಲ್ಲಿ ಗೆಲ್ಲಬೇಕೆಂಬ ದೃಢನಿಲುವನ್ನು ಹೊಂದಿದ್ದರು. ಯುದ್ಧಕ್ಕೆ ಹೊರಟಂತಹ ವೀರರಲ್ಲಿ ಗೆಲುವು ಸಾಧಿಸಿ ಮರಳುತ್ತಿದ್ದವರು ಕೆಲವೇ ಕೆಲವು ವೀರರು. ಇನ್ನುಳಿದವರ ಸ್ಥಿತಿ ಆವಿಗೆಯಲೊಡಗಿದ ಪುತ್ಥಳಿಯ ರೂಹಿನಂತಾಯಿತ್ತು ಕೂಡಲಸಂಗಮದೇವ ಎನ್ನುತ್ತಾರೆ.

ಎರಡನೇ ಸಾಲಿನಲ್ಲಿ ಚಂದ್ರಕಾಂತ ಗಿರಿಯಲ್ಲಿ ಆನೆಯೊಂದು ಬಂದು ಮೂದಲಿಸಿದಾಗ ಅದರ ಪ್ರತಿಬಿಂಬ ನೋಡಿ ನಾನು ಕೊಲ್ಲುವೆನೆಂಬುದು ಅದೆಂತಹ ವೀರತ್ವ, ಅದು ವ್ಯರ್ಥವೆಂಬ ಅಂಶವನ್ನು ಸಾರುತ್ತದೆ. ನಿಜವಾದ ವೀರ ಪ್ರತಿಬಿಂಬ ನೋಡಿ ಯುದ್ಧಕ್ಕೆ ಇಳಿಯುವುದಿಲ್ಲ. ನೇರ ಹೋರಾಟದಲ್ಲಿ ಗೆಲ್ಲುವವನೆ ನಿಜವಾದ ವೀರ ಎಂಬ ಅಂಶವನ್ನು ಸಾರುತ್ತದೆ. ಹಾಗೆಯೇ ಕುಂಬಾರನು ಮಣ್ಣಿಗೆ ಆಕಾರವನ್ನು ಕೊಟ್ಟು ಮಡಕೆಯನ್ನು ಹಾಗೆ ಇಟ್ಟರೆ ಅದು ವ್ಯರ್ಥ. ಅದನ್ನು ಸುಟ್ಟಾಗ ಮಾತ್ರ ಅದಕ್ಕೆ ಒಂದು ಆಕಾರ ಮತ್ತು ಬಾಳಿಕೆ ಬರಲು ಸಾಧ್ಯವಾಗುತ್ತದೆ.

ಒಟ್ಟಾರೆಯಾಗಿ ಈ ವಚನ ಹೋರಾಟದಿಂದ ಪ್ರಾರಂಭವಾಗಿ ಭಕ್ತನ ಮಾನಸಿಕ ತೊಳಲಾಟವನ್ನು ಚಿತ್ರಿಸುತ್ತದೆ. ಮಾಯೆಯೆಂಬ ವೈರಿಯನ್ನು ಜಯಿಸಲು ವಿಜೃಂಭಿಸುತ್ತ ಹೊರಟ ವ್ಯಕ್ತಿಯು ಇಂಥ ಹುಸಿಶೂರ ಎಂದು ಕರೆದಿದ್ದಾರೆ. ಕೂಡಲಸಂಗಯ್ಯನ ನಿರಾಕಾರ ಸಾಕಾರತ್ವವು 'ಆವಿಗೆಯಲೊದವಿದ ಪುತ್ಥಳಿಯ ರೂಹಿನಂತೆ' ಕಣ್ಣಿಗೆ ಕಂಡರೂ ಕೈಗೆ ನಿಲುಕದಂತೆ ಇಲ್ಲಿ ದೇವರ ನಿರಾಕಾರ ಸಾಕಾರತ್ವವನ್ನು ಸೂಚಿಸುವ 'ಹೆಸರಿಲ್ಲದ ಹೆಸರು' ಎಂಬುದು ಬಸವಣ್ಣನವರ ಒಂದು ಅಪೂರ್ವ ಶಬ್ದಸೃಷ್ಟಿಯೇ ಸರಿ ಎಂದು ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಈ ಮೇಲಿನ ವಚನಗಳನ್ನು ವಿಶ್ಲೇಷಣೆ ಮಾಡುವ ಸಂದರ್ಭದಲ್ಲಿ ಅವುಗಳ ಸ್ಥಲಗಳನ್ನು ಗುರುತಿಸಿದ ಎಂ.ಎಂ.ಕಲಬುರ್ಗಿ ಅವರು ಉಳಿದಂತಹ ವಚನಗಳ ವಿಶ್ಲೇಷಣೆಯ ಸಂದರ್ಭದಲ್ಲಿ ಅವುಗಳನ್ನು ಯಾವ ಸ್ಥಳದಿಂದ ಆಯ್ಕೆ ಮಾಡಿಕೊಂಡಿರುವುದಾಗಿ ತಿಳಿಸಲು ಪ್ರಯತ್ನಿಸಿಲ್ಲ.

"ಹಡೆದೊಡವೆ ವಸ್ತುವನು ಮೃಡಭಕ್ತರಿಗಲ್ಲದೆ ಕಡಬಡ್ಡಿಯ ಕೊಡಲಾಗದು
ಬಂದರೊಂದು ಲೇಸು, ಬಾರದಿದ್ದರೆರಡು ಲೇಸು,
ಅಲ್ಲಿದ್ದರೆಯೂ ಲಿಂಗಕ್ಕೆ ಬೋನ, ಇಲ್ಲಿದ್ದರೆಯೂ ಲಿಂಗಕ್ಕೆ ಬೋನ
ಲಿಂಗದೊಡವೆ ಲಿಂಗಕ್ಕೆ ಸಾರಿತ್ತಾಗಿ
ಬಂದಿತ್ತೆಂಬ ಪರಿಣಾಮವಿಲ್ಲ, ಬಾರದೆಂಬ ದುಃಖವಿಲ್ಲ.

ಇದು ಕಾರಣ ಕೂಡಲಸಂಗಮದೇವಾ,

ನಿಮ್ಮ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು"[೬೬]

ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಭಕ್ತನ ಜ್ಞಾನಸ್ಥಲದಿಂದ ಆಯ್ದುಕೊಂಡಿದ್ದಾರೆ. ಬಸವಣ್ಣನವರ ಈ ವಚನ ಅರ್ಥನೀಯ ಅಂಗವಾದ 'ವಿನಿಮಯ ಪದ್ಧತಿ' ಅಥವಾ ದಾಸೋಹತತ್ವವನ್ನು ಪ್ರತಿಪಾದಿಸುವುದಾಗಿದೆ. ಈ ವಚನದ ಮೂಲಕ ಸ್ಥಾವರ ಮತ್ತು ಜಂಗಮ ಕಲ್ಪನೆಯನ್ನು ರೂಪಿಸಲು ಬಸವಣ್ಣ ಕಟ್ಟಿಕೊಟ್ಟ ಬಗೆಯನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸಿದ್ದಾರೆ. ಈ ವಚನವನ್ನು ಕೂಡ ಎಂ.ಎಂ.ಕಲಬುರ್ಗಿ ಅವರು ಸ್ಥಾವರ ಜಂಗಮದ ಹಿನ್ನೆಲೆಯಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಶಾಸನಗಳು ಒಂದು ರೀತಿಯ ಜೀವನಾವಸ್ಥೆಯನ್ನು ಪ್ರತಿಪಾದಿಸುತ್ತವೆ. ಇವುಗಳಲ್ಲಿ ಶಾಸನಗಳ ಧೋರಣೆ, ಸ್ಥಗಿತ ಅಂದರೆ ಸ್ಥಾವರ ನೆಲೆ, ವಚನಗಳ ಧೋರಣೆಯನ್ನು ಅಸ್ಥಗಿತ ಅಂದರೆ 'ಜಂಗಮ'ದ ಹಿನ್ನೆಲೆಯಲ್ಲಿ ನೋಡುವ ಪ್ರಯತ್ನ ಮಾಡಿದ್ದಾರೆ. ಬಿಜ್ಜಳ ಮತ್ತು ಬಸವಣ್ಣ ಇಬ್ಬರ ನೆಲೆಯಲ್ಲೂ ನೋಡುವ ಪ್ರಯತ್ನ ಮಾಡಿದ್ದಾರೆ. ಬಿಜ್ಜಳ ಮತ್ತು ಆತನ ಅನುಯಾಯಿಗಳು ಸ್ಥಾವರ ವ್ಯವಸ್ಥೆಯ ಪರವಾದರೆ, ಬಸವಣ್ಣ ಮತ್ತು ಆತನ ಅನುಯಾಯಿಗಳು ಜಂಗಮವ್ಯವಸ್ಥೆಯ ಪರವಾಗಿ ನಿಂತು ಹೋರಾಡಿದುದೇ ಕಲ್ಯಾಣದಲ್ಲಿ ಜರುಗಿದ ಆಂದೋಲನದ ವಿಷಯವಾಗಿದೆ. ಈ ಆಂದೋಲನದ ಒಂದು ಭಾಗ 'ಸ್ಥಾವರ ಅರ್ಥನೀತಿ' ಮತ್ತು 'ಜಂಗಮ ಅರ್ಥನೀತಿ'ಗಳ ಸಂಘರ್ಷ. ಜಂಗಮ ಅರ್ಥನೀತಿಯ ಪ್ರತಿಪಾದನೆಯೇ ಈ ವಚನದ ಮೂಲವಸ್ತುವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ವಚನದ ಆರಂಭದಲ್ಲಿ 'ಹಡೆದೊಡವೆ ವಸ್ತುವನು ಮೃಡಭಕ್ತರಿಗಲ್ಲದೆ, ಕಡಬಡ್ಡಿಯ ಕೊಡಲಾಗದು' ಎಂಬ ವಾಕ್ಯ ಬಸವಣ್ಣನ ಅರ್ಥನೀತಿಯ ಸೂತ್ರವಾದರೆ ಇನ್ನುಳಿದವು ಅದಕ್ಕೆ ವ್ಯಾಖ್ಯಾನದಂತಿವೆ ಎಂದು ಬಸವಣ್ಣನ ಈ ವಚನದ ಮೊದಲ ಸಾಲಿನಲ್ಲಿ ಅಡಗಿರುವ ಮೂರು ತತ್ವಗಳನ್ನು ಗುರುತಿಸಿದ್ದಾರೆ.

೧. ಒಡವೆ ವಸ್ತುಗಳನ್ನು ಪಡೆಯಬೇಕಾದುದು ಮನುಷ್ಯಧರ್ಮ.

೨. ಪಡೆದುದರಲ್ಲಿ ಮೃಡಭಕ್ತರಿಗೆ ಮಾತ್ರ ಕೊಡಬೇಕು.

೩. ಅದನ್ನು ಕಡಬಡ್ಡಿಯಾಗಿ ಕೊಡಬಾರದು.

ನೈಸರ್ಗಿಕ ದ್ರವ್ಯಗಳಾದ ಪಂಚಮಹಾಭೂತಗಳು ಮೂಲ ಸಂಪತ್ತು. ಇವುಗಳನ್ನು ಪಡೆಯಲು ತೊಡಗಿಸುವ ಮಾನವಶ್ರಮ ಮತ್ತು ಉಪಕರಣಗಳೆಂಬ ಸಂಪನ್ಮಾಧ್ಯಮಗಳ ಸಂಪರ್ಕದಲ್ಲಿ

ಸಿದ್ಧವಾಗುವುದು ನಿಷ್ಪನ್ನ ಸಂಪತ್ತು. ಈ ಮೂಲ ಸಂಪತ್ತು ಮತ್ತು ನಿಷ್ಪನ್ನಸಂಪತ್ತುಗಳನ್ನು ಬದುಕಿಗೆ ಉಪಯೋಗಿಸಿಕೊಳ್ಳುವುದು ಸಂಪದ್ಭೋಗ ಎಂದಿದ್ದಾರೆ.

ಶರಣರ ಪರಿಭಾಷೆಯಲ್ಲಿ ಮೂಲಸಂಪತ್ತು ವಸ್ತು, ನಿಷ್ಪನ್ನ ಸಂಪತ್ತು ಒಡವೆ ಇವೆರಡೂ ಪದಗಳು ಸಂಪತ್ತಿನ ಬಗೆಗಿದ್ದ ಶರಣರ ಸ್ಪಷ್ಟಕಲ್ಪನೆಯನ್ನು ತಿಳಿಸುತ್ತದೆ. ಶಿವನಿಂದಲೇ ಜಗತ್ತು ಸೃಷ್ಟಿಯಾಗಿದೆ. ಈ ಜಗತ್ತಿನಲ್ಲಿರುವ ವಸ್ತುಗಳನ್ನು ಬಳಸಿಕೊಂಡು ಬದುಕುತ್ತಿರುವವರು ನಾವುಗಳು. ಈ ಜಗತ್ತಿನಲ್ಲಿ ದುಡಿದ ಹಣವನ್ನು ಬಡ್ಡಿಯಾಗಿ ಕೊಡದೆ ಅದನ್ನು ಶರಣರಿಗೆ ದಾನ, ದಾಸೋಹ ರೂಪದಲ್ಲಿ ಕೊಡಬೇಕೆಂಬುದು ಇಲ್ಲಿನ ತತ್ವ

ಸೃಷ್ಟಿಯಿಂದ ಲಭಿಸಿರುವ ಮೂಲಸಂಪತ್ತು ಎಂದರೆ ಶ್ರಮ. ಇದರಿಂದ ಹುಟ್ಟಿದವುಗಳೇ ನಿಷ್ಪನ್ನಸಂಪತ್ತು. ಸಕಲರ ಉಪಭೋಗಕ್ಕೆ ಮಾತ್ರ ನೀಡಿರುವ ಆದರೆ ಯಾರ ಒಡೆತನವೂ ಇಲ್ಲದ ಸಾಮೂಹಿಕ ಧನವಿದು. ಸೃಷ್ಟಿಯಿಂದ ಬಂದ ಈ ಧನವನ್ನು ಕಾಯಕ ಮಾಧ್ಯಮದಿಂದ ಅಧಿಕಾರರಹಿತವಾಗಿ ಪಡೆಯಬೇಕೆಂಬುದು ಶರಣರ ಸಿದ್ಧಾಂತ. ಇದನ್ನೇ ಎಂ.ಎಂ.ಕಲಬುರ್ಗಿ ಅವರು 'ಹಡೆದೊಡವೆಯ ವಸ್ತು' ಎಂದು ಈ ವಚನದ ಅರ್ಥ ಎಂದಿದ್ದಾರೆ. ಶಿವ ನೀಡಿರುವ ಸಂಪತ್ತನ್ನು ಉಪಭೋಗಿಸುವಲ್ಲಿ ಅನುಭೋಗಿಸುವಲ್ಲಿ ಯಾರಿಗೂ ಅಧಿಕಾರವಿರುವುದಿಲ್ಲ. ಶಿವನಿಂದ ಪಡೆದದ್ದು ಸತ್ಕಾರ್ಯಗಳಿಗೆ ಬಳಸುವುದು. ಇರುವ ಸಂಪತ್ತು ಅಲ್ಲಿದ್ದರೆಯೂ ಲಿಂಗಕ್ಕೆ ಬೋನ, ಇಲ್ಲಿದ್ದರೆಯೂ ಲಿಂಗಕ್ಕೆ ಬೋನ. ಇಲ್ಲಿ ಮುಖ್ಯವಾಗಿ ಶಿವನಿಗೆ ಅರ್ಪಿಸಿದರೇನು, ಕಾಯಕ ನಿರತರಾದ ಶರಣರಿಗೆ ಅರ್ಪಿಸಿದರೇನು? ಎಲ್ಲಾ ಒಂದೇ ಎಂಬ ಕಲ್ಪನೆ ಈ ವಚನದಲ್ಲಿ ಅಡಗಿದೆ.

ಈ ವಚನದಲ್ಲಿ ನೀಡುವಿಕೆಯನ್ನು ಎಂ.ಎಂ.ಕಲಬುರ್ಗಿ ಅವರು ಎರಡು ಬಗೆಯಲ್ಲಿ ಅರ್ಥೈಸಿದ್ದಾರೆ.

೧. ದಾನವಾಗಿ ನೀಡುವುದು.

೨. ದಾಸೋಹವಾಗಿ ನೀಡುವುದು.

ವೈದಿಕರದು-ದಾನವಾದರೆ, ವೀರಶೈವರದು ದಾಸೋಹ. ಯಾವುದೇ ವಸ್ತುವಿನ ಉಪಭೋಗ ಸಹಜಧರ್ಮ. ಅದರ ಮೇಲೆ ಅಧಿಕಾರ ಸ್ಥಾಪನೆ ಮಾಡುವುದೇ ಕೃತ್ರಿಮಧರ್ಮ. ಒಂದು ವಸ್ತುವಿನ ಮೇಲಿನ ತನ್ನ ಉಪಭೋಗಾಧಿಕಾರಿಗಳನ್ನು ಇನ್ನೊಬ್ಬರ ಉಪಭೋಗಾಧಿಕಾರಿಗಳಿಗೆ ವಶಪಡಿಸುವುದೇ ದಾನವಾದರೆ, ಯಾರೊಬ್ಬರದೂ ಅಧಿಕಾರವಿಲ್ಲವೆಂಬ ಭಾವದಿಂದ ವಸ್ತುವನ್ನು ಒಬ್ಬರು ಇನ್ನೊಬ್ಬರ ಉಪಭೋಗಕ್ಕೆ ವಶಪಡಿಸುವುದು ದಾಸೋಹ ಎಂದು ಎಂ.ಎಂ.ಕಲಬುರ್ಗಿ

ಅವರು ಅಭಿಪ್ರಾಯಪಡುತ್ತಾರೆ. ತನ್ನ ಅಧಿಕಾರಕ್ಕೆ ಒಳಪಡದ ವಸ್ತು ಎಲ್ಲಿದ್ದರೇನು? ಅದು ತಾನಾಗೇ ಬಂದಿತ್ತೆಂಬ ಪರಿಣಾಮವಿಲ್ಲ. ಬಾರದೆಂಬ ದುಃಖವಿಲ್ಲ. ಶರಣನಿಗೆ ಲಿಂಗದ ಮುಖ ಜಂಗಮವಾದುದರಿಂದ ಈ ಜಂಗಮ ಅಂದರೆ ಸಮಾಜ ದಾಸೋಹವಾಗಿ 'ಅಲ್ಲಿದ್ದರೆಯೂ ಲಿಂಗಕ್ಕೆ ಬೋನ, ಇಲ್ಲಿದ್ದರೆಯೂ ಲಿಂಗಕ್ಕೆ ಬೋನ.' ಅಂದರೆ ಅಂಗಭೋಗರಹಿತವಾಗಿ ಅಲ್ಲಿ, ಇಲ್ಲಿ ಲಿಂಗಭೋಗವೇ ನಡೆಯುತ್ತದೆ. 'ಲಿಂಗದೊಡವೆ ಲಿಂಗಕ್ಕೆ ಸಾರುವ ರೀತಿಯಿದು.' ವಸ್ತು ಒಡವೆಗಳನ್ನು ವ್ಯಕ್ತಿಗಳ ಒಡೆತನದಿಂದ ಮುಕ್ತಿಗೊಳಿಸಿ 'ಸರಕಾರ'ದ ಒಡೆತನವನ್ನು ಒಪ್ಪದೆ ವ್ಯಕ್ತಿ ಸಮಾಜಗಳ ನಡುವೆ ಸಂಪತ್ತಿನ ಮುಕ್ತ ಸಂಬಂಧ ಏರ್ಪಡಿಸುವ ಬಗೆಯಿದು. ಕಡ ಕೊಡುವುದು ಮತ್ತು ಬಡ್ಡಿ ಕೊಡುವುದು ಇವೆರಡೂ ಸಂಪದ್ವಿನಿಯೋಗ ಕ್ಷೇತ್ರದ ಎರಡು ಪದ್ಧತಿಗಳೆಂದು ಸೂಚಿಸಿದ್ದಾರೆ. ದಾಸೋಹ ಮತ್ತು ದಾನ ಪರಿಕಲ್ಪನೆಗಳನ್ನು ಚರ್ಚಿಸಿದ್ದಾರೆ. 'ದಾಸೋಹ' ವ್ಯಕ್ತಿಗಳು ಅಧಿಕಾರದಿಂದ ಮುಕ್ತವಾಗಿ ವಸ್ತು-ಒಡವೆಗಳು ಅಲ್ಲಿ-ಇಲ್ಲಿ ಎಡೆಯಾಡುವ ಸಹಜ ಪದ್ಧತಿಯಾದರೆ, ಅದರ ಮುಂದಿನ ಪದ್ಧತಿಯೇ 'ದಾನ' ಎಂದು ಗುರುತಿಸಿದ್ದಾರೆ. 'ಕಡಕೊಡುವುದು' ವಸ್ತುವಿನ ಮೇಲೆ ತನ್ನ ಅಧಿಕಾರ ಉಳಿಸಿಕೊಂಡು, ಇನ್ನೊಬ್ಬರ ಭೋಗಕ್ಕೆ ತಾತ್ಪೂರ್ತಿಕವಾಗಿ ಕೊಡುವುದು. ಆದರೆ ಬಡ್ಡಿ ಕೊಡುವುದು ಎಂದರೆ ವಸ್ತುವಿನ ಮೇಲೆ ಅಧಿಕಾರ ಉಳಿಸಿಕೊಂಡು ಅದನ್ನು ಇನ್ನೊಬ್ಬರ ಭೋಗಕ್ಕೆ ಕೊಟ್ಟು ಆ ಭೋಗಕ್ಕೆ ಪ್ರತಿಯಾಗಿ ಅವನಿಂದ ಬಡ್ಡಿರೂಪದಲ್ಲಿ ವಾಪಸ್ಸು ಪಡೆಯುವುದು ಇಂದಿಗೂ ಕೂಡ ರೂಢಿಯಲ್ಲಿದೆ.

ಶರಣರ ಕಾಲಕ್ಕೆ ಇದ್ದ ಅರ್ಥಪದ್ಧತಿ, ದಾಸೋಹ, ದಾನ, ಕಡಗಳನ್ನು ದಾಟಿ ಬಡ್ಡಿಯ ರೂಪದಲ್ಲಿ ಹೊಲಗಳನ್ನು ಅಡವಿಡುವುದು, ಬಡ್ಡಿ ಹಣ ವಾಪಸ್ಸು ಕೊಡದಿದ್ದರೆ ಹೊಲವನ್ನು ವಸೂಲಿ ಮಾಡಿಕೊಳ್ಳುವುದು ಅಥವಾ ದೇವಾಲಯಕ್ಕೆ ಒತ್ತೆ ಇಡುವ ಕ್ರೂರ ವ್ಯವಸ್ಥೆಯೂ ಇತ್ತು. ಈಗಲೂ ಕೆಲವೆಡೆ ಈ ಕ್ರೂರ ಆಚರಣೆ ಅಸ್ತಿತ್ವದಲ್ಲಿದೆ. ಈ ಹಣ ಬಡ್ಡಿಯ ವ್ಯವಸ್ಥೆ ಸಾಮಾಜಿಕ ಕ್ಷೇತ್ರದಲ್ಲಿ ಅಷ್ಟೇ ಅಲ್ಲ, ಧಾರ್ಮಿಕ ಕ್ಷೇತ್ರಗಳಲ್ಲೂ ಇದು ತಾಂಡವವಾಡುತ್ತಲಿತ್ತು ಎಂಬುದಕ್ಕೆ ಕೆಲವು ಶಾಸನಗಳು ಸಾಕ್ಷಿಯಾಗಿವೆ ಎಂದು ಎಂ.ಎಂ.ಕಲಬುರ್ಗಿ ಅವರು ತಿಳಿಸಿದ್ದಾರೆ.

ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಹಣದ ವಿಚಾರವಾಗಿ ಬಡ್ಡಿರೂಪದಲ್ಲಿ, ಹೊಲ-ಮನೆಗಳನ್ನು ಅಡವಿಡುವ ಹೀನಾಯ ಪ್ರವೃತ್ತಿ ಪ್ರಸ್ತುತ ದಿನಮಾನಗಳಲ್ಲಿಯೂ ರೂಢಿಯಲ್ಲಿದೆ.

'ಪಾಪಿಯ ಧನ' ಎಂಬುದು ಶರಣರ ಮನ ಬಲವಾಗಿ ಇರದಿದ್ದರ ಸಲುವಾಗಿ ಈ ವ್ಯವಸ್ಥೆಯನ್ನು ಮುರಿದುಹಾಕುವಲ್ಲಿ ಚಳುವಳಿಗಳನ್ನು ಮುನ್ನಡೆಸಿದರು. ಆದ್ದರಿಂದ ಬಡ್ಡಿ, ಕಡ,

ದಾನಗಳೆಂಬ ಕ್ಷತ್ರಿಯ ಅರ್ಥಪದ್ಧತಿಗಳನ್ನು ತೊಡೆದುಹಾಕಿ ಇವೆಲ್ಲಕ್ಕೂ ಪ್ರತಿರೋಧವೆಂಬಂತೆ ದಾಸೋಹವೆಂಬ ಅರ್ಥಪದ್ಧತಿಯನ್ನು ಜಾರಿಗೊಳಿಸಿದರು. "ಹಣದುಬ್ಬರ, ಆರ್ಥಿಕ ಅಸಮಾನತೆ ಮೊದಲಾದ ರೋಗಗಳಿಂದ ಬಳಲುತ್ತಿರುವ ಇಂದಿನ ಪರಿಸರದಲ್ಲಿ ಶರಣರ ವಿನಿಮಯತತ್ವ (ದಾಸೋಹ)ವನ್ನು ಪ್ರತಿಪಾದಿಸುವ ಈ ವಚನವನ್ನು ಅರ್ಥಶಾಸ್ತ್ರಜ್ಞರು ಮತ್ತೆ ಮತ್ತೆ ವಿಶ್ಲೇಷಿಸುವುದು, ಇದನ್ನು ಜಗತ್ತಿನ ಗಮನಕ್ಕೆ ತರುವುದು ಇಂದು ಅವಶ್ಯಕವಾಗಿದೆ" ಎಂದಿರುವುರು ವಿಶೇಷವೆನಿಸಿದೆ.

ಈ ರೀತಿಯ ಬಡ್ಡಿರೂಪದ ಹಣದ ಕ್ರೂರ ಆಚರಣೆಗಳು ಬಸವಣ್ಣನ ಕಾಲಕ್ಕಾಗಲೇ ಇತ್ತು ಅದನ್ನು ತೊಡೆದು ಹಾಕಲು ದಾಸೋಹವೆಂಬ ಪರಿಕಲ್ಪನೆಯಿಂದ ಮಾತ್ರ ಸಾಧ್ಯ. ಶರಣರಿಂದ ಮಾತ್ರ ಸಾಧ್ಯ ಎಂಬುದನ್ನು ಬಸವಣ್ಣ ತನ್ನ ವಚನದ ಮೂಲಕ ಪ್ರತಿಪಾದಿಸಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಎತ್ತಿ ಹಿಡಿಯಲು ಪ್ರಯತ್ನ ಮಾಡಿದ್ದಾರೆ.

"ಚೆನ್ನಯ್ಯನ ಮನೆಯ ದಾಸನ ಮಗನು,
ಕಕ್ಕಯ್ಯನ ಮನೆಯ ದಾಸಿಯ ಮಗಳು,
ಇವರಿಬ್ಬರು ಹೊಲದಲಿ ಬೆರಣಿಗೆ ಹೋಗಿ ಸಂಗವ ಮಾಡಿದರು.
ಇವರಿಬ್ಬರಿಗೆ ಹುಟ್ಟಿದ ಮಗ ನಾನು; ಕೂಡಲಸಂಗಮದೇವ ಸಾಕ್ಷಿಯಾಗಿ"[೬೭]

ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಭಕ್ತನ ಭಕ್ತಸ್ಥಲದಿಂದ ಆಯ್ದುಕೊಂಡಿದ್ದಾರೆ. ಈ ವಚನವು ಜನನ ಗರ್ವ ನಿರಸನಕ್ಕೆ ಸಂಬಂಧಿಸಿದ್ದಾಗಿದೆ. ಇದನ್ನು ಕೆಲವರು ಪ್ರಕ್ಷಿಪ್ತ ವಚನ ವೆಂದೋ, ಬೆಡಗಿನ ವಚನವೆಂದೋ, ಇನ್ನು ಕೆಲವರು ಅನುಭಾವದ ವಚನವೆಂದೋ ಹೇಳಿ ತೇಜೋವಧೆ ಮಾಡುತ್ತಿರುವುದನ್ನು ತಪ್ಪಿಸಬೇಕೆಂದರೆ ಇದಕ್ಕೆ ಸರಿಯಾದ ಅರ್ಥ ಹೇಳುವುದರಿಂದ ಸಾಧ್ಯ ಎಂದು ಈ ವಚನವನ್ನು ನಿರ್ವಚನಗೈಯಲು ಎಂ.ಎಂ.ಕಲಬುರ್ಗಿ ಅವರು ಪ್ರಯತ್ನಿಸಿದ್ದಾರೆ.

ಯಾವುದೇ ವ್ಯಕ್ತಿಯ ಕುಲ-ಗೋತ್ರಗಳನ್ನು ನಿರ್ಧರಿಸುವುದು ಜನನ. ಇದು ಮನುಷ್ಯನ ಅಹಂಭಾವದ ನೆಲೆಗಳಲ್ಲಿ ಮುಖ್ಯವಾದದ್ದಾಗಿದೆ. ಅರ್ಥರಹಿತ 'ಜನನ ಪ್ರತಿಷ್ಠೆ'ಯ ನಿಜಸ್ವರೂಪವನ್ನು ರೊಚ್ಚಿನಿಂದ ತಿಳಿಸಿಹೇಳಿದ 'ಜನಮೋಹವಿಡಂಬನ' ವಚನವಿದು. ಹಾಗೆಯೇ ಒಳ್ಳೆಯ ಕುಲ ಸ್ಪೃಶ್ಯತೆಯನ್ನು, ಒಳ್ಳೆಯ ಗೋತ್ರ ಸಾಮಾಜಿಕ ಪ್ರತಿಷ್ಠೆಯನ್ನು ಒದಗಿಸುತ್ತದೆ. ಹೀಗಾಗಿ ಇವುಗಳ ಆಕರ್ಷಣೆಗೆ ಮನಸೋತು ಕುಲಜ, ಗೋತ್ರಜ ಎನಿಸಿಕೊಳ್ಳಲು ಅನೇಕ ಜನರು ಮಮಕರಿಸುವುದು ತೀರ ಸ್ವಾಭಾವಿಕವಾಗಿದೆ ಎಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ. ಕುಲಮದ ಶರಣರ ಕಾಲದಲ್ಲಿ ರಾಕ್ಷಸ ವಿಸ್ತಾರದಲ್ಲಿ ಬೆಳೆಯುತ್ತಲಿದ್ದಿತು. ಈ ಮಾತಿಗೆ ಕೊಂಬಲ್ಲಿ ಕೊಡುವಲ್ಲಿ ಕುಲವನಜಿಸುವರು, 'ಕುಲವನಜಿಸದಿರಿಂ ಭೋ' ಎಂಬ ಶರಣರ ಹೇಳಿಕೆಗಳು, ಎಚ್ಚರಿಕೆಗಳು ನಿದರ್ಶನಗಳೆನಿಸಿವೆ.

ಇಂಥವರಿಗೆ ನೀವು 'ಕುಲಜನೆಂಬುದಕ್ಕೆ ಅವುದು ದೃಷ್ಟ?' ಎಂಬ ಪ್ರಶ್ನೆ ಎಸೆದು ನಿರುತ್ತರಗೊಳಿಸುತ್ತಾರೆ ಬಸವಣ್ಣನವರು ಎಂದಿದ್ದಾರೆ ಎಂ.ಎಂ.ಕಲಬುರ್ಗಿ ಅವರು.

ಈ ವಚನದಲ್ಲಿ ಮುಖ್ಯವಾಗಿ ಗೋತ್ರವು ಮೇಲ್ವರ್ಗದವರು ರೂಪಿಸಿಕೊಂಡ ಪದ್ಧತಿ. "ಗೋತ್ರನಾಮವ ಬೆಸಗೊಂಡಡೆ ಮಾತ ನೂಕದೆ ಸುಮ್ಮನಿದ್ದಿರದೇನಯ್ಯಾ? ತಲೆಯ ಕುತ್ತಿ ನೆಲನನೇನ ಬರೆಯುತ್ತಿದ್ದಿರಯ್ಯಾ?"[೬೮] ಎಂದು ಎಂ.ಎಂ.ಕಲಬುರ್ಗಿ ಅವರು ಈ ರೀತಿ ಗೋತ್ರವಿಲ್ಲದವರು ಅನುಭವಿಸುತ್ತಿದ್ದ ಅಪಮಾನ ಪರಿಸ್ಥಿತಿಯನ್ನು ಚಿತ್ರಿಸಿದ್ದಾರೆ. ವ್ಯಕ್ತಿಯ ಜನನಕ್ಕೆ ಕುಲಗೋತ್ರಗಳು ಮುಖ್ಯವಲ್ಲ, ತಂದೆ-ತಾಯಿಗಳ ಶುಕ್ಲ-ಶೋಣಿತಗಳು ಮುಖ್ಯ ಎಂದು ಎಂ.ಎಂ.ಕಲಬುರ್ಗಿ ಅವರು ವಿಶ್ಲೇಷಿಸಿದ್ದಾರೆ. ಬಸವಣ್ಣ ಬ್ರಾಹ್ಮಣನಾದ ಮಾದರಸ-ಮಾದಲಾಂಬಿಕೆಯರ ಮಗ ಎಂಬುದನ್ನು ಕಡೆಗಣಿಸಿ ಮಾದಾರ ಚೆನ್ನಯ್ಯನ ದಾಸ, ಡೋಹರ ಕಕ್ಕಯ್ಯನ ದಾಸಿಯರ ಮಗನೆಂದು ಹೇಳುವ ಮೂಲಕ ಬಸವಣ್ಣ ಜನನಗರ್ವವನ್ನು ತುಳಿದುಹಾಕುವುದನ್ನು ಎಂ.ಎಂ.ಕಲಬುರ್ಗಿ ಅವರು ಈ ವಚನದಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಜೊತೆಗೆ "ಸಕಲ ಜೀವಾತ್ಮರಿಗೆ ಲೇಸನೇ ಬಯಸುವ" ಶರಣ ಬಂಧುತ್ವ ಮಹಾ ಸಿದ್ಧಿಗೆ ಅಡ್ಡಿಯಾಗಿರುವ 'ಜನನಜಂಭ'ವನ್ನು ಮೂಲೋತ್ಪಾಟನೆ ಮಾಡುವುದೇ ಈ ವಚನದ ಉದ್ದೇಶವಾಗಿದೆ"[೬೯] ಎಂದು ಹೇಳುವಲ್ಲಿ ಶರಣತ್ವದ ಮಹತ್ವ ಎದ್ದುಕಾಣುತ್ತದೆ.

ಮತ್ತೆ ಮುಂದುವರಿದು ಎಂ.ಎಂ.ಕಲಬುರ್ಗಿ ಅವರು ಚತುರ್ವರ್ಣ ಪದ್ಧತಿಯಲ್ಲಿ ನಾಲ್ಕನೇ ಸ್ತರವಾದ ಶೂದ್ರವರ್ಗಕ್ಕೆ ತನ್ನ ಜನನವನ್ನು ಬಸವಣ್ಣ ಅಭಿವ್ಯಕ್ತಗೊಳಿಸಿರುವುದನ್ನು ಚಿತ್ರಿಸಿದ್ದಾರೆ. ದಾಸರ ಮಕ್ಕಳಾದರೂ ಸಂಪ್ರದಾಯ ಪ್ರಕಾರವಾಗಿ ಮದುವೆ ಆಗದೆ ಬೆರಣಿತಟ್ಟುವ ಕ್ಷುಲ್ಲಕ ಕೆಲಸಕ್ಕೆ ಹೋದ ಸಂದರ್ಭದಲ್ಲಿ ಅನಾಗರಿಕವಾಗಿ ಕೂಡಿದವರು ಎಂಬಲ್ಲಿ ಸ್ತರ ಇನ್ನೂ ಕೆಳಗಿನದಾಗುತ್ತದೆ. ಇಲ್ಲಿ ಬಸವಣ್ಣನ ಮುಖ್ಯ ಉದ್ದೇಶ ಸಮಾನತೆ ಎಂಬುದು ತಿಳಿದುಬರುತ್ತದೆ. ಬಸವಣ್ಣನಿಗಿದ್ದ ಜನನದ ಬಗೆಗಿನ ನಿರ್ಲಕ್ಷ್ಯಭಾವ ಎದ್ದು ತೋರುತ್ತದೆ. 'ಸಂಗಮನಾಥನ ಸಾಕ್ಷಿಯಾಗಿ' ಎಂದು ಸಾರುವಲ್ಲಿ ತನ್ನ ಧೋರಣೆ ದೈವಸಾಕ್ಷಿಯಾಗಿದೆ ಎಂದು ಬಸವಣ್ಣ ದೃಢೀಕರಿಸಿರುವ ಬಗೆಯನ್ನು ಎಂ.ಎಂ.ಕಲಬುರ್ಗಿ ಅವರು ಚಿತ್ರಿಸಿದ್ದಾರೆ. "ದೇವರಿಗೆ ನನ್ನ ಮೇಲೆ ಅಂತಃಕರಣವಿದ್ದರೆ, ನನ್ನನ್ನು ಮುಂದಿನ ಜನ್ಮದಲ್ಲಿ ಹೊಲೆಯನನ್ನಾಗಿ ಹುಟ್ಟಿಸಲಿ ಎಂದು ಗಾಂಧೀಜಿಯವರ ಮಾತಿನಲ್ಲೂ ಈ ಭಾವ ಪರ್ಯಾಯವಾಗಿ ಮಿಂಚುತ್ತದೆ"[೭೦] ಎಂದಿದ್ದಾರೆ. ಬಸವಣ್ಣ ಮತ್ತು ಗಾಂಧೀಜಿ ಇಬ್ಬರಲ್ಲೂ ಸಮಾಜದಲ್ಲಿ ಸಮಾನತೆ ತರುವ ಭಾವ-ಅಸ್ಪೃಶ್ಯತೆಯ ನಿರ್ಮೂಲನ ನಿಲುವು ಇಬ್ಬರಲ್ಲೂ ಕಂಡುಬರುವುದನ್ನು ಗಮನಿಸಬಹುದಾಗಿದೆ. ಹುಟ್ಟಿನ ಆಧಾರದಿಂದ ಅಳೆಯುವ ಜಾತಿವ್ಯವಸ್ಥೆಯನ್ನು ತಳಮಟ್ಟದಿಂದ ತೊಲಗಿಸಲು

ಬಸವಣ್ಣನವರು ತಮ್ಮ ಹುಟ್ಟಿನ ಹಿನ್ನೆಲೆಯನ್ನೇ ಹಿಡಿಯುವ ಮೂಲಕ ಕೆಳಗಿನ ಜಾತಿಯವರೊಂದಿಗೆ ಗುರುತಿಸಿಕೊಂಡಿದ್ದಾರೆ" ಎಂಬ ಕಲ್ಯಾಣರಾವ್ ಜಿ. ಪಾಟೀಲ ಅವರ ಮಾತನ್ನು ಒಪ್ಪಬೇಕಾಗುತ್ತದೆ. ಜಾತಿವ್ಯವಸ್ಥೆಯನ್ನು ತೊಲಗಿಸಲು ಬಸವಣ್ಣ ಹುಟ್ಟಿನ ಹಿನ್ನೆಲೆಯನ್ನೇ ಆಯ್ದುಕೊಂಡಿರುವುದು ಒಂದು ವಿಶೇಷ. ಇಲ್ಲಿ ಮುಖ್ಯವಾಗಿ ಯಾರು ಕೂಡ ಹುಟ್ಟುತ್ತಲೇ ಜಾತಿಯೆಂಬ ಅಣೆಪಟ್ಟಿಯನ್ನು ಕಟ್ಟಿಕೊಂಡು ಬರುವುದಿಲ್ಲ. ಹುಟ್ಟಿದ ನಂತರ ಮನುಷ್ಯ ತಾನು ರೂಪಿಸಿಕೊಂಡ ಒಂದು ವ್ಯವಸ್ಥೆಯಲ್ಲಿ ತಾನು ಒದ್ದಾಡುವ ಪರಿಸ್ಥಿತಿ ಉಂಟಾಗಿರುವುದು ಪ್ರಸ್ತುತ ಸಮಾಜದಲ್ಲಿಯೂ ಗಮನಿಸಬೇಕಾದ ಸಂಗತಿಯಾಗಿದೆ. ಈ ಜಾತಿನಿರ್ಮೂಲನೆ ಮೂಲಕ ಸಮಾಜದಲ್ಲಿ ಸಮಾನತೆ ತರಲು ಸಾಧ್ಯ ಎಂಬ ಬಸವಣ್ಣನ ನಿಲುವನ್ನು ಹಿಂದಿನ ವಚನದಲ್ಲಿ ಗಮನಿಸಬಹುದಾಗಿದೆ.

"ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು
ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು
ನುಡಿಯೊಳಗಾಗಿ ನಡೆಯದಿದ್ದರೆ
ಕೂಡಲಸಂಗಮದೇವನೆಂತೊಲಿವನಯ್ಯಾ!"[೨೧]

ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಪ್ರಾಣಲಿಂಗಿಯ ಜ್ಞಾನಸ್ಥಲದಿಂದ ಆಯ್ದುಕೊಂಡಿದ್ದಾರೆ. ಈ ವಚನ ನುಡಿಯ ಮಹತ್ವವನ್ನು ಕುರಿತದ್ದಾಗಿದೆ. "ನಡೆದಂತೆ ನುಡಿಯಿರಲಿ, ನುಡಿದಂತೆ ನಡೆಯಿರಲಿ" ಎಂಬ ವಾಕ್ಯ ಜನಜನಿತವಾಗಿದೆ. ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಕುರಿತಂತೆ ಇದು ಬಸವಣ್ಣನವರು ನುಡಿಗೆ ಬರೆದ ಭಾಷ್ಯವಿದು ಎಂದಿದ್ದಾರೆ. ಇದು ಕನ್ನಡ ಸಾಹಿತ್ಯದ ಸಾವಿರ ವರ್ಷದ ಇತಿಹಾಸದಲ್ಲಿ ಇದನ್ನು ಸರಿಗಟ್ಟುವ 'ನುಡಿಮೀಮಾಂಸೆ' ಇನ್ನೊಂದಿಲ್ಲವೆಂದು ನುಡಿಯ ಮಹತ್ವವನ್ನು ಸಾರಿದ್ದಾರೆ.

ಶಬ್ದ ಮತ್ತು ಅರ್ಥಗಳನ್ನು ಕುರಿತು ಹೇಳುತ್ತಾ ಶಬ್ದಕ್ಕೆ ವಾಚ್ಯ, ಲಕ್ಷ್ಯ, ವ್ಯಂಗ್ಯವೆಂಬ ಮೂರು ಅರ್ಥಗಳಿರುವುದನ್ನು ಶೋಧಿಸಿ ಹೇಳಿದ್ದಾರೆ. ಶಬ್ದ ಮತ್ತು ಅರ್ಥ ಇವೆರಡಕ್ಕೂ ವಿಶೇಷ ಮಹತ್ವವಿದೆ ಮತ್ತು ತನ್ನಷ್ಟಕ್ಕೆ ತಾನೇ ಕಾಂತಿಯುಕ್ತವಾಗಿರುತ್ತದೆ. ಮಾಣಿಕ್ಯ ತನ್ನನ್ನು ಮೀರಿ ಕಾಂತಿವಲಯವನ್ನು ಕಟ್ಟಿಕೊಳ್ಳುತ್ತದೆ. ಆದರೆ ಸ್ಫಟಿಕ ಇವೆರಡಕ್ಕಿಂತ ಭಿನ್ನವಾಗಿ ತನ್ನನ್ನು ಮೀರಿ ಕಿರಣರೇಖೆಯನ್ನು ತೋರುತ್ತದೆ ಎಂದಿದ್ದಾರೆ. ಮುತ್ತಿನ ಹಾರ ಶಬ್ದದ ವಾಚ್ಯವನ್ನು, ಮಾಣಿಕ್ಯದ ದೀಪ್ತಿ ಶಬ್ದದ ಲಕ್ಷ್ಯವನ್ನು ಸ್ಫಟಿಕದ ಶಲಾಖೆ ಶಬ್ದದ ವ್ಯಂಗ್ಯವನ್ನು ಪ್ರತಿನಿಧಿಸುತ್ತವೆ. ಈ ೩ ನೆಲೆಗಳನ್ನು ಮಾತ್ರ ಕವಿಯಾದವನು ಏರಬಲ್ಲ. ಆದರೆ ಶರಣನಾದವನು ನುಡಿದರೆ

ಲಿಂಗಮೆಚ್ಚಿ ಅಹುದಹುದೆನಬೇಕು ಎಂಬ ನಾಲ್ಕನೆಯ ಸ್ತರವನ್ನು ಏರಿ, ಲಿಂಗವಾಣಿ ಸಿದ್ಧಿಯನ್ನು ಪಡೆಯುತ್ತಾನೆ ಎಂದು ಶರಣರ ಮಹತ್ವವನ್ನು ಎತ್ತಿ ಹಿಡಿದಿದ್ದಾರೆ.

ಈ ವಚನವನ್ನು ವಚನಕಾರರ ಪರಿಭಾಷೆಯ ಹಿನ್ನೆಲೆಯಲ್ಲಿ ನೋಡುವ ಪ್ರಯತ್ನ ಮಾಡಿದ್ದಾರೆ. ವಾಚ್ಯ, ಲಕ್ಷ, ವ್ಯಂಗ್ಯ ಮೂಲವಾದದ್ದು ಕಾಯಸಾಹಿತ್ಯ. ಇದು ನುಡಿಗೆ ನಿಂತು ಬಿಡುವಂತಹದ್ದು. ಆದರೆ ಆಚಾರ–ವಿಚಾರಗಳ ಸಾಮರಸ್ಯ ರೂಪದ ಅನುಭಾವಮೂಲವಾದುದು 'ಆತ್ಮಸಾಹಿತ್ಯ' ನುಡಿಯನ್ನು ನಡೆಯಲ್ಲಿ ಕಾರ್ಯರೂಪಗೊಳಿಸುವಂತಹದ್ದು. ಆದ್ದರಿಂದ ಈ ವಚನ "ನುಡಿಯೊಳಗಾಗಿ ನಡೆಯದಿದ್ದರೆ ಕೂಡಲಸಂಗಯ್ಯನೆಂತೊಲಿವನಯ್ಯಾ"[೭] ಎಂದು ಪ್ರಶ್ನಿಸಿ, ಪ್ರಧಾನವಾದ ಆತ್ಮಸಾಹಿತ್ಯ ತತ್ವವನ್ನು ಎತ್ತಿಹಿಡಿಯುತ್ತದೆ.

ಎಂ.ಎಂ.ಕಲಬುರ್ಗಿ ಅವರು ಈ ವಚನಕ್ಕೆ ಇನ್ನೊಂದು ರೀತಿಯ ಅರ್ಥವನ್ನು ನೀಡಲು ಪ್ರಯತ್ನಿಸಿದ್ದಾರೆ. ವೀರಶೈವದಲ್ಲಿ 'ನಡೆ'ಯು ಲಿಂಗದ ನಡೆಯಾಗಿರುವಂತೆ, 'ನುಡಿ'ಯು ಲಿಂಗದ ನುಡಿಯಾಗಿದೆ ಎಂದಿದ್ದಾರೆ. ಕೆಲವರು ಸ್ಥೂಲತನು, ಪಾತಳಿಯ ಮೇಲೆ ನಿಂತು, ಇನ್ನು ಕೆಲವರು ಸೂಕ್ಷ್ಮತನು ಪಾತಳಿಯ ಮೇಲೆ ನಿಂತು ನುಡಿದರೆ, ಶರಣರಾದವರು ಇವೆರಡರ ಸಾಮರಸ್ಯವಾದ ಕಾರಣತನು ಪಾತಳಿಯ ಮೇಲೆ ನಿಂತು ನುಡಿಯುತ್ತಾರೆ ಎಂದಿದ್ದಾರೆ. ಇಲ್ಲಿ ಕೂಡ ಶರಣರ ನುಡಿಯಂತೆ ನಡೆಯುವುದರ ಮಹತ್ವ ತಿಳಿಸಿದ್ದಾರೆ. ಹಾಗೆಯೇ ಮುಂದುವರಿದು ಸಮಾಜದಲ್ಲಿ ಮಾತನ್ನು ಮುತ್ತಿಗೆ ಹೋಲಿಸುವುದು ಸಹಜವಾಗಿದೆ. ಯಾರ ಮಾತೇ ಆಗಲಿ ಅದು ಮುತ್ತಿನ ಹಾರ, ಮಾಣಿಕ್ಯದ ದೀಪ್ತಿ ಮತ್ತು ಸ್ಫಟಿಕದ ಶಲಾಕೆ ಆಗಬಹುದು. ಆದರೆ ಮಾತಿಗೆ ಕಾಂತಿ, ದೀಪ್ತಿ, ಕಿರಣ ತುಂಬುವುದು ಅದರ ಸಾಧನೆ ಮತ್ತು ಸಂಸ್ಕಾರಗಳಿಗೆ ಬಿಟ್ಟಿದ್ದ ವಿಷಯವಾಗಿರುತ್ತದೆ. ಇಲ್ಲಿ ಬಸವಣ್ಣ ಕನಿಷ್ಠದಲ್ಲಿ ಮುತ್ತಿನಂತ ಮಾತನ್ನು ವರಿಷ್ಠದಲ್ಲಿ ಸ್ಫಟಿಕದ ಶಲಾಕೆಯಂಥ ಮಾತನ್ನು ಅಪೇಕ್ಷಿಸುವುದನ್ನು ಎಂ.ಎಂ.ಕಲಬುರ್ಗಿ ಅವರು ತಿಳಿಸಿದ್ದಾರೆ. ಈ ವಚನ 'ನುಡಿದರೆ' ಎಂದು ಪ್ರಾರಂಭವಾಗಿ 'ಬೇಕು' ಎಂದು ಕೊನೆಗೊಳ್ಳುವುದು. ಇದು ಕೇಳುಗನಿಗೆ ಒಂದು ಬಗೆಯಲ್ಲಿ ಎದೆಗೆ ನಾಟುವಂತಿದೆ ಎಂದಿದ್ದಾರೆ.

"ಹಾಲ ಕಂದಲು, ತುಪ್ಪದ ಮಡಕೆಯ
ಬೋಡು, ಮುಕ್ಕೆನಬೇಡ
ಹಾಲು ಸಿಹಿ, ತುಪ್ಪ ಕಮ್ಮನೆ, ಲಿಂಗಕ್ಕೆ ಬೋನ!
ಕೂಡಲಸಂಗನ ಶರಣರ ಅಂಗಹೀನರೆಂದರೆ ನಾಯಕನರಕ"[೭೩]

ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಭಕ್ತನ ಭಕ್ತಸ್ಥಲದಿಂದ ಆಯ್ದುಕೊಂಡಿದ್ದಾರೆ.

ಬಸವಣ್ಣನವರ ಪ್ರಸಿದ್ಧವಾದ ಈ ವಚನವನ್ನು ಎಂ.ಎಂ.ಕಲಬುರ್ಗಿ ಅವರು ಸಾಮಾಜಿಕ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಕೆಲವರು ಹುಟ್ಟುತ್ತಲೇ ಅಂಗವಿಕಲರಾದರೆ ಇನ್ನು ಕೆಲವರು ಜೀವಿತಾವಧಿಯಲ್ಲಿ ಯಾವುದೋ ಒಂದು ಅಪಘಾತದಿಂದಾಗಿ ಅಂಗವಿಕಲರಾಗುವ ಸಾಧ್ಯತೆ ಉಂಟಾಗುತ್ತದೆ. ಸಮಾಜದಲ್ಲಿ ಈ ಅಂಗವಿಕಲತೆ ಎನ್ನುವುದು ಒಂದು ಶಾಪವಾಗಿ ಪರಿಗಣಿತವಾಗಿದೆ. ಮುಖ್ಯವಾಗಿ ಶರಣರ ಆಂದೋಲನದ ಗುರಿ ಪ್ರಭುವರ್ಗದಿಂದ–ಪ್ರಜಾವರ್ಗ, ಪುರೋಹಿತವರ್ಗದಿಂದ–ಭಕ್ತವರ್ಗ, ಪುರುಷವರ್ಗದಿಂದ–ಸ್ತ್ರೀವರ್ಗಗಳನ್ನು ಮುಕ್ತಗೊಳಿಸುವುದಾಗಿತ್ತು ಎಂದು ಗುರುತಿಸಲಾಗಿತ್ತು. ಆದರೆ ಆಗಿನ ಕಾಲದಲ್ಲಿ ಅಶಕ್ತರ, ಅಂಗವಿಕಲರ ಉದ್ಧಾರದ ವಿಷಯವಾಗಿಯೂ ಬಸವಣ್ಣನವರು ವಿಚಾರ ಮಾಡಿರುವುದನ್ನು ಈ ವಚನದಲ್ಲಿ ಗಮನಿಸಬಹುದಾಗಿದೆ.

ಬಸವಣ್ಣನವರ ಈ ವಚನವನ್ನು ಎಂ.ಎಂ.ಕಲಬುರ್ಗಿ ಅವರು ಮೂರು ನೆಲೆಯಲ್ಲಿ ಚಿಂತನೆ ನಡೆಸಿರುವುದನ್ನು ಸೂಕ್ಷ್ಮವಾಗಿ ನಾವು ಗಮನಿಸಬಹುದಾಗಿದೆ. ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಧಾರ್ಮಿಕವಾಗಿ ಅಂಗವಿಕಲರಿಗೆ ಎದುರಾಗುವ ಸಮಸ್ಯೆಯ ನೆಲೆಯಲ್ಲಿ ಬಸವಣ್ಣನವರ ವಚನವನ್ನು ಚರ್ಚಿಸಿದ್ದಾರೆ. ಅಂಗವಿಕಲತೆ ಎಂಬುದು ಸಾಮಾಜಿಕ ಸಮಸ್ಯೆಯಾಗಿದ್ದು, ಅವರು ದುಡಿಮೆ ಮಾಡಲು ಅನರ್ಹರು. ಹಾಗೆಯೇ ಆಹಾರಕ್ಕೆ ಮಾತ್ರ ಅವರು ಅನಿವಾರ್ಯರು ಎಂಬ ಕಲ್ಪನೆ ಮಾಡಿದೆ. ಆರ್ಥಿಕ ದೃಷ್ಟಿಯಿಂದ ಇವರನ್ನು ಕಡೆಗಣಿಸಿರುವುದು ಬಸವಣ್ಣನ ಕಾಲಕ್ಕೆ ಮಾತ್ರ ಸೀಮಿತವಾಗದೇ ಪ್ರಸ್ತುತ ದಿನಮಾನಗಳಲ್ಲೂ ಕಂಡುಬರುತ್ತದೆ. ಹೀಗೆ ಆರ್ಥಿಕ ದೃಷ್ಟಿಕೋನದಿಂದ ಕಡೆಗಣಿಸಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸಿದ್ದಾರೆ. ಭಾರತದಲ್ಲಿ ತಾಂಡವವಾಡುವ ಈ ಮೂಢನಂಬಿಕೆ ಅಂಗವಿಕಲರನ್ನು ಕೂಡ ಬಿಡದಂತೆ ಕಾಡಿದೆ, ಕಾಡುತ್ತಲಿದೆ. ಭಾರತೀಯ ಸಮಾಜ ಅಂಗವಿಕಲತೆ ಯನ್ನು ಅಪಶಕುನದಂತೆ ಕಂಡು ಅಂಗವಿಕಲರನ್ನು ತಿರಸ್ಕಾರದಿಂದ ನೋಡುತ್ತಲಿದೆ. ಅಂಗನ್ಯೂನತೆಯಿಂದ ಯಾವಾಗ ತಿರಸ್ಕಾರಕ್ಕೆ ಒಳಗಾಗುತ್ತೇವೋ ಎಂದು ಪ್ರತಿಕ್ಷಣ ನೊಂದುಕೊಳ್ಳುತ್ತಾ ಮಾನಸಿಕವಾಗಿ ಕುಗ್ಗಿ ಹೋಗಿರುತ್ತಾರೆ. ಹೀಗಿರುವಾಗ ಅವರು ಸಾಮಾಜಿಕ ಸ್ಥಾನಮಾನಗಳಿಂದ ದೂರ ಉಳಿದಿರುತ್ತಾರೆ ಎಂಬುದನ್ನು ಎಂ.ಎಂ.ಕಲಬುರ್ಗಿ ಅವರು ಗುರ್ತಿಸಿದ್ದಾರೆ.

ಇನ್ನು ಧಾರ್ಮಿಕವಾಗಿ ಎಂ.ಎಂ.ಕಲಬುರ್ಗಿ ಅವರು ಗುರುತಿಸಿರುವುದನ್ನು ನೋಡುವುದಾದರೆ ಧಾರ್ಮಿಕವಾಗಿ ಅಂಗವಿಕಲರದು ಅಸ್ಪೃಶ್ಯ ಬದುಕು ಎಂದಿದ್ದಾರೆ. "ಮದುವೆ ಜಾತ್ರೆ ಮುಂತಾದ ಸಮಾರಂಭಗಳಲ್ಲಿ ವಿಧಿವತ್ತಾಗಿ ಭಾಗವಹಿಸಲು ಇವರಿಗೆ ಅವಕಾಶವಿಲ್ಲ; ಅಧಿಕಾರವಿಲ್ಲ. ಹಲ್ಲು ಮುರಿದಿದ್ದರೆ, ಉಗುರು ಊನವಾಗಿದ್ದರೆ ತೀರಿತು; ಸಮಾರಂಭದ ಸಡಗರದಿಂದ,

ಧಾರ್ಮಿಕ ವಿಧಿಯಿಂದ ಇವರು ವಂಚಿತರಾಗುತ್ತಾರೆ. ಉಗುರಿನಂಥ ಕ್ಷುಲ್ಲಕ ಅವಯವ ಊನವಾಗಿದ್ದರೂ ರಾಜ್ಯಪಟ್ಟದಂಥ ಮಹಾಭಾಗ್ಯ ತಪ್ಪಿಹೋಗುತ್ತಲಿದ್ದ ಕ್ರೂರ ವ್ಯವಸ್ಥೆಗಳನ್ನು ರೂಢಿಸಿಕೊಂಡಿದ್ದಿತು. ಪ್ರಾಚೀನ ಸಮಾಜ ತುಂಬಾ ಊನರನ್ನಂತೂ ಮನೆಯಿಂದ ಸಮಾಜದಿಂದ ದೂರ ನೂಕಲ್ಪಟ್ಟು, ಅನ್ನ ನೀರಿಗೆ ಎರವಾಗಿ ಬಳಲುತ್ತಿದ್ದರು; ಭಿಕ್ಷಾವೃತ್ತಿಯಿಂದ ಸತ್ತು ಬದುಕುತ್ತಲಿದ್ದರು. ಹೀಗೆ ಇಂದಿನದಕ್ಕಿಂತಲೂ ಅಂದು ಹೆಚ್ಚು ಆರ್ಥಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ತುಂಬ ಉಪೇಕ್ಷಿತವಾಗಿದ್ದ ವರ್ಗವಾಗಿದ್ದಿತು ಅಂಗವಿಕಲರದು. ಇತ್ತೀಚೆಗೆ ಇವರೂ ಸಮಾಜದ ಒಂದು ಭಾಗವೆಂದು ನಾವು ಭಾವಿಸಿದಂತೆ, ಬಸವಣ್ಣ ಅಂದೇ ಭಾವಿಸಿ, ಇವರನ್ನು ಅನುಕಂಪೆಯಿಂದ ನೋಡಬೇಕೆಂದು ಸಾರಿದ. ಪ್ರಸ್ತುತ ವಚನ ಈ ಧೋರಣೆಯನ್ನೇ ಪ್ರತಿಪಾದಿಸುತ್ತದೆ”[೭೪] ಎಂದು ಎಂ.ಎಂ.ಕಲಬುರ್ಗಿ ಅವರು ಹೇಳಿರುವ ಮಾತು ಅಕ್ಷರಶಃ ಸತ್ಯವಾಗಿ ಗೋಚರವೆನಿಸುತ್ತದೆ ಮತ್ತು ಪ್ರಸ್ತುತವೆನಿಸುತ್ತದೆ.

ವ್ಯಕ್ತಿಯೇ ಸಮಾಜದ ನಿಜವಾದ ಸಂಪತ್ತು ಎಂಬುದು ಬಸವಣ್ಣನವರ ಭಾವನೆಯಾಗಿತ್ತು ಎಂದು ಎಂ.ಎಂ.ಕಲಬುರ್ಗಿ ಅವರು ಹೇಳುತ್ತಾ ವೀರಶೈವರಲ್ಲಿ ವ್ಯಕ್ತಿಯ ಜೀವ–ಕಾಯಗಳೆರಡೂ ಮಹತ್ವದ್ದು ಎಂದಿದ್ದಾರೆ. ಅಂಗವಿಕಲರಿಗೆ ದೈಹಿಕ ಶಕ್ತಿ ಕೊರತೆಯಾಗಿದೆ ಎಂದರೆ ಅವರ ಬುದ್ಧಿಶಕ್ತಿ ಮತ್ತು ಆತ್ಮಶಕ್ತಿಗೆ ಕೊರತೆಯಾದಂತೆ ಅಲ್ಲ. “ಶರಣ ತತ್ವದ ಪ್ರಕಾರ ಶಾರೀರಿಕ ದುಡಿಮೆ ಹಾಗೂ ಬೌದ್ಧಿಕ ದುಡಿಮೆಗಳಿಗೆ ಸಮಾನ ಸ್ಥಾನವಿರುವುದರಿಂದ ಒಂದು ಶಕ್ತಿಯ ಕೊರತೆಯನ್ನು ಗಮನಿಸಿ, ಉಳಿದ ಶಕ್ತಿಗಳನ್ನು ತಿರಸ್ಕರಿಸಬಾರದೆಂಬ ಸೂಚನೆಯೂ ಇಲ್ಲಿದೆ.”[೭೫]

ಜೀವನದ ಸ್ವರೂಪ ಮುಖ್ಯವಾದರೂ, ಕಾಯದ ರೂಪ ಅಮುಖ್ಯವಾದದ್ದು. ಹಾಗೆಯೇ ಹಾಲಿನ ರುಚಿ, ತುಪ್ಪದ ಕಂಪು ಮುಖ್ಯವೇ ಹೊರತು ಅವುಗಳನ್ನು ಸಂಗ್ರಹಿಸಿರುವ ಮಣ್ಣಿನ ಪಾತ್ರೆಗಳು ಮುಕ್ಕಾಗಿದ್ದರೂ ಅದು ಮುಖ್ಯವಲ್ಲ. ಅವು ಲಿಂಗಕ್ಕೆ ಬೋನ ಎನ್ನುತ್ತಾರೆ. ಹಾಗೆಯೇ ಶರಣರ ದೇಹ ಊನವಾಗಿದ್ದರೇನಂತೆ ಜೀವನಕ್ಕೆ ಊನತೆಯಿಲ್ಲ, ಆತ್ಮಲಿಂಗಕ್ಕೆ ಯೋಗ್ಯ. ಆದುದರಿಂದ ಕಾಯನೋಡಿ ಇಂಥ ಜೀವಗಳನ್ನು ಕಡೆಗಣಿಸಬಾರದೆಂಬುದು ಈ ವಚನದ ಸಂದೇಶವಾಗಿದೆ ಎಂದು ಎಂ.ಎಂ.ಕಲಬುರ್ಗಿ ಅವರು ತಿಳಿಸಿದ್ದಾರೆ.

ಅನುಕಂಪ ಬಸವಣ್ಣನವರ ಭಾವಕೋಶದ ಮೂಲದ್ರವ್ಯ ಎನ್ನುತ್ತಾ, ಸಮಾಜದ ಒಂದು ಭಾಗವಾದ ಅಂಗವಿಕಲರಿಗೆ ನ್ಯಾಯಯುತವಾದ ಸ್ಥಾನಮಾನ ಕೊಡಿಸುವ ತುಡಿತ, ತೀವ್ರತೆ ಎನ್ನುತ್ತ ಬಸವಣ್ಣನ ಬಗೆಗಿನ ಪ್ರೀತಿ–ಭಾವಗಳನ್ನು, ಅವರ ಭಾವಪೂರ್ಣತೆಯನ್ನು ಸಮಾನತೆ ತರುವಲ್ಲಿನ ತುಡಿತವನ್ನು ಎಂ.ಎಂ.ಕಲಬುರ್ಗಿ ಅವರು ನಿರೂಪಿಸಿದ್ದಾರೆ.

"ದೈಹಿಕ ಕುಂದುಕೊರತೆಗಳು ಅವರವರ ಸಾಧನೆಗಳಿಗೆ ಎಂದಿಗೂ ಅಡ್ಡಿಯಲ್ಲ. ಮನಸ್ಸು ಗಟ್ಟಿಯಾಗಿದ್ದರೆ ಯಾವ ಸಾಧನೆಯನ್ನಾದರೂ ಮಾಡಬಹುದು. ಆಗ ದೈಹಿಕ ನ್ಯೂನ್ಯತೆಗಳು ಗಮನಕ್ಕೆ ಬರಲಾರವು. ಎಲ್ಲಾ ಕಾಲಕ್ಕೂ 'ಅಂಗವಿಕಲತೆ' ಒಂದು ಸಾಮಾಜಿಕ ಸಮಸ್ಯೆಯಾಗಿ ಕಾಣುತ್ತಿರುವುದು ವಿಪರ್ಯಾಸ"[೨೬] ಎಂದು ಕಲ್ಯಾಣರಾವ್ ಜಿ. ಪಾಟೀಲ್ ಅವರ ಮಾತನ್ನು ಒಪ್ಪಬೇಕಾಗುತ್ತದೆ. ಪ್ರಸ್ತುತ ದಿನಮಾನಗಳಲ್ಲಿ ಎಷ್ಟೋ ಅಂಗವಿಕಲರು ವಿವಿಧ ಸಾಧನೆಗಳನ್ನು ಮಾಡಿರುವುದನ್ನು ನಾವು ಗಮನಿಸಬಹುದು. ೧೨ನೇ ಶತಮಾನದಲ್ಲಿಯೇ ಅಂಗವಿಕಲರಿಗೆ ಸಾಮಾಜಿಕ ಸ್ಥಾನಮಾನಗಳು ಸಿಗದೆ ಅನುಭವಿಸುತ್ತಿದ್ದ ಕಷ್ಟಗಳಿಗೆ ಬಸವಣ್ಣ ಸ್ಪಂದಿಸಿದ ಬಗೆಯನ್ನು ಎಂ.ಎಂ.ಕಲಬುರ್ಗಿ ಅವರು ತುಂಬಾ ವಿವರಣಾತ್ಮಕವಾಗಿ ಚರ್ಚಿಸಿದ್ದಾರೆ.

"ಉಳ್ಳವರು ಶಿವಾಲಯ ಮಾಡುವರು
ನಾನೇನು ಮಾಡಲಿ ಬಡವನಯ್ಯ
ಕಾಲೇ ಕಂಬ ದೇಹವೇ ದೇಗುಲ
ಶಿರವೆ ಹೊನ್ನ ಕಳಸವಯ್ಯಾ
ಕೂಡಲಸಂಗಮದೇವ ಕೇಳಯ್ಯಾ
ಸ್ಥಾವರಕಳಿವುಂಟು ಜಂಗಮಕ್ಕಳಿವಿಲ್ಲ."[೨೭]

ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಪ್ರಾಣಲಿಂಗಿಯ ಪ್ರಾಣಲಿಂಗಿಸ್ಥಲದಿಂದ ಆಯ್ದುಕೊಂಡಿದ್ದಾರೆ.

ಬಸವಣ್ಣನವರ ಪ್ರಸಿದ್ಧವಾದ ಈ ವಚನವನ್ನು ಎಂ.ಎಂ.ಕಲಬುರ್ಗಿ ಅವರು ಸಾಮಾಜಿಕ ಶ್ರೇಣೀಕರಣದ ಹಿನ್ನೆಲೆಯಲ್ಲಿ ಪದಶಃ ಅರ್ಥದ ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಅಂದರೆ ಸಮಾಜದಲ್ಲಿ ಎರಡು ವರ್ಗಗಳಿವೆ. ಒಂದು ಬಂಡವಾಳಶಾಹಿ ವರ್ಗ ಅಥವಾ ಶ್ರೀಮಂತವರ್ಗ, ಇನ್ನೊಂದು ಹಣವಿಲ್ಲದ ದುಡಿಯುವ ವರ್ಗ ಅಥವಾ ಶೋಷಿತವರ್ಗ. ಈ ಎರಡನೆಯ ವರ್ಗವು ಮೇಲುವರ್ಗದ ವೈಭವಯುತ ಧಾರ್ಮಿಕ ಆಚರಣಾ ಪದ್ಧತಿಯನ್ನು ಯಥಾವತ್ತಾಗಿ ಅನುಕರಣೆ ಮಾಡುವ ಆಡಂಬರದ ಭಕ್ತಿಗಿಂತ ಅತ್ಯಂತ ಶ್ರೇಷ್ಠವೂ, ನಿರ್ಮಲವೂ, ನಿಷ್ಕಲ್ಮಷವಾದ ಭಕ್ತಿಯೇ ಪರಮಶ್ರೇಷ್ಠ ಎಂಬ ನೆಲೆಯಲ್ಲಿ ವಿವರಿಸಿದ್ದಾರೆ. ಅಲ್ಲದೇ ವಚನದ ಕೊನೆಯ ಸಾಲು "ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎನ್ನುವ ಮಾತನ್ನು ವೀರಶೈವತತ್ವ ಮೂಲಭೂತ ಸಿದ್ಧಾಂತಗಳಲ್ಲಿ ಒಂದು ಎಂಬುದಾಗಿ ಗುರ್ತಿಸುತ್ತಾರೆ.

ದೇವಾಲಯ ಸಂಸ್ಕೃತಿಯನ್ನು ವಿರೋಧಿಸುವ ಮತ್ತು ದೇಹ ದೇವಾಲಯ ಸಂಸ್ಕೃತಿಯನ್ನು ಅನುಮೋದಿಸುವ ಬಸವಣ್ಣನವರ ತಾತ್ವಿಕ ಚಿಂತನೆಯನ್ನು ಎಂ.ಎಂ.ಕಲಬುರ್ಗಿ ಅವರು

ಗುರುತಿಸಿರುವರು. ಅಷ್ಟು ಮಾತ್ರವಲ್ಲ, ದೇವಾಲಯ ಸಂಸ್ಕೃತಿಯನ್ನು ವಿರೋಧಿಸುವ ಬಸವಣ್ಣನವರು ಇದಕ್ಕೆ ಪರ್ಯಾಯವಾದ ಮತ್ತೊಂದು ಸಂಸ್ಕೃತಿಯನ್ನು ನಿರ್ಮಾಣ ಮಾಡುತ್ತಾರೆ. ಅದು ಯಾವುದೇ ದುಬಾರಿಯಲ್ಲದ ಆರ್ಥಿಕ ನೆರವನ್ನು ಬಯಸದ ಎಲ್ಲರೂ ಸುಲಭವಾಗಿ ಪಾಲಿಸಲು ಯೋಗ್ಯವಾದ ದೇಹದೇವಾಲಯ ಸಂಸ್ಕೃತಿಯನ್ನು ಪ್ರತಿಪಾದಿಸುತ್ತಾರೆ. ಇಲ್ಲಿ ಭೌತಿಕ ದೇವಾಲಯ ನಿರ್ಮಾಣಕ್ಕೆ ಬೇಕಾಗುವ ಕಂಬ ಕಲ್ಲು ಇಟ್ಟಿಗೆ, ಮಣ್ಣುಗಳ ಅವಶ್ಯಕತೆ ಇಲ್ಲ. ಮಾನವ ದೇಹದ ಅಂಗಗಳಾದ ಕಾಲನ್ನು ಕಂಬವಾಗಿಸಿ ದೇಹವನ್ನೇ ದೇಗುಲವಾಗಿಸಿ ಶಿರವನ್ನೇ ಹೊನ್ನಿನ ಕಳಸವನ್ನಾಗಿ ಮಾಡಿಕೊಂಡು ದೇಹದೇಗುಲ ನಿರ್ಮಿಸಿ ಅದರಲ್ಲಿ ಸ್ಥಾವರ ಲಿಂಗಕ್ಕಿಂತ ಜಂಗಮ ಲಿಂಗವನ್ನು ಪ್ರತಿಷ್ಠಾಪಿಸುವುದರ ಹಿಂದಿನ ಬಸವಣ್ಣನ ತಾತ್ವಿಕ ಚಿಂತನೆಯನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸುತ್ತಾರೆ. ಹೀಗೆ ಶಿಲಾದೇಗುಲ, ದೇಹದೇಗುಲಗಳನ್ನು ಪ್ರಸ್ತಾಪಿಸಿ "ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂಬ ಮಾತಿನಿಂದ ಇವುಗಳಲ್ಲಿ ಒಂದರ ಅಳಿವು ಇನ್ನೊಂದರ ಉಳಿವುಗಳನ್ನು ಬೆರಳು ಮಾಡಿ ತೋರಿಸುತ್ತಾರೆ. ದೇಹದೇಗುಲವು ಗುಣ ಕಟ್ಟಡದ ಸಾಧನವಾದರೆ ಶಿಲಾದೇಗುಲವು ಹಣಕಟ್ಟಡದ ಸಾಧನ. ಇಲ್ಲಿ ಗುಣದಿಂದ ಕಟ್ಟಿದುದು ಶಾಶ್ವತ. ಹಣದಿಂದ ಕಟ್ಟಿದುದು ಅಶಾಶ್ವತ ಎಂದು ಹೇಳುವ ಮೂಲಕ ವಚನದಲ್ಲಿ ಅಡಗಿರುವ ಅಂತರಾರ್ಥವನ್ನು ಗ್ರಹಿಸುತ್ತಾರೆ. ಜಂಗಮ ಸ್ವರೂಪಿಯಾದ ದೇಹ ದೇವಾಲಯದ ಅಂತರಂಗದಲ್ಲಿ ಇಟ್ಟು ಪೂಜಿಸುವುದು ಅಳಿವಿಲ್ಲದ ಆತ್ಮಲಿಂಗ ಎಂದು ಎಂ.ಎಂ.ಕಲಬುರ್ಗಿ ಅವರು ಅರ್ಥೈಸುತ್ತಾರೆ. "ದೇಹ ದೇವಾಲಯ ನಿರ್ಮಾಣದ ಮೂಲಕ ಶಿಲಾದೇವಾಲಯದ ನಿರಾಕರಣೆ, ತನ್ಮೂಲಕ ದೇವಾಲಯಗಳಲ್ಲಿಯ ಶೋಷಣೆ, ಅಜ್ಞಾನಗಳ ಉಚ್ಚಾಟನೆ ಹಾಗೂ ಸ್ಥಾವರತ್ವ ಜಂಗಮತ್ವಗಳ ಅರ್ಥಸ್ಪಷ್ಟನೆಯ ಮೂಲಕ ಜಂಗಮತ್ವದ ಪ್ರತಿಷ್ಠಾಪನೆ"[೭೮] ಎಂದು ಈ ವಚನದ ಹಿಂದಿರುವ ಉದ್ದೇಶವನ್ನು ಸ್ಪಷ್ಟವಾಗಿ ಗುರುತಿಸಿದ್ದಾರೆ.

'ಕಾಲು ಕಂಬ, ದೇಹವೇ ದೇಗುಲ, ಶಿರವೇ ಹೊನ್ನ ಕಳಸವಯ್ಯಾ' ಎಂಬುದು ಇಡೀ ವಚನದ ಒಳಕಟ್ಟಡವಾಗಿ ನಿಂತಿದೆ. ಕಾಲಿನಿಂದ ತಲೆಯವರೆಗೆ ಬೆಳೆಯುತ್ತಾ ಹೋಗುವ ಈ ಚಿತ್ರ, ಕಟ್ಟಡವೊಂದು ಅಡಿಪಾಯದಿಂದ ಆರಂಭಗೊಂಡು ಹಂತಹಂತವಾಗಿ ಮುಗಿಯುತ್ತ ಹೋದುದರ ಕಲ್ಪನೆಯನ್ನು ಅನುಭವಕ್ಕೆ ತಂದುಕೊಳ್ಳುವುದನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸುತ್ತಾರೆ.

> "ಹತ್ತು ಮತ್ತರ ಭೂಮಿ, ಬತ್ತದ ಹಯನು
> ನಂದಾದೀವಿಗೆಯ ನಡೆಸಿಹೆವೆಂಬವರ ಮುಖವ ನೋಡಲಾಗದು;
> ಅವರ ನುಡಿಯ ಕೇಳಲಾಗದು.

ಅಂಡಜ, ಪಿಂಡಜ, ಸ್ವೇದಜ, ಉದ್ಭಿಜವೆಂಬ ಪ್ರಾಣಿಗಳಿಗೆ
ಭವಿತವ್ಯವ ಕೊಟ್ಟವರಾರೋ?
"ಎನ್ನಿಂದಲೇ ಆಯಿತ್ತು ಎನ್ನಿಂದಲೇ ಹೋಯಿತ್ತು" ಎಂಬುವನ
ಬಾಯಲ್ಲಿ ಮೆಟ್ಟಿ ಹುಡಿಯ ಹೊಯ್ಯದೆ ಮಾಣ್ಬನೆ
ಕೂಡಲಸಂಗಮದೇವ?"[೪೯]

ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಭಕ್ತನ ಜ್ಞಾನಿಸ್ಥಲದಿಂದ ಆಯ್ದುಕೊಂಡಿದ್ದಾರೆ.

ಬಸವಣ್ಣನವರು ೧೨ನೇ ಶತಮಾನದ ಸಾಮಾಜಿಕ ಸಂದರ್ಭವನ್ನು ಚಿತ್ರಿಸುವ, ಅದಕ್ಕೆ ಪ್ರತಿಕ್ರಿಯೆಯನ್ನು ತೋರಿಸುವ ವಚನವಾಗಿದೆ. ದಾನ–ಧರ್ಮಗಳನ್ನು ಮಾಡಿದರೆ ಸ್ವರ್ಗಪ್ರಾಪ್ತಿ ಎಂಬ ಹುಸಿಮೌಲ್ಯಗಳನ್ನು ಹುಟ್ಟುಹಾಕಿ ಜನರನ್ನು ವಂಚಿಸಿ ಮೋಸಗೊಳಿಸುವ ಕೆಲಸವು ಇತಿಹಾಸದುದ್ದಕ್ಕೂ ನಡೆದುಕೊಂಡು ಬಂದಿದೆ. ಅದರಲ್ಲೂ ದೇವರು–ಧರ್ಮ ಆಚರಣೆಯ ಹೆಸರಿನಲ್ಲಿ ಅಮಾಯಕರನ್ನು ಶೋಷಣೆ ಮಾಡುವ ವ್ಯವಸ್ಥೆಯ ವಿರುದ್ಧ ಬಂಡಾಯವೆದ್ದ ಬಸವಣ್ಣನು ಈ ವಚನದ ಮೂಲಕ ಹೇಗೆ ವಿರೋಧಿಸುತ್ತಾನೆ ಎಂಬುದನ್ನು ಎಂ.ಎಂ.ಕಲಬುರ್ಗಿ ಅವರು ಗುರ್ತಿಸುತ್ತಾರೆ.

ದಾನದ ಹೆಸರಿನಲ್ಲಿ ಮೋಸಕ್ಕೆ ಒಳಗಾಗಿ ಸಮಾಜದ ಎಲ್ಲಾ ವರ್ಗದವರು ಅಂದರೆ "ಕ್ಷತ್ರಿಯರು ಯುದ್ಧತೆರಿಗೆಯಿಂದ, ವೈಶ್ಯರು ವ್ಯಾಪಾರ ಒಕ್ಕಲುತನಗಳಿಂದ ಶೂದ್ರರು ಸೇವೆಯಿಂದ ಗಳಿಸಿದ ಸಂಪತ್ತಿನ ಬಹುಪಾಲು ದೇವ–ದ್ವಿಜ ಹೆಸರಿನಲ್ಲಿ ಭೂದಾನ, ಗೋದಾನ, ದೇವದಾನ, ರೂಪದಿಂದ ಅಪಾತ್ರನೆಲೆಗೆ ಹರಿದುಹೋಗುತ್ತಲಿದ್ದಿತು. ಶರಣರು ಇದರ ವಿರುದ್ಧ ಹೂಡಿರುವ ಬಂಡಾಯ ಧ್ವನಿಯ ಪ್ರಮುಖ ವಚನವಿದು"[೫೦] ಎಂದು ಗುರುತಿಸುತ್ತಾರೆ.

ದಾನವನ್ನು ಮೌಲ್ಯವಾಗಿ ಗುರುತಿಸುವ ಮತ್ತು ದಾನದ ಇತಿಹಾಸವನ್ನು ಎಂ.ಎಂ.ಕಲಬುರ್ಗಿ ಅವರು ಪ್ರಾಚೀನ ಕಾಲದಿಂದಲೇ ಗುರುತಿಸುವ ಕೆಲಸ ಮಾಡಿದ್ದಾರೆ. ಇದಕ್ಕೆ ನಿದರ್ಶನಗಳು ದಾನ ಶಾಸನಗಳಿಂದ ಉಲ್ಲೇಖಗಳನ್ನು, ಉದಾಹರಣೆಗಳನ್ನು ನೀಡುತ್ತಾರೆ. ಈ ದಾನಗಳು ಬಹುಮಟ್ಟಿಗೆ ವಸ್ತು, ಆಸ್ತಿಯ ರೂಪದಲ್ಲಿ ಬೆಲೆ ಬಾಳುವಂತಹ ಚರ ಮತ್ತು ಸ್ಥಿರಾಸ್ತಿಯಾಗಿದ್ದವು. ಇದನ್ನು ಪಡೆದು ಅನೇಕರು ವಂಚಿಸುತ್ತಿದ್ದರು. ಇದನ್ನರಿತ ಶಿವಶರಣರು ಇದನ್ನು ವಿರೋಧಿಸುತ್ತಾರೆ ಮತ್ತು ಇದಕ್ಕೆ ಪರ್ಯಾಯವಾಗಿ ದಾಸೋಹಮೌಲ್ಯವನ್ನು ಎತ್ತಿಹಿಡಿಯುತ್ತಾರೆ. ಶರಣರ ವಚನ ಚಳುವಳಿಯಲ್ಲಿ ಕಂಡುಬರುವ ಸಾಮಾನ್ಯ ಸಂಗತಿ ಎಂದರೆ ಯಾವುದೇ ಒಂದು ಪರಂಪರಾಗತ ಮೌಲ್ಯ ಮತ್ತು ಸಂಸ್ಕೃತಿಯನ್ನು ಧಿಕ್ಕರಿಸಿದ ಮೇಲೆ ಅದಕ್ಕೆ ಪರ್ಯಾಯವಾದ ಮೌಲ್ಯ ಮತ್ತು ಸಂಸ್ಕೃತಿಯನ್ನು ಸ್ಥಾಪಿಸುತ್ತಾರೆ. ಇದನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸುತ್ತಾರೆ.

ದೇವರ ಹೆಸರಿನಲ್ಲಿ ಇಂತಹ ದಾನ ಕಾರ್ಯದಲ್ಲಿ ತೊಡಗಿರುವ ದ್ವಿಜರ ಅಂಗಭೋಗ-ರಂಗಭೋಗಗಳನ್ನು ತಣಿಸುವ ಶೋಷಣೆಯ ಕೇಂದ್ರವಾಗಿ ದಾನವರ್ತುಲ ಸಿದ್ಧವಾಗಿ ನಿಂತಿದ್ದರ ವಿರುದ್ಧವಾಗಿ ಬಸವಣ್ಣನವರು ಬಂಡಾಯದ ಧ್ವನಿಯಲ್ಲಿ ದಾನಕಾರ್ಯ ನಿರ್ವಹಿಸುವವರ ಮುಖವ ನೋಡಲಾಗದು, ನುಡಿಯ ಕೇಳಲಾಗದು ಎಂದು ಮುಖಕ್ಕೆ ಹೊಡೆದಂತೆ ಧೈರ್ಯದಿಂದ ಅಲ್ಲಗಳೆಯುತ್ತಾರೆ.

ವಚನವು ಮುಂದುವರಿದು ಇಂತಹ ದಾನವನ್ನು ಕೊಟ್ಟು, ನಾನು ಮಾಡಿದ್ದು, ನಾನು ಕೊಟ್ಟದ್ದು, 'ಎನ್ನಿಂದಲೇ ಆಯಿತು' ಎಂದು ಬೀಗುವ ಮತ್ತು ಜಂಬಕೊಚ್ಚಿಕೊಳ್ಳುವ ಅವರಿಗೆ ಕೂಡಲಸಂಗಮದೇವನು ಅವರ ಬಾಯಿಯಲ್ಲಿ 'ಹುಡಿಮಣ್ಣು ಹೊಯ್ಯುತ್ತಾನೆ" ನಿಜವಾಗಿ ಕೊಟ್ಟದ್ದು ಆ ಶಿವನು. ಅವನು ಕೊಟ್ಟದ್ದನ್ನು ಸಾರ್ಥಕವಾಗಲು ಒಡೆಯನಿಗೆ ಸೇವಕ ಊಟ ನೀಡುವಲ್ಲಿಯಂತೆ ಏನೆಲ್ಲವನ್ನು 'ಅಹಂ' ಭಾವರಹಿತವಾಗಿ ನೀಡಬೇಕು. ಅದು ನಿಜವಾದ ದಾಸೋಹ ಎಂಬುದನ್ನು ಬಸವಣ್ಣ ತಿಳಿಸುತ್ತಾನೆ. ಇದು ನಿಜವಾದ ವೀರಶೈವ ತತ್ವದ ಪ್ರಮುಖವಾದ ಆಚಾರವಾಗಿದೆ ಎಂಬುದನ್ನು ಎಂ.ಎಂ.ಕಲಬುರ್ಗಿ ಅವರು ತಾತ್ವಿಕವಾಗಿ ಈ ವಚನವನ್ನು ಕುರಿತು ಚರ್ಚಿಸಿದ್ದಾರೆ.

"ಲಿಂಗವಶದಿಂದ ಬಂದ ನಡೆಗಳು,
ಲಿಂಗವಶದಿಂದ ಬಂದ ನುಡಿಗಳು,
ಲಿಂಗವಂತರು ತಾವು ಅಂಜಲೇಕೆ?
ಲಿಂಗವಿರಿಸಿದಂತಿಪ್ಪುದಲ್ಲದೆ,
ಕೂಡಲಸಂಗಮದೇವ ಭಕ್ತರಭಿಮಾನ ತನ್ನದೆಂಬನಾಗಿ"[೮೧]

ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಮಾಹೇಶ್ವರಸ್ಥಲದಿಂದ ಆಯ್ದುಕೊಂಡಿದ್ದಾರೆ.

ಬಸವಣ್ಣ ತನ್ನ ಅನುಯಾಯಿಗಳಿಗೆ ನೀಡಿದ ಧೈರ್ಯ ಸಂದೇಶ ಮತ್ತು ಎಚ್ಚರಿಕೆಯ ಸಂದೇಶವಾಗಿ ಎಂ.ಎಂ.ಕಲಬುರ್ಗಿ ಅವರು ವ್ಯಾಖ್ಯಾನ ಮಾಡಿದ್ದಾರೆ. ಹೊಸ ಧಾರ್ಮಿಕ ಕ್ರಾಂತಿಯನ್ನು ಉಂಟು ಮಾಡಿದ ವಚನ ಚಳುವಳಿಯ ಉದಾರವಾದ ಧಾರ್ಮಿಕ ತತ್ವಗಳಿಗೆ ಮನಸೋತು ಅನೇಕರು ಲಿಂಗದೀಕ್ಷೆಯನ್ನು ಪಡೆದು ಶರಣರಾದದ್ದು ಚಾರಿತ್ರಿಕ ಸತ್ಯವಾಗಿದೆ. ಆದರೆ ಆ ಸಂದರ್ಭದಲ್ಲಿ ಇದನ್ನು ವಿರೋಧಿಸುವ ಮೂಲಭೂತವಾದಿಗಳು ಸನಾತನ ಧಾರ್ಮಿಕ ಅನುಯಾಯಿಗಳು ಸಂಪ್ರದಾಯ ಶರಣರು ಇದ್ದಿರಲೇಬೇಕು. ಅವರ ಪ್ರತಿಗಾಮಿ ಧೋರಣೆಗೆ ಶಿವಶರಣರು ಹೆದರದಂತೆ ಧೈರ್ಯ ತುಂಬುವ ಸಂದೇಶವಾಗಿ ಬಸವಣ್ಣನವರ ಈ ವಚನದಲ್ಲಿ ಎಂ.ಎಂ.ಕಲಬುರ್ಗಿ ಅವರು ಗುರುತಿಸುತ್ತಾರೆ.

'ಲಿಂಗ' ಎಂಬ ಪದವು ಪ್ರಧಾನವಾಗಿ ಕಂಡುಬರುತ್ತದೆ. ಇದನ್ನು ಪ್ರಾಣಲಿಂಗ, ಭಾವಲಿಂಗ ನೆಲೆಯಲ್ಲಿ ಗುರ್ತಿಸಿ ಇಂತಹ ಸಿದ್ಧಿಯನ್ನು ಹೊಂದಿದವನು ಅಂಗವಂತನಲ್ಲ ಅವನು ಲಿಂಗವಂತ. ಆಂತರ್ಯದ ಲಿಂಗವೇ ಇವರ ಜೀವನದ ಬಾಹ್ಯವ್ಯಾಪಾರದ ಕೇಂದ್ರಶಕ್ತಿ ಎಂದು ಎಂ.ಎಂ. ಕಲಬುರ್ಗಿ ಅವರು ವಚನದ ಕೇಂದ್ರದ ಸತ್ವವನ್ನು ಎತ್ತಿಹಿಡಿಯುತ್ತಾರೆ. ಇಂತಹ ಲಿಂಗಸಾಕ್ಷಿಯಾಗಿ ನಡೆಯುವವರು ಯಾರಿಗೂ ಅಂಜಬಾರದು. ಯಾರಿಗೂ ಅಂಜಲಾರರು ಎಂಬುದನ್ನು ಬಸವಣ್ಣ ತನ್ನ ಸಂದೇಶವನ್ನು ನೀಡುತ್ತಿದ್ದಾನೆ. ಇಂತಹ ಮಾನಸಿಕ ಧೈರ್ಯ ಬಸವಣ್ಣನಲ್ಲಿಯೇ ಇತ್ತು. ಅಂದರೆ ಬಸವಣ್ಣನು ಬಿಜ್ಜಳನ ಸಾರ್ವಭೌಮತ್ವಕ್ಕೆ ಅಂಜದೆ ತನ್ನ ದಿಟ್ಟತನ ಪ್ರದರ್ಶಿಸಿದನು. ಇದು ಬಸವಣ್ಣನ ಮೂಲಸ್ಥಾಯಿಯಾಗಿತ್ತು. ಅದನ್ನು ಇತರ ಶರಣರಲ್ಲಿ ಮೂಡಿಸುವ ಉದ್ದೇಶ ಈ ವಚನ ರಚನೆಯಲ್ಲಿ ಅಡಗಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸುತ್ತಾರೆ.

ಈ ವಚನವನ್ನು ಎಂ.ಎಂ.ಕಲಬುರ್ಗಿ ಅವರು ವೀರಶೈವ ಧಾರ್ಮಿಕ ತಾತ್ವಿಕ ಚೌಕಟ್ಟಿನಲ್ಲಿ ವಿವರಿಸುತ್ತ, ಪ್ರಸ್ತುತ ವಚನದಲ್ಲಿ 'ನಡೆ', 'ನುಡಿ' ಪದಗಳನ್ನು ಬಳಸಲಾಗಿದೆ. ಲಿಂಗನಿಷ್ಠನಾದವನ ಅಂತರಂಗದ ಅರಿವು ಬಹಿರಂಗದಲ್ಲಿ ಪ್ರಕಟವಾಗುವುದು. ಕೇವಲ 'ನಡೆ' ಮಾಧ್ಯಮದಿಂದ, ನುಡಿ ಮಾಧ್ಯಮದಿಂದ, ಆದ್ದರಿಂದ ವೀರಶೈವವು ಈ ಎರಡರ ಶುದ್ಧಿಯನ್ನು ಅಪೇಕ್ಷಿಸುವುದೆಂದು ಹೇಳುವ ಮೂಲಕ ಅದಕ್ಕೊಂದು ಧಾರ್ಮಿಕ ಚೌಕಟ್ಟನ್ನು ನಿರ್ಮಿಸಿ 'ಲಿಂಗ' ಎಂಬುದು ಅಂತರಂಗಶುದ್ಧಿ. 'ನಡೆ–ನುಡಿ' ಎಂಬುದು ಬಹಿರಂಗಶುದ್ಧಿ ಎಂದು ಗುರ್ತಿಸಿ ಹೀಗೆ ಉಭಯ ಶುದ್ಧಿಯನ್ನು ಸಾಧಿಸುವವರು ಯಾರಿಗೂ ಅಂಜಬಾರದೆಂಬ ವೀರಶೈವ ತತ್ವವನ್ನು ಪ್ರತಿಪಾದಿಸುತ್ತದೆ ಎಂದು ಹೇಳುವ ಎಂ.ಎಂ.ಕಲಬುರ್ಗಿ ಅವರು ಅದಕ್ಕೆ ಧಾರ್ಮಿಕ ಪರಿವೇಷವನ್ನು ತೊಡಿಸುತ್ತಾರೆ. ಆದರೆ ಇದು ಸಾಮಾಜಿಕ ಮೌಲ್ಯವಾಗಿದೆ. ಹೀಗಾಗಿ ಎಂ.ಎಂ.ಕಲಬುರ್ಗಿ ಅವರ ಈ ವಚನ ವಿಶ್ಲೇಷಣೆಯ ಒಟ್ಟು ಆಶಯ ವೀರಶೈವ ಧಾರ್ಮಿಕ ಚೌಕಟ್ಟಿನ ಪರಿಧಿಯ ಒಳಗೇ ಗಿರಕಿ ಹೊಡೆಯುತ್ತಿದೆ. ಯಾಕೆಂದರೆ ಅಂತರಂಗ ಬಹಿರಂಗ ಶುದ್ಧಿಯನ್ನೇ ಹೊಂದಿದ ಯಾವುದೇ ವ್ಯಕ್ತಿ ಯಾವ ಪ್ರಭುತ್ವಕ್ಕಾಗಲಿ, ಧರ್ಮಕ್ಕಾಗಲಿ ಯಾವುದಕ್ಕೂ ಅಂಜಬೇಕಾದ ಪ್ರಮೇಯವೇ ಇಲ್ಲ. ಇತಿಹಾಸದಲ್ಲಿ ಸಾಕ್ರೆಟೀಸ್, ಗಾಂಧಿ ಮುಂತಾದವರು ಪ್ರಭುತ್ವವನ್ನೇ ಮೆಟ್ಟಿ ನಿಲ್ಲಲು ಅವರ ನಡೆ–ನುಡಿ, ತತ್ವ–ಸಿದ್ಧಾಂತಗಳೇ ಬಲವಾದ ಅಸ್ತ್ರಗಳಾಗಿರುವುದು ತಿಳಿದಿರುವ ಸಂಗತಿಯಾಗಿದೆ.

"ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ, ನಿಮ್ಮ ಧರ್ಮ
ಬೊಬ್ಬಿಡದಿರಿಂ ಭೋ, ನಿಮ್ಮ ಧರ್ಮ
ಆಱಿಡದಿರಿಂ ಭೋ, ನಿಮ್ಮ ಧರ್ಮ

ಅಲ್ಲಿ ಉಂಬರೆ ಸಂಗ, ಇಲ್ಲಿ ಉಂಬರೆ ಸಂಗ

ಕೂಡಲಸಂಗಮದೇವ ಏಕೋಭಾವ"೮೨

ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಪ್ರಾಣಲಿಂಗಿಯ ಮಾಹೇಶ್ವರ ಸ್ಥಲದಿಂದ ಆಯ್ದುಕೊಂಡಿದ್ದಾರೆ.

ರಾಜಪ್ರಭುತ್ವದ ಸಂದರ್ಭದ ರಾಜ್ಯದ ಪ್ರಮುಖ ಆದಾಯ ಮೂಲ 'ಗೋವುಗಳು' ಇದನ್ನು ಪ್ರಾಚೀನ ಶಾಸನಗಳಲ್ಲಿ ಮತ್ತು ತುರುಗೋಳ್ ಸಂಕಥನ ಗೋಗ್ರಹಣ ಪ್ರಸಂಗದಲ್ಲಿ ಗಮನಿಸಿದರೆ ಅರ್ಥವಾಗುತ್ತದೆ. ಈ ಗೋವುಗಳಿಗಾಗಿ ರಾಜ–ರಾಜರುಗಳ ಮಧ್ಯೆ ದೊಡ್ಡ ದೊಡ್ಡ ಯುದ್ಧಗಳು ನಡೆದು ಆ ಯುದ್ಧದಲ್ಲಿ ಅನೇಕ ಅಮಾಯಕ ಪ್ರಜೆಗಳು ಮಡಿಯುತ್ತಿದ್ದರು. ಇಂತಹ ಯುದ್ಧದಲ್ಲಿ ಹೋರಾಡಿ ಮಡಿದರೆ ವೀರಸ್ವರ್ಗ ಪ್ರಾಪ್ತಿ ಎಂಬ ಮೌಲ್ಯವನ್ನು ಪ್ರತಿಷ್ಠಾಪಿಸಲಾಗಿತ್ತು. ಇಂತಹ ಹುಸಿ ಮೌಲ್ಯವನ್ನು, ಪೊಳ್ಳು ಮೌಲ್ಯವನ್ನು ನಿರಾಕರಿಸಿ ಅದರ ಸ್ಥಾನದಲ್ಲಿ ಬೇರೊಂದು ಹೊಸ ಮೌಲ್ಯವನ್ನು ಪ್ರತಿಷ್ಠಾಪಿಸುವ ಮನೋಭಾವ ಈ ವಚನದಲ್ಲಿ ಗುರುತಿಸಬಹುದು. ಇಂತಹ ತತ್ವ ಚಿಂತನೆಯನ್ನು ಎಂ.ಎಂ.ಕಲಬುರ್ಗಿ ಅವರು ವೀರಶೈವ ಧಾರ್ಮಿಕ ನೆಲೆಯಲ್ಲಿ ವಿಶ್ಲೇಷಿಸುತ್ತಾರೆ.

ಹಸುವನ್ನು ಕದ್ದ ಕಳ್ಳರ ಜೊತೆಗೆ ಯುದ್ಧ ಮಾಡಿ ಕೊರಗದೆ ಅಳದೆ, ಬೊಬ್ಬಿಡದೆ ಆಕಳ ಕರುವನ್ನು ತನ್ನ ತಾಯಿಯನ್ನು ಸೇರಲು ಬಿಟ್ಟುಬಿಡುವುದು ಈ ಮೂಲಕ ಯುದ್ಧ ಮೌಲ್ಯವನ್ನು ನಿರಾಕರಿಸಿದಂತಾಗುತ್ತದೆ. ಅಷ್ಟು ಮಾತ್ರವಲ್ಲ ಎಲ್ಲಾ ವಸ್ತು ಸಂಪತ್ತಿನ ಮೇಲೆ ಅಧಿಕಾರವಿರುವುದು ದೇವರಿಗೆ ಮಾತ್ರ ವ್ಯಕ್ತಿಗಲ್ಲ. ವ್ಯಕ್ತಿ ಅದನ್ನು ಭೋಗಿಸಬಹುದೇ ಹೊರತು ಅದರ ಮೇಲಿನ ಅಧಿಕಾರವಿಲ್ಲ. ದೇವರ ಕುಟುಂಬದ ವಸ್ತುವನ್ನು ಈ ಸದಸ್ಯ ಭೋಗಿಸಿದರೇನು. ಆ ಸದಸ್ಯ ಭೋಗಿಸಿದರೇನು ಎಂಬ ತತ್ವವನ್ನು ಎಂ.ಎಂ.ಕಲಬುರ್ಗಿ ಅವರು ಪ್ರತಿಪಾದಿಸಿ ಸಾಮಾಜಿಕ ಮೌಲ್ಯವನ್ನು ಎತ್ತಿಹಿಡಿಯುತ್ತಾರೆ.

ಗೋವನ್ನು ದೇವರೆಂದು ಬಗೆದಿರುವ ಸನಾತನ ಮೌಲ್ಯಗಳು ಈ ಗೋವಿಗಾಗಿ ಮನುಷ್ಯ–ಮನುಷ್ಯರ ನಡುವೆ ನಡೆಯುವ ಯುದ್ಧ, ದ್ವೇಷ, ಪ್ರಾಣತ್ಯಾಗ, ಬಲಿದಾನಗಳನ್ನು ನಿರಾಕರಿಸುವ ಪ್ರಯತ್ನ ಹಾಗೂ ದೇವರ ಹೆಸರಿನಲ್ಲಿ ನಡೆಯುವ ಅನ್ಯಾಯ ಅನಾಚಾರವನ್ನು ಈ ಮೂಲಕ ಧಿಕ್ಕರಿಸುವ ವಚನದ ಅಂತರಾರ್ಥವನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸುತ್ತಾರೆ.

ವಚನದ ಎರಡನೇ ಭಾಗದಲ್ಲಿ "ಅಲ್ಲಿ ಉಂಬರೆ ಸಂಗ ಇಲ್ಲಿ ಉಂಬರೆ ಸಂಗ" ಎನ್ನುವ ಮಾತು ಅರ್ಥಹೀನ ಮೌಲ್ಯ ನಿರಾಕರಣೆಯ ನಂತರ "ದಾಸೋಹ ಮೌಲ್ಯ"ವನ್ನು ವಚನವು ಸ್ಥಾಪಿಸುತ್ತದೆ. ಇದು ವೀರಶೈವ ಧರ್ಮದ ತತ್ವಚಿಂತನೆಯ ನೆಲೆಯಲ್ಲಿ ರೂಪ

ಗೊಂಡಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸುತ್ತಾರೆ. ಇದರಿಂದ ಗೋವುಗಳನ್ನು ಸೆರೆಹಿಡಿದ ಕಳ್ಳರಲ್ಲಿಯೂ ಇಂತಹ ಅಹಿಂಸಾ ಪರವಾದ ತತ್ವ ಪ್ರಣಾಳಿಯು ಅವರನ್ನು ತಿದ್ದುವ ಕೆಲಸ ಮಾಡುತ್ತದೆ. ಅವರೂ ಸಹ 'ಸಂಗ' ಆಗುತ್ತಾರೆ ಎನ್ನುವ ಆಶಾವಾದವನ್ನು ಎಂ.ಎಂ.ಕಲಬುರ್ಗಿ ಅವರು ವ್ಯಕ್ತಪಡಿಸಿದ್ದಾರೆ.

ಒಟ್ಟಿನಲ್ಲಿ ಆ ಕಾಲದ ಗೋಗ್ರಹಣ ಪ್ರಸಂಗದ ಹೋರಾಟದ ಮೌಲ್ಯವನ್ನು ಕುರಿತು ಪ್ರತಿಭಟಿಸುವ ವಚನವಾಗಿರುವ ಈ ವಚನವು ಆ ಮೌಲ್ಯವನ್ನು ಧಿಕ್ಕರಿಸಿ ಉತ್ತರಾರ್ಧದಲ್ಲಿ ವೀರಶೈವ ದಾಸೋಹ ಮೌಲ್ಯವನ್ನು ಎತ್ತಿ ಹಿಡಿಯುತ್ತದೆ ಎಂದು ಎಂ.ಎಂ.ಕಲಬುರ್ಗಿ ಅವರು ಹೇಳುತ್ತಾರೆ.

"ಕೃತಯುಗದಲ್ಲಿ ಕೇತಾರವೆಂಬ ಮೂಲಸ್ಥಾನ,
ತ್ರೇತಾಯುಗದಲ್ಲಿ ವಾರಣಾಸಿಯೆಂಬ ಮೂಲಸ್ಥಾನ,
ದ್ವಾಪರದಲ್ಲಿ ವಿರೂಪಾಕ್ಷನೆಂಬ ಮೂಲಸ್ಥಾನ,
ಕಲಿಯುಗದಲ್ಲಿ ಪರ್ವತವೆಂಬ ಮೂಲಸ್ಥಾನ.
ನಾನಾ ಸ್ಥಾನಂಗಳ ಮುಟ್ಟದೆ
ಜಂಗಮವೆ ಲಿಂಗವೆಂದು ನಂಬಿದೆ ಕೂಡಲಸಂಗಮದೇವಾ"[೮೩]

ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಭಕ್ತನ ಭಕ್ತಸ್ಥಲದಿಂದ ಆಯ್ದುಕೊಂಡಿದ್ದಾರೆ.

ಈ ವಚನವು ಬಸವಣ್ಣನ ಪ್ರಮುಖ ತತ್ವವಾದ "ಸ್ಥಾವರಲಿಂಗ"ವನ್ನು ತಿರಸ್ಕರಿಸಿ 'ಜಂಗಮಲಿಂಗ'ದ ಮಹತ್ವವನ್ನು ಪ್ರತಿಪಾದಿಸುತ್ತದೆ ಮತ್ತು ಇಂದಿನ ಗುರು ಪರಂಪರೆಯ ಪೀಠಗಳ ಇತಿಹಾಸದ ಬಗ್ಗೆ ಬೆಳಕು ಚೆಲ್ಲುತ್ತದೆ ಎಂದು ಆರಂಭದಲ್ಲಿ ಎಂ.ಎಂ.ಕಲಬುರ್ಗಿ ಅವರು ವ್ಯಾಖ್ಯಾನವನ್ನು ಮಾಡಿ ನಂತರ ಅದಕ್ಕೆ ಹೊಂದುವಂತೆ ವಿಶ್ಲೇಷಣೆಯನ್ನು ಮಾಡುತ್ತಾರೆ.

ಕೇತಾರ, ವಾರಣಾಸಿ, ವಿರೂಪಾಕ್ಷ(ಹಂಪಿ), ಪರ್ವತ(ಶ್ರೀಶೈಲ) ಇವು ಶೈವ ಪರಂಪರೆಯ ಮೂಲ ಸ್ಥಾನವಾಗಿದ್ದವೆಂದು ಬಸವಣ್ಣನವರ ಮತವಾಗಿದ್ದು ತಿಳಿದುಬರುತ್ತದೆ. ಆದರೆ ಎಂ.ಎಂ. ಕಲಬುರ್ಗಿ ಅವರು ಮೊದಲ ಮೂರು ಸ್ಥಾನಗಳು(ಕೇತಾರ, ವಾರಣಾಸಿ, ಹಂಪಿ) ಮೂಲಸ್ಥಾನ ವಾಗಿದ್ದವೋ ಇಲ್ಲವೋ ಎಂದು ಅನುಮಾನಿಸುತ್ತಾರೆ. ಆದರೆ ಶ್ರೀಶೈಲ ಮಾತ್ರ ಶೈವರಲ್ಲಿ ಮೂಲಸ್ಥಾನವಾಗಿ ಮೆರೆಯುತ್ತಿದ್ದಿತೆಂದು ಹೇಳುವ ಮಾತಿನ ಧಾಟಿ ಶೈವಪರಂಪರೆಯ ಬಗ್ಗೆ ಎಂ.ಎಂ.ಕಲಬುರ್ಗಿ ಅವರಿಗಿದ್ದ ತಿರಸ್ಕಾರದ ಮನೋಭಾವವನ್ನು ತೋರಿಸುತ್ತದೆ ಹಾಗೂ ವೀರಶೈವ ಮತದ ಪರವಾಗಿರುವ ಅವರ ನಿಲುವು, ಅವರು ಕೊಡುವ ಸಮರ್ಥನೆಯಲ್ಲಿ ಕಾಣಬಹುದಾಗಿದೆ.

ಶ್ರೀಶೈಲ ಮೂಲಸ್ಥಾನದಿಂದಲೇ ಕಾಳಾಮುಖ ಶಿವೋಪಾಸಕ ಪರಂಪರೆಯ ಇತಿಹಾಸವನ್ನು ಗುರುತಿಸುವ ಎಂ.ಎಂ.ಕಲಬುರ್ಗಿ ಅವರು ಇದೇ ಕರ್ನಾಟಕಾಂಧ್ರ ಪ್ರದೇಶಗಳ ತುಂಬ ತನ್ನ ಶಾಖೆಗಳನ್ನು ಚಾಚಿ ಕಾಳಾಮುಖ ಶೈವರಿಗೆ ಶ್ರೀಶೈಲವೇ ಪುಣ್ಯಕ್ಷೇತ್ರವೆನಿಸಿದ್ದರೆ, ಬಸವಣ್ಣನವರಿಗೆ ಮಾತ್ರ ಅದರ ಬಗೆಗೆ ಉಪೇಕ್ಷೆ. ಆದ್ದರಿಂದಲೇ ಪರಿಸರದ ಪ್ರಜಾಕೋಟಿಯೆಲ್ಲ ಶ್ರೀಶೈಲ ಸ್ಥಾವರಲಿಂಗದ ಕಡೆಗೆ ಮುಖ ಮಾಡಿದರೆ ಬಸವಣ್ಣ ಅದನ್ನು ಬಹಿರಂಗವಾಗಿ ನಿರಾಕರಿಸಿ, ಜಂಗಮಲಿಂಗದ ಕಡೆಗೆ ಮುಖಮಾಡಿದ್ದಾನೆ ಎನ್ನುವ ನಿರ್ಣಯಕ್ಕೆ ಬರುತ್ತಾರೆ.

"ನಾನು ಈ ಸ್ಥಾನಂಗಳ ಮುಟ್ಟದೆ ಜಂಗಮವೇ ಲಿಂಗವೆಂದು ನಂಬಿದೆ ಕೂಡಲಸಂಗಮ ದೇವಾ" ಎಂಬ ಭಾಗ ವೀರಶೈವ ಪರವಾಗಿದೆ. ಅಲ್ಲದೆ ಸ್ಥಾವರಲಿಂಗ ನಿರಾಕರಿಸಿ ಜಂಗಮಲಿಂಗವನ್ನು ಎತ್ತಿ ಹಿಡಿಯುತ್ತಾರೆ. ಇದು ಕಾಳಾಮುಖ ಶೈವಕ್ಕೂ ಲಿಂಗವಂತಕ್ಕೂ ಇರುವ ಮೂಲಭೂತ ವ್ಯತ್ಯಾಸಗಳಲ್ಲಿ ಇದೂ ಒಂದು ಎಂದು ಎಂ.ಎಂ.ಕಲಬುರ್ಗಿ ಅವರು ಗುರುತಿಸುತ್ತಾರೆ.

ಒಟ್ಟಾರೆ ಎಂ.ಎಂ.ಕಲಬುರ್ಗಿ ಅವರು ಈ ವಚನದ ಅಂತರ್ ಸತ್ವವನ್ನು ವೀರಶೈವ ಹಾಗೂ ಜಂಗಮಲಿಂಗದ ಹಿನ್ನೆಲೆಯಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ. ಮುಂದುವರಿದು ಹೇಳುವುದಾದರೆ ಶೈವ ಅಥವಾ ಕಾಳಾಮುಖ ಶೈವಧರ್ಮವನ್ನು ನಿರಾಕರಿಸಿ ವೀರಶೈವ ಧರ್ಮದ ಸಾತ್ವಿಕ ಹಾಗೂ ಸತ್ವವನ್ನು ಎತ್ತಿಹಿಡಿಯುವ ಮನೋಭಾವ ಎಂ.ಎಂ.ಕಲಬುರ್ಗಿ ಅವರ ವಚನ ವಿಶ್ಲೇಷಣೆಯಲ್ಲಿ ಕಾಣಬಹುದಾಗಿದೆ.

"ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ
ಆ ಪೂಜೆಯು, ಆ ಮಾಟವು
ಚಿತ್ರದ ರೂಹು ಕಾಣಿರಣ್ಣ, ಚಿತ್ರದ ಕಬ್ಬು ಕಾಣಿರಣ್ಣ.
ಅಪ್ಪಿದರೆ ಸುಖವಿಲ್ಲ; ಮೆಲಿದರೆ ರುಚಿಯಿಲ್ಲ
ಕೂಡಲಸಂಗಮದೇವಾ, ನಿಜವಿಲ್ಲದವನ ಭಕ್ತಿ."[೭೪]

ಎಂ.ಎಂ.ಕಲಬುರ್ಗಿ ಅವರು ಈ ವಚನವನ್ನು ಭಕ್ತನ ಜ್ಞಾನಸ್ಥಲದಿಂದ ಆಯ್ದುಕೊಂಡಿದ್ದಾರೆ.

ಪೂಜೆ ಮತ್ತು ಮಾಟ(ಕೆಲಸ) ಇವುಗಳಿಗೆ ವೀರಶೈವ ಧರ್ಮದಲ್ಲಿ ಹೆಚ್ಚಿನ ಮಹತ್ವವಿದೆ. ಅದರಲ್ಲೂ ಪೂಜೆಗಿಂತ ಮಾಟಕ್ಕೆ(ಕೆಲಸ) ಹೆಚ್ಚಿನ ಮಹತ್ವವಿದೆ. ವೀರಶೈವ ಧರ್ಮದ ಮೂಲಭೂತ ಘೋಷಣೆಯೇ 'ಕಾಯಕತತ್ವ'. ದೇವರನ್ನು ಕಾಣಬಯಸುವ ಭಕ್ತಿ ಪೂಜೆಪುನಸ್ಕಾರಗಳಿಗಿಂತಲೂ ಮಾಡುವ ಕೆಲಸದಲ್ಲಿ ದೈವತ್ವವನ್ನು ಕಾಣುವುದು. ಆ ಮೂಲಕ ಮುಕ್ತಿಯ ಮಾರ್ಗವನ್ನು

ಪಡೆಯುವ ತಾತ್ವಿಕ ಸಿದ್ಧಾಂತವು ವೀರಶೈವ ಧರ್ಮದ ಮೂಲ ನೆಲೆಯಾಗಿದೆ. ಈ ನೆಲೆಯಲ್ಲಿಯೇ ಮೇಲಿನ ವಚನವನ್ನು ಎಂ.ಎಂ.ಕಲಬುರ್ಗಿ ಅವರು ವಿಶ್ಲೇಷಿಸಿದ್ದಾರೆ.

ಒಲವಿನಿಂದ ಮಾಡುವ ಪೂಜೆ ಹಾಗೂ ಒಲವಿನಿಂದ ಮಾಡುವ ನೇಹದ ಮಾಟ(ಕೆಲಸ) ದೇವತ್ವವನ್ನು ಕಾಣುವ ಮತ್ತು ಭಕ್ತಿಯ ಮೈ ಪಡೆಯುವ ಸಾರ್ಥಕತೆ ಲಭಿಸುತ್ತದೆ. ಇಲ್ಲವಾದರೆ ಎರಡೂ ವ್ಯರ್ಥವಾದ ಪ್ರಯತ್ನವೆಂಬುದನ್ನು ಹೇಳುತ್ತಾರೆ.

"ನಿಜಭಕ್ತಿಯ ಒಲವಿನ ಮೂಲಕ ಪೂಜೆಯಲ್ಲಿ 'ನೇಹದ' ಮೂಲಕ ಮಾಟದಲ್ಲಿ ಮೈಪಡೆಯುತ್ತದೆ, ಮೈಪಡೆಯಬೇಕು. ಈ ಒಲವಿನ ಪೂಜೆ ಸ್ತ್ರೀಸ್ಪರ್ಶದಂತೆ, ನೇಹದ ಮಾಟ ಕಬ್ಬಿನ ರುಚಿಯಂತೆ ಸಾರ್ಥಕ. ಆದರೆ ಒಲವಿಲ್ಲದ ಪೂಜೆ ಚಿತ್ರದ ಸ್ತ್ರೀಯ ಸ್ಪರ್ಶದಂತೆ, ನೇಹವಿಲ್ಲದ ಮಾಟ ಚಿತ್ರದ ಕಬ್ಬಿನ ರುಚಿಯಂತೆ ವ್ಯರ್ಥ"[೮೫] ಎನ್ನುವ ವಿಶ್ಲೇಷಣೆಯು ಇಡೀ ವಚನದ ತಾತ್ವಿಕ ರೂಪವನ್ನು ಅದರ ಅಂತರ್‌ದೃಷ್ಟಿಯನ್ನು ಎತ್ತಿಹಿಡಿಯುತ್ತದೆ. ಅಲ್ಲದೆ ಬಸವಣ್ಣನವರು ಈ ವಚನದಲ್ಲಿ ಭಕ್ತಿಯ ಸಾತ್ವಿಕಥೆಗೆ ತಂದಿರುವ ಹೋಲಿಕೆಗಳಾದ ಸ್ತ್ರೀಸ್ಪರ್ಶದ ಹೋಲಿಕೆ ರತಿಸುಖವನ್ನು ಹಾಗೂ ಕಬ್ಬಿನ ರುಚಿಯ ಹೋಲಿಕೆಯು ದೈಹಿಕ ಸುಖವನ್ನು ಸಮರ್ಥಿಸುವುದು ಔಚಿತ್ಯಪೂರ್ಣವಾಗಿದೆ ಎಂಬುದನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸು ತ್ತಾರೆ. ಇಲ್ಲಿ ಪೂಜೆಗೆ ಸ್ತ್ರೀಸ್ಪರ್ಶವನ್ನು ಮಾಟಕ್ಕೆ ಕಬ್ಬಿನ ರುಚಿಯನ್ನು ಹೋಲಿಕೆಯಾಗಿ ಕೊಟ್ಟಿರುವುದು ಶರಣಸತಿ-ಲಿಂಗಪತಿ ಎಂಬುದು ವೀರಶೈವ ಭಕ್ತಿತತ್ವದ ಮೂಲ ಸತ್ವ ಎಂದು ಗುರುತಿಸಿದ್ದಾರೆ. ಇಲ್ಲಿ ಅಪ್ಪುಗೆಯ ಸುಖ ಮಾನಸಿಕ, ಮೆಲ್ಲುವ ಸುಖ ದೈಹಿಕ, ಒಂದು ಮಾನಸಿಕ ಹಸಿವನ್ನು ನೀಗಿಸದರೆ, ಇನ್ನೊಂದು ದೇಹದ ಹಸಿವನ್ನು ಇಂಗಿಸುತ್ತದೆ ಎನ್ನುವ ನಿಲುವಿಗೆ ಬರುತ್ತಾರೆ. ಹೀಗೆ ಎಂ.ಎಂ.ಕಲಬುರ್ಗಿ ಅವರು ವೀರಶೈವ ಧರ್ಮದ ಚೌಕಟ್ಟಿನ ಒಳಗಡೆ ಇಡೀ ವಚನದ ಆಶಯವನ್ನು ಹಾಗೂ ಬಸವಣ್ಣನವರ ರಚನೆಯ ಹಿಂದಿರುವ ಉದ್ದೇಶ ಹಾಗೂ ಬಸವಣ್ಣನವರ ತತ್ವಸಿದ್ಧಾಂತದ ಎಲ್ಲವನ್ನು ಏಕಕಾಲದಲ್ಲಿ ತಮ್ಮ ವಿಶ್ಲೇಷಣೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

ಎಂ.ಎಂ.ಕಲಬುರ್ಗಿ ಅವರ ಈ ಎಲ್ಲಾ ವಚನಗಳ ವಿಶ್ಲೇಷಣೆಯಲ್ಲಿ ಮುಖ್ಯವಾಗಿ ಕಂಡುಬರುವ ಅಂಶಗಳೆಂದರೆ ವೈದಿಕಶಾಹಿ ನಿರಾಕರಣೆ, ಜಾತಿನಿರಾಕರಣೆ ಹಾಗೂ ಧಾರ್ಮಿಕ ಸುಧಾರಣೆ, ಸಾಮಾಜಿಕ ಸುಧಾರಣೆಯೇ ಕಂಡುಬರುತ್ತದೆ. ಬಸವಣ್ಣನ ಮುಖ್ಯ ಉದ್ದೇಶ ಸಮಾಜದಲ್ಲಿ ಸಮಾನತೆ ತರುವುದಾಗಿತ್ತು ಎಂಬುದನ್ನು ಎಂ.ಎಂ.ಕಲಬುರ್ಗಿ ಅವರು ಸೂಕ್ಷ್ಮವಾಗಿ ವಿಶ್ಲೇಷಿಸಿರುವುದನ್ನು ನಾವು ಇಲ್ಲಿ ಗಮನಿಸಬಹುದಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಮೇಲಿನ ಲೇಖನಗಳ ಮೂಲಕ ವಚನಕಾರರು ಪ್ರತಿಪಾದಿಸಿದ ತಾತ್ವಿಕತೆಯನ್ನು ಹಾಗೂ ಸಮಾಜಮುಖಿ ಆಶಯಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ.

**೪.೨. ವಚನಕಾರರ ಅಧ್ಯಯನ**

ವಚನಕಾರರ ಕಾಲ-ದೇಶ ಕುರಿತಾದ ಇತಿವೃತ್ತವನ್ನು ಹಾಗೂ ಮೂಲವನ್ನು ಶೋಧಿಸುವ ಹಿನ್ನೆಲೆಯಲ್ಲಿ ನಡೆಸಿದ ಅಧ್ಯಯನವನ್ನು ವಚನಕಾರರ ಕುರಿತು ಅಧ್ಯಯನವೆಂದು ಪರಿಗಣಿಸಲಾಗಿದೆ. ಇಲ್ಲಿ ಎಂ.ಎಂ.ಕಲಬುರ್ಗಿ ಅವರ ವಚನ ಅಧ್ಯಯನದ ವ್ಯಾಪ್ತಿಯನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಅವುಗಳಲ್ಲಿ ಈ ಕೆಳಗಿನ ಲೇಖನಗಳನ್ನು ಅನುಲಕ್ಷಿಸಬಹುದಾಗಿದೆ.

೧. ದೇವೂರ ದಾಸಿಮಯ್ಯ

೨. ದೇವರ ದಾಸಿಮಯ್ಯನಿಂದ ಜೇಡರ ದಾಸಿಮಯ್ಯ ಭಿನ್ನ

೩. ದೇವರ ದಾಸಿಮಯ್ಯ-ಜೇಡರ ದಾಸಿಮಯ್ಯ

೪. ಜೇಡರ ದಾಸಿಮಯ್ಯನ ಗ್ರಾಮ: ಮುದನೂರು? ಗೊಬ್ಬೂರು

೫. ಅಲ್ಲಮಪ್ರಭುವಿನ ಜನ್ಮಗ್ರಾಮ

೬. ಅಲ್ಲಮನ ಚರಿತ್ರೆಯ ಬೆಳವಣಿಗೆ ರೀತಿಗಳು

೭. ಬಸವಣ್ಣನವರು ಗಮನಿಸಿದ ಜೇಡರ ದಾಸಿಮಯ್ಯನ ಎರಡು ವಿಶೇಷ ಅಂಶಗಳು

೮. ಬಸವಣ್ಣನವರ ಜನನದ ಉದ್ದೇಶ

೯. ಬಸವಣ್ಣನವರ ವಚನಗಳಲ್ಲಿ ವ್ಯಕ್ತಿಗತ ಸಂಗತಿಗಳು

೧೦. ಬಸವಣ್ಣನವರ ವಂಶಜರ ಕವಿಳಾಸಪುರ

೧೧. ಬಸವಣ್ಣನ ತಂದೆ ಮಾದಿರಾಜನ ಬ್ರಾಹ್ಮಣದ ಸ್ವರೂಪ

೧೨. ಬಸವಣ್ಣ ಗುರುವಿಲ್ಲದ ಗುಡ್ಡ

೧೩. ಬಸವಣ್ಣನವರು ಯಾವ ಮೂಲದ ಬ್ರಾಹ್ಮಣರು

೧೪. ಬಸವಣ್ಣನ ಸಂಪ್ರದಾಯ

೧೫. ಬಸವಣ್ಣನ ಅಡ್ಡಹೆಸರು

೧೬. ಭಂಡಾರ ಮತ್ತು ಬಸವಣ್ಣ

೧೭. ಬಸವಣ್ಣನವರ ವಚನ: ಮೀಮಾಂಸಕ-ವೈಶ್ವೇಷಿಕ

೧೮. ಬಸವಣ್ಣ ದಕ್ಷಿಣ ಭಾರತದ ಪರ್ಯಾಯ ಬುದ್ಧ

೧೯. ಬಸವಣ್ಣನವರ ಜೀವನ ಚರಿತ್ರೆ

೨೦. ಬಸವಣ್ಣನವರ ಲಿಂಗಾಯತವು ಪುಣ್ಯಧರ್ಮ

೨೧. ಬಸವಣ್ಣ: ಪ್ರಾಚೀನ ಲಿಂಗಾಯತ ಸಾಹಿತ್ಯದ ಒಂದು ಅನಿವಾರ್ಯತೆ

೨೨. ಬಸವಣ್ಣನವರ ನಿಜ ಚರಿತ್ರೆ

೨೩. ಬಸವಣ್ಣನವರಿಂದ ತಿಳಿದುಬರುವ ಒಂದು ಐತಿಹಾಸಿಕ ಸತ್ಯ!

೨೪. ಅಲ್ಲಮಪ್ರಭುವಿನ ಜನ್ಮಗ್ರಾಮ

೨೫. ಅಲ್ಲಮನ ಚರಿತ್ರೆ ಬೆಳವಣಿಗೆಯ ರೀತಿಗಳು

೨೬. ನೀಲಲೋಚನೆ.

೨೭. ಕೆಲವು ವಚನಕಾರರು-ವಚನ ಮುದ್ರಿಕೆಗಳು.

ದಾಸಿಮಯ್ಯನಿಗೆ ಸಂಬಂಧಿಸಿದ ಐದು ಲೇಖನಗಳಲ್ಲಿ ಜೇಡರ ದಾಸಿಮಯ್ಯ ದೇವರ ದಾಸಿಮಯ್ಯ ಇಬ್ಬರೂ ಭಿನ್ನರೆಂದು, ಅವರಲ್ಲಿ ಕಂಡುಬರುವ ವಿಶೇಷ ಅಂಶಗಳನ್ನು ವಿವಿಧ ಆಕರಗಳ ಮೂಲಕ ಕಟ್ಟಿಕೊಡಲು ಎಂ.ಎಂ.ಕಲಬುರ್ಗಿ ಅವರು ಪ್ರಯತ್ನಿಸಿದ್ದಾರೆ.

'ದೇವೂರ ದಾಸಿಮಯ್ಯ' ಎಂಬ ಲೇಖನದಲ್ಲಿ ದೇವರ ದಾಸಿಮಯ್ಯ ಮತ್ತು ಜೇಡರ ದಾಸಿಮಯ್ಯ ಇಬ್ಬರೂ ಬೇರೆ ಬೇರೆ ಎಂದು ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. ಒಬ್ಬನು ಜಯಸಿಂಹನ(೧೦೧೫-೪೨) ಕಾಲದವನು, ಇನ್ನೊಬ್ಬ ಬಸವಣ್ಣನ ಸಮಕಾಲೀನ. ದೇವರ ದಾಸಿಮಯ್ಯ ವಚನಕಾರನೆಂಬುದು ಸಂದೇಹ, ಆದರೆ ಜೇಡರ ದಾಸಿಮಯ್ಯ ಮಾತ್ರ ವಚನಕಾರ. ಇವರಿಬ್ಬರ ಆರಾಧ್ಯದೈವ 'ರಾಮನಾಥ'. 'ದೇವರ' ಎಂಬ ವಿಶೇಷಣ ಕುರಿತಂತೆ ಚರ್ಚಿಸಿದ್ದಾರೆ. ಸಾಮಾನ್ಯವಾಗಿ ವಚನಗಳಲ್ಲಿ ವ್ಯಕ್ತಿನಾಮದ ಜೊತೆಗೆ ವೃತ್ತಿನಾಮ(ಮಾದಾರ ಚೆನ್ನಯ್ಯ), ಗ್ರಾಮನಾಮ(ನೆಲುವಿಗೆಯ ಶಾಂತಯ್ಯ)ಗಳು ವಿಶೇಷವಾಗಿ ಬರುತ್ತವೆ. ಆದರೆ 'ದೇವರ' ಎಂಬ ವಿಶೇಷಣ ಬರುವುದು ಸಂದೇಹಕ್ಕೆ ಎಡೆ ಮಾಡಿಕೊಡುತ್ತದೆ ಎಂದು ಎರಡು ರೀತಿಯ ಊಹೆಗಳ ಮೂಲಕ ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. "೧. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ದೇಹಾರ/ದೇವಾರ ಎಂಬ ರೂಪಾಂತರಗಳಲ್ಲಿ ಸಿಗುವ ಪದಕ್ಕೆ 'ದೇವಾಲಯ' ಎಂದು ಅರ್ಥವುಂಟು. ಇವುಗಳಲ್ಲಿ 'ದೇವಾರ' ಎಂಬುದು ಆಡುಮಾತಿನಲ್ಲಿ 'ದೇವರ' ಎಂದಾಗುವುದು ಸಹಜ. ಹೀಗಾಗಿ ಈ ದಾಸಿಮಯ್ಯನು ದೇವಾಲಯವೊಂದಕ್ಕೆ ಸಂಬಂಧಪಟ್ಟವ (ಅರ್ಚಕ, ವೃತ್ತಿಯವ)ನಾಗಿರಬಹುದು. ೨. ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನಲ್ಲಿ ದೇವರ ಹಿಪ್ಪರಗಿ(ಮಡಿವಾಳ ಮಾಚಿದೇವನ ಊರು) ಹೆಸರಿನ ಗ್ರಾಮವಿದೆ. ಸಾಮಾನ್ಯವಾಗಿ ಯಾವುದೇ ಗ್ರಾಮವನ್ನು ಅದರ ಸಮೀಪದ ಗ್ರಾಮನಾಮದೊಂದಿಗೆ ಜೋಡಿಸಿ ಕರೆಯುವುದುಂಟು. ಆ

ಮೇರೆಗೆ ನೆರೆಯ ದೇವೂರ ಗ್ರಾಮ ಕಾರಣವಾಗಿ ಈ ಹಿಪ್ಪರಗಿಗೆ ದೇವೂರ ದೇವರ ಹಿಪ್ಪರಗಿ ಆಗಿದೆ. ದೇವೂರ ಗ್ರಾಮದವನು ಎಂಬ ಅರ್ಥದ 'ದೇವೂರ ದಾಸಿಮಯ್ಯ' ಎಂಬುದು ಜನಬಳಕೆಯಲ್ಲಿ ದೇವರ ದಾಸಿಮಯ್ಯ ಎಂದಾಗಿರಬಹುದೆ? ಎಂದಿದ್ದಾರೆ. ಇದಕ್ಕೆ ಪೋಷಕವಾಗಿ ಇನ್ನೊಂದು ಸಂಗತಿಯನ್ನು ಹೇಳಿದ್ದಾರೆ.

ಚಾಲುಕ್ಯ ಚಕ್ರವರ್ತಿ ಜಯಸಿಂಹನ ಮಡದಿ ಸುಗ್ಗಲೆ. ದೇವರದಾಸಿಮಯ್ಯನ ಶಿಷ್ಯೆ. ಸುಗ್ಗಲದೇವಿಯ ಆದರ್ಶವನ್ನು ಕುರಿತಂತೆ ಬಲ್ಲಾಳನ ವಧು ಕೇತಲದೇವಿ ಮತ್ತು ಕುವಲ ಲಕ್ಷ್ಮನ ವಧು ನುಗ್ಗಲದೇವಿಯರು ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಜೊತೆಗೆ ಮಾದಗೌಡಿ, ಗುಬಿಗೌಡಿ, ಮಾಚವ್ವೆಯರು ತಮ್ಮನ್ನು 'ಅಭಿಮಾನ ಸುಗ್ಗಲದೇವಿ' ಎಂದು ಕರೆದುಕೊಂಡಿದ್ದಾರೆ. ಇಷ್ಟು ಪ್ರಸಿದ್ಧಳಾದರೂ ಸುಗ್ಗಲ ದೇವಿಯ ಬಗ್ಗೆ ಒಂದೇ ಒಂದು ಶಾಸನ ಮಾತ್ರ ಸಿಕ್ಕಿದೆ. ಅದು ದೇವೂರಿನಲ್ಲಿದ್ದು ಆಕೆಯ ಗುರುವಿನ ಊರಾಗಿರುವುದು. ಬಹುಶಃ ಇದು ಸುಗ್ಗಲೆಯ ತವರೂರಾಗಿರುವುದು ಶಾಸನ ದೇವೂರಿನಲ್ಲಿ ಸಿಗುವುದಕ್ಕೆ ಕಾರಣವಾಗಿರಬಹುದೆಂದು ಗುರುತಿಸುತ್ತಾರೆ. ತನ್ನ ತವರುಮನೆಯ ಗುರುವಾಗಿದ್ದ ದೇವರ ದಾಸಿಮಯ್ಯನನ್ನು ರಾಣಿಯಾದ ಮೇಲೂ ಇವಳು ಭಕ್ತಿಯಿಂದ ಮನ್ನಿಸುತ್ತಿದ್ದಳೆಂದು ಎಂ.ಎಂ.ಕಲಬುರ್ಗಿ ಅವರು ಊಹಿಸಿದ್ದಾರೆ.

ಇಷ್ಟೆಲ್ಲ ಚರ್ಚೆ ಮಾಡಿದ ಎಂ.ಎಂ.ಕಲಬುರ್ಗಿ ಅವರು ಕೊನೆಗೊಂದು ನಿರ್ಣಯಕ್ಕೆ ಬರುತ್ತಾರೆ. ದೇವಾಲಯಕ್ಕೆ ಸಂಬಂಧಿಸಿದವನೇ ಆಗಿರುವ ದಾಸಿಮಯ್ಯನ ನಿಜನಾಮ ದೇವಾರ ದಾಸಿಮಯ್ಯ. ಇದರಿಂದ ದೇವೂರ ದಾಸಿಮಯ್ಯ ಎಂಬುದೇ ಹೆಚ್ಚು ಸೂಕ್ತ ಎಂದಿದ್ದಾರೆ. "ಈವರೆಗೆ ತೊಡಕಾಗಿದ್ದ ಇಬ್ಬರು ದಾಸಿಮಯ್ಯರಲ್ಲಿ ಒಬ್ಬನನ್ನು ಮುದನೂರು ದಾಸಿಮಯ್ಯ(ಜೇಡರ ದಾಸಿಮಯ್ಯ), ಇನ್ನೊಬ್ಬನನ್ನು ದೇವೂರ ದಾಸಿಮಯ್ಯ(ದೇವರ ದಾಸಿಮಯ್ಯ) ಎಂದು ಗ್ರಾಮವಾಚಿಯಾಗಿ ಕರೆಯುವುದು ಹೆಚ್ಚು ವಾಸ್ತವವೆನಿಸುತ್ತದೆ. ಇದು ಸತ್ಯವಾದರೆ 'ಜೇಡರ ದಾಸಿಮಯ್ಯ', 'ದೇವರ ದಾಸಿಮಯ್ಯ' ಇಬ್ಬರು ಬೇರೆಯೆಂದು ವಾದಿಸುವವರಿಗೆ ಹೊಸ ಅಧಾರ ಲಭಿಸಿದಂತಾಗಿ, ದೇವರ>ದೇಡರ>ಜೇಡರ ಎಂಬ ನಿಷ್ಪತ್ತಿ ಹೋಲುತ್ತ, ಇಬ್ಬರಲ್ಲಿಯೂ ಸಂಬಂಧ ಕಲ್ಪಿಸುತ್ತಿದ್ದುದನ್ನು ಆತ್ಯಂತಿಕವಾಗಿ ಅಲ್ಲಗಳೆಯಲು ಸಾಧ್ಯವಾಗುತ್ತದೆ"[೮೬] ಎಂದಿದ್ದಾರೆ.

'ಬಸವಣ್ಣನವರು ಗಮನಿಸಿದ ಜೇಡರ ದಾಸಿಮಯ್ಯನ ಎರಡು ವಿಶೇಷ ಅಂಶಗಳು' ಎಂಬ ಲೇಖನದಲ್ಲಿ ಶರಣರ ವಿಶೇಷ ರೀತಿಯ ಭಕ್ತಿಯನ್ನು ಕುರಿತು ಚರ್ಚಿಸಿದ್ದಾರೆ. ಬಸವಣ್ಣನವರು ದಾಸಿಮಯ್ಯನನ್ನು ದಾಸ, ದಾಸಯ್ಯ, ದಾಸಿಮಯ್ಯ, ದಾಸಿದೇವ, ಜೇಡದಾಸಿಮಯ್ಯ ಎಂಬ ಹಲವು ಹೆಸರುಗಳಿಂದ ೧೮ ವಚನಗಳಲ್ಲಿ ಸ್ಮರಿಸಿದ್ದಾರೆ. ಅವು ಮೇಲ್ನೋಟಕ್ಕೆ ೧೮ ವಚನಗಳೆಂಬಂತೆ ಕಂಡರೂ ವಸ್ತುತಃ ಎರಡೇ ವಚನಗಳಂತೆ ಎರಡು ಗುಂಪುಗಳಲ್ಲಿ ಸೇರಿ

ಹೋಗಿರುವುದನ್ನು ಸ್ಮರಿಸಿದ್ದಾರೆ. ಮೊದಲ ಗುಂಪು ಸತಿಸುತರನ್ನು ಕೊಟ್ಟು ಅಸಾಧಾರಣ ಭಕ್ತಿಯನ್ನು ಮೆರೆದ ಸಿಂಧು ಬಲ್ಲಾಳ–ಸಿರಿಯಾಳ ಜೊತೆಗೆ ಉಲ್ಲೇಖಿಸಿರುವುದು.

"೧. ಮುನ್ನಿನವರು ಹೋದ ದಾರಿ ಭಯ ಕಾಣಿರಣ್ಣ,
ಬಲ್ಲಾಳನ ವಧುವಿನೊಡನೆ ಸರಸವಾಡಿದಂದಿಂದ ಭಯ ಕಾಣಿರಣ್ಣ,
ಸಿರಿಯಾಳನ ಮಗನ ಬೇಡಿದಂದಿಂದ ಭಯ ಕಾಣಿರಣ್ಣ,
ದಾಸನ ವಸ್ತ್ರವ ಸೀಳಿದಂದಿಂದ ಭಯ ಕಾಣಿರಣ್ಣ,
ಅಘಟಿತ ಘಟಿತರು ವಿಪರೀತ ಚಿಂತರು,
ಕೂಡಲಸಂಗನ ಶರಣರು ನಡೆದ ದಾರಿ ಭಯ ಕಾಣಿರಣ್ಣ.

೨. ದಾಸಿದೇವ ತನ್ನ ವಸ್ತ್ರವನ್ನಿತ್ತು ತವನಿಧಿ ಪ್ರಸಾದವ ಪಡೆದ,
ಸಿರಿಯಾಳ ತನ್ನ ಮಗನನ್ನಿತ್ತು ಪ್ರಾಣ ಪ್ರಸಾದವ ಪಡೆದ,
ಬಲ್ಲಾಳದೇವ ತನ್ನ ವಧುವನ್ನಿತ್ತು ಸಮತೆ–ಪ್ರಸಾದವ ಪಡೆದ,
ಇವರೆಲ್ಲರೂ ತಮತಮಗೆ ಮಾಡಿ ಹಡೆದರು ಸಮ್ಯಕ್ ಪದವಿಯನು.
ನಾನೇನನೂ ಅರಿಯದ ಭಕ್ತಿಯ
ಬಡವಂಗೆ ಕರುಣಿಸು ಕೂಡಲಸಂಗಮದೇವಾ.

೩. ದೇವನಿಂತಹನೆಂದು ತೋರಿಕೊಡುವೆನು ಗಣಂಗಳಿಗೆ,
ಬಲ್ಲಾಳನ ವಧುವ ಬೇಡಿದಾತನೇ ದೇವ,
ದೇವನಿಂತಹನೆಂದು ತೋರಿಕೊಡುವೆನು ಗಣಂಗಳಿಗೆ,
ದಾಸನ ವಸ್ತ್ರವ ಬೇಡಿದಾತನೀ ದೇವ
ದೇವನಿಂತಹನೆಂದು ತೋರಿಕೊಡುವೆನೀ ಗಣಂಗಳಿಗೆ,
ಸಿರಿಯಾಳನ ಮಗನ ಬೇಡಿದಾತನೀ ದೇವ
ಕೂಡಲಸಂಗಮದೇವ ಜಂಗಮಮುಖಿಯಾಗಿ
ಕಾಡಿ ನೋಡುವ ಬೇಡಿ ನೋಡುವ.

೪. ದಾಸನ ವಸ್ತ್ರವ ಬೇಡದ ಮುನ್ನ........
............. ಬೇಡು ಕೂಡಲಸಂಗಮದೇವಾ ನಮ್ಮವರ ಕೈಯಲು

೫. ದ್ವಿಜರಿಗೆ ಕೊಟ್ಟು ಹಲಬರು ಕೆಟ್ಟರು,
............ಕೊಡಿರೇ, ನಮ್ಮ ಕೂಡಲಸಂಗನ ಶರಣರಿಗೆ.

೬. ಎಲ್ಲಿ ಹೊಕ್ಕಲ್ಲಿ ನಿನ್ನ ವಿಕಾರವ ಮಾಣೆ, ಗುರುವತನವೆ?
...........ಕೂಡಲಸಂಗಮದೇವಾ, ನಿಮ್ಮ ಪರಿ.

೭. ಭಕ್ತಿ ಎಂತಹವಯ್ಯ, ದಾಸಯ್ಯ ಮಾಡಿದಂತಹದು.

...........ನೀ ಬಾಣನ ಬಾಗಿಲ ಕಯ್ದುಂತಹದು.

೮. ನೆರೆ ನಂಬೋ ನೆರೆ ನಂಬೋ ಧಂಧುರವಿಲ್ಲದೆ ಸಾಮವೇದಿಗಳಂತೆ

.............ನೆರೆನಂಬಿದೆಯಾದಡೆ ತನ್ನನೀವ ಕೂಡಲಸಂಗಮದೇವ.

೯. ಸೋಲಬಲ್ಲವರು ಗೆಲಲರಿಯದಯ್ಯ;

.........ಕೂಡಲಸಂಗನ ಶರಣರು ಉಪಚಾರವನರಿಯರಯ್ಯಾ.

೧೦. ಬಾಣ ಮಯೂರನಂತೆ ಬಣ್ಣಿಸಬಲ್ಲೆನೆ?

...........ಎನಗೆ ಕೊಟ್ಟರೆ ಧರ್ಮ ಕೂಡಲಸಂಗಮದೇವಾ.

೧೧. ವೇಷ–ಅವಿಚಾರದಲ್ಲಿ ನಡೆಯಿತ್ತೆಂದು.

..................................

ತಪ್ಪೆನ್ನದು, ಮೂಗ ಕೊಯ್ಯಿ! ಕೂಡಲಸಂಗಮದೇವ.

೧೨. ಅರ್ಥ ಪ್ರಾಣಾಭಿಮಾನ ಕೊಟ್ಟೆನೆಂಬರಲ್ಲದೆ............

..........ಕೂಡಲಸಂಗಮದೇವರಲ್ಲಿ ತನ್ನ ಕೊಟ್ಟ ಸಿಂಧುಮರಾಳ.

೧೩. ಒಬ್ಬನ ಮನೆಯಲುಂಡು ಹೊತ್ತುಗಳಿವೆ

...........ಕೂಡಲಸಂಗಯ್ಯಾ ಸಿರಿಯಾಳನಿಂದ ಮಾನಿಸಲೋಕ್‌ಗಂಡೆ.

೧೪. ದಾಸನಂತೆ ತವನಿಧಿಯ ಬೇಡುವವನಲ್ಲ

ಸದ್ಭಕ್ತಿಯ ಕರುಣಿಸೆನಗೆ."[೮೭]

ಈ ಮೇಲಿನ ಆರು ವಚನಗಳಲ್ಲಿ ಬಸವಣ್ಣನವರು ದಾಸಿಮಯ್ಯ, ಸಿರಿಯಾಳ ಹಾಗೂ ಬಲ್ಲಾಳನನ್ನು ಒಟ್ಟಿಗೆ ಅವರ ಭಕ್ತಿಯ ತೀವ್ರತೆಯನ್ನು ತಿಳಿಸಲು ಪ್ರಯತ್ನಿಸಿದ್ದಾರೆ. ಉಳಿದ ೮ ವಚನಗಳಲ್ಲಿ ದಾಸಿಮಯ್ಯ, ಬೇರೊಬ್ಬರ ಜೊತೆ ಬಂದರೂ ಆಗ ಇವರಲ್ಲಿ ಇಬ್ಬರು ಇಲ್ಲವೆ, ಒಬ್ಬರು ತಪ್ಪದೇ ಅವನೊಂದಿಗೆ ಸೇರಿಕೊಂಡಿರುವಂತೆ ನಿರೂಪಿಸಿದ್ದಾರೆ.

ದಾಸಿಮಯ್ಯ ಬಲ್ಲಾಳ ಮತ್ತು ಸಿರಿಯಾಳರು ಹೋದ ಭಕ್ತಿಮಾರ್ಗ ಭಯಸ್ವರೂಪದ್ದು. ಇವರು ಅತ್ಯಧಿಕ ಘಟಿತರು; ವಿಪರೀತ ಚರಿತರು ಎಂದು ಹೇಳುತ್ತಾರೆ. ಸಿರಿಯಾಳ ಜಂಗಮನ ಊಟಕ್ಕಾಗಿ ಮಗನನ್ನು ಕೊಂದವ. ಸಿಂಧು ಬಲ್ಲಾಳ ಜಂಗಮನಿಗೆ ವಧುವನ್ನು ಕೊಟ್ಟದ್ದು ಒಂದು ರೀತಿಯ ಉಗ್ರ ಭಕ್ತಿಗಳಾಗಿವೆ. ಇದೇ ರೀತಿ ದಾಸಿಮಯ್ಯನು ತನ್ನ ಮೈಮೇಲಿನ ವಸ್ತ್ರವ ಕೊಟ್ಟದ್ದು ಒಂದು ರೀತಿಯ ಎದೆ ನಡುಗಿಸುವ ವಿಷಯವೇ ಆಗಿದೆ. ಆದರೂ ಬಲ್ಲಾಳ ಮತ್ತು ಸಿರಿಯಾಳರ ಭಕ್ತಿ ಘಟನೆಗಳಲ್ಲಿ ಉಗ್ರತೆ, ಧರ್ಮಸಂಕಟಗಳು ದಾಸಿಮಯ್ಯನ ದಾನದಲ್ಲಿ

ಕಂಡುಬರುವುದಿಲ್ಲ ಎಂದು ಎಂ.ಎಂ.ಕಲಬುರ್ಗಿ ಅವರು ಅವರ ಭಕ್ತಿ ತೀವ್ರತೆಯನ್ನು ವಚನಗಳಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ. ದಾಸಿಮಯ್ಯನನ್ನು ಕುರಿತಂತೆ "ಪುರಾಣ ಹೇಳುವ ಕಥೆಗಿಂತ ಬೇರೆಯಾದ ಉಗ್ರ ಘಟನೆಯೊಂದು ದಾಸಿಮಯ್ಯನ ಜೀವನದಲ್ಲಿ ನಡೆದು ಹೋಗಿರಬೇಕು. ಬಹುಶಃ ಅದು ದಾಸಿಮಯ್ಯ ತಾನು ಬತ್ತಲೆಯಾಗಿರುವುದನ್ನೂ ಲೆಕ್ಕಿಸದೆ ಉಟ್ಟುಕೊಂಡಿದ್ದ ಒಂದೇ ಒಂದು ಬಟ್ಟೆಯನ್ನು ಬಿಚ್ಚಿ ಜಂಗಮನಿಗೆ ಕೊಟ್ಟಿರಬಹುದು. ವಿಪರೀತ ಚರಿತೆ ಎನಿಸುವ ಇದೇ ದಾಸಿಮಯ್ಯನ ಜೀವನದಲ್ಲಿ ಜರುಗಿದ ನಿಜವಾದ ಘಟನೆಯಾಗಿರಬೇಕು. ಆದರೆ ಕಾಲಗತಿಸಿದಂತೆ ಈ ಘಟನೆಯನ್ನು ಮರೆತುಬಿಟ್ಟು ಪುರಾಣ ಕರ್ತೃಗಳು ಹೊಸ ಕಥೆಯನ್ನು ಕಟ್ಟಿದರೆಂದು ತೋರುತ್ತದೆ. ಈ ಹೊಸ ಕಥೆ ತೆಲುಗು ಬಸವಪುರಾಣ ಹಿಂದೆಯೇ ಹುಟ್ಟಿದೆ. ಅಷ್ಟೇ ಏಕೆ ಅಬ್ಬಲೂರಿನ ಸೋಮೇಶ್ವರ ದೇವಾಲಯದ ಗೋಡೆಯ ಮೇಲೆ ಬಿಡಿಸಲಾದ ಶಿಲ್ಪದಲ್ಲಿ ದಾನ ನೀಡಲು ಸಿದ್ಧವಾಗಿ ನಿಂತ ದಾಸಿಮಯ್ಯನ ಕೈಯಲ್ಲಿ ಒಂದು ವಸ್ತ್ರವಿದ್ದು, ಆತ ಇನ್ನೊಂದು ವಸ್ತ್ರವನ್ನು ಉಟ್ಟುಕೊಂಡಿದ್ದಾನೆ. ಆದುದರಿಂದ ಅಬ್ಬಲೂರು ಶಿಲ್ಪದ ಕಾಲವಾದ ೧೨ನೆಯ ಶತಮಾನದ ಅಂತ್ಯಕ್ಕಾಗಲೇ ಮೂಲಕಥೆ ಮರೆಯಾಗಿ ಪುರಾಣಕಥೆ ಪ್ರಚಾರ ಪಡೆದಿತ್ತೆಂದು ಊಹಿಸಬೇಕಾಗುತ್ತದೆ"[೮೮] ಎಂದು ಊಹಿಸಿದ್ದಾರೆ.

ಎರಡನೆಯ ಗುಂಪು ಅಂತ್ಯಜರಾಗಿದ್ದ ಕಕ್ಕಯ್ಯ, ಚೆನ್ನಯ್ಯರ ಜೊತೆಗೆ ದಾಸಿಮಯ್ಯನನ್ನು ಉಲ್ಲೇಖಿಸುವ ಬಸವಣ್ಣನವರ ವಚನಗಳಿಗೆ ಸಂಬಂಧಿಸಿದೆ. ಆ ವಚನಗಳನ್ನು ನೋಡುವುದಾದರೆ,

"ಉತ್ತಮ ಕುಲದಲ್ಲಿ ಹುಟ್ಟಿದನೆಂಬ
ಕಷ್ಟದ ಹೊರೆಯ ಹೊರಿಸದಿರಯ್ಯ
ಕಕ್ಕಯ್ಯ ನೊಕ್ಕುದನಿಕ್ಕ ನೋಡಯ್ಯ,
ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ,
ಉನ್ನತಮಹಿಮ ಕೂಡಲಸಂಗಮದೇವಾ, ಶಿವಧೋ, ಶಿವಧೋ

ಭಕ್ತಿಯಿಲ್ಲದ ಬಡವ ನಾನಯ್ಯ
..........ಎನ್ನ ಪಾತ್ರೆ ತುಂಬಿತ್ತು, ಕೂಡಲಸಂಗಮದೇವಾ.

ತೊತ್ತಿಂಗೆ ಬಲ್ಲಹನೊಲಿದಡೆ ಪದವಿಯ ಮಾಡದೆ ಮಾಣ್ಬನೆ?
........ತನ್ನತ್ತ ಮಾಡುವ ಕೂಡಲಸಂಗಮದೇವ.

ದೇವಾ ನಿಮ್ಮ ಪೂಜಿಸಿ ಚೆನ್ನನ ಕುಲ ಚೆನ್ನಾಯಿತು;
......ಆತನ ಹೊಲೆಯ ಕೂಡಲಸಂಗಮದೇವಾ."[೮೯]

ಮೇಲಿನ ವಚನಗಳಲ್ಲಿ ಕಕ್ಕಯ್ಯ, ದಾಸಯ್ಯ, ಚೆನ್ನಯ್ಯರ ಚರಿತ್ರೆ ತುಂಬಿತ್ತೆಂದು ಬಸವಣ್ಣ ಹೇಳುತ್ತಾನೆ. ಈ ಮೂವರನ್ನು ಎನ್ನುತ್ತ ಭಕ್ತಿಯ ಬಲದಿಂದ ಕುಲದ ಹೀನತ್ವವನ್ನು ಕಳೆದುಕೊಂಡು

ಮೇಲಿನ ಸ್ಥಾನವನ್ನು ಏರಿದರು ಎಂದು ಬಸವಣ್ಣ ಈ ವಚನಗಳಲ್ಲಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ.

ಒಟ್ಟಾರೆಯಾಗಿ ಈ ಲೇಖನದಲ್ಲಿ ಜೇಡರ ದಾಸಿಮಯ್ಯನಲ್ಲಿ ಗಮನಿಸಿದ ಭಕ್ತಿ ಕುರಿತಾದ ಎರಡು ಅಂಶಗಳನ್ನು ಕುರಿತು ಚರ್ಚಿಸಿದ್ದಾರೆ.

೧. ದಾಸಿಮಯ್ಯನ ವ್ಯಕ್ತಿತ್ವದ ಜೀವಾಳ ಭಕ್ತಿ; ಆತನು ಅದನ್ನು ಅಘಟಿತ ಘಟನೆಯ ಮೂಲಕ ಪ್ರಕಟಿಸಿದ.

೨. ದಾಸಿಮಯ್ಯನದು ಮೂಲತಃ ಕೀಳುಕುಲ; ಆತನು ಅದನ್ನು ಭಕ್ತಿಯ ಮೂಲಕ ಕಳಚಿಕೊಂಡ."

"ದೇವರ ದಾಸಿಮಯ್ಯ–ಜೇಡರ ದಾಸಿಮಯ್ಯ" ಎಂಬ ಲೇಖನದಲ್ಲಿ ದೇವರ ದಾಸಿಮಯ್ಯ ಮತ್ತು ಜೇಡರ ದಾಸಿಮಯ್ಯ ಭಿನ್ನರೆಂಬ ಕುರಿತು ಚರ್ಚಿಸಿದ್ದಾರೆ. "ದೇವರದಾಸಿಮಯ್ಯ ೧೧ನೆಯ ಶತಮಾನದ ವ್ಯಕ್ತಿ. ಕಲ್ಯಾಣ ಚಾಲುಕ್ಯ ಚಕ್ರವರ್ತಿ ಜಯಸಿಂಹನ ರಾಣಿ ಸುಗ್ಗಲೆಯ ಗುರು, ರಾಜಧಾನಿ ತೊಟ್ಟಲಕೆರೆಯಲ್ಲಿ ಜೈನರೊಂದಿಗೆ ವಾದಕ್ಕೆ ನಿಂತು ಸರ್ಪಪವಾಡ ಮೆರೆದು, ಬಸದಿಗಳನ್ನು ನಾಶ ಮಾಡಿ 'ಉತ್ತರೇಶ್ವರ ಲಿಂಗ' ಸ್ಥಾಪಿಸಿದವ. ಜಯಸಿಂಹನನ್ನು ಜೈನಧರ್ಮದಿಂದ ಶೈವ(ಕಾಳಮುಖ ಶೈವ) ಧರ್ಮಕ್ಕೆ ಮತಾಂತರಿಸಿದವ. ಈತ ಸಂಸಾರಿಯಲ್ಲ–ಸನ್ಯಾಸಿ. ವಚನ ಬರೆದಿಲ್ಲ, ವೃತ್ತಿಯಿಂದ ನೇಕಾರನಲ್ಲ. ಹೀಗಾಗಿ ಇವನು ನೇಕಾರ ಸಮಾಜದ ಮಹಾಪುರುಷನಲ್ಲ. ಈ ಅಂಶಗಳಿಗೆ ವಿರುದ್ಧವೆಂಬಂತೆ ಜೇಡರ ದಾಸಿಮಯ್ಯ ೧೨ನೆಯ ಶತಮಾನದ ವ್ಯಕ್ತಿ. ತಪನಿಧಿ ಪವಾಡ ಮೆರೆದವ. ಶಂಕರ ದಾಸಿಮಯ್ಯನಿಂದಾಗಿ ಅಹಂಕಾರ ನೀಗಿಸಿಕೊಂಡವ. ದುಗ್ಗಳೆಯ ಪತಿಯಾಗಿರುವ ಈತ ಸನ್ಯಾಸಿಯಲ್ಲ–ಸಂಸಾರಿ. 'ರಾಮನಾಥಾ' ಮುದ್ರಿಕೆಯ ವಚನಕಾರ. ಪ್ರಾಚೀನ ಹಸ್ತಪ್ರತಿಗಳಲ್ಲಿ 'ಜೇಡರ ದಾಸಿಮಯ್ಯನ ವಚನಗಳು' ಎಂಬ ಶೀರ್ಷಿಕೆ ಕಂಡುಬರುವುದೇ ಹೊರತು 'ದೇವರ ದಾಸಿಮಯ್ಯನ ವಚನಗಳು' ಶೀರ್ಷಿಕೆ ಕಂಡುಬರುವುದಿಲ್ಲ. ವಚನ ಸಾಹಿತ್ಯ ಕವಿಸಾಹಿತ್ಯ ಕೃತಿಗಳು ತಿಳಿಸುವಂತೆ ಈತ ನೇಕಾರ ವೃತ್ತಿಯವ. ಹೀಗಾಗಿ ಇವನು ಮಾತ್ರ ನೇಕಾರ ಸಮಾಜದ ಮಹಾಪುರುಷ" ಎಂಬ ಮೇಲಿನ ಅಂಶಗಳ ಮೂಲಕ ಇಬ್ಬರೂ ಬೇರೆ ಬೇರೆ ಎಂದು ಎಂ.ಎಂ.ಕಲಬುರ್ಗಿ ಅವರು ಸ್ಪಷ್ಟಪಡಿಸಿದ್ದಾರೆ. ಜೊತೆಗೆ ಈ ಗೊಂದಲ ಉಂಟಾಗಲು ಕಾರಣಗಳನ್ನು ಕೂಡ ಕೊಡುವ ಪ್ರಯತ್ನವನ್ನು ಮಾಡಿದ್ದಾರೆ. ೧೨ನೇ ಶತಮಾನದ ವಚನ ಸಾಹಿತ್ಯದಲ್ಲಿ ೧೩ನೇ ಶತಮಾನದ ವಚನ ಸಾಹಿತ್ಯದ ಹಿನ್ನೆಲೆಯಲ್ಲಿ ರಚನೆಯಾದ ಹರಿಹರನ ರಗಳೆ ಶತಕಗಳಲ್ಲಿ ಹಾಗೂ ಹಲವು ಶಾಸನಗಳಲ್ಲಿ ಜೇಡರ ದಾಸಿಮಯ್ಯ ಎಂಬ ಹೆಸರು ಬಳಕೆಗೊಂಡಿದೆಯೇ ಹೊರತು ದೇವರ ದಾಸಿಮಯ್ಯ ಎಂದಲ್ಲ. ಇದರ ನಂತರ ಅಂದರೆ ೧೪ನೇ ಶತಮಾನದಲ್ಲಿ ಬಸವಪುರಾಣ ಮೊದಲು ಮಾಡಿ ಮುಂತಾದ

ಕೆಲವು ಗ್ರಂಥಗಳಲ್ಲಿ ಒಬ್ಬನ ಹೆಸರಿಗೆ ಬದಲು ಇನ್ನೊಬ್ಬನ ಹೆಸರನ್ನು ಬಳಸುತ್ತ ಬಂದ ಕಾರಣ ಇವರು ಭಿನ್ನರೇ, ಅಭಿನ್ನರೇ ಎಂಬ ಸಮಸ್ಯೆ ಹುಟ್ಟಲು ಕಾರಣವಾಯಿತು ಎಂದಿದ್ದಾರೆ. "ಇತ್ತೀಚೆಗೆ ಜೇಡರ ಶಬ್ದಕ್ಕಿಂತ 'ದೇವರ' ಶಬ್ದವೇ ಉಚ್ಚಾರದಲ್ಲಿ ತಮ್ಮ ಸಮಾಜದ ಹೆಸರಿಗೆ ಹೆಚ್ಚು ಹೋಲಿಕೆಯಾಗುವುದನ್ನು ಆಧರಿಸಿ ದೇವಾಂಗ ಸಮಾಜದವರು ಜೇಡರ ದಾಸಿಮಯ್ಯನೇ ದೇವರ ದಾಸಿಮಯ್ಯನೆಂದು ಹೇಳುತ್ತಲಿದ್ದಾರೆ. ಇವರ ಒತ್ತಡಕ್ಕೆ ಮಣಿದು ಹಂಪಿ ವಿಶ್ವವಿದ್ಯಾಲಯದಲ್ಲಿ 'ದೇವರ ದಾಸಿಮಯ್ಯ ಅಧ್ಯಯನ ಪೀಠ' ಸ್ಥಾಪಿಸಿದ ಕರ್ನಾಟಕ ಸರಕಾರ, ಈಗ ಹೆಚ್ಚಿನದಾಗಿ ಅವನ ಹೆಸರಿನಲ್ಲಿ ಜಯಂತಿ ಆಚರಿಸಲು ಮುಂದಾಗಿದೆ. ಹೆಸರಿಗೆ ಸಂಬಂಧಪಟ್ಟ ಈ ಎರಡೂ ತಪ್ಪುಗಳನ್ನು ಸರಕಾರ ಈಗಲಾದರೂ ತಿದ್ದಿಕೊಳ್ಳಬೇಕೆಂದು ಆಶಿಸುತ್ತೇನೆ"[೧೦] ಎಂದಿದ್ದಾರೆ. ಆದರೆ ಎಂ.ಎಂ.ಕಲಬುರ್ಗಿ ಅವರಂತೆ ಕೆಲವು ವಿದ್ವಾಂಸರಿಗೆ ಇವರಿಬ್ಬರೂ ಬೇರೆ ಬೇರೆ ಎಂಬ ಅಭಿಪ್ರಾಯ ಇದ್ದರೂ ಕೂಡ ಅದನ್ನು ತಿದ್ದಿಕೊಳ್ಳುವಲ್ಲಿ ಮುಂದಾಗದೆ ಇರುವುದು ಒಂದು ರೀತಿಯ ಜೇಡರ ದಾಸಿಮಯ್ಯನ ಹೆಸರಿಗೆ ಅನ್ಯಾಯ ವೆಸಗಿದಂತಾಗುತ್ತದೆ.

'ದೇವರ ದಾಸಿಮಯ್ಯನಿಂದ ಜೇಡರ ದಾಸಿಮಯ್ಯ ಭಿನ್ನ' ಎಂಬ ಲೇಖನದಲ್ಲಿ ಕೂಡ ದೇವರ ದಾಸಿಮಯ್ಯನಿಗಿಂತ ಜೇಡರ ದಾಸಿಮಯ್ಯ ಹೇಗೆ ಭಿನ್ನ ಎಂಬುದನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. ಮೇಲಿನ ಲೇಖನದಲ್ಲಿ ಹೇಳಿದಂತೆ ಹಂಪಿ ವಿಶ್ವವಿದ್ಯಾಲಯ 'ದೇವರ ದಾಸಿಮಯ್ಯ' ಹೆಸರಿನ ಪೀಠ ಸ್ಥಾಪಿಸಿದ ಸಂದರ್ಭದಲ್ಲಿ ಎಂ.ಎಂ.ಕಲಬುರ್ಗಿ ಅವರನ್ನು ಒಳಗೊಂಡಂತೆ ಅನೇಕ ವಿದ್ವಾಂಸರು ಇದನ್ನು ವಿರೋಧಿಸಿ 'ಜೇಡರ ದಾಸಿಮಯ್ಯ ಪೀಠ' ಎಂಬುದು ಸೂಕ್ತ ಎಂದು ಹಲವು ಪತ್ರಿಕೆಗಳಿಗೆ ಬರೆದಿರುವುದನ್ನು ಹೇಳಿದ್ದಾರೆ. ಆದರೂ ರಾಜಕೀಯ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡ ಸರ್ಕಾರಕ್ಕೆ ನಮ್ಮ ಮಾತು ಕೇಳಲಿಲ್ಲ ಎಂದು ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಜೊತೆಗೆ ಮತ್ತೆ ಮುದನೂರಿನಲ್ಲಿ ದೇವರ ದಾಸಿಮಯ್ಯನನ್ನು ಕುರಿತು ಸರಕಾರಿ ಸಮಾರಂಭ ಜರುಗಿತು. ಆಗ ಡಾ.ಎಚ್.ಚಂದ್ರಶೇಖರ್ ಅವರು ಪತ್ರಿಕೆಗಳಲ್ಲಿ ಮತ್ತೆ ಇವರಿಬ್ಬರ ಹೆಸರಿನ ಬಗ್ಗೆ ಪ್ರಶ್ನೆ ಎತ್ತಿದ ಸಂದರ್ಭದಲ್ಲಿ ಕೆಲವರು ಇವರಿಬ್ಬರೂ ಒಬ್ಬನೇ ಎಂದು ಹೇಳುವವರ ಧೋರಣೆಯ ಬಗ್ಗೆ ನನಗೆ ವಿರೋಧವಿದೆ ಎಂದು ಹೇಳಿದ್ದಾರೆ. ಅವರ ಸ್ಪಷ್ಟತೆಗಾಗಿ ಮತ್ತೆ ಕೆಲವು ಕಾರಣಗಳನ್ನು ಕೊಡುತ್ತಾರೆ. ೧೯೭೦ರಷ್ಟು ಹಿಂದೆಯೇ ನಾನು ಪ್ರಕಟಿಸಿದ 'ಶಾಸನಗಳಲ್ಲಿ ಶಿವಶರಣರು' ಕೃತಿಯಲ್ಲಿ ಇವರಿಬ್ಬರೂ ಭಿನ್ನರೆಂದು ಹೇಳಿದ್ದೇನೆ. ಆದರೂ ಇನ್ನೊಮ್ಮೆ ಹೆಚ್ಚಿನ ಆಧಾರಗಳಿಂದ ಅದನ್ನು ಸ್ಪಷ್ಟಪಡಿಸುತ್ತೇನೆ ಎಂದು ಕೆಲವು ಅಂಶಗಳ ಮೂಲಕ ಚರ್ಚಿಸಿದ್ದಾರೆ.

"೧. ಸುಮಾರು ಎಂಟು ಶಾಸನಗಳಲ್ಲಿ ಪ್ರಸ್ತಾಪವಾಗಿರುವವನು ಜೇಡರ ದಾಸಿಮಯ್ಯನೇ ಹೊರತು ದೇವರ ದಾಸಿಮಯ್ಯನಲ್ಲ.

೨. ಬಸವಣ್ಣ ಮೊದಲಾದ ೧೨ನೆಯ ಶತಮಾನದ ಶರಣರ ವಚನಗಳಲ್ಲಿ ಜೇಡರದಾಸ-ದುಗ್ಗಳೆಯರ ಸ್ತುತಿ ಇದೆಯೇ ಹೊರತು ದೇವರ ದಾಸಿಮಯ್ಯನ ಪ್ರಸ್ತಾಪವಿಲ್ಲ.

೩. 'ಸಕಲ ಪುರಾತನರ ವಚನ' ಮೊದಲಾದ ಪ್ರಾಚೀನ ಹಸ್ತಪ್ರತಿಗಳಲ್ಲಿ 'ಜೇಡರ ದಾಸಿಮಯ್ಯನ ವಚನ'ವೆಂಬ ಶೀರ್ಷಿಕೆ ಇದೆಯೆಲ್ಲದೆ 'ದೇವರ ದಾಸಿಮಯ್ಯನ ವಚನ'ವೆಂಬ ಶೀರ್ಷಿಕೆ ಎಲ್ಲಿಯೂ ಇಲ್ಲ.

೪. ವಚನ ಚಳುವಳಿಯನ್ನು ಸಾಹಿತ್ಯದಲ್ಲಿ ದಾಖಲು ಮಾಡಿದ ಪ್ರಥಮ ಕವಿಯಾದ ಹರಿಹರನು ತನ್ನ ಶಂಕರ ದಾಸಿಮಯ್ಯನ ರಗಳೆ, ಶತಕಗಳಲ್ಲಿ ಜೇಡರ ದಾಸಿಮಯ್ಯನನ್ನು ಉಲ್ಲೇಖಿಸಿದ್ದು, ಇವನು ಎಲ್ಲಿಯೂ ದೇವರ ದಾಸಿಮಯ್ಯನ ಪ್ರಸ್ತಾಪ ಮಾಡುವುದಿಲ್ಲ."[೧]

ಈ ರೀತಿಯಾಗಿ ೧೩ನೇ ಶತಮಾನದವರೆಗೂ ಜೇಡರ ದಾಸಿಮಯ್ಯನ ಉಲ್ಲೇಖವಿದೆ ಎನ್ನುತ್ತ ಮೇಲಿನ ಲೇಖನದಲ್ಲಿ ಹೇಳಿದಂತೆ ಇದರಲ್ಲೂ ಕೂಡ ೧೪ನೇ ಶತಮಾನ ಈ ಗೊಂದಲ ಸೃಷ್ಟಿಗೆ ಕಾರಣವಾಯಿತು ಎಂದಿದ್ದಾರೆ. ತೆಲುಗು ಬಸವಪುರಾಣದಲ್ಲಿ ಈ ಹೆಸರನ್ನು ಮೊದಲು ಮಿಶ್ರಗೊಳಿಸಿದವನು ಪಾಲ್ಕುರಿಕೆ ಸೋಮನಾಥ. ಇವನು ತೆಲುಗು ಭಾಷೆಯನ್ನು ಅನುಸರಿಸಿ ಕನ್ನಡದ ಜೇಡರ ಎಂಬುದನ್ನು 'ದೇಡರ' ಎಂದು ಬದಲಾಯಿಸಿದ. ಪ್ರಸ್ತುತ ತೆಲುಗು ಬಸವಪುರಾಣವನ್ನು ಕನ್ನಡಕ್ಕೆ ತಂದ ಭೀಮಕವಿ ಈ ದೇಡರ ಎಂಬುದನ್ನು ದೇವರ ಎಂದು ಬದಲಾಯಿಸಿದ. "ವೃತ್ತಿಸೂಚಕ ಜೇಡರ ಎಂಬುದಕ್ಕಿಂತ ದೈವಿಕತೆ ಸೂಚಕ ದೇವರ ಎಂಬುದಕ್ಕೆ ಪ್ರಾಚೀನರು ಹೆಚ್ಚು ಆಕರ್ಷಿತರಾದಂತೆ ತೋರುತ್ತದೆ. ಹದಿನೆಂಟನೆಯ ಶತಮಾನದ ಲಿಪಿಕಾರನೊಬ್ಬ 'ದೇವರ ದಾಸಿಮಯ್ಯನ ಸಂಪ್ರದಾಯಕ'ನಿಗೆ ಹಸ್ತಪ್ರತಿ ನಕಲು ಮಾಡಿ ಕೊಟ್ಟಿರುವೆನೆಂದು ಹೇಳಿದುದು ಜೇಡರ ಜಾತಿಯನ್ನೇ ಸೂಚಿಸುತ್ತಿದ್ದಲ್ಲಿ ಈ ಲಿಪಿಕಾರನು ಇಂಥ ಭ್ರಮೆಗೆ ಒಳಗಾಗಿರುವನೆಂದೇ ಹೇಳಬೇಕು."[೨] ಈ ರೀತಿಯ ಭ್ರಮೆಯ ತಿಳುವಳಿಕೆ ಬೆಳೆದುಬಂದಿತು. ಮೊಟ್ಟಮೊದಲಿಗೆ ಅಳಿವಿನ ಅಂಚಿನಲ್ಲಿದ್ದ ವಚನ ಸಾಹಿತ್ಯ ಸಂಗ್ರಹ ಕಾರ್ಯದಲ್ಲಿ ತೊಡಗಿದ ಫ.ಗು.ಹಳಕಟ್ಟಿ ಅವರು ಇದನ್ನು ಗಮನಿಸದೇ ಇಬ್ಬರೂ ಒಬ್ಬರೆ ಎಂಬ ಅಭಿಪ್ರಾಯದ ಮೇರೆಗೆ 'ದೇವರ ದಾಸಿಮಯ್ಯನವರ ವಚನಗಳು' ಎಂಬ ಶೀರ್ಷಿಕೆಯಡಿ ಕೃತಿಯನ್ನು ಹೊರತಂದರು. ಆದರೂ ಕೆಲವರು ದೇವರ ದಾಸಿಮಯ್ಯನೆಂದು, ಇನ್ನೂ ಕೆಲವರು ಜೇಡರ ದಾಸಿಮಯ್ಯನೆಂದೇ ಬರೆಯುತ್ತ ಬಂದರು. ಇತ್ತೀಚೆಗೆ ಜೇಡರ ದಾಸಿಮಯ್ಯನೆಂಬುದೇ ಸರಿ ಎಂಬುದು ಕೆಲವು ವಿದ್ವಾಂಸರ ವಾದ. ಹೀಗಿರುವಾಗ ಮುದನೂರು ಗ್ರಾಮದವರು ಮುಂದೆ

ಆಗಬಹುದಾದ ದುಷ್ಪರಿಣಾಮಗಳುಂಟಾಗುವುದನ್ನು ತಪ್ಪಿಸಲು ಈಗಲೇ ಇವರು ಎಚ್ಚೆತ್ತು ಕೊಳ್ಳುವರೆಂದು ಆಶಿಸುತ್ತಾರೆ.

ವಚನ ಸಾಹಿತ್ಯದಲ್ಲಿ ಬೆಡಗಿನ ವಚನಕಾರ ಎಂದೇ ಪ್ರಸಿದ್ಧನಾದ ವಚನಕಾರ ಅಲ್ಲಮಪ್ರಭು ಅಲ್ಲಮಪ್ರಭುವಿನ ಜನ್ಮಸ್ಥಳವನ್ನು ಕುರಿತಂತೆ 'ಅಲ್ಲಮಪ್ರಭುವಿನ ಜನ್ಮಗ್ರಾಮ' ಎಂಬ ಲೇಖನದಲ್ಲಿ ಸುದೀರ್ಘವಾಗಿ ಚರ್ಚಿಸುವ ಪ್ರಯತ್ನ ಮಾಡಿದ್ದಾರೆ. ಹರಿಹರನ ಪ್ರಭುದೇವರ ರಗಳೆ, ಶೂನ್ಯ ಸಂಪಾದನೆಗಳು, ಚಾಮರಸನ ಪ್ರಭುಲಿಂಗಲೀಲೆ, ಎಳಂದೂರ ಹರೀಶ್ವರನ ಪ್ರಭುದೇವರ ಪುರಾಣ, ಮರಿರಾಚದ್ದೇಶನ ಪ್ರಭುನಟನ ತಾರಾವಳಿ, ರಾಚಪ್ಪಯ್ಯ ಕಲಿಯ ಅಪ್ರಕಟಿತ ಮಾಯಾಸಾಂಗತ್ಯ ಮುಂತಾದ ಕೃತಿಗಳು ಪ್ರಭುದೇವರಿಗೆ ಸಂಬಂಧಿಸಿರುವುದನ್ನು ಹೇಳುತ್ತ ಅದರಲ್ಲಿ ಕೆಲವು ಆತನ ಜನ್ಮಗ್ರಾಮ ಬಳ್ಳಿಗಾವೆಯೆಂದು, ಕೆಲವು ಬಸವಾದಿಯೆಂದು, ಮತ್ತೆ ಕೆಲವು ಕರವೂರು ಎಂದು ಹೇಳುತ್ತವೆ ಎಂದಿದ್ದಾರೆ. ಹರಿಹರನ ಪ್ರಭುದೇವರ ರಗಳೆಯಲ್ಲಿ ಹಾಗೂ ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ ಅಲ್ಲಮನ ಜನ್ಮಗ್ರಾಮ ಬಳ್ಳಿಗಾವೆಯೆಂದು ಇದೆ. ಶೂನ್ಯಸಂಪಾದನೆ ಸಂಪಾದನೆಗಳಲ್ಲಿ ಅಲ್ಲಮನ ಜನ್ಮಗ್ರಾಮ ಬನವಾಸಿ ಎಂದಿದೆ. ಎಂ.ಎಂ.ಕಲಬುರ್ಗಿ ಅವರು ಇದನ್ನು ಗಮನಿಸಿ ಮುಂದುವರಿದು ಚಾಮರಸ, ಶೂನ್ಯಸಂಪಾದನ ಕಾರರಂತೆ ದೊಡ್ಡ ಕವಿಗಳ ಸೂಚನೆಯನ್ನೇ ನಿಜವೆಂದು ಭಾವಿಸಿದ ವಿದ್ವಾಂಸರು ನಮ್ಮ ಕವಿಗಳ ಸೂಚನೆಯನ್ನು ಉಪೇಕ್ಷಿಸಿರುವಂತಿದೆ ಎಂದು ಹೇಳುತ್ತ "ಪ್ರಭುದೇವರ ಸಮಕಾಲೀನನಾದ ಘಟ್ಟಿವಾಳಯ್ಯ, ಪ್ರಭುನಟನ ತಾರಾವಳಿಯ ಮರಿರಾಚವಟ್ಟೇಶರು 'ಕರವೂರ ನಿರಹಂಕಾರ ಸುಜ್ಞಾನಿಗಳು'ಗಳು ಪ್ರಭುದೇವನ ತಂದೆ ತಾಯಿಗಳೆಂದು ಸೂಚಿಸುತ್ತ, ಈತನ ಜನ್ಮಗ್ರಾಮ ಕರವೂರು ಎಂಬ ವಿಷಯದತ್ತ ನಮ್ಮ ಗಮನ ಸೆಳೆಯುತ್ತಾರೆ"[೩] ಎಂದು ಎಂ.ಎಂ.ಕಲಬುರ್ಗಿ ಅವರು ಹೇಳಿದ್ದಾರೆ. ಮತ್ತೆ ಮುಂದುವರಿದು ಕೆರವೂರು ಎಂಬುದು ಅಡ್ಡ ಹೆಸರಲ್ಲ, ಗ್ರಾಮ ಸೂಚಿಯಾಗಿದೆ. ಈ ಕೆರವೂರು ಬೆಟ್ಟದ ಮೇಲಿದೆ ಎಂದು ಎಳಂದೂರು ಹರಿಹರೇಶ್ವರ ಹೇಳುತ್ತಾನೆ. ರಾಣೆಬೆನ್ನೂರು ತಾಲೂಕು, ದಾವಣಗೆರೆ ತಾಲೂಕು, ನಾಘರ ತಾಲೂಕಿನ ಹಾಗೂ ಶಿರಸಿ ತಾಲೂಕಿನಲ್ಲಿ ಹೀಗೆ ನಾಲ್ಕು ತಾಲೂಕುಗಳಲ್ಲಿ ಕರೂರು ಗ್ರಾಮ ಕಂಡುಬರುತ್ತದೆ. ಆದರೆ ಶಿರಸಿ ತಾಲೂಕಿನ ಕರೂರು(ಕೋಟೆ) ನಾಗರಕಂಡದಲ್ಲಿ ಇಪ್ಪವೇ ಅದರ ಸೆರಗಿನಲ್ಲಿ ಕಂಡುಬರುತ್ತದೆ. ಇದೇ ಪ್ರಭುದೇವರ ಜನ್ಮಗ್ರಾಮ ಎಂದು ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯ ಸೂಚಿಸಿದ್ದಾರೆ

ಅಲ್ಲಮನ ಚರಿತ್ರೆ ಬೆಳವಣಿಗೆಯ ರೀತಿಗಳು ಎಂಬ ಲೇಖನದಲ್ಲಿ ಅಲ್ಲಮನ ಜನನ, ಬೆಳವಣಿಗೆ, ಬೆಳೆದ ಪರಿಸರ, ತಂದೆ-ತಾಯಿ ಮತ್ತು ವೈರಾಗ್ಯ ಮುಂತಾದವುಗಳನ್ನು ಕುರಿತಂತೆ

ಚರ್ಚೆ ನಡೆಸಿದ್ದಾರೆ. ಹಿಂದಿನ ಲೇಖನದಲ್ಲಿ ಹೇಳಿರುವಂತೆ ಇಲ್ಲಿಯೂ ಕೂಡ ಅಲ್ಲಮನ ಮೂಲಗ್ರಾಮ ಕರವೂರು ಎಂದಿದ್ದಾರೆ.

"ವೃತ್ತಿಯಿಂದ ಜಾತಿಯಿಂದ ದೇವಾಲಯದ ರಂಗಭೋಗ ವರ್ಗಕ್ಕೆ ಸೇರಿದವ. ಇದು ಯಾವ ಊರಿನ ದೇವಾಲಯ(ಬಳ್ಳಿಗಾವೆ? ಬನವಾಸಿ?) ಎಂಬ ಬಗ್ಗೆ ವಿಭಿನ್ನ ಹೇಳಿಕೆಗಳಿವೆ. ಇವನ ತಂದೆ ನಾಗವಾಸಾಧಿಪತಿ ಅಂದರೆ ರಂಗಭೋಗದವರಿಗೆ ಕಲಾ ತರಬೇತಿ ಕೊಡುವ ಶಿಕ್ಷಕ. ಮಗ ಅಲ್ಲಮ. ಈ ರಂಗಭೋಗದವರ ಮಧ್ಯೆ ಮದ್ದಳೆ ವಾದನ ಸೇವೆ ಸಲ್ಲಿಸುವವನಾಗಿದ್ದನು. ಈತನನ್ನು ಮೋಹಿಸಿದ ಕನ್ಯೆ ಅದೇ ರಂಗಭೋಗಕ್ಕೆ ಸೇರಿದವಳಾಗಿದ್ದು, ನರ್ತನ ಸೇವೆ ಮಾಡುವವಳಾಗಿದ್ದಳು. ಇವಳ ನಿಜವಾದ ಹೆಸರು ತಂದೆ-ತಾಯಿ ಗೊತ್ತಿಲ್ಲ. ಈಕೆ ಅಕಾಲ ಮರಣಕ್ಕೆ ತುತ್ತಾದಳು. ಇದು ಅಲ್ಲಮನಲ್ಲಿ ವೈರಾಗ್ಯ ಮೂಡಲು ಕಾರಣವಾಯಿತು. ಈ ಎಲ್ಲ ಘಟನೆಗಳು ಬಳ್ಳಿಗಾವೆ ಇಲ್ಲವೆ ಬನವಾಸಿಯಲ್ಲಿ ಜರುಗಿರಬಹುದು"[೬೪] ಎಂಬುದು ಎಂ.ಎಂ. ಕಲಬುರ್ಗಿ ಅವರ ಅಭಿಪ್ರಾಯವಾಗಿದೆ.

ಅನಿಮಿಷದೇವನ ದರ್ಶನದಿಂದ ಅಲ್ಲಮನಿಗೆ ಲಿಂಗವಂತಿಕೆ ಪ್ರಾಪ್ತವಾಯಿತು. ಇದು ಜರುಗಿದ ಗ್ರಾಮ ಬಹುಶಃ ಬಳ್ಳಿಗಾವೆ. ಇರಬಹುದು. ಈತನ ಮುದ್ರಿಕೆ ಗೊಗ್ಗೇಶ್ವರ. ಈ ಹೆಸರಿನ ಸ್ಥಾವರಲಿಂಗ ಯಾವ ಊರಿನಲ್ಲಿತ್ತೆಂಬುದರ ಬಗ್ಗೆ ಸ್ಪಷ್ಟತೆ ಇಲ್ಲ. ದೇಶ ಪರ್ಯಟನೆಯನ್ನು ಹವ್ಯಾಸವಾಗಿಟ್ಟುಕೊಂಡು ಕಲ್ಯಾಣಕ್ಕೆ ಬಂದಾಗ ಬಸವಣ್ಣನೊಡನೆ ಸೇರಿಕೊಂಡರು. ಕದಳಿಗೆ ಪ್ರಯಾಣ ಬೆಳೆಸಿದರು. ಈ ರೀತಿಯ ಜೀವನದ ಬಗೆಗಳನ್ನು ಎಂ.ಎಂ.ಕಲಬುರ್ಗಿ ಅವರು ಈ ಲೇಖನದಲ್ಲಿ ಮುಂದೆ ಚರ್ಚಿಸಿದ್ದಾರೆ.

ಜನ್ಮಗ್ರಾಮ, ಜಾತಿ, ತಂದೆ-ತಾಯಿಗಳು, ಜನನ ಕಾರಣ, ಗೊಗ್ಗೇಶ್ವರ ದೇವಾಲಯ ಹಾಗೂ ಕಾಮಲತೆ-ಮಾಯಾದೇವಿ ಹೀಗೆ ೬ ಹಂತಗಳಲ್ಲಿ ಈ ಲೇಖನವನ್ನು ಬೆಳೆಸಲು ಪ್ರಯತ್ನಿಸಿದ್ದಾರೆ. ಜನ್ಮಗ್ರಾಮ ಕುರಿತು ಚರ್ಚಿಸುವಾಗ ರಾಚಪ್ಪಯ್ಯ ತನ್ನ ಮಾಯಾಸಾಂಗತ್ಯದಲ್ಲಿ

"ಕರಿಯ ಮಲ್ಲಿಗೆ ಮೇಘ ಕರೆದು ನಾಗರಕಂಡೆ।
ಸುರಲೋಕವೆನಿಸಿದುದದರ।
ಪರಿಮೇಷ್ಠಿತ ಗ್ರಾಮಕರವೂರು ಸುರಸಿಂಧು।
ಶರಧಿಯುಕ್ಕಿತು ಕ್ಷೀರದಂತೆ॥"[೬೫]

ಈ ಪದ್ಯದಲ್ಲಿ ನಾಗರಕಂಡೆ ಎಂಬುದರ ಸರಿಯಾದ ಪಾಠ ನಾಗರಖಂಡ, ಇಲ್ಲಿಯೇ ಕರೂರು ಇರುವುದನ್ನು ಹೇಳಿದಂತೆ. ಆದರೆ ಅಲ್ಲಮನ ಜನ್ಮಗ್ರಮವನ್ನು ಹರಿಹರ ಬಳ್ಳಿಗಾವೆ,

ಪ್ರಸಾದಿ ಮಹಾದೇವಯ್ಯ ಬನವಾಸಿ ಎಂದಿದ್ದಾನೆ. ಇವರಿಬ್ಬರ ಅಭಿಪ್ರಾಯದ ಮೇರೆಗೆ ಚಾಮರಸ ಅಲ್ಲಮ ಬಳ್ಳಿಗಾವೆಯಲ್ಲಿ ಹುಟ್ಟಿದ, ಬನವಾಸಿಯಲ್ಲಿ ಕನ್ಯೆಗೆ ಸಂಬಂಧಿಸಿದ ಘಟನೆಯೊಂದು ಜರುಗಿತು ಎಂದಿದ್ದಾನೆ. ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ ಬಳ್ಳಿಗಾವೆ ಮಾತೆತ್ತದೆ, ಪ್ರಭುದೇವ ಕರೂರಿನಲ್ಲಿ ಹುಟ್ಟಿದ, ಬನವಾಸಿಯಲ್ಲಿ ಮಾಯೆಯನ್ನು ಸೋಲಿಸಿದ ಎಂದು ಒಂದಕ್ಕಿಂತ ಹೆಚ್ಚು ಸಲ ಹೇಳುತ್ತದೆ ಎಂಬುದನ್ನು ಎಂ.ಎಂ.ಕಲಬುರ್ಗಿ ಅವರು ಜನ್ಮಗ್ರಾಮ ಕುರಿತಂತೆ ವಿವಿಧ ರಚನಕಾರರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಚರ್ಚಿಸುವ ಪ್ರಯತ್ನ ಮಾಡಿದ್ದಾರೆ. ಎಂ.ಎಂ.ಕಲಬುರ್ಗಿ ಅವರು ಅಲ್ಲಮಪ್ರಭುವಿನ ನಿಜಗ್ರಾಮ ಕರವೂರು ಎಂಬುದನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿರುವುದು ಮೇಲಿನ ಚರ್ಚೆಗಳಿಂದ ನಮಗೆ ತಿಳಿದುಬರುತ್ತದೆ. ಪ್ರಭುದೇವರ ಜಾತಿ ಕುರಿತು ಚರ್ಚಿಸುವಾಗ ವೀರಶೈವ ಜಂಗಮನೆಂದು ಇಂದಿಗೂ ಪ್ರತೀತಿ ಇದೆ. ಆದರೆ ಹರಿಹರ, ಪ್ರಸಾದಿ ಮಹಾದೇವಯ್ಯ, ಚಾಮರಸರು ಈತನು ನರ್ತನ, ಸಂಗೀತ ಇತ್ಯಾದಿಗಳನ್ನು ಕಲಿಸುವ ಶಿಕ್ಷಕನಾಗಿದ್ದನೆನ್ನುತ್ತಾನೆ. ಬನವಾಸಿ ಮಧುಕೇಶ್ವರ ದೇವಾಲಯದಲ್ಲಿ ನರ್ತನ, ಸಂಗೀತ ಸೇವೆ ಮಾಡುವವರನ್ನು ಪರಿವಾರದವರು ಎಂದು ಕರೆಯುವ ಪ್ರತೀತಿ ಈಗಲೂ ಇದೆ ಎನ್ನುತ್ತಾ, ಅಲ್ಲಮಪ್ರಭು 'ಪರಿವಾರ' ವರ್ಗಕ್ಕೆ ಸೇರುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅಲ್ಲಮನ ತಂದೆ-ತಾಯಿಗಳ ಕುರಿತಾದ ಚರ್ಚೆಯ ಸಂದರ್ಭದಲ್ಲಿ ಹರಿಹರ ಶಿವಭಕ್ತ, ಶಿವಭಕ್ತೆ ಎಂದಿದ್ದಾರೆ. ಆದರೆ ಘಟ್ಟಿವಳಯ್ಯ, ಚಾಮರಸಾದಿಗಳು ಶಾಂತಲಿಂಗ ದೇಶಿಕರು, ಶೂನ್ಯಸಂಪಾದನಕಾರ ಹಾಗೂ ರಾಚಪ್ಪಯ್ಯ ಅವರು ಪ್ರಭುದೇವರ ತಂದೆ-ತಾಯಿ ನಿರಹಂಕಾರ ಮತ್ತು ಸುಜ್ಞಾನಿಗಳೆಂದು ಹೇಳುತ್ತಾರೆ. ಇವರು ಬಳ್ಳಿಗಾವೆಯ ರಾಜ-ರಾಣಿಯರೆಂದು ಎಳಂದೂರು ಹರಿಹರೇಶ್ವರರು ಹೇಳಿರುವುದು ನಿರಾಧಾರವೇ ಸರಿ ಎಂದು ಹೇಳಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ.

ಪ್ರಭುದೇವರ ಜನನ ಕಾರಣ ಕುರಿತಂತೆ ಚರ್ಚಿಸುವ ಸಂದರ್ಭದಲ್ಲಿ ಹರಿಹರ ಮತ್ತು ಮಹಾದೇವಯ್ಯ ಇಬ್ಬರೂ ಶಾಪಕಾರಣವಾಗಿ ಹುಟ್ಟಿದ ಅಲ್ಲಮ ಕಾಮಲತೆಯ ಮೋಹಕ್ಕೆ ಒಳಗಾಗುತ್ತಾನೆ ಎಂದಿದ್ದಾರೆ. ಇವನಲ್ಲಿ ಶೂನ್ಯಸಂಪಾದನಕಾರರು ಹಾಗೂ ಏಕೋತ್ತರ ಶತಸ್ಥಲದ ಜಕ್ಕಣಾರ್ಯ ಪ್ರತಿಭಟಿಸಿದ್ದನ್ನು ವಿವರಿಸಿದ್ದಾರೆ. "ಇದೇನು ಕಾರಣ ಮರ್ತ್ಯಕ್ಕೆ ಬಂದರೆಂದು ಸಂಕಲ್ಪಿಸಿ, ಶಾಪದಿಂದ ಬಂದರೆಂದು ಅವನೊಬ್ಬನು ನುಡಿಯುತ್ತಿರುವನು. ಅವನು ೨೮ ಕೋಟಿ ನರಕದಲ್ಲಿ ರವಿ ಶಶಿಗಳುಳ್ಳನ್ನ ಬರ ನರಕವನ್ನನುಭವಿಸುತಿಹನು"[೯೬] ಇದು ಪ್ರಸಾದಿ ಮಹಾದೇವಯ್ಯಗಳಿಗೆ ಗೂಳೂರು ಸಿದ್ಧವೀರಣ್ಣನ ಮೇಲಿನ ಪ್ರತಿಭಟನೆ ಎಂದು ಗುರುತಿಸಿದ್ದಾರೆ. ಜಕ್ಕಣಾರ್ಯ ಶೈವಮತದ ಕವಿಗಳಿಗೆಯು.... ವೀರಶೈವ ಪ್ರಮಥರ ಮಹತ್ವ ತಿಳಿಯದು" ಎಂದು ಜಕ್ಕಣಾರ್ಯ ಹರಿಹರನ ಬರವಣಿಗೆಯನ್ನು ಪ್ರತಿಭಟಿಸುತ್ತಾನೆ. ಹೀಗೆ ಪ್ರಭುದೇವರ ಜನನ

ಕಾರಣವನ್ನು ಕುರಿತಂತೆ ಚರ್ಚೆ ನಡೆಸಿದ್ದಾರೆ. ಶಿವಶರಣರ ಮುದ್ರಿಕೆಗಳು ಸಾಮಾನ್ಯವಾಗಿ ಅವರ ಇಷ್ಟಲಿಂಗವನ್ನು ಸಂಕೇತಿಸುತ್ತವೆ. "ಶಿವಶರಣರ ಮುದ್ರಿಕೆಯ ಸ್ಥಾವರಲಿಂಗಗಳು ಅವರ ಜನ್ಮಗ್ರಾಮದಲ್ಲಿ(ಜೇಡರ ದಾಸಿಮಯ್ಯ-ರಾಮನಾಥ-ಮುದನೂರು) ಇಲ್ಲವೆ ಅವರ ಕರ್ಮಭೂಮಿ ಗ್ರಾಮದಲ್ಲಿ(ಬಸವಣ್ಣ-ಕೂಡಲಸಂಗಮದೇವ-ಕಪ್ಪಡಿ) ಇರುವುದರಿಂದ ಮೂಲತಃ ಮುದ್ರಿಕೆಗಳು ಸ್ಥಾವರಲಿಂಗವನ್ನೇ ಸೂಚಿಸುತ್ತಿರಬಹುದೆನಿಸುತ್ತದೆ"[೭] ಎಂದಿದ್ದಾರೆ. ಈ ಹಿನ್ನೆಲೆಯಲ್ಲಿ ಪ್ರಭುದೇವರ ಮುದ್ರಿಕೆಯಾದ ಗೊಗ್ಗೋಶ್ವರ>ಗೊಹೇಶ್ವರ> ಗೊಹೇಶ್ವರ>ಗುಹೇಶ್ವರ ಹೆಸರಿನ ದೇವಾಲಯ ಅವನ ಜನ್ಮಗ್ರಾಮ ಇಲ್ಲವೇ ಕರ್ಮಭೂಮಿ ಗ್ರಾಮದಲ್ಲಿ ಇರಬಹುದೆಂದು ಹೇಳಿದ್ದಾರೆ. ಗೊಗ್ಗೇಶ್ವರ ದೇವಾಲಯ ಸ್ಥಳದ ಕುರಿತಂತೆ ಚರ್ಚೆ ನಡೆದಿದೆ. ಹರಿಹರ ಅಲ್ಲಮನ ಜನ್ಮಗ್ರಾಮವಾದ ಬಳ್ಳಿಗಾವೆಯಲ್ಲಿದೆ ಎಂದರೆ, ಮಹಾದೇವ ಅವನ ಜನ್ಮಗ್ರಾಮ ಬನವಾಸಿಯಲ್ಲಿದೆ ಎಂದಿದ್ದಾರೆ. ಆದರೆ ಈ ಎರಡೂ ಗ್ರಾಮಗಳಲ್ಲಿ ಶಾಸನಗಳ ರೀತಿಯ ದೇವಾಲಯದ ಕುರಿತಂತೆ ಪಟ್ಟಿ ಆಧಾರಗಳು ದೊರೆತಿಲ್ಲ. "ಬಳ್ಳಿಗಾವೆಯಲ್ಲಿ ಈಗ ತೋರಿಸುತ್ತಿರುವ ಗೊಗ್ಗೋಶ್ವರ ದೇವಾಲಯ ವಿದ್ವಾಂಸರ ಊಹೆಯಾಗಿದ್ದು, ಅದು ಗ್ರಾಮೀಣರಿಂದ ಇತ್ತೀಚೆಗೆ ಪ್ರಚಾರ ಪಡೆದಿದೆ. ಒಂದು ಮಾತು ನಿಜ; ಗೊಗ್ಗಗಾವುಂಡ, ಗೊಗ್ಗಲಾಸ, ಗೊಗ್ಗಿಗ, ದೊಗ್ಗಿಗೌಡ, ಗೊಗ್ಗಿನೃಪ, ಗೊಗ್ಗಿ ಸೆಟ್ಟಿ ಇಂಥ ಹೆಸರುಗಳು ಬಳ್ಳಿಗಾವೆ ಪ್ರದೇಶದ ಶಾಸನಗಳಲ್ಲಿ ಹೆಚ್ಚು ಸಿಗುವುದರಿಂದ ಗೊಗ್ಗೇಶ್ವರ ದೇವಾಲಯ ಬಹುಶಃ ಬಳ್ಳಿಗಾವೆಯಲ್ಲಿಯೇ ಇರಬಹುದು" ಎಂಬ ಅಭಿಪ್ರಾಯವಿದೆ. ಆದರೆ ಇದು ಜನ್ಮಗ್ರಾಮ ಎಂದು ಹೇಳಲಾಗದು. ಕರ್ಮಭೂಮಿ ಆಗಿರಬಹುದು ಎಂಬುದು ಎಂ.ಎಂ. ಕಲಬುರ್ಗಿ ಅವರ ಅಭಿಪ್ರಾಯವಾಗಿದೆ.

ಪ್ರಭುದೇವರ ಜೀವನದಲ್ಲಿ ಹೆಣ್ಣಿನ ಪ್ರವೇಶವಿದೆ. ಆಕೆಯ ಹೆಸರಿನ ಕುರಿತು ಚರ್ಚೆ ನಡೆಸಿದ್ದಾರೆ. ಹರಿಹರ ಆಕೆ ಕಾಮಲತೆ ಎಂದರೆ ಚಾಮರಸ ಮಾಯಾದೇವಿ ಎಂದು ತನ್ನ ಕಾವ್ಯದಲ್ಲಿ ಬಳಸಿಕೊಂಡಿದ್ದಾನೆ. ಈ ರೀತಿಯಾಗಿ ಪ್ರಭುದೇವರ ಜೀವನದ ಬೆಳವಣಿಗೆಯ ಹಂತಗಳನ್ನು ಕುರಿತು ಲೇಖನದಲ್ಲಿ ಚರ್ಚಿಸಿದ್ದಾರೆ.

ಬಸವಣ್ಣನನ್ನು ಕುರಿತಂತೆ ಸುಮಾರು ೧೭ ಲೇಖನಗಳನ್ನು ರಚಿಸಿದ್ದಾರೆ. ಅಲ್ಲಮ ಪ್ರಭುವಿನ ಜನನದ ಉದ್ದೇಶದಂತೆ ಬಸವಣ್ಣನವರ ಜನನಕ್ಕೂ ಒಂದು ಉದ್ದೇಶವಿರುವುದನ್ನು ಅರಿತ ಎಂ.ಎಂ.ಕಲಬುರ್ಗಿ ಅವರು ಈ ವಿಷಯವನ್ನು 'ಬಸವಣ್ಣನವರ ಜನನದ ಉದ್ದೇಶ' ಎಂಬ ಲೇಖನದಲ್ಲಿ ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. ಬಸವಣ್ಣನ ಜನನದ ಉದ್ದೇಶವನ್ನು ಕುರಿತಂತೆ ಕವಿಗಳು ತಮ್ಮದೇ ಆದ ನಿಲುವನ್ನು ತಮ್ಮ ಕಾವ್ಯಗಳಲ್ಲಿ ವ್ಯಕ್ತಪಡಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಎಂ.ಎಂ.ಕಲಬುರ್ಗಿ ಅವರು ಬಸವಣ್ಣನವರ ಜನನದ ಉದ್ದೇಶವನ್ನು ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ.

"೧. ಖಿಲವಾದ ಶಿವಮತವನ್ನು ಉದ್ಧರಿಸಬೇಕೆಂಬ ನಾರದನ ಬಿನ್ನಹದ ಮೇರೆಗೆ ಶಿವನು ನಂದಿನಾಥನನ್ನು ಬಸವಣ್ಣನಾಗಿ ಕಳಿಸಿದನೆಂದು ಬಸವಪುರಾಣ ಹೇಳುತ್ತದೆ.

೨. ವಸುದೀಪ್ಯ(ಅನಿಮಿಷ)ನಿಗೆ ತನ್ನ ಇಷ್ಟಲಿಂಗವನ್ನು ಕೊಟ್ಟು, ನಂದಿ ಕೈಲಾಸಕ್ಕೆ ಹೋಗುತ್ತಾನೆ. ಲಿಂಗವಿರಹಿತನೆಂಬ ನಿಂದೆಯನ್ನು ನೀಗಿಸಿಕೊಂಡು ಬರಲು ನೀಡಿದ ಶಿವನ ಆಜ್ಞೆಯಂತೆ ಆತನು ಭೂಲೋಕದಲ್ಲಿ ಬಸವಣ್ಣನಾಗಿ ಜನಿಸಿದನೆಂದು ಸಿಂಗಿರಾಜ ಪುರಾಣ ಹೇಳುತ್ತದೆ.

೩. ಕೈಲಾಸದಲ್ಲಿ ಎಲ್ಲ ಗಣಗಳಿಗೂ ಪುಷ್ಪಪ್ರಸಾದವನ್ನು ಹಂಚುವಾಗ ವೃಷಭಮುಖನು ಷಣ್ಮುಖನನ್ನು ಮರೆಯುತ್ತಾನೆ. ಈ 'ಪ್ರಸಾದ ವಿತರಣೆ'ಯ ವಿಷಯವಾಗಿ ಮಾಡಿದ ತಪ್ಪನ್ನು ತಿದ್ದಿಕೊಂಡು ಬರಲು ಶಿವನು ಆತನನ್ನು ಬಸವಣ್ಣನಾಗಿ ಕಳಿಸಿದನೆಂದು ಬಸವರಾಜ ದೇವರ ರಗಳೆ ಹೇಳುತ್ತದೆ"[೮]

ಎಂಬ ಅಭಿಪ್ರಾಯಗಳನ್ನು ಅವಲೋಕಿಸಿದ ಎಂ.ಎಂ.ಕಲಬುರ್ಗಿ ಅವರು ಹರಿಹರನ ಅಭಿಪ್ರಾಯ ವನ್ನು ಒಪ್ಪುವ ಹಿನ್ನೆಲೆಯಲ್ಲಿಯೇ ಚರ್ಚಿಸಿದ್ದಾರೆ. ಹರಿಹರನ ಪ್ರಕಾರ ಬಸವಣ್ಣ ಹುಟ್ಟಿದುದು 'ಪ್ರಸಾದ' ತತ್ವದ ಸಿದ್ಧಿಗಾಗಿ, ಪ್ರಸಿದ್ಧಿಗಾಗಿ ಎನ್ನುತ್ತಾ ಬಸವಣ್ಣ ತಾನು ಹುಟ್ಟುವುದಕ್ಕೂ ಮೊದಲು ಪರಿಸರ ಪದಾರ್ಥಮಯವಾಗಿದ್ದುದನ್ನು ಪ್ರಸಾದಮಯ ಮಾಡುವುದು ಜನನದ ಉದ್ದೇಶವಾಗಿದೆ. ಪರಿಸರವನ್ನು ಪ್ರಸಾದಮಯ ಬಂದೊದಗಿದ ಸಂದರ್ಭವನ್ನು ಇಲ್ಲಿ ಚರ್ಚೆಗೆ ಒಳಪಡಿಸಿದ್ದಾರೆ. ಬಸವಣ್ಣ ಒಮ್ಮೆ ಭಂಡಾರದ ನಿಧಿ–ಸಂಪತ್ತು ಸಮಾಜದ ಜನತೆಗಳದ್ದು ಎಂದಾಗ ಬಿಜ್ಜಳನೊಂದಿಗೆ ಸಂಘರ್ಷ ಉಂಟಾಯಿತು. "ಲೋಕಾಯತರ್ಗೆ' ಅಂದರೆ ಪದಾರ್ಥವಾದಿ ಪ್ರಜೆ(=ಭವಿ)ಗಳಿಗೆ ವ್ಯಯವಾಗುತ್ತಲಿದ್ದ ರಾಜ್ಯಸಂಪತ್ತು 'ಲಿಂಗಾಯತರ್ಗೆ' ಅಂದರೆ ಪ್ರಸಾದಿವಾದಿ ಪ್ರಜೆ(=ಭಕ್ತ)ಗಳಿಗೆ ಬಳಕೆಯಾಗಬೇಕೆಂಬುದು ಬಸವಣ್ಣನ ಸಿದ್ಧಾಂತ."[೯೯] ಇವುಗಳಲ್ಲಿ ಲೋಕಾಯತ ಸಂವಿಧಾನ ಬಿಜ್ಜಳನಲ್ಲಿ ಕಂಡುಬಂದರೆ, ಲಿಂಗಾಯತ ಸಂವಿಧಾನ ಬಸವಣ್ಣನಲ್ಲಿ ಕಂಡುಬಂದಿದೆ. ಬಸವಣ್ಣ ಬಿಜ್ಜಳನ ಆಸ್ಥಾನದಲ್ಲಿದ್ದರೂ ರಾಜನ ತತ್ವಕ್ಕೆ ವಿರುದ್ಧವಾಗಿ ಸಮಾಜಮುಖಿಯಾಗಿ ನಿಲ್ಲುತ್ತಾನೆ. ರಾಜ್ಯದ ಸಂಪತ್ತನ್ನು ಪದಾರ್ಥಭಾವದಿಂದ ಉಪಯೋಗಿಸಿ ಕೊಳ್ಳುವ ಮೇಲ್ವರ್ಗದ ಜನತೆಯನ್ನು ವಿರೋಧಿಸುತ್ತ, ಪ್ರಸಾದಿಭಾವದಿಂದ ಉಪಭೋಗಿಸುವವರಿಗೆ ವಿನಿಯೋಗಿಸುತ್ತಾನೆ. "ಬಸವರಾಜದೇವರ ರಗಳೆ ಕನ್ನಡದ ಪ್ರಥಮ ಸಾಮಾಜಿಕ ಸಂಘರ್ಷ ಕಾವ್ಯವಾಗಿದೆ. ಒಟ್ಟು ಕಾವ್ಯ ತನ್ನ ಕೇಂದ್ರ ಉದ್ದೇಶವಾದ 'ಪ್ರಸಾದತತ್ವ'ದ ಸುತ್ತ ಬಿಚ್ಚಿಕೊಳ್ಳುತ್ತ ನಡೆದಿದ್ದು, ಇದು ಬಸವಣ್ಣನವರ ಜೀವನೋದ್ದೇಶವನ್ನು ಅರ್ಥ ಮಾಡಿಕೊಂಡ ಕನ್ನಡ ಕಾವ್ಯಗಳಲ್ಲಿಯೇ ಅರ್ಥಪೂರ್ಣ ಕೃತಿಯಾಗಿದೆ"[೧೦೦]ಎಂದು ಎಂ.ಎಂ.ಕಲಬುರ್ಗಿ ಅವರ ಹರಿಹರನ

ಬಸವರಾಜದೇವರ ರಗಳೆಯಲ್ಲಿ ಪ್ರಸ್ತಾಪ ಮಾಡಿರುವ ವಿತರಾಣೆಯೇ ಬಸವಣ್ಣನವರ ಜನನದ ಉದ್ದೇಶ ಎಂದು ಒಪ್ಪಿತ ಅಂಶವನ್ನು ವ್ಯಕ್ತಪಡಿಸಿದ್ದಾರೆ.

'ಬಸವಣ್ಣನವರ ವಚನಗಳಲ್ಲಿ ವ್ಯಕ್ತಿಗತ ಸಂಗತಿಗಳು' ಎಂಬ ಲೇಖನದಲ್ಲಿ ಎಂ.ಎಂ. ಕಲಬುರ್ಗಿ ಅವರು ಬಸವಣ್ಣನನ್ನು ಪವಾಡಸದೃಶ ವ್ಯಕ್ತಿಯಾಗಿ ಮತ್ತು ಚಾರಿತ್ರಿಕ ವ್ಯಕ್ತಿಯಾಗಿ ಎರಡು ನೆಲೆಯಲ್ಲಿ ಹುಡುಕಾಟ ನಡೆಸಿದ್ದಾರೆ. ಬಸವಣ್ಣನ ಜೀವನದಲ್ಲಿ ನಡೆದ ಅನೇಕ ಘಟನೆಗಳ ಆಧಾರದ ಮೇಲೆ ಮತ್ತು ಆತನ ವಚನಗಳ ಆಧಾರದ ಮೇಲೆ ಬಸವಣ್ಣನು ಬದುಕಿ ಬಾಳಿದ ಕಾಲಘಟ್ಟ, ಆಡಳಿತದಲ್ಲಿ ಬಸವಣ್ಣನ ಪಾತ್ರ, ಆತನ ಕಾರ್ಯವಿಧಾನ, ಮಹಾಮನೆಯ ನಿರ್ಮಾಣ, ಶೂನ್ಯ ಸಿಂಹಾಸನದ ಸ್ಥಾಪನೆ, ಭಕ್ತನಾಗಿ, ಆಡಳಿತ ಅಧಿಕಾರಿಯಾಗಿ ಧರ್ಮಪ್ರಸಾರ, ಸಮಾಜೋದ್ಧಾರ ಮಾಡಿದ ಘಟನೆಗಳ ವಿವರವನ್ನು ಆಧಾರ ಸಮೇತವಾಗಿ ಶೋಧಿಸಿದ್ದಾರೆ. ಬಸವಣ್ಣ ಯಾವ ಯಾವ ವಯಸ್ಸಿನಲ್ಲಿ ಎಲ್ಲೆಲ್ಲಿ ಸಂಚಾರ ಮಾಡಿದ್ದಾರೆ, ಎಷ್ಟು ವರ್ಷ ನೆಲೆ ನಿಂತಿದ್ದಾರೆ ಎಂಬ ಆಧಾರದ ಮೇಲೆ ಬಸವಣ್ಣನ ಜೀವಿತಾವಧಿ ೬೦ ವರ್ಷಗಳಿರಬಹುದು ಎಂಬ ಹೇಳಿಕೆ ನೀಡಿದ್ದಾರೆ. ಬಾಗೆವಾಡಿಯಲ್ಲಿ ಬಾಲ್ಯಜೀವನ, ಕೂಡಲ ಸಂಗಮದಲ್ಲಿ ತನ್ನ ಸಾಧನಾ ಕಾರ್ಯವನ್ನು ಮುಂದುವರಿಸಿದ ಬಸವಣ್ಣ ಬಸವಕಲ್ಯಾಣದಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಮಾಡುತ್ತಾ, ಭಕ್ತನಾಗಿ, ಸಮಾಜೋದ್ಧಾರಕನಾಗಿ ಮುಂದುವರೆದಿದ್ದಾನೆ. ಇವುಗಳ ಮಧ್ಯೆ ಬಸವಣ್ಣನ ಸಂಸಾರಿಕ ಜೀವನ, ಕುಟುಂಬ ಸದಸ್ಯರ ಉಲ್ಲೇಖಗಳು ಮುಂತಾದ ವಿವರಗಳನ್ನು ನೀಡುತ್ತ ಇನ್ನೂ ಬಸವಣ್ಣನ ಬಗ್ಗೆ ಶೋಧಿಸುವ ಅಂಶಗಳು ಉಳಿದುಕೊಂಡಿವೆ ಎಂಬ ನಿರ್ಣಯವನ್ನು ನೀಡಿ ಮುಂದಿನ ಸಂಶೋಧಕರಿಗೆ ದಾರಿ ಮಾಡಿಕೊಟ್ಟಿದ್ದಾರೆ. ಅನೇಕ ಕಾವ್ಯ, ಶಾಸನಗಳ ಆಧಾರಗಳೊಂದಿಗೆ ಬಸವಣ್ಣನವರ ವಚನಗಳನ್ನು ಇಟ್ಟು ಬಾಲ್ಯ, ತಾರುಣ್ಯ, ವಿದ್ಯಾಭ್ಯಾಸ, ಸಾಧನೆಗಳು ಹಾಗೂ ಐಕ್ಯಗಳ ಬಗ್ಗೆ ಒಂದು ದೃಢನಿರ್ಧಾರ ಕೈಗೊಳ್ಳುವಲ್ಲಿ ಎಂ.ಎಂ.ಕಲಬುರ್ಗಿ ಅವರ ಜಾಗ್ರತೆ ಎದ್ದು ತೋರುತ್ತದೆ.

ಬಸವಣ್ಣ: ಗುರುವಿಲ್ಲದ ಗುಡ್ಡ ಎಂಬ ಲೇಖನದಲ್ಲಿ ೧೨ನೇ ಶತಮಾನದ ಶರಣ ಚಳುವಳಿಯ ನಾಯಕನಾಗಿದ್ದು ತಮ್ಮ ನಡೆ-ನುಡಿಗಳಿಂದ ಅಂದಿನ ಸಮಾಜದಲ್ಲಿ ಮಾರ್ಗದರ್ಶಿಯಾಗಿ ಬಾಳಿದ ಬಸವಣ್ಣಗೆ ಗುರು ಯಾರು ಎಂಬ ಅಂಶವನ್ನು ಕುರಿತು ಚರ್ಚಿಸಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಗೂ ಗುರು ಇರುವಂತೆ ಶಿವಶರಣರಲ್ಲಿ ನಾಯಕವ್ಯಕ್ತಿಯಾಗಿದ್ದು, ಬಸವಣ್ಣನಿಗೂ ಒಬ್ಬ ಸಮರ್ಥ ಗುರು ಇರಬೇಕೆಂದು ಅದಕ್ಕೂ ಸಾಹಿತ್ಯದಲ್ಲಿ ಹಲವಾರು ಕವಿಗಳು ವಿಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಇದು ಇಂದಿಗೂ ಗೊಂದಲದಿಂದ ಕೂಡಿರುವುದನ್ನು ಗಮನಿಸಿದ ಎಂ.ಎಂ.ಕಲಬುರ್ಗಿ ಅವರು ಈ ಚರ್ಚೆಯನ್ನು ಕೈಗೆತ್ತಿಕೊಂಡಿರುವಂತಿದೆ. ಪ್ರಾಚೀನ

ಸಾಹಿತ್ಯದಲ್ಲಿ ದೀಕ್ಷಾ ವಿಷಯ ಬಸವಣ್ಣನ ಜನನ, ಜನಿವಾರ ನಿರಾಕರಣೆ, ಕೂಡಲಸಂಗಮದ ವಾಸ್ತವ್ಯ ಈ ಮೂರು ಸಂದರ್ಭಗಳಲ್ಲಿ ಪ್ರಸಾಪಗೊಂಡ ವಿವರಗಳನ್ನು ಸಂಗ್ರಹಿಸಿದ್ದಾರೆ.

೧. "ಕಪ್ಪಡಿಯ ಸಂಗಯ್ಯದೇವರ ಸ್ವಹಸ್ತದಿಂದಲೂಪದೇಶಮಂ ಪಡೆದು...."[೧೧೧] ಎಂದು ಮಡಿವಾಳ ಮಾಚಯ್ಯ ಹೇಳಿದ್ದಾನೆ. ಆದರೆ ಗಂಗಯ್ಯದೇವನು ವ್ಯಕ್ತಿಯೋ ದೈವವೋ ಸ್ಪಷ್ಟವಾಗಿಲ್ಲ.

೨. 'ಸಂಗಬಸವಣ್ಣನಿಗೆ ಶೈವ ಸಂಗಮೇಶ್ವರನೇ ಗುರುವಾದ.....'[೧೦೨] ಎಂದು ಮೋಳಿಗೆ ಮಾರಯ್ಯ ತನ್ನ ವಚನದಲ್ಲಿ ಹೇಳಿದ್ದಾನೆ. ಈತನು ಕೂಡ ವಲಸೆ ಜರುಗಿದ ಸ್ಥಳವಾದರೂ ಸಂಗಮೇಶ್ವರ ದೈವವೋ, ವ್ಯಕ್ತಿಯೋ ತಿಳಿಸಿಲ್ಲ.

೩. ಹರಿಹರ ಕೂಡಲಸಂಗಮದಲ್ಲಿ ಬಸವಣ್ಣನನ್ನು ಬರಮಾಡಿಕೊಂಡನು. ಈಶಾನ್ಯಗುರು, ದೀಕ್ಷೆ ನೀಡಿದುದು ಅಲ್ಲಿಯ ಸಂಗಮೇಶನ ಮುಂದಿನ ಶಿಲಾನಂದಿಯೆಂದು ತಿಳಿಸುತ್ತಾನೆ.

೪. ತೆಲುಗಿನ ಪಾಲ್ಕುರಿಕೆ ಸೋಮನಾಥ 'ಬಸವಪುರಾಣ' ಕೃತಿಯನ್ನು ಕನ್ನಡಕ್ಕೆ ಅನುವಾದಿಸಿದವನು ಭೀಮಕವಿ. ಈತ ಕಪ್ಪಡಿಯ ಸಂಗಮದಿಂದ ಸಂಗಮೇಶ್ವರ ದೇವರೇ ಗುರುರೂಪದಿಂದ ಬಾಗೇವಾಡಿಗೆ ಬಂದು, ಶಿಶುವಿಗೆ 'ಲಿಂಗಸಂಗವಂ' ಮಾಡಿ ನಂತರ ಕೂಡಲಸಂಗಮದಲ್ಲಿ ಹಿತೋಪದೇಶ ನೀಡಿದನೆಂದು ಇಲ್ಲಿ ಹೇಳಿದ್ದಾನೆ.

೫. ಲಕ್ಕಣ್ಣದಂಡೇಶ ತನ್ನ ಶಿವತತ್ವ ಚಿಂತಾಮಣಿಯಲ್ಲಿ ಕೈಲಾಸದಿಂದ ಶಿವಪಾರ್ವತಿ ಬಾಗೇವಾಡಿಗೆ ಬಂದು, ಶಿಶುವಿಗೆ 'ಶಿವಲಿಂಗ'ವನ್ನು ನೀಡಿದರೆಂದೂ, ಹಾಗೆಯೇ 'ಶಿವಾಚಾರ ಸಂಪನ್ನನೆನಿಪ ಗುರುವಿತ್ತ ಸಂಗಯ್ಯನುಪದೇಶಮಂ ಬಾಲ್ಯದಲ್ಲಿ' ಎಂದು ಬಸವಣ್ಣ ಉಪನಯನ ಸಂದರ್ಭದಲ್ಲಿ ತಂದೆಗೆ ಹೇಳಿರುವುದನ್ನು ತಿಳಿಸಲಾಗಿದೆ.

೬. ಸಿಂಗಿರಾಜ ತನ್ನ ಸಿಂಗಿರಾಜ ಪುರಾಣದಲ್ಲಿ ಶಿಶು ಹುಟ್ಟಿದ ಸಂದರ್ಭದಲ್ಲಿ ಸಂಗಮದಿಂದ ಜಾತವೇದ ಗುರುರಾಯ ಬಂದು ಇಷ್ಟಲಿಂಗವನ್ನು ದಯಪಾಲಿಸಿ, ಸಿಂಹಾಸನದ ಮೇಲಿಟ್ಟು ಪೂಜಿಸಿ ಎಂದು ಹೇಳಿರುವುದು. ಇದೇ ಕೃತಿಯಲ್ಲಿ ಕೂಡಲಸಂಗಮದಲ್ಲಿ 'ಜಾತವೇದಯ್ಯನ ಲಿಂಗಾರ್ಚನ ಮಂಟಪಕ್ಕೆ' ಬಸವಣ್ಣ ಬಂದನೆಂಬ ವಿಷಯ ಕೂಡ ಇದೆ ಎನ್ನುತ್ತ ಕೂಡಲ ಸಂಗಮದಲ್ಲಿ 'ಜಾತವೇದಿ ಗದ್ದುಗೆ' ಎಂದು ತೋರಿಸುತ್ತಿರುವುದು ಕಟ್ಟುಕಥೆಯೆಂದು ಈ ಕಟ್ಟಡ ಅಚೇಶ್ವರದೇವಾಲಯವೆಂದು ಇತ್ತೀಚೆಗೆ ಸ್ಪಷ್ಟವಾಗಿದೆ ಎಂಬ ಅಭಿಪ್ರಾಯ ತಿಳಿಸಿದ್ದಾರೆ.

ಈ ಮೇಲಿನ ಹೇಳಿಕೆಗಳಲ್ಲಿ ಬಸವಣ್ಣನ ಗುರುವಿನ ಬಗ್ಗೆ ವಿಭಿನ್ನ ಹೇಳಿಕೆಗಳನ್ನು ಗಮನಿಸಿದ ಎಂ.ಎಂ.ಕಲಬುರ್ಗಿ ಅವರು ೨ ನಿರ್ಣಯಗಳನ್ನು ಕೈಗೊಂಡಿದ್ದಾರೆ.

೧. ಬಸವಣ್ಣನಿಗೆ ಒಬ್ಬ ವ್ಯಕ್ತಿಯಿಂದ ದೀಕ್ಷೆ ಆಗಿ, ತಮ್ಮ ಸಂಪ್ರದಾಯದವನಿಂದ ಜರುಗಿತೆಂದು ಹೇಳುತ್ತ ಬಂದಿರುವುದು.

೨. ಭಾರತೀಯ ಸಂಪ್ರದಾಯದಲ್ಲಿ ದೀಕ್ಷೆ ಅಥವಾ ಶಕ್ತಿಪಾತ. ಇದರಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷ ಶಕ್ತಿಪಾತಗಳಿವೆ. ಸಾಮಾನ್ಯ ವ್ಯಕ್ತಿಗಳಿಗೆ ಲೌಕಿಕ ಗುರು ಪ್ರತ್ಯೇಕ ಶಕ್ತಿ ದಯಪಾಲಿಸಿದರೆ, ಅಸಾಮಾನ್ಯ ವ್ಯಕ್ತಿಗಳು ಅಂದರೆ ಬುದ್ಧ, ಮಹಾವೀರ, ಪೈಗಂಬರರಂತೆ ಅಲೌಕಿಕ ದೈವಶಕ್ತಿಯಿಂದ ಶಕ್ತಿಪಾತ ಸಂಭವಿಸಿರಬಹುದೆಂಬ ವಾದಗಳಿವೆ ಆ ವ್ಯಕ್ತಿಗಳ ಸಾಲಿನಲ್ಲಿ ಬಸವಣ್ಣನವರನ್ನು ಸಹ ಎದ್ದು ಕಾಣುವಂತಹ ವ್ಯಕ್ತಿತ್ವ ಎಂಬುದನ್ನು ಗಮನಿಸಿದ ಎಂ.ಎಂ.ಕಲಬುರ್ಗಿ ಅವರು ಬಸವಣ್ಣನವರ ಬಗೆಗೆ ಖಚಿತ ನಿರ್ಣಯಗಳನ್ನು ದಾಖಲಿಸಿದ್ದಾರೆ. “ಬಸವಣ್ಣನವರು ಸಾವಿರಾರು ವಚನಗಳನ್ನು ಬರೆದಿರುವುದು ದಿಟವಾಗಿದೆ. ಅದರಲ್ಲಿ ನೂರಾರು ಸಮಕಾಲೀನ ಶಿವಶರಣ ಶರಣೆಯರನ್ನು ನೆನಪಿಸಿಕೊಂಡಿದ್ದಾರೆ. ಹೀಗಿರುವಾಗ ತಮಗೆ ಲಿಂಗದೀಕ್ಷೆ ನೀಡಿದ ಗುರುವಿನ ಬಗೆಗೆ ತಮ್ಮ ವಚನಗಳಲ್ಲಿ ‘ಚ’ಕಾರ ಎತ್ತಿರುವುದಿಲ್ಲ ಏಕೆ ಎಂಬ ಮೊದಲ ಪ್ರಶ್ನೆ ಸಂಶೋಧಕರದು. ಬಸವಣ್ಣನವರೇ ಒಂದು ವಚನದಲ್ಲಿ ‘ಜಗದಗಲ ಮುಗಿಲಗಲ, ಮಿಗೆಯಗಲ, ನಿಮ್ಮಗಲ! ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ! ಆಕಾಶದಿಂದತ್ತತ್ತ ನಿಮ್ಮ ಶ್ರೀ ಮುಕುಟ! ಅಗಮ್ಯ, ಅಗೋಚರ ಅಪ್ರತಿಮ ಲಿಂಗವೇ ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯ!” ಎಂದಿದ್ದಾರೆ. ಇದರಿಂದ ಅವರು ತಮ್ಮ ಸಾಧನೆಯ ಮುಖಾಂತರ ಇಷ್ಟಲಿಂಗವನ್ನು ಸ್ವಾಯತ್ತ ಮಾಡಿಕೊಂಡರೆಂಬುದು ವಿದಿತವಾಗುತ್ತದೆ”[೧೦೩] ಎಂದು ಕಲ್ಯಾಣರಾವ್ ಪಾಟೀಲ ಅವರು ಎಂ.ಎಂ.ಕಲಬುರ್ಗಿ ಅವರ ಅಭಿಪ್ರಾಯವನ್ನೇ ಎತ್ತಿ ಹಿಡಿಯುವ ಪ್ರಯತ್ನವನ್ನು ಮಾಡಿದ್ದಾರೆ.

೧೫ನೆಯ ಶತಮಾನದ ಕೊಡೇಕಲ್ಲ ಬಸವಣ್ಣನವರ ಶಿಷ್ಯನಾದ ದಲಿತ ಮೂಲದ ಮಂಟೇಸ್ವಾಮಿಯು ತೀರ್ಥಯಾತ್ರೆ ಮಾಡುತ್ತ ಚಾಮರಾಜನಗರ ಜಿಲ್ಲೆಯ ಬೊಪ್ಪಗೊಂಡನ ಹಳ್ಳಿಯಲ್ಲಿ ಐಕ್ಯವಾದನು. ಈಗಲೂ ಇವನ ಪರಂಪರೆಯ ಲಕ್ಷಾಂತರ ದಲಿತ ಅನುಯಾಯಿಗಳು ಇದ್ದು, ಕಲ್ಯಾಣದ ಶರಣ ಬಸವಣ್ಣನನ್ನೆ ತಮ್ಮ ಗುರುವೆಂದು ಭಾವಿಸಿಕೊಂಡಿದ್ದಾರೆ. ಕಲ್ಯಾಣದ ಶರಣರನ್ನು ಕುರಿತ ಅಪಾರವಾದ ಜನಪದ ಸಾಹಿತ್ಯ ಕೂಡ ಇದೆ. “ಈ ಸಾಹಿತ್ಯದ ಒಂದು ಹಾಡು ಬಸವಣ್ಣನನ್ನು ‘ಗುರುವಿಲ್ಲದ ಗುಡ್ಡ’ ಎಂದು ಕೀರ್ತಿಸುತ್ತದೆ. ಗುಡ್ಡ ಎಂದರೆ ಶಿಷ್ಯ, ಹೀಗಾಗಿ ಬಸವಣ್ಣನಿಗೆ ಗುರುವೆಂಬುವವನು ಇಲ್ಲವೆಂದು ಇವರ ವಾದ.”[೧೦೪] ಒಂಬೈನೂರು ವರ್ಷಗಳಿಂದಲೂ ಹಾಡಿನ ಮೂಲಕ ಬಸವಣ್ಣನನ್ನು ‘ಗುರುವಿಲ್ಲದ ಗುಡ್ಡ’ ಎನ್ನುತ್ತ ಬಂದಿರುವುದರಲ್ಲಿ ಪರಮಸತ್ಯವಡಗಿದೆ. ಹಾಗಾಗಿ ಈ ಮಾತನ್ನು ಒಪ್ಪುವ ಮೂಲಕ ಈ ಚರ್ಚೆಗೆ ಎಂ.ಎಂ.ಕಲಬುರ್ಗಿ ಅವರು ಅಂತಿಮ ತೆರೆಯನ್ನು ಎಳೆದಿದ್ದಾರೆ.

'ಬಸವಣ್ಣನವರು ಯಾವ ಮೂಲದ ಬ್ರಾಹ್ಮಣರು?' ಎಂಬ ಲೇಖನದಲ್ಲಿ ಬಸವಣ್ಣನವರು ಬ್ರಾಹ್ಮಣರೆಂಬ ಅಂಶ ಎಲ್ಲರಿಗೂ ತಿಳಿದಿದ್ದರೂ ಯಾವ ಮೂಲದ ಬ್ರಾಹ್ಮಣರೆಂದು ನಿರ್ದಿಷ್ಟವಾಗಿ ಹೇಳಲು ಕಷ್ಟ ಸಾಧ್ಯ. ಹಾಗಾಗಿ ಇದನ್ನು ಸ್ಪಷ್ಟಪಡಿಸುವ ಉದ್ದೇಶದಿಂದ ಈ ಲೇಖನದಲ್ಲಿ ಚರ್ಚಿಸಿದ್ದಾರೆ. ಕೆಲವು ವಿದ್ವಾಂಸರು ಬಸವಣ್ಣ ಕಮ್ಮೆ ಬ್ರಾಹ್ಮಣ, ಸ್ಮಾರ್ತ ಬ್ರಾಹ್ಮಣ ಅಥವಾ ಆರಾಧ್ಯ ಬ್ರಾಹ್ಮಣ ಇರಬಹುದೆಂಬ ತಮ್ಮದೇ ಆದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಈ ಗೊಂದಲವನ್ನು ಎಂ.ಎಂ.ಕಲಬುರ್ಗಿ ಅವರು ಸ್ಪಷ್ಟ ಆಧಾರಗಳ ಮೂಲಕ ಬಸವಣ್ಣನ ಬ್ರಾಹ್ಮಣತ್ವದ ಮೂಲವನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ಪ್ರಸ್ತುತ ದಿನಮಾನಗಳಲ್ಲಿ ಪ್ರಚಲಿತವಿರುವ ಬ್ರಾಹ್ಮಣ ಧರ್ಮಗಳು ಮೂರು. ಅವು ವೈದಿಕ ಸಂಪ್ರದಾಯಕ್ಕೆ ಸಂಬಂಧಿಸಿವೆ. "ದ್ವೈತ(ಮಾಧ್ವ) ಅಸ್ತಿತ್ವಕ್ಕೆ ಬಂದುದು. ಬಸವಣ್ಣನವರ ತರುವಾಯ ೧೩ನೇ ಶತಮಾನದಲ್ಲಿ ವಿಶಿಷ್ಟಾದ್ವೈತ (ರಾಮಾನುಜಚಾರ್ಯ) ೧೧ನೇ ಶತಮಾನದಲ್ಲಿ ತಮಿಳುನಾಡಿನಿಂದ ಕರ್ನಾಟಕವನ್ನು ಪ್ರವೇಶಿದ್ದರು. ಅದು ಇಂದಿಗೂ ಸಿಮೀತವಾಗಿರುವುದು ದಕ್ಷಿಣ ಕರ್ನಾಟಕದಲ್ಲಿ. ಮೇಲಾಗಿ ಇವೆರಡೂ ವೈಷ್ಣವ ಪರಂಪರೆಯ ಧರ್ಮಗಳು. ಆದುದರಿಂದ ಬಸವಣ್ಣನ ಪೂರ್ವಜರು ಈ ಎರಡೂ ಪಂಗಡಗಳಿಗೆ ಸಂಬಂಧಿಸಿಲ್ಲವೆಂದಾದರೆ ಅವರು ಮೂರನೆಯವರಾದ ಶಂಕರಾಚಾರ್ಯರ ಅದ್ವೈತ(ಸ್ಮಾರ್ತ) ಶೈವರೆಂದು ಈವರೆಗೆ ಎಲ್ಲರೂ ಭಾವಿಸಿದ್ದಾರೆ. ಬಸವಣ್ಣನರ ವಂಶಜರೆಂದು ಹೇಳಿಕೊಳ್ಳುವ ಬಾಗೇವಾಡಿ ಇಂಗಳೇಶ್ವರ ಬ್ರಾಹ್ಮಣ ಕುಟುಂಬದವರು ಇಂದು ಶಂಕರನ ಅದ್ವೈತ ಶೈವ ಬ್ರಾಹ್ಮಣರ ಸ್ವರೂಪದ ಬಗ್ಗೆ ಸಿಗುವ ಸೂಚನೆಗಳು ಶಂಕರರ ಅದ್ವೈತಕ್ಕೆ ಅಷ್ಟಾಗಿ ಹೊಂದಿಕೆಯಾಗ ದಿರುವುದರಿಂದ ಬಾಗೇವಾಡಿ ಇಂಗಳೇಶ್ವರದ ಈ ಕುಟುಂಬ ಮೂಲತಃ ಯಾವುದೋ ಬೇರೆ ಬ್ರಾಹ್ಮಣ್ಯವಾಗಿದ್ದು, ೧೨ನೇ ಶತಮಾನದ ತರುವಾಯ ಶಂಕರರ ಅದ್ವೈತಕ್ಕೆ ಮತಾಂತರಗೊಂಡಿರುವ ಸಂಭವವೂ ಉಂಟು"[೧೦೫] ಎಂದು ಬ್ರಾಹ್ಮಣರ ಮೂಲವನ್ನು ಶೋಧಿಸಲು ಯತ್ನಿಸುತ್ತ ಶೈವ ಮೂಲದವರು ಬಸವಣ್ಣ ಎನ್ನುತ್ತ ಯಾವ ಶೈವ ಬ್ರಾಹ್ಮಣರಿರಬಹುದೆಂದು ಚರ್ಚಿಸಲು ಪ್ರಯತ್ನಿಸಿದ್ದಾರೆ. ಹರಿಹರಾದಿಗಳು ಬಸವಣ್ಣ ವೈದಿಕ ಶೈವ ಬ್ರಾಹ್ಮಣ(ಸ್ಮಾರ್ತ)ಎಂದಿದ್ದಾರೆ. ಅದೇ ಅಭಿಪ್ರಾಯ ಅರ್ಜುನವಾಡ ಶಾಸನದಲ್ಲಿ "ಬಾಗವಾಡಿ ಪುರವರಾಧೀಶ್ವರಂ ಮಾದಿರಾಜ" ಎಂದಿದೆ. ಆದರೆ ಕರ್ನಾಟಕದ ಅಗ್ರಹಾರ ವೈದಿಕ ಬ್ರಾಹ್ಮಣರಿಗೆ ಶಾಸನಗಳು ಎಲ್ಲಿಯೂ 'ಪುರವರಾಧೀಶ್ವರ' ಎಂದು ಕರೆದಿಲ್ಲವಾಗಿ ಮಾದಿರಾಜನು ಶಂಕರನ ವೈದಿಕ ಶೈವ ಬ್ರಾಹ್ಮಣನಲ್ಲ ವೆಂದು ಖಚಿತವಾಗಿ ಹೇಳಬಹುದು ಎಂದಿದ್ದಾರೆ. ಈ ರೀತಿಯ ಹಲವಾರು ಚರ್ಚೆ ಮಾಡುವ ಮೂಲಕ ಒಂದು ನಿರ್ಧಾರಕ್ಕೆ ಬರಲು ಪ್ರಯತ್ನಿಸಿದ್ದಾರೆ. ಬಸವಣ್ಣನ ಪೂರ್ವಜರು ಶಂಕರಾ ಚಾರ್ಯರ ಸಂಪ್ರದಾಯದ ವೈದಿಕ ಶೈವ ಬ್ರಾಹ್ಮಣರಲ್ಲ. ದೂರ್ವಾಸ, ಸಂಪ್ರದಾಯದ

ಆಗಮಿಕ ಶೈವ ಬ್ರಾಹ್ಮಣರು(ಶುದ್ಧಶೈವ ಬ್ರಾಹ್ಮಣ, ಸಿದ್ಧಾಂತ ಶೈವ ಬ್ರಾಹ್ಮಣ, ಆರಾಧ್ಯಶೈವ ಬ್ರಾಹ್ಮಣ) ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. "ಇವರು ಸೋದರ ಪಂಥಗಳಾದ ಪಾಶುಪತ, ಲಕುಲೀಶ, ಮಹಾವ್ರತಿಗಳೆಂಬ ಶೈವಬ್ರಾಹ್ಮಣರನ್ನು ಒಳಗು ಮಾಡಿಕೊಂಡು, ವೀರಶೈವವೆಂಬ ಹೊಸ ಹೆಸರಿನಲ್ಲಿ ಪಂಚಾಚಾರ್ಯ(ಚತುರಾಚಾರ್ಯ) ಅಧಿಕಾರದಿಂದ ಬಸವಣ್ಣನ ಲಿಂಗಾಯತದ ಮೇಲೆ ಸವಾರಿ ಮಾಡಿದರು ಅಥವಾ ಬಸವಣ್ಣ ಯಾವ ಬ್ರಾಹ್ಮಣ್ಯವನ್ನು ನಿರಾಕರಿಸಿ ಹೊರಬಂದಿದ್ದನೋ ಆ ಬ್ರಾಹ್ಮಣ್ಯವು ವೀರಶೈವ ಹೆಸರಿನಲ್ಲಿ ಪಂಚಾಚಾರ್ಯ ಸ್ವಾಮಿತ್ವದಲ್ಲಿ ಅವನ ಲಿಂಗಾಯತ ಸಮಾಜದ ಮೇಲೆ ಧಾರ್ಮಿಕ ಅಧಿಕಾರ ಸ್ಥಾಪಿಸುತ್ತ ಬಂದಿತು"[೧೦೬]ಎಂಬ ಮಾತಿನಲ್ಲಿ ಬಸವಣ್ಣ ಬ್ರಾಹ್ಮಣ್ಯವನ್ನು ತೊರೆದು ಬಂದು ಲಿಂಗಾಯತ ಸಮಾಜ ಕಟ್ಟಿದ್ದನೋ ಅದು ಕೂಡ ಒಂದು ಧಾರ್ಮಿಕ ಕಟ್ಟುಪಾಡುಗಳಿಗೆ ಒಳಗಾಗಿದ್ದು ಒಂದು ಬೇಸರದ ಸಂಗತಿ ಎನ್ನಬಹುದಾಗಿದೆ.

'ಬಸವಣ್ಣನ ಸಂಪ್ರದಾಯ' ಎಂಬ ಲೇಖನದಲ್ಲಿ ಬಸವಣ್ಣನ ಸಂಪ್ರದಾಯ ಶೋಧವನ್ನು ಕುರಿತಂತೆ ಚರ್ಚಿಸಿದ್ದಾರೆ. ವೀರಶೈವರಲ್ಲಿ ಕಂಡುಬರುವ ಉಪಜಾತಿಯವರು ಗುರುವರ್ಗದ ಕಡೆಗೆ ಒಲವು ತೋರಿದರೆ, ವರ್ತಕ ವರ್ಗದವರು ವಿರಕ್ತವರ್ಗದ ಕಡೆಗೆ ಹೆಚ್ಚು ಒಲವು ತೋರುತ್ತಾರೆ. ವಿರಕ್ತ ಪರಂಪರೆಯೆಂಬುದು ಬಸವಾದಿ ಶರಣ ಪರಂಪರೆಯ ಮುಂದಿನ ಹೆಜ್ಜೆಯನ್ನು ಇಲ್ಲಿ ನೆನೆಯಬಹುದು ಎನ್ನುತ್ತ ಬಸವಣ್ಣನ ಸಂಪ್ರದಾಯ ಮತ್ತು ವರ್ತಕವರ್ಗ ಇವುಗಳಿಗಿರುವ ಸಂಬಂಧ ಕಲ್ಪಿಸುವ ಮಾತುಗಳಿಗೆ ಉತ್ತರ ಹುಡುಕಬೇಕೆಂದು ಸಂಶೋಧಕರಿಗೆ ಸೂಚನೆ ನೀಡಿದ್ದಾರೆ. ಇಷ್ಟೆಲ್ಲಾ ಬಸವಣ್ಣನ ಕುರಿತು ಚರ್ಚೆ ಮಾಡಿದ್ದರೂ ಎಂ.ಎಂ.ಕಲಬುರ್ಗಿ ಅವರು ಮತ್ತೆ ಅದರ ಹುಡುಕಾಟದಲ್ಲಿ ನಿರತರಾದಾಗ ಮತ್ತೆ ಇನ್ನೆರಡು ಆಕರಗಳು ಲಭಿಸುತ್ತವೆ.

"ವೇಣುಪುರದ ಕ್ಷತ್ರಿಯರ ವಂಶಾವಳಿ' ಎಂಬ ಅಪ್ರಕಟಿತ ಕೃತಿಯಲ್ಲಿ, ಮೂಲತಃ ಕೆಳವರ್ಣದವರಾಗಿದ್ದ(?) ಕಳಲೆ ಅರಸುಮನೆತನದ ಮಲ್ಲರಾಜಯ್ಯ ಅವರಿಗೆ ವೀರಶೈವ[ಕೆರೆಯ] ಪದ್ಮರಸರ ಬಗೆ'ಯನ್ನು ಕೊಡಲಾಯಿತೆಂಬ ಉಲ್ಲೇಖ ಬರುತ್ತದೆ. ರಾಜಾವಳಿ ಕಥಾಸಾರದಲ್ಲಿ (ಪು.೧೩೨) ದೇವಚಂದ್ರ ಹೇಳುವ 'ಕೆರೆ ಪದ್ಮರಸನ ಸಂತತಿ, ಕೇಶಿರಾಜನ ಸಂತತಿ, ಮಲುಹಣ ಸಂತತಿ, ಮಯೂರ ಸಂತತಿಯವರು ಪಂಡಿತಾರಾಧ್ಯ ರೇವಣಾರಾಧ್ಯ ಏಕೋರಾಮಾರಾಧ್ಯ ಮರುಳಾರಾಧ್ಯ ಚತುಃ ಸಿಂಹಾಸನವಾಧಿಪತಿಗಳಂ ಮಾಡಿ ಎಂಬ ಮಾತು ನಮ್ಮ ಗಮನ ಸೆಳೆಯುತ್ತದೆ"[೧೦೭] ಎಂದು ಹೇಳುತ್ತ ಪ್ರಾಚೀನ ನಾಲ್ಕು ಸಂತತಿಗಳೇ ಇತ್ತೀಚೆಗೆ ಪೀಠಗಳಾಗಿ ರೂಪ ಪಡೆದವೆಂಬ ಸೂಚನೆಗಳಿವೆ. ಈ ರೀತಿಯ ಸಂತತಿಗಳಿಗೆ ಕೆಲವರು ಅಂಟಿಕೊಳ್ಳುತ್ತಿರುವಾಗ ಬಣಜಿಗರು ಬಸವಣ್ಣನ ಸಂಪ್ರದಾಯದವರೆಂದು ಪ್ರತ್ಯೇಕ ಸಂತತಿಗೆ ಅಂಟಿಕೊಂಡಿರಬಹುದೇ

ಎಂದು ಆಲೋಚಿಸಬೇಕಾಗಿದೆ ಎಂಬ ಅಭಿಪ್ರಾಯವನ್ನು ಎಂ.ಎಂ.ಕಲಬುರ್ಗಿ ಅವರು ವ್ಯಕ್ತ ಪಡಿಸಿದ್ದಾರೆ.

'ಬಸವಣ್ಣನ ಅಡ್ಡಹೆಸರು' ಎಂಬ ಲೇಖನದಲ್ಲಿ ಬಸವಣ್ಣನಿಗಿರಬಹುದಾದ ಅಡ್ಡ ಹೆಸರನ್ನು ಕುರಿತು ಚರ್ಚಿಸಿದ್ದಾರೆ. ಸಮಾಜದಲ್ಲಿ ಪ್ರಾಚೀನ ಕಾಲದಿಂದಲೂ ವ್ಯಕ್ತಿಗಳನ್ನಾಗಲಿ, ಮನೆತನಗಳಿಗಾಗಲೀ ಅಡ್ಡಹೆಸರಿನಿಂದ ಗುರುತಿಸುವ ವಾಡಿಕೆ ಇತ್ತು. ಅದು ಪ್ರಸ್ತುತ ದಿನಮಾನ ಗಳಲ್ಲಿ ಕಂಡುಬರುತ್ತಿದೆ. ಒಂದೇ ಹೆಸರಿನವರು ಹಲವಾರು ವ್ಯಕ್ತಿಗಳಿರುವುದರಿಂದ ಗುರುತಿಸಲು ಸುಲಭಮಾರ್ಗವಾಗಿ ಅಡ್ಡಹೆಸರುಗಳನ್ನು ಇಟ್ಟುಕೊಂಡಿರುವುದು ಕಾರಣವೆನ್ನಬಹುದು. "ಸಮೂಹದಿಂದ ಒಬ್ಬ ವ್ಯಕ್ತಿಯನ್ನು ಸರಿಯಾಗಿ ಪ್ರತ್ಯೇಕಿಸಿ ಕೊಡಲು ಹೆಸರು ಅಸಮರ್ಥವಾದಲ್ಲಿ ತಂದೆಯ ಹೆಸರನ್ನು, ಅದೂ ಅಸಮರ್ಥವಾದಲ್ಲಿ ಹೆಚ್ಚಿನದಾಗಿ ಇನ್ನೊಂದು ಹೆಸರನ್ನು ಸೇರಿಸುವುದು ಚಲಾವಣೆಯಲ್ಲಿ ಬಂದಿರಬೇಕು. ಆದುದರಿಂದ ಒಬ್ಬನನ್ನು ಗುರುತಿಸುವಲ್ಲಿ ಬಳಸುವ ವ್ಯಕ್ತಿನಾಮ, ಪಿತೃನಾಮಗಳಲ್ಲದ ಆ ಮೂರನೆಯ ಹೆಸರೇ 'ಅಡ್ಡಹೆಸರು' ಎಂದು ವ್ಯಾಖ್ಯಾನಿಸಬಹುದು. ಪ್ರತ್ಯೇಕಿಸಿಕೊಡುವುದೇ ಆ ಮೂರನೆಯ ಹೆಸರಿನ ಮುಖ್ಯ ಉದ್ದೇಶವಾಗಿದ್ದರೂ ಅದು ಆ ವ್ಯಕ್ತಿಯ, ಆತನ ಪೂರ್ವಜರ ನೆಲೆ, ಜೀವನ ಸಾಧನೆ, ಸಂಸ್ಕೃತಿ ಪರಂಪರೆಗಳನ್ನು ಪ್ರತಿನಿಧಿಸುತ್ತದೆ"[೧೦೮] ಎಂದು 'ಅಡ್ಡಹೆಸರು' ಎಂಬ ಲೇಖನದಲ್ಲಿ ಅಡ್ಡಹೆಸರಿಗೆ ಕಾರಣವೇನು ಹಾಗೆಯೇ ಅದರ ಹಿಂದೆ ಅಡಗಿರುವ ಉದ್ದೇಶವೇನು ಎಂಬುದನ್ನು ಅರ್ಥೈಸಿದ್ದಾರೆ. ಮನೆಯ ಮುಂದಿನ ವೃಕ್ಷಕಾರಣವಾಗಿ ಮಯೂರ ವರ್ಮನಿಗೆ 'ಕದಂಬ' ಎಂಬ ಅಡ್ಡ ಹೆಸರು ಬಂದಿದೆ ಎಂದು ಇತಿಹಾಸ ತಿಳಿಸುವುದನ್ನು ಹಾಗೂ ಊರಿನ ಹೆಸರುಗಳ ಹಿನ್ನೆಲೆಯಲ್ಲಿ ನೆಲುವಿಗೆಯ ಶಾಂತಯ್ಯ, ಕೆಂಭಾವಿ ಭೋಗಣ್ಣ ಎಂದು ನೋಡಬಹುದು. ಹಾಗೆಯೇ ವೃತ್ತಿಯ ಹಿನ್ನೆಲೆಯಲ್ಲಿ ಮಡಿವಾಳ ಮಾಚಯ್ಯ, ಮಾದಾರ ಚೆನ್ನಯ್ಯ ಎಂಬ ಅಡ್ಡ ಹೆಸರುಗಳನ್ನು ಉದಾಹರಣೆ ಸಮೇತ ತಿಳಿಸುವ ಪ್ರಯತ್ನವನ್ನು ಎಂ.ಎಂ.ಕಲಬುರ್ಗಿ ಅವರು ಮಾಡಿದ್ದಾರೆ. ಶರಣರಲ್ಲಿ ಇಂತಹ ಹೆಸರುಗಳನ್ನು ಅಧಿಕವಾಗಿ ಗುರುತಿಸುವುದನ್ನು ಕಾಣಬಹುದು. ಆಯ್ದಕ್ಕಿ ಮಾರಯ್ಯ, ಆಯ್ದಕ್ಕಿ ಲಕ್ಕಮ್ಮ, ಸೂಳೆ ಸಂಕವ್ವ, ದೇವರ ದಾಸಿಮಯ್ಯ ಹೀಗೆ ಹಲವಾರು ಹೆಸರುಗಳು ಅಡ್ಡಹೆಸರಿನಿಂದ ಗುರುತಿಸುವುದನ್ನು ನಾವು ನೋಡಬಹುದು. ಈ ರೀತಿಯ ಸಂಪ್ರದಾಯದ ಹಿನ್ನೆಲೆಯಲ್ಲಿ ಬಸವಣ್ಣನ ಅಡ್ಡಹೆಸರು ಇರಬಹುದೆಂದು ಎಂ.ಎಂ.ಕಲಬುರ್ಗಿ ಅವರು ಚರ್ಚೆಗೆ ತೆಗೆದುಕೊಂಡಿರುವುದು ಒಂದು ವಿಶೇಷ ಎನ್ನಬಹುದು. ಬಸವಣ್ಣನವರ ತಂದೆಯ ಹೆಸರು ಮಾದಿರಾಜ. ಊರು ಬಾಗೇವಾಡಿ. ಇಷ್ಟು ಎಲ್ಲರಿಗೂ ಗೊತ್ತು. ಸಮಕಾಲೀನ ಶರಣ ಘಟ್ಟಿವಾಳಯ್ಯ, ಮಂಡಗೆಯ ಮಾದಿರಾಜ ಮಾದಲಾಂಬಿಕೆಯಮ್ಮನವರ ಬಸುರಲ್ಲಿ

ಬಂದನೆನ್ನಬಹುದೆ ಬಸವೇಶ್ವರನು?' ಎನ್ನುತ್ತಾನೆ. ಬಸವಣ್ಣನವರ ತಂದೆಯನ್ನು ವೀರಶೈವ ಕಾವ್ಯಗಳು 'ಮಂಡಗೆಯ ಮಾದಿರಾಜ' ಎಂದು ಕರೆದಿವೆ. ಆದುದರಿಂದ ಮಂಡಗೆ ಇವರ ಮನೆತನದ ಅಡ್ಡ ಹೆಸರಾಗಿರಬೇಕು. ಇದರ ಅರ್ಥವೇನು"೧೯ ಎಂಬ ಪ್ರಶ್ನೆಯು ಎಲ್ಲರಿಗೂ ಹುಟ್ಟುವುದು ಸಹಜ. ಆಗಿರುವಾಗ ಎಂ.ಎಂ.ಕಲಬುರ್ಗಿ ಅವರಿಗೆ ಈ ಪ್ರಶ್ನೆ ಹುಟ್ಟುತ್ತಿದ್ದಂತೆ ಅದರ ಬೆನ್ನುಹತ್ತಿ ಶೋಧದಲ್ಲಿ ತೊಡಗುತ್ತಾರೆ. ಮೂಲತಃ ಬ್ರಾಹ್ಮಣರಾಗಿದ್ದ ಬಸವಣ್ಣನವರ ವಂಶಜರು ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಅರ್ಜುನವಾಡದ ಬಳಿಯೇ ಹಾಳಾಗಿರುವ ಕವಿಳಾಸಪುರ. ಬೆಳಗಾವಿಯಲ್ಲಿ ಮಂಡಗಿ ಅಡ್ಡ ಹೆಸರಿನ ಪ್ರತಿಷ್ಠಿತ ಬ್ರಾಹ್ಮಣ ಮನೆತನವಿರುವುದನ್ನು ತಿಳಿದ ಕೆಲವರು ಆ ಕುಟುಂಬದ ಬಳಿ ಹಿನ್ನೆಲೆ ವಿಚಾರಿಸುತ್ತಾರೆ. 'ಮಂಡಗಿ' ಎಂಬುದು ಒಂದು ರೀತಿಯ ವಾದ್ಯ. ಹಾಗಾಗಿ ನಮ್ಮ ಮನೆನತಕ್ಕೆ ಈ ಹೆಸರು ಬಂದಿರಬಹುದು ಎಂದಿದ್ದಾರೆ. ಬಸವಣ್ಣನವರ ಅಡ್ಡಹೆಸರು ಹಾಗೂ ಮನೆತನಕ್ಕೂ ಯಾವುದೇ ರೀತಿಯ ಸಂಬಂಧದ ಬಗ್ಗೆ ನಮಗೆ ತಿಳಿದಿಲ್ಲ ಎಂದು ಹೇಳುವುದನ್ನು ಇಲ್ಲಿ ಉಲ್ಲೇಖಿಸಿದ್ದಾರೆ. ಇಷ್ಟಕ್ಕೆ ಸುಮ್ಮನಾಗದೇ ಸಂಶೋಧನ ತುಮುಲದಿಂದಾಗಿ ಎಂ.ಎಂ.ಕಲಬುರ್ಗಿ ಅವರು 'ಉತ್ತರ ಕರ್ನಾಟಕದ' ಕಡೆ ಅದರಲ್ಲೂ 'ಗೆ' ಅಕ್ಷರದಿಂದ ಕೊನೆಗೊಳ್ಳುವ ಗ್ರಾಮಗಳು ಅಧಿಕವಾಗಿರುವುದನ್ನು ಗಮನಿಸುತ್ತಾರೆ. 'ಮಂಡಗೆ' ಒಂದು ಗ್ರಾಮವಾಗಬಹುದು. ಬಸವಣ್ಣ ಬಾಗೇವಾಡಿಗೆ ಬರಲು ಮೊದಲು ಈ ಮನೆತನ ಮಂಡಗೆ ಗ್ರಾಮಕ್ಕೆ ಸೇರಿರಬಹುದೆಂದು ಊಹಿಸುತ್ತಾರೆ. "ಶಂಕರ ಕವಿಯ ಚೋರ ಬಸವ ಚಾರಿತ್ರ್ಯವು 'ಬಸವನಿದರ್ಪನು ಮಂಡಗೆಯೊಳು' ಎನ್ನುತ್ತ ಅದು ಒಂದು ಸ್ಥಳನಾಮವೆಂಬ ಸೂಚನೆ ಕೊಡುತ್ತದೆ. ಹೀಗಾಗಿ ಕೆಂಭಾವಿ ಭೋಗಣ್ಣ, ಕೊಂಡಗುಳಿ ಕೇಶಿರಾಜರಂತೆ ಇವರ ಹೆಸರು ಮಂಡಗೆಯ ಬಸವರಾಜ ಎನ್ನಬೇಕಾಗುತ್ತದೆ. 'ಮಂಡಗೆ' ಎಂಬ ಅಡ್ಡಹೆಸರು ಬಸವಣ್ಣನವರಂತೆ ಆ ಕಾಲದಲ್ಲಿ ಬೇರೆಯವರಿಗೂ ಕಂಡುಬರುತ್ತದೆ. ಜೇವರ್ಗಿ ತಾಲೂಕಿನ ಜೇಡರ ದಾಸಿಮಯ್ಯನ ಮುದನೂರಿನ ಒಂದು ಶಾಸನದಲ್ಲಿ 'ಮಂಡಗೆಯ ಕಾಲಶೆಟ್ಟಿ' ಎಂಬ ವ್ಯಕ್ತಿಯ ಉಲ್ಲೇಖ ಬರುತ್ತದೆ. ಪಾಲ್ಕುರಿಕೆ ಸೋಮನಾಥನು ತನ್ನ ತೆಲುಗು ಬಸವಪುರಾಣವನ್ನು ಮಂಡಗೆಯ ಮಾದಿರಾಜನ ಶಿಷ್ಯ ಗಬ್ಬೂರು ಸಂಗನಾಮಾತ್ಯನ ಆಶ್ರಯದಲ್ಲಿ ಬರೆದುದಾಗಿ ಹೇಳುತ್ತಾನೆ. ಹೀಗಾಗಿ ಬಾಗೇವಾಡಿ, ಮುದನೂರು, ಗಬ್ಬೂರು ಗ್ರಾಮಗಳ ಪರಿಸರದಲ್ಲಿ ಈ ಮಂಡಗೆ ಹೆಸರಿನ ಗ್ರಾಮವಿರಬಹುದು. ರೂಪ ವ್ಯತ್ಯಾಸದಿಂದ ಅದು ಎಲ್ಲಿಯೋ ಮರೆಯಾಗಿರುವ ಸಾಧ್ಯತೆಯಿದೆ. ಸಾರ್ವಜನಿಕರು ಈ ಗ್ರಾಮ ಎಲ್ಲಿದೆಯೆಂಬುದನ್ನು ಸೂಚಿಸುವುದರ ಮೂಲಕ ಸಂಶೋಧನೆ ಮುಂದುವರಿಯಲು ನೆರವಾಗುವರೆಂದು ಆಶಿಸಲಾಗಿದೆ" ಎಂದಿದ್ದಾರೆ. ಇಲ್ಲಿ ಒಂದೇ ಹೆಸರಿನ ಅಡ್ಡಹೆಸರು ಬೇರೆಯವರಲ್ಲೂ ಕಂಡು

ಬರುವುದನ್ನು ಗುರುತಿಸುತ್ತ 'ಮಂಡಗೆ' ಗ್ರಾಮ ಪರಿಸರವನ್ನು ಶೋಧಿಸುವ ಅಗತ್ಯವಿದೆ ಎಂದು ಸಲಹೆ ಸೂಚನೆ ನೀಡಿದ್ದಾರೆ.

'ಭಂಡಾರ ಮತ್ತು ಬಸವಣ್ಣ' ಎಂಬ ಲೇಖನದಲ್ಲಿ ಬಿಜ್ಜಳನ ಆಸ್ಥಾನದಲ್ಲಿ ಬಸವಣ್ಣನು ಭಂಡಾರಾಧಿಕಾರಿಯಾಗಿದ್ದು ಅದರ ಸದ್ವಿನಿಯೋಗ ಮಾಡಿದ ಬಗೆಯನ್ನು ಕುರಿತು ಚರ್ಚಿಸಿದ್ದಾರೆ. ಬಿಜ್ಜಳನ ಆಸ್ಥಾನದಲ್ಲಿ ಬಸವಣ್ಣ ಭಂಡಾರಿಯಾಗಿದ್ದರೆಂಬುದಕ್ಕೆ "ಕೂಡಲ ಸಂಗನ ಮಹಾಮನೆಯಲ್ಲಿ ಧರ್ಮ ಸಂತಾನ ಭಂಡಾರಿ ಬಸವಣ್ಣನು' ಬಿಜ್ಜಳನ ಭಂಡಾರವೆನಗೇಕಯ್ಯ?"[೧೧೦] ಈ ಮೇಲಿನ ಬಸವಣ್ಣನ ಎರಡು ವಚನಗಳೇ ಸಾಕ್ಷಿಯಾಗಿವೆ. "ಪ್ರಾಚೀನ ಕಾಲದಲ್ಲಿ 'ರಾಜ್ಯ ಭಂಡಾರ'ವೆಂಬುದು ರಾಜನ ಭಂಡಾರವೆಂದೇ ಜನತೆಯ ನಂಬುಗೆಯಾಗಿದ್ದಿತು. ಆ ರಾಜಸತ್ತಾಯುಗದಲ್ಲಿ ಅದರ ವಿನಿಯೋಗದ ಹಕ್ಕು ನೇರವಾಗಿ ರಾಜನ ಸ್ವಾಮಿತ್ವಕ್ಕೆ ಒಳಪಟ್ಟಿದ್ದಿತು. ಅಂದರೆ ಕೇಂದ್ರದಲ್ಲಿ ಚಕ್ರವರ್ತಿಯ, ಮಂಡಲದಲ್ಲಿ ಮಾಂಡಲಿಕ, ನಾಡಿನಲ್ಲಿ ನಾಳ್ಗಾವುಂಡನ–ಹೀಗೆ ಆಳುವವರ್ಗದ ಖಾಸಗಿ ಆಸ್ತಿಯಂತೆ ಅದು ವಿನಿಯೋಗವಾಗುತ್ತಲಿದ್ದಿತು. ಇವರನ್ನು ಬಿಟ್ಟರೆ ಈ ಭಂಡಾರ ಮುಖ್ಯವಾಗಿ ವಿನಿಯೋಗವಾಗುತ್ತಿದ್ದುದು ಯಾವುದೇ ಮತದ ಪುರೋಹಿತವರ್ಗಕ್ಕೆ, ದೇವಾಲಯಗಳ ನಿರ್ಮಾಣ ನಿರ್ವಹಣೆ, ಅಗ್ರಹಾರಗಳ ಪೋಷಣೆ, ಧಾರ್ಮಿಕ ಸಂದರ್ಭದ ದಾನದಕ್ಷಿಣೆ ಇತ್ಯಾದಿ ಹೆಸರಿನಿಂದ ಈ ಭಂಡಾರ ವ್ಯಯವಾಗುತ್ತಲಿದ್ದಿತು. ಮಧ್ಯಕಾಲೀನ ಕರ್ನಾಟಕ ದೇವಾಲಯ, ಅಗ್ರಹಾರಗಳಿಗೆ ಸಂಬಂಧಿಸಿದ ದಾಖಲೆಗಳನ್ನು ನೋಡಿದರೆ ಈ ಮಾತು ಮನವರಿಕೆಯಾಗುತ್ತದೆ"[೧೧೧] ಎಂದು ಎಂ.ಎಂ.ಕಲಬುರ್ಗಿ ಅವರು 'ಭಂಡಾರ' ಎಂಬುದು ರಾಜನ ಸ್ವಾಧೀನದಲ್ಲಿರುವ, ರಾಜಾಶ್ರಯದಲ್ಲಿರುವ ಆಳುವವರ್ಗ, ಮೇಲ್ವರ್ಗಗಳಿಗೆ ಹೇಗೆ ವಿನಿಯೋಗವಾಗುತ್ತಿತ್ತು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಇಂತಹ ದುರ್ವಿನಿಯೋಗಕ್ಕೆ ಕಡಿವಾಣ ಹಾಕಿದವನೇ ಬಸವಣ್ಣ. ಬಿಜ್ಜಳನಿಗೆ ಪ್ರೀತಿಪಾತ್ರನಾಗಿದ್ದ ಬಸವಣ್ಣನ ನಿಷ್ಠೆಯಿಂದಲೇ ಭಂಡಾರಿ ಮಂತ್ರಿ ಪದವಿಯನ್ನು ಪಡೆದನು. ಆದರೆ ಇದು ಎಷ್ಟೋ ಮಂತ್ರಿವರ್ಗಕ್ಕೆ ಪುರೋಹಿತಶಾಹಿಗಳಿಗೆ ಧರ್ಮಾಧಿಕಾರಿಗಳಿಗೆ ಸಹಿಸದಂತಾಯಿತು. ಭಂಡಾರ ಮಂತ್ರಿಯಾಗಿ ಬಂದ ಬಸವಣ್ಣ ಹಾಕಿಕೊಂಡ ಮೊದಲ ಪ್ರಶ್ನೆಯೇ 'ಈ ಭಂಡಾರ ಯಾರದು?' 'ಇದರ ಮೇಲೆ ಇರುವುದು ಯಾರ ಹಕ್ಕು?' ಎಂಬುದು ಈ ಪ್ರಶ್ನೆಗೆ ಉತ್ತರ ವೀರಶೈವ ಪುರಾಣಗಳಲ್ಲಿ ಅದರಲ್ಲೂ ಬಸವರಾಜದೇವರ ರಗಳೆಯಲ್ಲಿ ಸಿಗುತ್ತದೆ ಎಂದು ಎಂ.ಎಂ.ಕಲಬುರ್ಗಿ ಅವರು ತಿಳಿಸಲು ಪ್ರಯತ್ನಿಸಿದ್ದಾರೆ. ಬಸವಣ್ಣ ಮೊದಲದಿನ ಭಂಡಾರದ ಬಾಗಿಲನ್ನು ತೆಗೆಯುತ್ತಾ

"ಅಯ್ಯಲಾ! ಇಂತಪ್ಪನನರ್ಘ್ಯಮಂ ಭಕ್ತರ್ಗೆ

...................................................

ಕಾಕಭಾಜನಮಾಗಿ ಹೋಗುತಿರ್ದಪುದಕಟ

ಲೋಕಾಯತರ್ಗೆ ಸಾರುತಿರ್ದಪುದಕಟ"[೧೦೮]

ಎಂದು ನುಡಿಯುತ್ತಾನೆ. ಇಲ್ಲಿ 'ಅಯ್ಯಲಾ! ಇಂತಪ್ಪ ಅನರ್ಘ್ಯ' ಎಂಬುದು ಭಂಡಾರದ ಗಾತ್ರ ದೊಡ್ಡದಾಗಿರುವುದನ್ನು ತಿಳಿಸಿದ್ದಾರೆ. 'ಕಾಕಭಾಜನಮಾಗಿ ಹೋಗುತಿರ್ದಪುದಕಟ' ಎಂಬುದು ಅದರ ಅಪವ್ಯಯದ ಅಧಿಕ್ಯವನ್ನು ಸೂಚಿಸುವುದು. ಇದು ರಾಜಶಾಹಿ ಪುರೋಹಿತಶಾಹಿ ಮೊದಲಾದವರು ಮನಬಂದಂತೆ ಭೋಗಿಸುವುದೇ ಆಗಿದೆ.

"ಹರಿಹರನ ದೃಷ್ಟಿಯಲ್ಲಿ 'ಲೋಕಾಯತರು' ಅಂದರೆ ಪದಾರ್ಥವಾದಿ(Materialistic People)ಗಳು, ಭವಿಗಳು, ಇಂಥವರು ಭಂಡಾರದ ನಿಜವಾದ ವಾರಸುದಾರರಲ್ಲ. 'ಲಿಂಗಾಯತರು' (Non-Meterialistic) ಅಂದರೆ ಪ್ರಸಾದವಾದಿಗಳು, ಭಕ್ತರು ಮಾತ್ರ ಇದರ ನಿಜವಾದ ವಾರಸುದಾರರು. ಒಟ್ಟಿನಲ್ಲಿ ಪದಾರ್ಥವಾದಿಯು ರಾಜನೇ ಆಗಿದ್ದರೂ ಭಂಡಾರ ಅವರ ಸೊತ್ತಲ್ಲ. ಪ್ರಸಾದವಾದಿಯು ಬಡಪ್ರಜ್ಞೆಯಾಗಿದ್ದರೂ ಭಂಡಾರ ಅವರ ಸೊತ್ತು. ಇದು ಬಸವ ಸಿದ್ಧಾಂತ"[೧೦೯]ಎಂದಿದ್ದಾರೆ. ಹಾಗೆಯೇ ಮುಂದುವರಿದು "ಭಕ್ತರಿಗೆ ಅದನ್ನು ವಿನಿಯೋಗಿಸುವಾಗ ನಿಮ್ಮರ್ಥಮಂ ನಿಮಗೆ ತೊತ್ತುಗೆಲಸಂ ಮಾಡಿ ಬೇಡಿತಂ ನೀಡುವ ಕಿಂಕರಂ ತಾನೆಂದು ಹೇಳಿ ಕೊಳ್ಳುತ್ತಾನೆ. ಭಂಡಾರ ಭಕ್ತರಿಗೆ ವಿನಿಯೋಗವಾಗುವುದನ್ನು ಬಿಜ್ಜಳ ಪ್ರತಿಭಟಿಸಲು 'ಶಿವಭಕ್ತ ನಿನ್ನೊಡವೆಗಾಸೆ ಮಾಟ್ಪರೇ? ತಮ್ಮೊಡನೆಯಂ ತಾವೆ ಕೊಂಡರ್' ಎನ್ನುತ್ತ ಭಂಡಾರ ಬಿಜ್ಜಳನದಲ್ಲ, ಭಕ್ತರದು ಎಂದು ಸೂಚಿಸುತ್ತಾನೆ."[೧೧೦] ಹೀಗೆ ಹರಿಹರನ ರಗಳೆಯಲ್ಲಿ ಬಸವಣ್ಣ ಭಂಡಾರ ಪ್ರಭುತ್ವದ ಸ್ವತ್ತಲ್ಲ ಭಕ್ತ, ಸಾಮಾನ್ಯ ಜನತೆಯ ಸ್ವತ್ತು ಎಂದು ಸಮರ್ಥಿಸಿರುವುದು ಸರಿಯಾಗಿಯೇ ಕಂಡುಬರುತ್ತದೆ. ಭಂಡಾರ ಭಕ್ತರಿಗೆ ವಿನಿಯೋಗವಾಗುವುದನ್ನು ಸಹಿಸದ ಪುರೋಹಿತಶಾಹಿ ಮಾತಿಗೆ ಬಿಜ್ಜಳ ಕಿವಿಗೊಡುವ ಮೂಲಕ ಬಸವಣ್ಣನನ್ನು ತಪ್ಪಿತಸ್ಥನನ್ನಾಗಿ ನೋಡುವಂತೆ ಮಾಡುವ ಮೂಲಕ ಅವರಿಬ್ಬರ ನಡುವೆ ಬಿರುಕುನ್ನುಂಟು ಮಾಡುತ್ತಾರೆ. ಬಸವಣ್ಣ–ಬಿಜ್ಜಳರ ಮಾತಿನ ಚಕಮಕಿ ನಡುವೆ 'ಭಂಡಾರದ ಒಡೆಯ ರಾಜನಲ್ಲ ಭಕ್ತರು' ಎಂಬ ಬಸವಣ್ಣನ ಮಾತನ್ನು ಸಹಿಸದ ಸ್ಥಿತಿ ಬಿಜ್ಜಳನಲ್ಲಿ ಉಂಟಾಗಿ ಬಸವಣ್ಣನ ಮೇಲೆ ಕ್ರಮ ಕೈಗೊಳ್ಳಲು ಸಿದ್ಧನಾಗುತ್ತಾನೆ. ಆ ವೇಳೆ ಬಸವಣ್ಣನಲ್ಲಿ ಉಂಟಾದ ಧೀರ ಧ್ವನಿಗಳು ವಚನ ರೂಪದಲ್ಲಿ ಅಭಿವ್ಯಕ್ತಗೊಂಡಿರುವುದನ್ನು ನೋಡಬಹುದು.

"ತನುವ ಬಂದಲೆವರಯ್ಯಾ, ಎನ್ನ ಮನವ ಬಂದು ನೋಡುವರಯ್ಯ

ಎನ್ನ ಧನವ ಬಂದು ಸೂರೆಗೊಂಬರಯ್ಯ, ಜಂಗಮವನವರತ

ಕೂಡಲಸಂಗಮದೇವಾ

ನಿಮ್ಮ ಬಯಕೆಯ ಭಂಡಾರಕ್ಕೆ ನಾನು ಶುದ್ಧನಯ್ಯ"[೧೧೪]

ಭಂಡಾರದ ವಿಚಾರದಲ್ಲಿ ನಾನು ಸರಿಯಾದ ದಾರಿಯಲ್ಲಿಯೇ ಸಾಗಿದ್ದೇನೆ ಎಂದು ತನ್ನನ್ನು ತಾನೇ ಸಂತೈಸಿಕೊಂಡಿರುವುದನ್ನು ತಿಳಿಸಿದ್ದಾರೆ. ಈ ಸ್ಥಿತಿ ತುಂಬ ಗಂಭೀರವಾದ ಸಂದರ್ಭದಲ್ಲಿ ಬಹಿರಂಗವಾಗಿ ತನ್ನ ಮೇಲಿನ ಸುಳ್ಳು ಆರೋಪಗಳನ್ನು ತಳ್ಳಿ ಹಾಕುವುದನ್ನು ಒಂದು ವಚನದಲ್ಲಿ ಹೇಳುವ ಪ್ರಯತ್ನ ಮಾಡಿದ್ದಾನೆ.

"ಊರ ಮುಂದೆ ಹಾಲಹಳ್ಳ ಹರಿವುತ್ತಿರಲು
ಒಱೆಯಾವಿನ ಬೆನ್ನಲ್ಲಿ ಹರಿಯಲದೇಕಯ್ಯ?
ಲಜ್ಜೆಗೆಡಲೇಕೆ? ನಾಣುಗೆಡುಲೇಕೆ?
ಕೂಡಲಸಂಗಮದೇವರುಳ್ಳನ್ನಕ್ಕ
ಬಿಜ್ಜಳನ ಭಂಡಾರವೆನಗೇಕಯ್ಯ?"[೧೧೫]

ಎಂದು ಬಹಿರಂಗವಾಗಿ ವ್ಯಕ್ತಪಡಿಸಿದ್ದಾನೆ. ಹಾಗೆಯೇ ಈ ಸಂದರ್ಭದಲ್ಲಿನ ಇನ್ನೊಂದು ವಚನ ನೋಡುವುದಾದರೆ,

"ಆನೆ ಅಂಕುಶಕ್ಕಂಜುವುದೇ ಅಯ್ಯಾ,
ಮಾಣದೆ ಸಿಂಹನ ನಖವೆಂದು ಅಂಜುವುದಲ್ಲದೆ?
ಆನೀ ಬಿಜ್ಜಳಂಗೆ ಅಂಜುವೆನೆ ಅಯ್ಯಾ? ಕೂಡಲಸಂಗಮ ದೇವಾ
ನೀನು ಸರ್ವಜೀವ ದಯಾಪಾರಿಯಾದ ಕಾರಣ
ನಿನಗಂಜುವೆನಲ್ಲದೆ"[೧೧೬]

ಎಂದು ರಾಜನ ವಿರುದ್ಧ ನಿಷ್ಠುರ–ನಿರ್ಭೀತ ನಿಲುವನ್ನು ತಾಳುತ್ತಾನೆ. ಇಷ್ಟೆಲ್ಲಾ ಅಂಶಗಳ ಆಧಾರದ ಮೇಲೆ ಬಿಜ್ಜಳ–ಬಸವಣ್ಣನ ಮನಸ್ತಾಪಕ್ಕೆ ಧಾರ್ಮಿಕ, ಸಾಮಾಜಿಕ ಅಂಶಗಳಿಗಿಂತ 'ರಾಜ್ಯ ಭಂಡಾರ' ವಿನಿಯೋಗವೇ ಮುಖ್ಯ ಕಾರಣವಾಗಿರಬಹುದು. ಹರಳಯ್ಯ, ಮಧುವರಸರ ಮಕ್ಕಳ ಮದುವೆ ಒಂದು ನೆವ ಮಾತ್ರವಾಗಿತ್ತು. ಇದರ ಹಿಂದೆ ಜನಪರವಾದ ಬಸವಣ್ಣನವರ ಹೊಸ ಅರ್ಥನೀತಿಯೇ ಬಹಳಷ್ಟು ಕೆಲಸ ಮಾಡಿದೆ ಎಂದು ಭಾವಿಸುವುದು ಹೆಚ್ಚು ವಾಸ್ತವವೆನಿಸುತ್ತದೆ ಎಂಬುದು ಎಂ.ಎಂ.ಕಲಬುರ್ಗಿ ಅವರು ಹೇಳಿರುವುದರಲ್ಲಿ ಸತ್ಯಾಂಶವಡಗಿದೆ ಎನ್ನಬಹುದು.

'ಬಸವಣ್ಣನವರ ಜೀವನಚರಿತ್ರೆ' ಎಂಬ ಲೇಖನದಲ್ಲಿ ಬಸವಣ್ಣನ ಜನ್ಮಾಂತರದ ಕುರಿತು ಚರ್ಚೆ ನಡೆಸಿದ್ದಾರೆ. ಬಸವಣ್ಣನವರೇ ತಮ್ಮ ವಚನದಲ್ಲಿ

"ಅಯ್ಯಾ ಏಳೇಳು ಜನ್ಮದಲಿ ಶಿವಭಕ್ತನಾಗಿ
ಹೆಸರಿಟ್ಟು ಕರೆದು ನಿಮ್ಮ ಬಕ್ಕುದ ಮಿಕ್ಕುದಕ್ಕೆ
ಯೋಗ್ಯವಾಗಿರಲೆಂದು ಇರಿಸಿಕೊಂಡಿರ್ದಿರಯ್ಯಾ"[೧೧೭]

ಎಂದು ಹೇಳಿಕೊಂಡಿದ್ದಾರೆ. ಇದನ್ನು ಗಮನಿಸಿದರೆ ಬಸವಣ್ಣನ ಪೂರ್ವ ಜನ್ಮಗಳು ೬ ಎಂದು ತಿಳಿದುಬರುತ್ತದೆ. ಮಡಿವಾಳ ಮಾಚಿದೇವನು "ಆರು ಜನ್ಮದವ ಬಸವಣ್ಣನೆಂಬರು ಈ ಗುರು ಮಾತು ಕೇಳಲಾಗದು" ಎಂಬ ಹೇಳಿಕೆಯನ್ನು ಎಂ.ಎಂ.ಕಲಬುರ್ಗಿ ಅವರು ನೀಡುವ ಮೂಲಕ ೬ ಜನ್ಮಗಳ ನಂತರದ ಜನ್ಮವೇ ಶ್ರೀ ಬಸವಣ್ಣನವರೆಂದು ಚರ್ಚಿಸಿದ್ದಾರೆ.

ಬಸವಣ್ಣ ವ್ಯಕ್ತಿಯ ಭಾರತದ ಪರ್ಯಾಯ ಬುದ್ಧ ಎಂದು ಎಂ.ಎಂ.ಕಲಬುರ್ಗಿ ಅವರು ಅದಕ್ಕೆ ಕಾರಣಗಳನ್ನು ನೀಡಲು ಪ್ರಯತ್ನಿಸಿದ್ದಾರೆ. ಬುದ್ಧ-ಬಸವ-ಅಂಬೇಡ್ಕರ್ ಈ ಮೂವರು ಹೆಚ್ಚು ಕಡಿಮೆ ಒಂದೇ ತತ್ವದ ೩ ಮುಖಗಳು. ಆದರೆ ಧಾರ್ಮಿಕ ಕಾರಣವಾಗಿ ಬಸವಣ್ಣ ಬುದ್ಧನಿಗೆ ಹತ್ತಿರವೆನಿಸುತ್ತಾನೆ. ಆತ್ಮತತ್ವ, ಕಾಯಕತತ್ವಗಳನ್ನು ಹೆಚ್ಚಾಗಿ ಅಳವಡಿಸಿಕೊಂಡಿದ್ದರೂ ಧಾರ್ಮಿಕ ಎಂಬುದು ಸಮಾಜೋಧಾರ್ಮಿಕವೆಂದು ಬುದ್ಧನಂತೆ ಬಸವಣ್ಣ ನಂಬಿದ್ದಾನೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

'ಬಸವಣ್ಣ: ಪ್ರಾಚೀನ ಲಿಂಗಾಯತ ಸಾಹಿತ್ಯದ ಒಂದು ಅನಿವಾರ್ಯ' ಎಂಬ ಲೇಖನದಲ್ಲಿ ಬಸವಣ್ಣ ತನ್ನ ವಚನಗಳಲ್ಲಿ, ತನ್ನ ಸಮಕಾಲೀನ ವಚನಗಳಲ್ಲಿ ಕಾಣಿಸಿಕೊಂಡಿದ್ದಾನೆ. ಹಾಗೆಯೇ ಬಸವಣ್ಣನಿಗೆ ಸಂಬಂಧಿಸಿದ ಕೃತಿಗಳನ್ನು ಹೊರತುಪಡಿಸಿದರೆ ಇತರ ಶರಣರನ್ನು ಕುರಿತ ಕೃತಿಗಳಲ್ಲಿ ಬಸವಣ್ಣ ಕಾಣಿಸಿಕೊಂಡಿದ್ದಾನೆ. "ಒಂದು ಅಂದಾಜಿನ ಪ್ರಕಾರ ೫೦ ಜನ ವಚನಕಾರರ ೧೦೦೦ ವಚನಗಳಲ್ಲಿ ಬಸವಣ್ಣನ ಸ್ತುತಿ ಕಾಣಿಸಿಕೊಂಡಿದೆ. ಕಲ್ಯಾಣವೆಂಬ......ಭಕ್ತಿರಸವೆಂಬ ತೈಲವನೆರೆದು, ಆಚಾರವೆಂಬ ಬುತ್ತಿಗೆ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು, ತೊಳಗಿ ಬೆಳಗುತ್ತಿರ್ದುದನಯ್ಯಾ ಶಿವನ ಪ್ರಕಾಶನ."[೧೧೮] ಹೀಗೆ ಇತರ ವಚನಕಾರರ ಹಲವು ವಚನಗಳಲ್ಲಿ ಬಸವಣ್ಣನ ಸ್ತುತಿಯು ಎಷ್ಟು ಅಗಾಧವಾಗಿದೆ ಎಂದು ತಿಳಿದುಬರುತ್ತದೆ.

'ಬಸವಣ್ಣನವರ ಲಿಂಗಾಯತವು ಪೂರ್ಣಧರ್ಮ' ಎಂಬ ಲೇಖನದಲ್ಲಿ ಬಸವಣ್ಣ ಸ್ಥಾಪಿಸಿದ ಲಿಂಗಾಯತ ಧರ್ಮದ ಸ್ವರೂಪವನ್ನು ಅದು ಮಿಕ್ಕ ಧರ್ಮಗಳಿಗಿಂತ ಪೂರ್ಣವೆಂದು ಕುರಿತು ಚರ್ಚಿಸಿದ್ದಾರೆ. ಎಂ.ಎಂ.ಕಲಬುರ್ಗಿ ಅವರು ಪೂರ್ಣಧರ್ಮದ ಲಕ್ಷಣಗಳ ಕುರಿತಂತೆ

ಅವರ ತತ್ವ-ಆಚರಣೆ ಸರಳವಾಗಿರುತ್ತವೆ. ೧. ವ್ಯಕ್ತಿತ್ವದ ಶುದ್ಧೀಕರಣ ಮತ್ತು ಸಾಮಾಜೀಕರಣ ಅವರ ಗುರಿಯಾಗಿರುತ್ತದೆ. ೨. ಆ ವ್ಯಕ್ತಿ ತಾನು ಬದುಕುವುದುರ ಸಲುವಾಗಿ ಕಾಯಕಪ್ರಜ್ಞೆ ಇನ್ನೊಬ್ಬರು ಬದುಕುವವರ ಸಲುವಾಗಿ ದಾಸೋಹಪ್ರಜ್ಞೆ ಮಾತನಾಡಬೇಕೆಂದು ಅದು ಅಪೇಕ್ಷಿಸುತ್ತದೆ. ೩. ಸಾಮಾಜೀಕರಣಗೊಂಡ ವ್ಯಕ್ತಿಯ ಜೀವನ ಸುಗಮತೆಗಾಗಿ ಸಮಾಜವನ್ನು ಶುದ್ಧಗೊಳಿಸುವುದು ಅದರ ಗುರಿಯಾಗಿರುತ್ತದೆ. ೪. ಯಾವುದೇ ವ್ಯಕ್ತಿ ತನ್ನ ಸಿದ್ಧಾಂತ ವರ್ತುಳದ ಒಳಗೆ ಬರಲು, ಹೊರಗೆ ಹೋಗಲು ಅಲ್ಲಿ ಸ್ವಾತಂತ್ರ್ಯ ಇರುತ್ತದೆ. ತನ್ನ ಮೂಲಸಿದ್ಧಾಂತಕ್ಕೆ ಭಂಗ ಬರದಂತೆ ಆಯಾ ಕಾಲಕ್ಕೆ ಬೇಡವಾದ ಅಂಶಗಳನ್ನು ಹೊರಹಾಕುವ, ಬೇಕಾದ ಅಂಶಗಳನ್ನು ಒಳಗೆ ತೆಗೆದುಕೊಳ್ಳುವ ಮುಕ್ತ ಅವಕಾಶ ಹೊಂದಿರುತ್ತವೆ. ಲಿಂಗಾಯತವು ಈ ಲಕ್ಷಣಗಳಿಗೆ ಅನುಗುಣವಾದ ಪೂರ್ಣ ಧರ್ಮವಾಗಿದೆ ಎಂದು ಲಿಂಗಾಯತ ಧರ್ಮವನ್ನು ಕುರಿತು ಚರ್ಚಿಸಿದ್ದಾರೆ. ಲಿಂಗವೆಂಬ ವ್ಯಕ್ತಿ ಜಂಗಮವೆಂಬ ಸದಸ್ಯ ಇವುಗಳ ವ್ಯತ್ಯಾಸವನ್ನು ಸ್ಪಷ್ಟಪಡಿಸಲು ಎಂ.ಎಂ.ಕಲಬುರ್ಗಿ ಅವರು ಒಂದು ನಿದರ್ಶನವನ್ನೇ ನೀಡುತ್ತಾರೆ. ನೀರಿನಲ್ಲಿ ಮುತ್ತಿನಂತಿದ್ದರೆ ಲಿಂಗ, ಸಕ್ಕರೆಯಂತಿದ್ದರೆ ಜಂಗಮ. ಆದರೆ ಮುತ್ತು ಕರಗದು, ಸಕ್ಕರೆ ಕರಗುತ್ತೆ. ನೀರಿನಲ್ಲಿ ಹಾಕಿದ ಮುತ್ತು ತಾನು ಸ್ವಚ್ಛವಾಗುತ್ತದೆ. ನೀರಿಗೆ ಯಾವುದೇ ಪ್ರಯೋಜನವಿಲ್ಲ. ಹಾಗೆಯೇ ಸಕ್ಕರೆಯನ್ನು ನೀರಿಗೆ ಹಾಕಿದರೆ ನೀರು ಸಿಹಿಯಾಗುತ್ತದೆ. ಆದರೆ ಇಡೀ ನೀರೆ ತಾನಾಗುತ್ತದೆ. ಇದೇ ಲಿಂಗಾಯತ ಪೂರ್ಣ ಸಿದ್ಧಾಂತ ಎಂದಿದ್ದಾರೆ. ಅದಕ್ಕೆ ಚೆನ್ನಬಸವಣ್ಣನವರು

"ಕವಿತ್ವ ಸಾಧಕರೆಲ್ಲ ಕಳವಳಿಸಿ ಹೋದರು
......ಜಂಗಮ ಸಾಧಕನಾದಾಥ ಬಸವಣ್ಣನೊಬ್ಬನೇ"[೧೨೦]

ಎಂದು ಹೇಳಿದ್ದಾರೆ. ವ್ಯಕ್ತಿ ನೆಲೆಯಲ್ಲಿ ಗುರು, ಲಿಂಗ, ಜಂಗಮ, ಕಾಯಕ, ದಾಸೋಹವೆಂಬ ಐದು ಆಯಾಮಗಳನ್ನು ಸಮಾಜ ನೆಲೆಯಲ್ಲಿ ಸಮಾನತೆಯನ್ನೊಳಗೊಂಡ ಪೂರ್ಣಧರ್ಮ ವಾಗಿದೆ. ಪೂರ್ಣ ಧರ್ಮ ಮುಕ್ತವಾದದ್ದು, ಆದರೆ ಜಾತಿಧರ್ಮ ಬದ್ಧವಾಗಿರತ್ತದೆ ಎಂಬುದನ್ನು ಚರ್ಚಿಸಿದ್ದಾರೆ. "ಲಿಂಗಾಯತ ಸನ್ಯಾಸಿ ಧರ್ಮವಲ್ಲ, ಸಂಸಾರಧರ್ಮ. ಒಂದು ಕುಟುಂಬಕ್ಕೆ ಒಂದು ಧರ್ಮವೆಂಬ ಕಡ್ಡಾಯವಿಲ್ಲದೆ, ಎಲ್ಲ ಸದಸ್ಯರು ಒಂದು ಧರ್ಮವನ್ನು ಆಚರಿಸುತ್ತಿದ್ದರೆ ಮಾತ್ರ ಕುಟುಂಬ ಘಟಕ ಗಟ್ಟಿಯಾಗಿ, ಸುಖಿಯಾಗಿ ಬಾಳುತ್ತದೆ. ಹೀಗಾಗಿ ಈ ಮೊದಲು ಅಸ್ತಿತ್ವದಲ್ಲಿದ್ದ 'ಗಂಡ ಶಿವಲಿಂಗ ದೇವರ ಭಕ್ತ, ಹೆಂಡತಿ ಮಾರಿ ಮಸಣಿಯ ಭಕ್ತೆ' ಎಂಬ ಧರ್ಮ+ಜಾತಿ ಮಿಶ್ರಣ ಕುಟುಂಬವನ್ನಾಗಲೀ, 'ಹೆಂಡತಿ ಮಾಹೇಶ್ವರಿ, ಗಂಡ ಜೈನನೆಂಬ ಧರ್ಮ+ಧರ್ಮ ಮಿಶ್ರಣ ಕುಟುಂಬವನ್ನಾಗಲೀ ಇದು ಒಪ್ಪುವುದಿಲ್ಲ. ಶರಣಧರ್ಮವೆಂಬ ಕುಟುಂಬವ್ಯವಸ್ಥೆಗೆ ಒಪ್ಪುವವರು ಅದರ ಒಳಗೆ ಬರಬಹುದು, ಒಪ್ಪದವರು ಹೊರಗೆ

ಹೋಗಬಹುದು ಎಂಬ ನಿಲುವಿನ ಈ ಧರ್ಮ, ಒಂದು ಕುಟುಂಬಕ್ಕೆ ಒಂದು ಧರ್ಮ ಎಂಬ ಸಿದ್ಧಾಂತವನ್ನು ಕಲ್ಪಿಸಿದೆ" ಎಂಬ ಅಭಿಪ್ರಾಯ ತಿಳಿಸಿದ್ದಾರೆ.

'ನೀಲಲೋಚನೆ' ಎಂಬ ಲೇಖನದಲ್ಲಿ ನೀಲಲೋಚನೆಯ ವಿಶೇಷ ಅಂಶಗಳನ್ನು ಕುರಿತು ಚರ್ಚಿಸಿದ್ದಾರೆ. ನೀಲಾಂಬಿಕೆಯ ಮೂಲನಾಮ ಮಾಯಿದೇವಿ ಇರಬಹುದೆಂದಿದ್ದಾರೆ. ಎಂ.ಎಂ. ಕಲಬುರ್ಗಿ ಅವರು 'ಬಸವಣ್ಣನವರು ಅಂದಿನ ಸಮಾಜದಲ್ಲಿದ್ದ ಜಾತಿರೋಗ ನಿರ್ಮೂಲನೆಗಾಗಿ ಸ್ವತಃ ಪ್ರಯೋಗಕ್ಕೊಳಪಟ್ಟು ಅನ್ಯಜಾತಿಯ(ಕ್ಷತ್ರಿಯ ಕನ್ಯೆ) ನೀಲಲೋಚನೆಯನ್ನು ಮದುವೆಯಾಗಿರುವ ಸಾಧ್ಯತೆಗಳಿವೆ ಎಂದಿದ್ದಾರೆ. ಬಸವಣ್ಣನವರು ನೀಲಾಂಬಿಕೆಯನ್ನು ಪಾರ್ವತಿ ಸ್ಥಾನದಲ್ಲಿ ಗೌರವಪೂರ್ವಕವಾಗಿ ಕಂಡಿರುವ ವಿಚಾರ ಹರಿಹರನ ಬಸವರಾಜದೇವರ ರಗಳೆಯಿಂದ ತಿಳಿದುಬರುತ್ತದೆ. ಕಳ್ಳನೊಬ್ಬ ಕಿವಿ ಓಲೆ ಬಿಚ್ಚುವಷ್ಟರಲ್ಲಿ ನೀಲಾಂಬಿಕೆ ಕೂಗಿದಾಗ ಬಸವಣ್ಣ ಎದ್ದು ಬಂದು "ಎಲೆಲೆ ಸಂಗನ ಕರನೊಂದುದೆ, ಬೆಸಸುವಲ್ಲಿ, ಮುನ್ನವೇ ಕೊಡದೆ ನಿಲ್ಲುವೆ"[೧೨೧] ಎಂದು ಬಿಚ್ಚಿಕೊಡಿಸುತ್ತಾನೆ. ನೀಲಲೋಚನೆ ವಚನ ಮತ್ತು ಸ್ವರವಚನಗಳನ್ನು ರಚಿಸಿದ್ದಾಳೆ.

"ಅಂಗದೊಳಗೆ ಗುರು, ಲಿಂಗದೊಳಗೆ ಮನ
ಧರ್ಮಜಂಗಮವೆವರ್ಪಿತವಾಗಿಯೆ
ಲಿಂಗಾಲಿಂಗತವಾಗಿರಬಲ್ಲಡೆ ಸಂಗನೊಳದು ಶೀಲ"[೧೨೨]

ಎಂಬ ಪದ್ಯ ತತ್ವ ಮತ್ತು ನಿರೂಪಣೆಯ ದೃಷ್ಟಿಯಿಂದ ಪರಿಪೂರ್ಣ ರಚನೆಗೆ ಉತ್ತಮ ಉದಾಹರಣೆ ಎಂದಿದ್ದಾರೆ.

ಬಸವಣ್ಣ ಸಂಗಮದಲ್ಲಿ ಲಿಂಗೈಕ್ಯನಾಗುವ ಪ್ರಸಂಗದಲ್ಲಿ ಹಡಪದ ಹಪ್ಪಣ್ಣನಿಗೆ ನೀಲಲೋಚನೆಯನ್ನು ಕರೆತರಲು ಹೇಳಿದಾಗ ಶಿವಪೂಜೆಯಲ್ಲಿ ನಿರತಳಾದ ಆಕೆ 'ಅಲ್ಲಿರುವ ಸಂಗಯ್ಯನಿಲ್ಲಿಲ್ಲವೇ?' ಎನ್ನುತ್ತಾಳೆ. ಬಸವಣ್ಣನನ್ನು ಕುರಿತು ನೀಲಾಂಬಿಕೆ ಗಂಡನೂ ಹೌದು, ಗುರುವೂ ಹೌದು ಎಂದು ಸ್ಪಷ್ಟಪಡಿಸಿರುವ ಬಗೆಯನ್ನು ಎಂ.ಎಂ.ಕಲಬುರ್ಗಿ ಅವರು ಚರ್ಚಿಸಿದ್ದಾರೆ. ಕೆಲವು ವಚನಕಾರರು ವಚನ ಮುದ್ರಿಕೆಗಳು ಎಂಬ ಲೇಖನದಲ್ಲಿ ಶರಣರು ಬದುಕಿರಬಹುದಾದ ಗ್ರಾಮಗಳ ಮತ್ತು ಅವರು ಕೈಗೊಂಡ ಕಾಯಕ, ವೃತ್ತಿನಾಮಗಳ ಕುರಿತು ವಿಶೇಷ ಶೋಧ ಮಾಡಿದ್ದಾರೆ. ಶಿವಶರಣರ ವಚನಗಳ ಅಂಕಿತಗಳಲ್ಲಿ ಅವರ ಹೆಸರಿನೊಂದಿಗೆ ಅವರವರ ಗ್ರಾಮ ಅಥಾ ಗ್ರಾಮದ ಅಧಿದೈವದ ಹೆಸರು ಸೇರಿಕೊಂಡಿರುತ್ತದೆ. ಉದಾಹರಣೆಗೆ ಬೇಡರ ದಾಸಿಮಯ್ಯ, ಕೆಂಬಾವಿ ಭೋಗಣ್ಣ, ಹಡಪದ ಅಪ್ಪಣ್ಣ ಇತ್ಯಾದಿ. ಸಂಗಮೇಶ್ವರದ ಅಪ್ಪಣ್ಣ ಮತ್ತು ಹಡಪದ ಅಪ್ಪಣ್ಣ ಎಂಬ ಎರಡು ಹೆಸರುಗಳು ಸಿಗುತ್ತವೆ. ಕೆಲವೊಮ್ಮೆ ಇಬ್ಬರ ಹೆಸರುಗಳಲ್ಲಿಯೂ ಬಸವಪ್ರಿಯ ಕೂಡಲಸಂಗಮದೇವಾ" ಎಂಬ ಮುದ್ರಿಕೆಯ ವಚನ

ಸಿಗುವುದರಿಂದ ಇಬ್ಬರೂ ಒಬ್ಬನೇ ಇರಬಹುದೆನಿಸುತ್ತದೆ. 'ಹಡಪ' ಎಂಬುದು ಇವನ ವೃತ್ತಿಯಾಗಿದ್ದು ಸಂಗಮೇಶ್ವರ ಎಂಬುದು ಗ್ರಾಮವಾಗಿದೆ ಎಂಬ ಅಭಿಪ್ರಾಯ ಎಂ.ಎಂ. ಕಲಬುರ್ಗಿ ಅವರದ್ದಾಗಿದೆ. ತೆಲುಗೇಶ ಮಸಲಯ್ಯ ಮತ್ತು ತೆಲುಗು ಬೊಮ್ಮಯ್ಯ ಎಂಬ ಶರಣರು ಕಂಡುಬರುತ್ತಾರೆ. 'ತೆಲುಗು' ಎಂಬುದು ತೆಲುಗುನಾಡಿನ ಮೂಲದವರೆಂದು ಸೂಚಿಸುತ್ತಿರಬಹುದು. ತೆಲುಗು ಬೊಮ್ಮಯ್ಯ ವಚನ ಬರೆದಿಲ್ಲ. ಇವನ ಮುದ್ರಿಕೆ 'ಭೀಮನಾಥ' ಇರಬಹುದು. ತೆಲುಗೇಶ ಮಸಲಯ್ಯನ ಹೆಸರಿನಲ್ಲಿ ತೆಲುಗೇಶ ಶಂಭು, ತೇಲುಗೇಶ ಮುದ್ರಿಕೆಗಳಲ್ಲಿ ೭ ವಚನಗಳು ಸಿಗುತ್ತವೆ. ತೆಲುಗೇಶವೆಂಬುದು ದೇವತೆ ಹೆಸರೆನಿಸುತ್ತದೆ ಎಂದಿದ್ದಾರೆ. ಹೀಗೆ ಒಕ್ಕಲು ಮುದ್ದಯ್ಯ-ಬೋಳವ ಹಾಳು, ಚೋಳದ ಹಾಳು ಊರು ಇರಬಹುದು. ಈತನ ಮುದ್ರಿಕೆ "ಕಾಮಭೀಮ ಜೀವಧನದೊಡೆಯ" ಈ ಮುದ್ರಿಕೆಯ ಅರ್ಥ ಸ್ಪಷ್ಟವಿದ್ದರೂ ಇದು "ಕಾವ್ಯವು ಭೀಮ ಜೀವಧನದೊಡೆಯ" ಇರಬಹುದು ಎಂದು ಇಲ್ಲಿ ಕೂಡ ಪಾಠಪರಿಷ್ಕರಣದ ಹಿನ್ನೆಲೆಯಲ್ಲಿ ಶೋಧಿಸುತ್ತ ಚರ್ಚಿಸಿದ್ದಾರೆ. ಹೊಡೆಹುಲ್ಲು ಬಂಕಣ್ಣನ ಮುದ್ರಿಕೆ ಕುಂಬೇಶ್ವರಲಿಂಗದಲ್ಲಿ ಜಗನ್ನಾಥ ಸಾಕ್ಷಿಯಾಗಿ, ಕಾಲಕೂಟಯ್ಯನ ಹೆಂಡತಿ ರೇಚವ್ವೆಯ ಮುದ್ರಿಕೆ 'ಕುಂಭೇಶ್ವರ' ಈ ಕುಂಭೇಶ್ವರ ದೇವರನ್ನು ಶಾಸನಗಳಲ್ಲಿ ಪತ್ತೆಹಚ್ಚಿ ಊರನ್ನು ಹುಡುಕಬೇಕಾಗಿದೆ ಎಂದಿದ್ದಾರೆ. 'ಗರವೇಶ್ವರ ಲಿಂಗ' ಮುದ್ರಿಕೆ ಬಿದಿರು ಕಾಯಕದ ಮೇದರ ಕೇತಯ್ಯನದಾಗಿದೆ ಎಂದಿದ್ದಾರೆ. ಮಾದಾರ ಚೆನ್ನಯನ ಮುದ್ರಿಕೆ 'ನಿಜಾತ್ಮರಾಮರಾಮ' ಕುರಿತಂತೆ ಚರ್ಚಿಸಿದ್ದಾರೆ. ಹಾಗೆಯೇ 'ಪುಣ್ಯಾರಣ್ಯದಹನ ಭೀಮೇಶ್ವರಲಿಂಗ' ಅರ್ಥವಾಗುವ ಕಗ್ಗಂಟು ಎಂದು ಇದಕ್ಕೆ ಪಾಠಾಂತರಗಳು ಇಲ್ಲ. ಆದರೆ ಡಾ.ಎಲ್.ಬಸವರಾಜು ಅವರು ಊಹಿಸಿದ ಪುಣ್ಯರಣ್ಯದ(ಫ)ನ ಭೀಮೇಶ್ವರಲಿಂಗ ಎಂಬುದು ಸರಿಯಾದ ಪಾಠವೆಂದು ಗುರುತಿಸಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಒಪ್ಪಿದ್ದಾರೆ. ಹೀಗೆ ಎಂ.ಎಂ.ಕಲಬುರ್ಗಿ ಅವರು ಅಲಕ್ಷಿತ ಶರಣರು ಮತ್ತು ಅವರ ವಚನ ಮುದ್ರಿಕೆಗಳನ್ನು ಶೋಧ ಮಾಡಿರುವುದು ವಿಶೇಷವೆನಿಸುತ್ತದೆ.

ಈ ಮೇಲೆ ಗಮನಿಸಿದ ಎಲ್ಲಾ ಲೇಖನಗಳು ವ್ಯಕ್ತಿಪ್ರಧಾನವಾಗಿರುವುದು ವಿಶೇಷ. ನಿಜ ಜೀವನಚರಿತ್ರೆಯನ್ನು ನಿರೂಪಿಸುವ ಪ್ರಯತ್ನವನ್ನು ಎಂ.ಎಂ.ಕಲಬುರ್ಗಿ ಅವರು ಮಾಡಿದ್ದಾರೆ.

### ೪.೩. ವಚನ ಕೃತಿಗಳ ಅಧ್ಯಯನ

ವಚನ ಕೃತಿಗಳೆಂದರೆ ಇಲ್ಲಿ ಶೂನ್ಯಸಂಪಾದನೆಗಳು, ಏಕೋತ್ತರ ಶತಸ್ಥಲಗಳು, ವಚನ ಸಾಹಿತ್ಯ ಕುರಿತು ಪ್ರಕಟಣೆ ಮುಂತಾದ ವಿಚಾರಗಳ ಹಿನ್ನೆಲೆಯಲ್ಲಿ ಮೂಡಿಬಂದ ಲೇಖನಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅವುಗಳಲ್ಲಿ ಮುಖ್ಯವಾದವು.

೧. ವಚನ ಸಂಗ್ರಹ-ಸಂಕಲನ-ಸಂಪಾದನೆ.

೨. ವಚನ ಸಾಹಿತ್ಯ: ಸಂಪಾದನೆಯ ವಿಧಾನ-ಇತಿಹಾಸ.

೩. ವಚನ ಸಾಹಿತ್ಯ ಪ್ರಕಟಣಾ ಇತಿಹಾಸ.

೪. ಶೂನ್ಯ ಸಂಪಾದನೆ: ಇನ್ನಷ್ಟು ವಿಚಾರಗಳು.

೫. ಶೂನ್ಯ ಸಂಪಾದನೆ: ರಾಚನಿಕ ವಿವೇಚನೆ.

೬. ಶೂನ್ಯ ಸಂಪಾದನೆಗಳು ಎಷ್ಟು? ಕಾಲಾನುಕ್ರಮ ಯಾವುದು?

೭. ಬಸವಣ್ಣನವರ ಷಟ್ಸ್ಥಲ ವಚನ ವ್ಯಾಖ್ಯಾನದ ಕರ್ತೃ.

೮. ಬಸವೋತ್ತರ ಯುಗ: ಮೂರು ಕವಲುಗಳು.

೯. ಏಕೋತ್ತರ ಶತಸ್ಥಲ ಸಿದ್ಧಾಂತದ ಪ್ರವರ್ತಕ ಯಾರು? ಎರಡು ವಾದಗಳು.

೧೦. ಸಕಲ ಪುರಾತನರ ವಚನ-ಕಟ್ಟು ಮತ್ತು ಸ್ಥಳವ್ಯವಸ್ಥೆ.

೧೧. ವಚನಗಳಲ್ಲಿ ಚತುರಾಚಾರ್ಯರ ಉಲ್ಲೇಖ: ಒಂದು ಪ್ರಕ್ಷಿಪ್ತತೆ.

೧೨. ಕಲ್ಯಾಣ: ಶೈವಧರ್ಮದಿಂದ ಶರಣ ಧರ್ಮಕ್ಕೆ.

೧೩. ಅನುಭವ ಮಂಟಪ: ಹುಟ್ಟು-ಮರುಹುಟ್ಟು.

'ವಚನಗಳ ಸಂಗ್ರಹ-ಸಂಕಲನ-ಸಂಪಾದನೆ' ಎಂಬ ಲೇಖನದಲ್ಲಿ ವಚನ ಸೃಷ್ಟಿಯುಗದ ನಂತರ ಅದರ ಉಳಿವಿಗಾಗಿ ನಡೆದ ಕಾರ್ಯವೇ ಸಂಗ್ರಹ, ಸಂಕಲನ ಮತ್ತು ಸಂಪಾದನ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ಕಲ್ಯಾಣ ಕ್ರಾಂತಿಯಿಂದ ಶಿವಶರಣರು ರಚಿಸಿದ ವಚನ ಸಾಹಿತ್ಯವು ಅಪಾರ ಸಂಖ್ಯೆಯಲ್ಲಿ ನಾಶವಾಗಿ ಅಳಿದುಳಿದ ವಚನಗಳನ್ನು ಸಂಗ್ರಹಿಸುವ ಸಂಕಲಿಸುವ ಮತ್ತು ಸಂಪಾದನ ಕಾರ್ಯವು ಮೊದಲ ಘಟ್ಟದಲ್ಲಿ ಬಹಳ ಜರೂರಿನಿಂದ ನಡೆಯಿತು. ಇಂತಹ ಕಾರ್ಯಗಳ ಸ್ವರೂಪ ಮತ್ತು ಅದರ ಇತಿಹಾಸವನ್ನು ಎಂ.ಎಂ.ಕಲಬುರ್ಗಿ ಅವರು ಈ ಲೇಖನದಲ್ಲಿ ಸ್ಪಷ್ಟವಾಗಿ ತಿಳಿಸುತ್ತಾರೆ.

ವಚನ ಸಾಹಿತ್ಯ ಹುಟ್ಟಿದುದು ಉತ್ತರ ಕರ್ನಾಟಕದಲ್ಲಿ. ಅದನ್ನಾಶ್ರಯಿಸಿ ಸಂಯೋಜನ ಸಾಹಿತ್ಯ ಹುಟ್ಟಿದುದು ದಕ್ಷಿಣ ಕರ್ನಾಟಕದಲ್ಲಿ. ಈ ಪ್ರದೇಶಗಳಲ್ಲಿ ಹಸ್ತಪ್ರತಿಯ ಸಂರಕ್ಷಣ, ಸಂಯೋಜನ ಕೆಲಸವು ನಡೆಯಿತು. "ಮೂರು ಪ್ರಭೇದಗಳನ್ನೊಳಗೊಂಡ ಈ ಕ್ರಿಯೆ ಒಂದು ಪ್ರಯೋಗವೆಂಬಂತೆ ಸಂಗ್ರಹದಿಂದ ಸಂಕಲನದತ್ತ, ಸಂಕಲನದಿಂದ ಸಂಪಾದನೆಯತ್ತ ಮುಂದುವರಿದಿದೆ. ಸಂಗ್ರಹಕ್ಕೆ ಪ್ರಯತ್ನ ಸಾಕು, ಸಂಕಲನಕ್ಕೆ ಪಾಂಡಿತ್ಯವೂ ಬೇಕು. ಸಂಪಾದನೆಗೆ ಹೆಚ್ಚಿನದಾಗಿ ಪ್ರತಿಭೆಯೂ ಬೇಕು"[೨೩] ಎನ್ನುವ ಎಂ.ಎಂ.ಕಲಬುರ್ಗಿ ಅವರು ಈ ಮೂರು ಕಾರ್ಯಗಳ ಸ್ವರೂಪವನ್ನು ಕುರಿತು ಚರ್ಚಿಸಿದ್ದಾರೆ.

ಈ ವಚನ ಸಂಗ್ರಹ ಕಾರ್ಯದಲ್ಲಿ ಕೋಲಶಾಂತಯ್ಯನಿಂದ ಪ್ರಾರಂಭವಾಗಿ ಏಕಪುರಾತನರ ವಚನ ಕಟ್ಟುಗಳು ಮತ್ತು ಸಕಲ ಪುರಾತನ ವಚನ ಸಂಗ್ರಹಗಳಿಗೆ 'ಸಂಗ್ರಹ'ದ ಬೆಲೆ ಕೊಡಬೇಕಾಗುತ್ತದೆ. ವಚನ ಸಂಗ್ರಹದ ತರುವಾಯ ವಚನಗಳನ್ನು ಒಂದು ತತ್ವ ಇಲ್ಲವೆ ಒಂದು ದೃಷ್ಟಿಕೋನದ ಹಿನ್ನೆಲೆಯಲ್ಲಿ ವ್ಯವಸ್ಥೆಗೊಳಿಸಲು ಸಾಧ್ಯವಿದೆಯೆಂಬ ಅಂಶ ಈ ಸಂಯೋಜಕರಿಗೆ ಹೊಳೆಯಿತೆಂದು ಈ ಪ್ರಯತ್ನದಿಂದ ಸಂಕಲನಗಳು ಬೆಳೆದುಬಂದು 'ಸ್ಥಲಕಟ್ಟಿನ ಕೃತಿಗಳು' 'ಇತರ ಕೃತಿಗಳು' ಎಂದು ವರ್ಗೀಕರಿಸಬಹುದು ಎಂದು ಎಂ.ಎಂ.ಕಲಬುರ್ಗಿ  ಅವರು ಅಭಿಪ್ರಾಯ ಪಡುತ್ತಾರೆ. ಈ ಮೇಲೆ ವಿವರಿಸಿದ ಸಂಕಲನ ಕ್ರಿಯೆ ಆಮೇಲೆ ಹೊಸ ಪ್ರಯೋಗಕ್ಕೆ ಒಳಗಾಗಿ ಒಂದು ಸಿದ್ಧಿ ಪಡೆದುದು 'ಸಂಪಾದನ' ಕೃತಿಗಳಲ್ಲಿ. ಅಲ್ಲಿಯ ಪಾಂಡಿತ್ಯ ಇಲ್ಲಿ ಪ್ರತಿಭೆಯನ್ನು ಮೈಗೂಡಿಸಿ ಕೊಂಡಿರುವುದು ಸಂಪಾದನ ಸಾಹಿತ್ಯದಲ್ಲಿ. ಸಂಪಾದನ ಸಾಹಿತ್ಯದ ಇನ್ನೊಂದು ಮುಖ್ಯ ಲಕ್ಷಣವೆಂದರೆ ಪ್ರಭುದೇವನನ್ನು ಕೇಂದ್ರವ್ಯಕ್ತಿಯಾಗಿ ನಿಲ್ಲಿಸಿದುದು. 'ಸಂಪಾದನೆ' ಎಂಬುದಕ್ಕೆ ಗಳಿಕೆ ಎಂಬ ಅರ್ಥದ ಜೊತೆ ಕರ್ತೃವಿನ ಮನಸ್ಸಿನಲ್ಲಿ 'ಸಂವಾದ' ಎಂಬ ಅರ್ಥವೂ ಇರಬಹುದೆನಿಸುತ್ತದೆ. ಹೀಗಾಗಿ ಇದಕ್ಕೆ ಶೂನ್ಯದ ಗಳಿಕೆ ಶೂನ್ಯವನ್ನು ಕುರಿತ ಸಂವಾದವೆಂದು ಎರಡು ಅರ್ಥಗಳನ್ನು ಹೇಳಬಹುದು ಎಂದು ಎಂ.ಎಂ.ಕಲಬುರ್ಗಿ ಅವರು ಸ್ಪಷ್ಟಪಡಿಸುತ್ತಾರೆ.

'ವಚನ ಸಾಹಿತ್ಯ: ಸಂಪಾದನೆಯ ವಿಧಾನ–ಇತಿಹಾಸ' ಎಂಬ ಲೇಖನದಲ್ಲಿ ವಚನ ಸಾಹಿತ್ಯ ಸಂಪಾದನೆಯ ವಿಧಾನವನ್ನು ಅನುಸರಿಸುವ ಬಗೆಯನ್ನು ಹಾಗೂ ಅದು ಬೆಳೆದುಬಂದ ಬಗೆಯನ್ನು ಕುರಿತು ಚರ್ಚಿಸಿದ್ದಾರೆ. ವಚನ ಸಂಪಾದನೆ ಮಾಡುವ ಸಂದರ್ಭದಲ್ಲಿ ಸಂಪಾದಕನಿಗೆ ಪಾಠಾಂತರ ಸ್ವರೂಪ ಹಾಗೂ ಆಶಯ ಸ್ವರೂಪಗಳ ಸ್ಪಷ್ಟ ತಿಳುವಳಿಕೆ ಇರಬೇಕು. ಹಾಗೆಯೇ ವಚನ ಸಾಹಿತ್ಯ ಸಂಪಾದನ ಇತಿಹಾಸ ಭಾಗದಲ್ಲಿ ವಚನ ಸಾಹಿತ್ಯ ಸಂಪಾದನ ಕಾರ್ಯದ ಹಂತಗಳನ್ನು ಕುರಿತು ಚರ್ಚಿಸಿದ್ದಾರೆ. ಹಳಕಟ್ಟಿ ಪೂರ್ವಯುಗ, ಹಳಕಟ್ಟಿ ಯುಗ, ಬಸವನಾಳ ಯುಗ ಎಂದು ಮೂರು ಹಂತಗಳಲ್ಲಿ ವಚನ ಸಾಹಿತ್ಯ ಸಂಪಾದನ ಕಾರ್ಯ ಬೆಳೆದು ಬಂದಿರುವುದನ್ನು ಚರ್ಚಿಸಿದ್ದಾರೆ.

'ವಚನ ಸಾಹಿತ್ಯ ಪ್ರಕಟನೆಯ ಇತಿಹಾಸ' ಎಂಬ ಲೇಖನದಲ್ಲಿ ವಚನ ಸಾಹಿತ್ಯದ ಪ್ರಕಟನೆಯ ಹಂತಗಳನ್ನು ಸುದೀರ್ಘವಾಗಿ ಚರ್ಚಿಸಲು ಪ್ರಯತ್ನಿಸಿದ್ದಾರೆ. ವಚನ ಸಾಹಿತ್ಯ ಪ್ರಕಟನೆಯ ಇತಿಹಾಸವನ್ನು ನಾಲ್ಕು ನೆಲೆಯಲ್ಲಿ ನೋಡುವ ಪ್ರಯತ್ನವನ್ನು ಮಾಡಿದ್ದಾರೆ.

೧. ಪ್ರಾರಂಭದ ಪ್ರಯತ್ನಗಳು

೨. ವಿಜಾಪುರ ಶಿವಾನುಭವ ಗ್ರಂಥಮಾಲೆ

೩. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠ

೪. ಗದುಗಿನ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ

ಈ ಅವಧಿಯಲ್ಲಿ ವಚನ ಸಾಹಿತ್ಯ ಪ್ರಕಟನ ಕ್ರಿಯೆಯು ಪರಿಷ್ಕರಣ ವಿಧಾನ, ಮುದ್ರಣ ಸೌಂದರ್ಯ ಇತ್ಯಾದಿ ದೃಷ್ಟಿಯಿಂದ ಗಮನಾರ್ಹವಾದ ಹೆಜ್ಜೆಯನ್ನಿಟ್ಟು ಮುನ್ನಡೆದಿರುವುದನ್ನು ತಿಳಿಸಿದ್ದಾರೆ.

'ಶೂನ್ಯ ಸಂಪಾದನೆ: ಇನ್ನಷ್ಟು ವಿಚಾರಗಳು' ಎಂಬ ಲೇಖನದಲ್ಲಿ 'ವಚನಗಳ ಸಂಗ್ರಹ–ಸಂಕಲನ–ಸಂಪಾದನೆ' ಮತ್ತು 'ಶೂನ್ಯ ಸಂಪಾದನೆಯ ರಾಚನಿಕ ವಿವೇಚನೆ' ಎಂಬ ಎರಡು ಲೇಖನಗಳ ಮುಂದುವರಿಕೆಯಾದ ಈ ಲೇಖನದಲ್ಲಿ ಶೂನ್ಯಸಂಪಾದನೆಯನ್ನು ಕುರಿತು ಇನ್ನಷ್ಟು ವಿಚಾರಗಳನ್ನು ಹೇಳುವುದಾಗಿ ಎಂ.ಎಂ.ಕಲಬುರ್ಗಿ ಅವರೇ ಹೇಳಿಕೊಂಡಿದ್ದಾರೆ. ಶೂನ್ಯ ಸಂಪಾದನೆಯನ್ನು ಕುರಿತಂತೆ ಇನ್ನಷ್ಟು ೭ ನೆಲೆಗಳಲ್ಲಿ ಚರ್ಚಿಸುವ ಪ್ರಯತ್ನ ಮಾಡಿದ್ದಾರೆ.

೧. ಶೂನ್ಯ ಸಂಪಾದನ ಸಮಯ ಎಂಬ ಭಾಗದಲ್ಲಿ "ವಚನ ಸಾಹಿತ್ಯವನ್ನು ಬಳಸಿಕೊಂಡು ಹುಟ್ಟಿದ ಸಂಗ್ರಹ ಸಾಹಿತ್ಯ, ಸಂಕಲನ ಸಾಹಿತ್ಯಗಳ ಮಗ್ಗುಲಲ್ಲಿ ಮೂಡಿದ ಒಂದು ಸಾಹಿತ್ಯ ಪ್ರಕಾರ 'ಸಂಪಾದನ ಸಾಹಿತ್ಯ"[೧೨೪] ಎಂದಿದ್ದಾರೆ. ಅದು ಅನ್ಯರ ವಚನಗಳಿಂದ ರೂಪುಗೊಂಡಿರುತ್ತದೆ. ಸಂವಾದ ಶೈಲಿಯಲ್ಲಿರುತ್ತದೆ. ಪ್ರಭುದೇವ ಈ ಸಾಹಿತ್ಯದ ಕೇಂದ್ರಪಾತ್ರವಾಗಿರುತ್ತಾನೆ. ಈ ಎಲ್ಲ ಲಕ್ಷಣಗಳನ್ನೊಳಗೊಂಡ ಸಾಹಿತ್ಯವೇ ಸಂಪಾದನ ಸಾಹಿತ್ಯವೆಂದಿದ್ದಾರೆ. ಜೊತೆಗೆ "ಯಾವುದೇ ಬಗೆಯ ವಚನ ಸಂಪುಟಗಳನ್ನು ಸಿದ್ಧಪಡಿಸುವ ವೀರಶೈವ ವಿರಕ್ತ ಸ್ವಾಮಿಗಳ ಒಂದು ಸಂಪ್ರದಾಯವೇ ಬೆಳೆದುಬಂದು ಮುರುಘ, ಚೀಲಾಳ, ಕುಮಾರ, ಕೆಂಪಿನ ಸಮಯಗಳ ಜೊತೆಯಲ್ಲಿ ಅದು 'ಸಂಪಾದನ ಸಮಯ' ಎಂಬ ಹೆಸರು ಪಡೆದುಕೊಂಡಿತು. ಹೀಗೆ ಈ 'ಸಂಪಾದನ ಸಮಯ'ದವರು ಎಲ್ಲ ಬಗೆಯ ವಚನ ಸಂಪುಟಗಳನ್ನು ಸಿದ್ಧಪಡಿಸುತ್ತ ಬಂದಿದ್ದರೂ ಮೂಲತಃ ಶೂನ್ಯ ಸಂಪಾದನೆಗಳನ್ನು ಮಾತ್ರ ಪ್ರತಿ ಮಾಡುವುದು, ಪರಿಷ್ಕರಿಸುವುದು, ಸಂಗ್ರಹಿಸುವುದು, ವ್ಯಾಖ್ಯಾನಿಸುವುದು, ಪ್ರಸಾರ ಮಾಡುವುದೇ ಇವರ ಕೆಲಸವಾಗಿರಬೇಕು. ಆದುದರಿಂದ ಮೂಲತಃ ಸಂಪಾದನ ಸಾಹಿತ್ಯವೆಂದರೆ 'ಶೂನ್ಯ ಸಂಪಾದನ ಸಾಹಿತ್ಯ'ವೆಂದೂ, ಸಂಪಾದನ, ಸಮಯವೆಂದರೆ ಮೂಲತಃ 'ಶೂನ್ಯಸಂಪಾದನ ಸಮಯ'ವೆಂದೂ ಅರ್ಥವಿರಬಹುದು"[೧೨೫]ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

೨. ಸಂಕ್ಷಿಪ್ತ ಶೂನ್ಯ ಸಂಪಾದನೆಗಳು: ಎಂಬ ಭಾಗದಲ್ಲಿ ಪ್ರಸಾದಿ ಮಹಾದೇವಯ್ಯನ ಶೂನ್ಯ ಸಂಪಾದನೆಗಳು ಬೆಳೆಯುತ್ತ ಬಂದಂತೆ, ಇನ್ನೊಂದು ಕಡೆ ೩ ಸಂಕ್ಷಿಪ್ತ ಶೂನ್ಯಸಂಪಾದನೆಗಳು ಹುಟ್ಟಿಕೊಂಡ ವಿಶೇಷ ಅಂಶವನ್ನು ಚರ್ಚಿಸಿದ್ದಾರೆ. ಆ ಮೂರು ಸಂಕ್ಷಿಪ್ತ ಶೂನ್ಯಸಂಪಾದನೆ ಕೃತಿಗಳನ್ನು ನೋಡುವುದಾದರೆ ೧. ಸುಖ ಸಂಪಾದನೆಯ ವಚನಗಳು ೨. ಸಕಲ ಪುರಾತನರ

ವಚನ ಕಟ್ಟಿನಲ್ಲಿರುವ 'ಸಂಪಾದನೆಯ ವಚನಗಳು', ೩. ಸಂಪಾದನೆಯ ಸಾರಾಮೃತ. ಈ ಮೂರು ಸಂಕ್ಷಿಪ್ತ ಶೂನ್ಯ ಸಂಪಾದನೆಗಳು ಶಿವಗಣ ಪ್ರಸಾದಿಯ ತರುವಾಯ ಹುಟ್ಟಿವೆ ಎನ್ನುತ್ತ ಇವುಗಳಲ್ಲಿ ಸಂಪಾದನೆಯ ಸಾರಾಮೃತ ಮಾತ್ರ ಇನ್ನೂ ಮುಂದಿನ ಅವಧಿಯ ಗೊಳೂರು ಸಂಪಾದನೆಯ ತರುವಾಯ ಹುಟ್ಟಿದುದು ಸತ್ಯ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

೩. ಸಿದ್ಧರಾಮನ ದೀಕ್ಷಾ ಪ್ರಸಂಗ ಎಂಬ ಭಾಗದಲ್ಲಿ ಸಿದ್ಧಲಿಂಗನ ದೀಕ್ಷೆ ಕುರಿತು ಯಾವ ಶೂನ್ಯ ಸಂಪಾದನೆಯಲ್ಲಿ ಮೊದಲು ಚರ್ಚಿಸಲಾಗಿದೆ ಎಂದು ತಿಳಿಸಲು ಪ್ರಯತ್ನಿಸಿದ್ದಾರೆ. "ಮಹದೇವಯ್ಯನಲ್ಲಿಲ್ಲದ ಸಿದ್ಧರಾಮನ ದೀಕ್ಷಾಭಾಗವನ್ನು ತಾನು ಹೊಸದಾಗಿ ಸೇರಿಸುತ್ತಿರುವುದಾಗಿ ಮೈಸೂರು ವಿಶ್ವವಿದ್ಯಾನಿಲಯದ ಪ್ರತಿ ಹೇಳುತ್ತದೆ. ಆದರೆ ಈ ಕೆಲಸವನ್ನು ಕೆಂಚವೀರಣ್ಣ ಮಾಡಿದನೆಂದು ಗುಮ್ಮಳಾಪುರ ಸಿದ್ಧಲಿಂಗ, ಗುಮ್ಮಳಾಪುರ ಸಿದ್ಧಲಿಂಗ ಮಾಡಿದನೆಂದು ಗೂಳೂರು ಸಿದ್ಧವೀರಣ್ಣ ಹೇಳುತ್ತಾರೆ. ಇಲ್ಲಿ ಮೈಸೂರು ಕೃತಿಕಾರ ಮತ್ತು ಕೆಂಚವೀರಣ್ಣರು ಭಿನ್ನವಾಗಿದ್ದರೆ ದೀಕ್ಷಾ ಸಂದರ್ಭ ರಚನೆಯಲ್ಲಿ ಮೂವರ ಕೈವಾಡ(ಮೈಸೂರು ಕೃತಿಕಾರ, ಕೆಂಚವೀರಣ್ಣ, ಗುಮ್ಮಳಾಪುರ ಸಿದ್ಧಲಿಂಗ)ವಿದೆಯೆಂದೂ, ಮೈಸೂರು ಕೃತಿಕಾರ ಮತ್ತು ಕೆಂಚವೀರಣ್ಣ ಒಬ್ಬನೇ ಇದ್ದರೆ ಇಬ್ಬರ ಕೈವಾಡ(ಕೆಂಚವೀರಣ್ಣ, ಗುಮ್ಮಳಾಪುರದ ಸಿದ್ಧಲಿಂಗ) ವಿದೆಯೆಂದೂ ಭಾವಿಸಬೇಕಾಗುತ್ತದೆ. ಈ ದೀಕ್ಷಾಪ್ರಸಂಗ ಮೈಸೂರು ಪ್ರತಿ ಮತ್ತು ಸಿದ್ಧಲಿಂಗನ ಕೃತಿಗಳಲ್ಲಿ ಹೇಗೆ ನಿರೂಪಣೆಗೊಂಡಿವೆಯೆಂಬುದರ ತೌಲನಿಕ ಅಧ್ಯಯನ ನಡೆದರೆ, ಈ ಹೇಳಿಕೆಗಳ ಮೇಲೆ ಹೆಚ್ಚಿನ ಬೆಳಕು ಬೀಳುವ ಸಾಧ್ಯತೆಯಿದೆ" ಎಂದು ಸಂಶೋಧಕರಿಗೆ ಸೂಚನೆ ನೀಡಿದ್ದಾರೆ.

೪. ಪ್ರಸಾದಿ ಮಹಾದೇವಯ್ಯನ ಕಾಲ ಕುರಿತು ಚರ್ಚಿಸುತ್ತ ೧೫ನೆಯ ಶತಮಾನದ ಹಿಂದಿನವನಾಗಿದ್ದಾನೆಂದು ಕೆಲವು ಮೂಲ ಆಧಾರಗಳಿಂದ ನಿರ್ಧರಿಸಲು ಪ್ರಯತ್ನಿಸಿದ್ದಾರೆ.

೫. ಗುಮ್ಮಳಾಪುರದ ಸಿದ್ಧಲಿಂಗನ ಕಾಲವನ್ನು ಕುರಿತು ಚರ್ಚಿಸುತ್ತ ಕ್ರಿ.ಶ.ಸು.೧೫೮೦ ಈತನ ಕಾಲ ಎಂದು ನಿರ್ಧರಿಸಲು ಪ್ರಯತ್ನಿಸಿದ್ದಾರೆ.

೬. ಗೊಳೂರು ಸಿದ್ಧವೀರಣ್ಣನ ಕಾಲ ಕುರಿತು ಚರ್ಚಿಸುತ್ತ ಕ್ರಿ.ಶ.೧೬೧೬ ಈತನ ಕಾಲ ಎಂದು ನಿರ್ಧರಿಸಲು ಪ್ರಯತ್ನಿಸಿದ್ದಾರೆ.

೭. ಏಕೋತ್ತರ ಶತಸ್ಥಲ ಕುಟುಂಬ–ಶೂನ್ಯಸಂಪಾದನೆ ಕುಟುಂಬ ಎಂಬ ಭಾಗದಲ್ಲಿ "ಶೂನ್ಯ ಸಂಪಾದನೆ ಶಿವಗಣ ಪ್ರಸಾದಿ ಮಹಾದೇವಯ್ಯ ಮೊದಲಾದವರಿಂದ ನಾಲ್ಕು ಆವೃತ್ತಿಗಳಾಗಿ

ಬೆಳೆದುದಲ್ಲದೆ ಸುಖಸಂಪಾದನೆ, ಸಂಪಾದನೆಯ ವಚನಗಳು, ಸಂಪಾದನೆಯ ಸಾರಾಮೃತ ಎಂಬ ಸಂಗ್ರಹಗಳಿಗೂ ದಾರಿ ಮಾಡಿಕೊಟ್ಟಿದೆ. ಇದನ್ನು ವಚನಗಳನ್ನಾಧರಿಸಿ ಹುಟ್ಟುವ 'ಶೂನ್ಯ ಸಂಪಾದನಾ ಕುಟುಂಬ'ವೆಂದು ಕರೆಯಬಹುದು. ಇದೇ ರೀತಿ ವಚನಗಳನ್ನಾಧರಿಸಿ ಹುಟ್ಟಿದುದು 'ಏಕೋತ್ತರ ಶತಸ್ಥಲ ಕುಟುಂಬ"[೧೨೬] ಎಂದು ವಿವರಣಾತ್ಮಕವಾಗಿ ಚರ್ಚಿಸಿದ್ದಾರೆ. ಜೊತೆಗೆ ಇವೆರಡೂ ವೀರಶೈವ ಮಹತ್ವಪೂರ್ಣ ಕುಟುಂಬಗಳಾಗಿವೆ ಎಂದಿದ್ದಾರೆ. ಒಂದು ತಾತ್ವಿಕ ನೆಲೆಯಲ್ಲಿ, ಇನ್ನೊಂದು ಆನುಭಾವಿಕ ನೆಲೆಯಲ್ಲಿ ಬೆಳೆದುಬಂದಿದೆ. ಶೂನ್ಯಸಂಪಾದನೆ ಕಲ್ಪನೆಗಿಂತ ಏಕೋತ್ತರ ಶತಸ್ಥಲದ ಕಲ್ಪನೆ ಪ್ರಾಚೀನವಾಗಿರುವುದರಿಂದ ವೀರಶೈವ ಇತಿಹಾಸದಲ್ಲಿ ಮೊದಲು ತಾತ್ವಿಕವಾಗಿ ನಂತರ ಆನುಭಾವಿಕ ಅಭ್ಯಾಸಗಳು ಜರುಗಿವೆಯೆನಿಸುತ್ತದೆ. ಹಾಗೆಯೇ ಶೂನ್ಯಸಂಪಾದನೆಗಳು ಸಂವಾದ ರೂಪ ಪಡೆಯುವ ಹಿನ್ನೆಲೆಯಲ್ಲಿ ಕೃತಕ ವಚನಗಳು ಸೇರ್ಪಡೆಗೊಂಡಿರುವುದರಿಂದ ಪಾಠಶುದ್ಧಿಗೆ ಚ್ಯುತಿ ಬಂದಿರುವ ಸಾಧ್ಯತೆ ಕೂಡ ಇದೆ. ಆದರೆ ಈ ತಪ್ಪು ಕಾರ್ಯ ಏಕೋತ್ತರ ಶತಸ್ಥಲದಲ್ಲಿ ಕಂಡುಬರುವುದಿಲ್ಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

'ಶೂನ್ಯ ಸಂಪಾದನೆ: ರಾಚನಿಕ ವಿವೇಚನೆ' ಎಂಬ ಲೇಖನದಲ್ಲಿ ಶೂನ್ಯಸಂಪಾದನೆಯ ರಚನೆಯನ್ನು ಕುರಿತು ಚರ್ಚಿಸಿದ್ದಾರೆ. "ವೀರಶೈವ ಸೃಜನ ಸಾಹಿತ್ಯವಷ್ಟೇ ಮೌಲಿಕವಾಗಿದೆ, ಸಂಯೋಜನ ಸಾಹಿತ್ಯ ಇದು ಸೃಷ್ಟಿಯಲ್ಲ, ವಚನಗಳೆಂಬ ಸೃಷ್ಟಿಯಿಂದ ರೂಪುಗೊಂಡ ರಚನೆ. ಈ ರಚನೆಗಳಲ್ಲಿ ಸಂಗ್ರಹ, ಸಂಕಲನ, ಸಂಪಾದನ ಎಂದು ಮೂರು ಬಗೆಗಳನ್ನು ನಾವು ಗುರುತಿಸಬಹುದು, ಇವುಗಳಲ್ಲಿ ಶೂನ್ಯಸಂಪಾದನೆ 'ಸಂಪಾದನ ಸಾಹಿತ್ಯ' ವರ್ಗಕ್ಕೆ ಸೇರುತ್ತದೆ"[೧೨೭] ಇಲ್ಲಿ ಸೃಜನಸಾಹಿತ್ಯವಾದ ವಚನ ಸಾಹಿತ್ಯವನ್ನು ಒಂದು ತತ್ವ, ಉದ್ದೇಶದ ಹಿನ್ನೆಲೆಯಲ್ಲಿ ರಚನೆ ಮಾಡಿರುವುದೇ ಈ ಸಂಯೋಜನ ಸಾಹಿತ್ಯವೆನಿಸುತ್ತದೆ. ಈ ಸಂಯೋಜನ ಸಾಹಿತ್ಯವೇ ಶೂನ್ಯಸಂಪಾದನೆ, ರಚನೆಯ ದೃಷ್ಟಿಯಿಂದ 'ಸಂಪಾದನ ಸಾಹಿತ್ಯ'ದ ಲಕ್ಷಣಗಳನ್ನು ಮೂರು ನೆಲೆಯಲ್ಲಿ ಗುರುತಿಸಿದ್ದಾರೆ.

೧. ಇದು ಅನ್ಯರ ವಚನಗಳ ಆಧಾರದಿಂದ ರೂಪುಗೊಂಡಿರುತ್ತದೆ.

೨. ಸಂವಾದ ಶೈಲಿಯಲ್ಲಿರುತ್ತದೆ.

೩. ಪ್ರಭುದೇವನು ಈ ಸಾಹಿತ್ಯದ ಕೇಂದ್ರ ಪಾತ್ರವಾಗಿರುತ್ತಾನೆ.

ಈ ಮೂರು ಲಕ್ಷಣಗಳಿಗೆ ಪರಮಾವಧಿ ನಿದರ್ಶನವೇ ಶೂನ್ಯಸಂಪಾದನೆ. ಈ ಶೂನ್ಯ ಸಂಪಾದನೆಯ ಕಾರ್ಯಕ್ಕೆ ಮೊದಲು ಕೈಹಾಕಿದವರು ಪ್ರಸಾದಿ ಮಹದೇವಯ್ಯ ಎಂಬ

ಅಭಿಪ್ರಾಯವನ್ನು ತಿಳಿಸುತ್ತ ಮುಂದಿನ ಹಂತಗಳನ್ನು ವಿವರಿಸಿದ್ದಾರೆ. ಶೂನ್ಯಸಂಪಾದನೆಯ ರಚನೆಗಾಗಿ ಬಳಸಿದ ಸಾಮಗ್ರಿಯಲ್ಲಿ ಶರಣರ ವಚನಗಳನ್ನು ಬಿಟ್ಟರೆ ಉಳಿಯುವ ಭಾಗ ಸಂಪಾದನಕಾರರ ಗದ್ಯ ಎನ್ನುತ್ತ ಈ ಶೂನ್ಯಸಂಪಾದನೆಯ ಬಳ್ಳಿ ಹಬ್ಬಿರುವುದೇ ಗದ್ಯ ಹಂದರದ ಮೇಲೆ. ಇಲ್ಲಿ ಸಂಪಾದಕರ ಸ್ವಂತ ಪಾಲಾಗಿ ಗದ್ಯ ಹರಡಿಕೊಂಡಿರುವ ಬಗೆಯನ್ನು ಚರ್ಚಿಸಿದ್ದಾರೆ.

ಹೀಗೆ ಶೂನ್ಯಸಂಪಾದನೆಗಳಲ್ಲಿ ಕಂಡುಬರುವ ಸ್ಥಳದೃಶ್ಯಗಳು, ಘಟನೆಗಳು, ಪಾತ್ರಗಳು, ವಚನಗಳು ಇವೆಲ್ಲವನ್ನು ಗದ್ಯವನ್ನು ಬಳಸಿಕೊಂಡು ಸಂಘಟಿಸುವ ಕೆಲಸ ಸಂಪಾದಕರದ್ದು ಎನ್ನುತ್ತ ಇವೆಲ್ಲವುಗಳು ಶೂನ್ಯಸಂಪಾದನೆಯ ರಾಚನಿಕ ಅಧ್ಯಯನದ ಮಹತ್ವಪೂರ್ಣವಾದ ಅಂಶವಾಗಿದೆ ಎಂದು ಹೇಳಬೇಕಾಗಿಲ್ಲ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದರ ಜೊತೆಗೆ ಶೂನ್ಯಸಂಪಾದನೆಗೆ ಸಂಪಾದಿಸಿದಂತೆ ಕೆಲವು ಸೂಚನೆಗಳನ್ನು ನೀಡಿದ್ದಾರೆ. "ಈವರೆಗೆ ಎತ್ತಿ ತೋರಿಸಿದ ಉತ್ತಮ ಅನುತ್ತಮಾಂಶಗಳ ಹಿನ್ನೆಲೆಯಲ್ಲಿ ಶೂನ್ಯಸಂಪಾದನೆಯನ್ನು ಈಗ ೫ನೆಯ ಸಲ ಮತ್ತೊಮ್ಮೆ ಪುನಃ ರಚಿಸುವುದು ಅಗತ್ಯವಾಗಿದೆ. ಇದ್ದವುಗಳಲ್ಲಿ ಉತ್ತಮವಾಗಿರುವ ಸಿದ್ಧವೀರಣ್ಣನ ಸಂಪಾದನೆಯನ್ನು ಆಧಾರ ಪ್ರತಿಯನ್ನಾಗಿ ಇಟ್ಟುಕೊಂಡು ವೀರಶೈವ ಬೈಬಲ್ ಆಗುವಂತೆ ಈ ಕಾರ್ಯವನ್ನು ಪೂರೈಸಬೇಕಾಗಿದೆ. ಹೀಗೆ ಮಾಡುವಾಗ ಅದು ತತ್ವಕ್ಕೆ ತತ್ವ ಚರಿತ್ರೆಗೆ ಚರಿತ್ರೆ, ಸಾಹಿತ್ಯಕ್ಕೆ ಸಾಹಿತ್ಯವಾಗುವಂತೆ ನೋಡಿಕೊಳ್ಳಬೇಕು. ಈ ಉಪಕ್ರಮದಿಂದಾಗಿ ಆಚಾರ್ಯರ ಪ್ರಮಾಣ ಗ್ರಂಥವೆನಿಸದೆ, ಪ್ರವಾದಿಗಳ ಪ್ರಮಾಣ ಗ್ರಂಥವೆನಿಸಬೇಕೆಂಬುದನ್ನು ಇಲ್ಲಿ ಮರೆಯಬಾರದು"[೧೨೮] ಎಂದು ಹೇಳುವಲ್ಲಿ ಎಂ.ಎಂ.ಕಲಬುರ್ಗಿ ಅವರಿಗಿರುವ ವಚನ ಸಾಹಿತ್ಯದ ಬಗೆಗಿನ ಕಾಳಜಿಯು ಎದ್ದು ತೋರುತ್ತದೆ.

'ಶೂನ್ಯಸಂಪಾದನೆಗಳು ಎಷ್ಟು? ಕಾಲಾನುಕ್ರಮ ಯಾವುದು?' ಎಂಬ ಲೇಖನದಲ್ಲಿ ಎಂ.ಎಂ.ಕಲಬುರ್ಗಿ ಅವರು ಶೂನ್ಯಸಂಪಾದನೆಗಳ ಸಂಖ್ಯೆಯನ್ನು ಕುರಿತಂತೆ ಇರುವ ಭಿನ್ನಾಭಿಪ್ರಾಯಗಳನ್ನು ಕುರಿತಂತೆ ಚರ್ಚಿಸಿದ್ದಾರೆ. ಶೂನ್ಯಸಂಪಾದನೆಗಳು ಎಷ್ಟು ಎಂಬುದನ್ನು ಮೊದಲು ಪ್ರಶ್ನೆ ಎತ್ತಿದವರು. ಎಂ.ಆರ್.ಶ್ರೀ. ಅವರು. ೧೯೩೪ರಲ್ಲಿ ಶೂನ್ಯಸಂಪಾದನೆಗಳ ಸಂಖ್ಯೆ ೫ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು. ಅದನ್ನು ನಂತರ ಬಂದಂತಹ ಉತ್ತಂಗಿಚೆನ್ನಪ್ಪ (೧೯೬೫) ಆರ್.ಸಿ.ಹಿರೇಮಠ(೧೯೭೭) ಅವರು ಬೆಂಬಲಿಸಿದರು. ಇವರನ್ನು ಬಿಟ್ಟರೆ ಉಳಿದ ವಿದ್ವಾಂಸರ ಶೂನ್ಯಸಂಪಾದನೆಗಳು ೪ ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಆದರೆ ಶೂನ್ಯ ಸಂಪಾದನೆಗಳ ಸಂಖ್ಯೆ ೫ ಎಂದು ನಿರ್ಧಾರಕ್ಕೆ ಬಂದು ಎಂ.ಆರ್.ಶ್ರೀ ಅವರ ಹಳೆಯ ವಾದವನ್ನೇ ಒಪ್ಪುತ್ತಾರೆ.

೧. ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ.

೨. ಕೆಂಚವೀರಣ್ಣೊಡೆಯರ ಶೂನ್ಯಸಂಪಾದನೆ(ಇದನ್ನು ಗುಮ್ಮಳಾಪುರ ಸಿದ್ಧಲಿಂಗ ಎಂದು ಸ್ಮರಿಸಿದ್ದಾರೆ)

೩. ಗುಮ್ಮಳಾಪುರದ ಸಿದ್ಧವೀರಣ್ಣನ ಶೂನ್ಯಸಂಪಾದನೆ(೧೫೮೦ಕ್ಕೆ ಮೊದಲು ಹುಟ್ಟಿದೆ)

೪. ಹಲಸಿದೇವರ ಶೂನ್ಯಸಂಪಾದನೆ(೧೫೮೫)

೫. ಗೊಳೂರು ಸಿದ್ಧವೀರಣ್ಣೊಡೆಯರ ಶೂನ್ಯ ಸಂಪಾದನೆ.

ಇವೆಲ್ಲವುಗಳು ದೊಡ್ಡ ಶೂನ್ಯಸಂಪಾದನೆಗಳಾಗಿವೆ. ಇವುಗಳನ್ನು ಎಂ.ಎಂ.ಕಲಬುರ್ಗಿ ಅವರು ಒಪ್ಪುತ್ತ ಇವುಗಳ ಜೊತೆಗೆ ಇನ್ನೂ ಎರಡು ಸಣ್ಣ ಶೂನ್ಯಸಂಪಾದನೆಗಳನ್ನು ಗುರುತಿಸಿದ್ದಾರೆ. ಅವುಗಳನ್ನು ಕಾಲಾನುಕ್ರಮದಲ್ಲಿ ನೀಡಿದ್ದಾರೆ.

೧. ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆ.

೨. ಸುಖಸಂಪಾದನೆಯ ವಚನಗಳು(ಇದು ಮುಂದೆ ಕೋಲ ಶಾಂತಯ್ಯನಿಂದ ಆರಂಭವಾಗುವ ಪುರಾತನರ ವಚನಗಳು ಕಟ್ಟಿನಲ್ಲಿ ಸೇರಿಕೊಂಡಿದೆ).

೩. ಕೆಂಚವೀರಣ್ಣೊಡೆಯರ ಶೂನ್ಯ ಸಂಪಾದನೆ(ಅಲಭ್ಯವಾಗಿದೆ, ಇದನ್ನು ಗುಮ್ಮಳಾಪುರ ಸಿದ್ಧಲಿಂಗ ಸ್ಮರಿಸಿದ್ದಾನೆ).

೪. ಗುಮ್ಮಳಾಪುರ ಸಿದ್ಧಲಿಂಗನ ಶೂನ್ಯಸಂಪಾದನೆ(ಕ್ರಿ.ಶ.೧೫೮೦ಕ್ಕೆ ಮೊದಲು ಹುಟ್ಟಿದೆ).

೫. ಹಲಗೆಯಾರ್ಯನ ಶೂನ್ಯ ಸಂಪಾದನೆ(ಕ್ರಿ.ಶ.೧೫೮೫ ರಂದು ಹುಟ್ಟಿದೆ).

೬. ಗೊಳೂರು ಸಿದ್ಧವೀರಣ್ಣನ ಶೂನ್ಯಸಂಪಾದನೆ.

೭. ಕಟ್ಟಿಗೆಹಳ್ಳೀ ಸಿದ್ಧಲಿಂಗನ ಸಂಪಾದನೆಯ ಸಾರಾಮೃತ(ಗೂಳೂರು ಕೃತಿಯ ಸಂಗ್ರಹ).

ಬಸವಣ್ಣನನ್ನು ಕುರಿತಂತೆ ಹಲವು ಜನ ಟೀಕೆಗಳನ್ನು ಬರೆದಿದ್ದಾರೆ. ಟೀಕಾಕಾರರ ಶೋಧವನ್ನು ಕುರಿತಂತೆ 'ಬಸವಣ್ಣನವರ ಷಟ್‌ಸ್ಥಲ ವಚನ ವ್ಯಾಖ್ಯಾನದ ಕರ್ತೃ' ಎಂಬ ಲೇಖನವನ್ನು ಎಂ.ಎಂ.ಕಲಬುರ್ಗಿ ಅವರು ಬರೆದಿದ್ದಾರೆ. 'ಬಸವಣ್ಣನವರ ಷಟ್ಸ್ಥಲ ವಚನಗಳು' ಗ್ರಂಥಕ್ಕೆ ಈವರೆಗೆ ೫ ಜನ ಟೀಕೆ ಬರೆದಿದ್ದು ಇವೆಲ್ಲವು I, II, III, IV, V ಸಂಕೇತದಿಂದ ಪ್ರಕಟವಾಗಿವೆ. ಇವುಗಳಲ್ಲಿ I, II ನೇ ಟೀಕಾಕಾರರು ಯಾರೆಂಬುದು ತಿಳಿಯುವುದೇ ಇಲ್ಲ. ೧ನೆಯ ಟೀಕಾಕಾರನನ್ನು ಶೋಧಿಸುವುದೇ ಈ ಲೇಖನದ ಉದ್ದೇಶವೆಂದು ಪ್ರಾರಂಭದಲ್ಲಿಯೇ ಸ್ಪಷ್ಟಪಡಿಸುತ್ತಾರೆ.

ಐದು ಜನ ಟೀಕಾಕಾರರಲ್ಲಿ ಕೊನೆಯ ನಾಲ್ವರು ಕೆಲವು ಸೂಕ್ತವೆನಿಸಿದ ವಚನಗಳಿಗೆ ಟೀಕೆಯನ್ನು ಬರೆದಿದ್ದಾರೆ. ಆದರೆ ೧ನೇ ಟೀಕಾಕಾರನು ಎಲ್ಲಾ ವಚನಗಳಿಗೂ ಟೀಕು ಬರೆದಿದ್ದಾನೆ.

ಇದನ್ನು "ಶ್ರೀ ಗುರುಬಸವರಾಜದೇವರು ನಿರೂಪಿಸಿದ ಷಟ್ಸ್ಥಲದ ವಚನ ವ್ಯಾಖ್ಯಾನ" ಎಂದು ಕರೆಯಲಾಗಿದ್ದು ಇವನನ್ನು ಪತ್ತೆಹಚ್ಚಲು ಸಿದ್ಧವೀರಸ್ವಾಮಿ ಕೃತ 'ಮುಕ್ತಿಕಂಠಾಭರಣ' ಹೆಸರಿನ ವಚನ ಸಂಕಲನ ಗ್ರಂಥವು ನೆರವಾಗಿದೆ ಎಂದು ಎಂ.ಎಂ.ಕಲಬುರ್ಗಿ ಅವರು ತಿಳಿಸುತ್ತಾರೆ. "ಮುಕ್ತಿಕಂಠಾಭರಣದ ೪೬೭ನೇ ವಚನದ ಟೀಕೆಯಲ್ಲಿ ಮೂಲಪ್ರತಿಯಲ್ಲಿ ಸಿದ್ಧವೀರಸ್ವಾಮಿಗಳು ಬರೆಯದ ಕಾರಣ ಇಲ್ಲಿ ಬಸವೇಶ್ವರ ವಚನ ಒಂಬೈನೂರು ಐವತ್ತೇಳು ವಚನಕ್ಕೆ ಹುಮನಾಬಾದಿ ವಿರಕ್ತಮಠದ ನಿರಂಜನಸ್ವಾಮಿ ವ್ಯಾಖ್ಯಾನ ಬರೆದ ಪ್ರತಿಯಲ್ಲಿಯ ಈ ವಚನದ ಟೀಕು, ಕುಂಕೋಜಿ ಮಠದ ಗುರುಪಾದಪ್ಪನವರ ಕರಸಂಜಾತನಾದ ಚೆನ್ನಬಸವನು ಬರೆದಿರುತ್ತಾನೆ." ಮುಕ್ತಿಕಂಠಾಭರಣವನ್ನು ಸಂಕಲಿಸುತ್ತ ಅಲ್ಲಿಯ ೫೬೭ನೆಯ ಬಸವಣ್ಣನವರ ವಚನಕ್ಕೆ ಟೀಕೆ ಬರೆಯದ ಪ್ರಯುಕ್ತ ನಿರಂಜನಸ್ವಾಮಿಗಳು ಬರೆದಿದ್ದ "ಬಸವಣ್ಣನವರ ವಚನ ವ್ಯಾಖ್ಯಾನ"ದಿಂದ ಉದ್ಧರಿಸಿ ನೋಡಿಸಿದವನು ಚೆನ್ನಬಸವನೆಂಬುದು ಇಲ್ಲಿಯ ಆಶಯ. ಇದರಿಂದ ೧ನೇ ಟೀಕಾಕಾರ ಹುಮನಾಬಾದಿ ವಿರಕ್ತಮಠದ ನಿರಂಜನಸ್ವಾಮಿ ಎಂದು ಎಂ.ಎಂ.ಕಲಬುರ್ಗಿ ಅವರು ಸ್ಪಷ್ಟಪಡಿಸಿದ್ದಾರೆ. ಅಲ್ಲದೆ ಬಳ್ಳಾರಿಯವನೆಂದು ಪರಿಗಣಿಸಿದ್ದ ಇವನನ್ನು ಕಲ್ಯಾಣ ಪ್ರಾಂತ್ಯದವನೆಂದು ಹೇಳಿ ನಂತರ ಇಲ್ಲವಾದರೆ ಬಳ್ಳಾರಿ ಪ್ರದೇಶದವನಿದ್ದು ಆಮೇಲೆ ಹುಮನಾಬಾದಿ ವಿರಕ್ತಮಠದ ಅಧಿಕಾರಕ್ಕೆ ಹೋಗಿರಬಹುದೆಂದು ಹೇಳಬೇಕಾಗುತ್ತದೆ ಎಂದು ೧ನೇ ಟೀಕಾಕಾರ ಯಾರು ಎಂಬುದನ್ನು ಆಧಾರಸಮೇತವಾಗಿ ಪತ್ತೆ ಹಚ್ಚಿದ್ದಾರೆ.

'ಏಕೋತ್ತರ ಶತಸ್ಥಲ ಸಿದ್ಧಾಂತದ ಪ್ರವರ್ತಕ ಯಾರು?: ಎರಡು ವಾದಗಳು' ಎಂಬ ಲೇಖನದಲ್ಲಿ ಶೀರ್ಷಿಕೆಯೇ ಹೇಳುವಂತೆ ಏಕೋತ್ತರ ಶತಸ್ಥಲ ಸಿದ್ಧಾಂತದ ಕರ್ತೃ ಕುರಿತು ಚರ್ಚೆ ನಡೆದಿದೆ. ಮಹಾಲಿಂಗದೇವ>ಕುಮಾರ ಬಂಕನಾಥ>ಜಕ್ಕಣಾರ್ಯ ಎಂದೂ, ಮಹಾಲಿಂಗದೇವ> ಜಕ್ಕಣಾರ್ಯ ಎಂದೂ, ಇಬ್ಬಗೆಯಲ್ಲಿ ಗುರುಶಿಷ್ಯರ ಪರಂಪರೆ ಕಂಡುಬರುತ್ತದೆ. ಇವರಲ್ಲಿ ಮಹಾಲಿಂಗದೇವನು ಏಕೋತ್ತರ ಶತಸ್ಥಲ, ಪ್ರಭುದೇವರ ಟೀಕಿನ ವಚನ ಗ್ರಂಥಗಳನ್ನು ರಚಿಸಿರುವನೆಂದು ಹೇಳುವ ಕವಿ ಚರಿತೆಕಾರರು, ಕುಮಾರ ಬಂಕನಾಥನು ಷಟ್‌ಸ್ಥಲೋಪದೇಶ, ಪ್ರಭುದೇವರ ಟೀಕಿನ ವಚನ ಬರೆದಿರುವನೆಂದೂ ಹೇಳುತ್ತದೆ. ಈತನ ಕೃತಿಗಳು ಮಹಾಲಿಂಗದೇವನ ಕೃತಿಗಳನ್ನೇ ಹೋಲುತ್ತವೆ ಎನ್ನುತ್ತದೆ. ಆದರೆ ಈ ತನಕ ಒಂದೂ ಕೃತಿಯೂ ಲಭಿಸಿಲ್ಲ ಎನ್ನುತ್ತ ಏಕೋತ್ತರ ಶತಸ್ಥಲದ ನಿಜವಾದ ಕರ್ತೃ ಯಾರೆಂದು ಸ್ಪಷ್ಟಪಡಿಸಲು ಎಂ.ಎಂ.ಕಲಬುರ್ಗಿ ಅವರು ಪ್ರಯತ್ನಿಸಿದ್ದಾರೆ. "ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರವು 'ಕುಮಾರ ಬಂಕನಾಥದೇವರ ಶಿಷ್ಯರಾದ ಜಕ್ಕಣಾರ್ಯ ಪಂಡಿತರು ತಮ್ಮ ಗುರುನಿರೂಪದಿಂದ ಸಕಲ ಪುರಾತನರ ವಚನಂಗಳಿಂದ ಏಕೋತ್ತರ ಶತಸ್ಥಲದ ಸೂತ್ರವ ಕಲ್ಪಿಸಿ, ಸ್ಥಲವಿಟ್ಟು ವಸ್ತುಕ ವರ್ಣಕಂಗಳಿಂ.... ಸಂಗ್ರಹಿಸಿ, ಪ್ರಭುದೇವರು

ನಿರೂಪಿಸಿದ ವಚನಂಗಳಿಗೆಯೂ ಸೂತ್ರಸ್ಥಲವಿಟ್ಟು, ಅರ್ಥಪದ್ಧತಿಯ ವಾಕ್ಯಂಗಳಿಂ..... ವ್ಯಾಖ್ಯಾನವಂ ಮಾಡಿ" ಎಂದು ಹೇಳುತ್ತ ಈ ವಚನ ಮತ್ತು ಸವರವಚನಯುಕ್ತ ಏಕೋತ್ತರ ಶತಸ್ಥಲ, ಪ್ರಭುದೇವರ ಟೀಕಿನ ವಚನ ರಚಿಸಿದವನು ಮಹಾಲಿಂಗದೇವನೂ ಅಲ್ಲ, ಕುಮಾರ ಬಂಕನಾಥನೂ ಅಲ್ಲ, ಜಕ್ಕಣಾರ್ಯನೆಂದು ಸೂಚಿಸುತ್ತದೆ" ಎಂಬ ಅಂಶವನ್ನು ಚರ್ಚಿಸುತ್ತ ಇದಕ್ಕೆ ಬೆಂಬಲವಾಗಿ ಇನ್ನೊಂದು ಅಂಶದ ಮೂಲಕ ಜಕ್ಕಣಾರ್ಯನೇ ಇದರ ಕರ್ತೃ ಎಂಬುದನ್ನು ತಿಳಿಸಲು ಪ್ರಯತ್ನಿಸಿದ್ದಾರೆ. "ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿ ಭಂಡಾರದಲ್ಲಿರುವ ವಚನ-ಸ್ವರವಚನಯುಕ್ತ ಏಕೋತ್ತರ ಶತಸ್ಥಲ ಹಸ್ತಪ್ರತಿಯ ಕೊನೆಯಲ್ಲಿ 'ಈ ಏಕೋತ್ತರ ಶತಸ್ಥಲವನ್ನು ಭಂಡಾರಿ ಜಕ್ಕಣಾರ್ಯರು ಸೇರುವೆಯ ಮಾಡಿದ ದಿನ ಪ್ರಮಾಣವೆಂತೆಂದಡೆ.....' ಎಂದು ಮುಂತಾಗಿ ಹೇಳಿದುದೂ ಇದನ್ನು ಬೆಂಬಲಿಸುತ್ತದೆ"[೧೨೯] ಎಂದು ಹೇಳುವ ಮೂಲಕ ವಚನ-ಸ್ವರವಚನಯುಕ್ತ ಏಕೋತ್ತರ ಶತಸ್ಥಲದ ಮೂಲ ಕರ್ತೃ ಜಕ್ಕಣಾರ್ಯ ಎಂದು ಸ್ಪಷ್ಟಪಡಿಸಿದ್ದಾರೆ.

ಸಕಲಪುರಾತನರ ವಚನಕಟ್ಟು ಮತ್ತು ಸ್ಥಳವ್ಯವಸ್ಥೆ: ಎಂಬ ಲೇಖನದಲ್ಲಿ ಸಕಲಪುರಾತನರ ವಚನಕಟ್ಟಿನ ವಿಶಿಷ್ಟತೆಗಳು ಮತ್ತು ಈ ವಚನಕಟ್ಟಿನಲ್ಲಿ ಒಳಗೊಂಡಿರುವ ವಚನಗಳಲ್ಲಿ ವ್ಯಕ್ತಗೊಂಡಿರುವ ಸ್ಥಲವ್ಯವಸ್ಥೆಯನ್ನು ಕುರಿತು ಚರ್ಚಿಸಲಾಗಿದೆ. ಸಕಲಪುರಾತನರ ವಚನಕಟ್ಟು ಮೂರು ರೀತಿಯಾಗಿ ಸ್ಥಾಪನೆಗೊಂಡಿದೆ. ಅವುಗಳೆಂದರೆ ಗೊಗ್ಗವ್ವೆಯ ವಚನಗಳಿಂದ ಆರಂಭವಾಗುವ ಕಟ್ಟು, ಬಸವಣ್ಣನವರ ವಚನಗಳಿಂದ ಆರಂಭವಾಗುವ ಕಟ್ಟು ಮತ್ತು ಕೋಲಾಶಾಂತಯ್ಯನವರ ವಚನಗಳಿಂದ ಆರಂಭವಾಗುವ ಕಟ್ಟು ಎಂದು ವಿಭಾಗಿಸಲಾಗಿದೆ. ಇದರಲ್ಲಿ ಮುಖ್ಯವಾಗಿ ಕೋಲಶಾಂತಯ್ಯನ ವಚನಗಳಿಂದ ಆರಂಭವಾಗುವ ವಚನಕಟ್ಟನ್ನು ಆರಂಭವಾಗಿಟ್ಟು ಸ್ಥಲವ್ಯವಸ್ಥೆಯ ಚರ್ಚೆಯನ್ನು ಮಾಡಲಾಗಿದೆ.

ಕೋಲಶಾಂತಯ್ಯನ ವಚನಗಳಿಂದ ಆರಂಭವಾಗುವ ವಚನಕಟ್ಟು ಸುಮಾರು ಮೂರು ಸಾವಿರ ವಚನಗಳನ್ನು ಒಳಗೊಂಡಿದೆ. ಇಲ್ಲಿ ೨೭ ಜನ ವಚನಕಾರರ ವಚನಗಳಿದ್ದು, ಅವುಗಳಲ್ಲಿ ೧೦ ಜನ ವಚನಕಾರರ ವಚನಗಳನ್ನು ವೀರಶೈವತತ್ವದ ಪರಿಕಲ್ಪನೆಗಳಿಗೆ ಭಿನ್ನವಾಗಿ ನಮಗೆ ಗೊತ್ತಿರದ ಹೊಸ ಪರಿಕಲ್ಪನೆಗಳ ಅಡಿಯಲ್ಲಿ ವರ್ಗೀಕರಿಸಲಾಗಿದೆ. ವಿಶೇಷವಾಗಿ ಈ ೧೦ ಜನ ವಚನಕಾರರ ಸ್ಥಳ ಎಂಬ ಶಬ್ದವನ್ನೇ ವಿಶೇಷ ಪರಿಭಾಷೆಯಲ್ಲಿ ಬಳಸಿರುವುದು ಚರ್ಚೆಯ ಮುಖ್ಯ ಸಂಗತಿಯಾಗಿದೆ.

ಈ ವಚನಕಾರರ ವಚನಗಳು ಶೈವ ಸಂಪ್ರದಾಯದ ನಿರಾಕರಣೆ, ವೀರಶೈವ ಸಿದ್ಧಾಂತದ ಪ್ರತಿಪಾದನೆ, ಷಟ್‌ಸ್ಥಲಗಳ ಪರಿಕಲ್ಪನೆ, ಮಿಕ್ಕ ವಚನಕಾರರ ವಚನಗಳಿಗಿಂತ ಭಿನ್ನವೆನಿಸುವಂತಹವುಗಳಾಗಿವೆ. ಒಟ್ಟಾರೆಯಾಗಿ ಬಸವಣ್ಣ ಮತ್ತು ಚೆನ್ನಬಸವಣ್ಣನವರು ಹೇಳುವ ಸ್ಥಲಕ್ರಮಕ್ಕಿಂತ ಭಿನ್ನವಾಗಿ ಸ್ಥಲಕ್ರಮವನ್ನು ಈ ವಚನಕಾರರ ವಚನಗಳಲ್ಲಿ ಗುರುತಿಸಲಾಗಿದೆ.

'ಅನುಭವ ಮಂಟಪ: ಹುಟ್ಟು-ಮರುಹುಟ್ಟು' ಎಂಬ ಲೇಖನದಲ್ಲಿ ದೇವಾಲಯ ಸಂಸ್ಕೃತಿ, ಮಠಸಂಸ್ಕೃತಿಗಳ ತರುವಾಯ ಅನುಭವ ಮಂಟಪ ಸಂಸ್ಕೃತಿ ಯಾವ ರೀತಿ ಅಸ್ತಿತ್ವಕ್ಕೆ ಬಂದಿತು ಹಾಗೂ ಅದರ ಚಲನಶೀಲತೆ ಯಾವ ರೀತಿಯಾಗಿ ಕಂಡುಬಂದಿದೆ ಎಂಬುದನ್ನು ಕುರಿತು ಚರ್ಚಿಸಿದ್ದಾರೆ. ನಿರಾಕಾರ ಸೇವೆಯಲ್ಲಿದ್ದ ದೇವರನ್ನು ಶಿಲೆಯಲ್ಲಿ ಸಾಕಾರಗೊಳಿಸುವ ಮೂಲಕ ಗಂಡು ದೇವರು=ಹೆಣ್ಣು ದೇವರು, ಮಾಂಸಾಹಾರಿ ದೇವರು-ಶಾಕಾಹಾರಿ ದೇವರು, ಜಾತಿ ದೇವರು-ವಿಜಾತಿದೇವರು, ಶಿಲಾದೇವರು-ಶಿಲ್ಪದೇವರು ಎಂಬ ಶಾಖೋಪಶಾಖೆಗಳು ಬೆಳೆದು ಬಂದವು. ಈ ರೀತಿಯಾಗಿ ದೇವರ ಸಾಕಾರಮೂರ್ತಿಯನ್ನು ಪೂಜಿಸಲು ಹಾಗೆಯೇ ಆ ಮೂರ್ತಿಯ ರಕ್ಷಣೆಗಾಗಿ ಅರ್ಚಕ ಹುಟ್ಟಿಕೊಂಡು ದೇವರ ದರ್ಶನಕ್ಕೆ ಮಡಿಮೈಲಿಗೆ ಅನ್ನುವ ವ್ಯವಸ್ಥೆಯನ್ನು ತರುವುದರ ಜೊತೆಗೆ ಅವನ ಶೋಷಕನಾಗಿ ರೂಪುಗೊಂಡು ಇದರ ಜೊತೆಗೆ ದಾನ ರೂಪದಲ್ಲಿ ಹಣ, ಹೊಲ, ಮನೆ, ಆಸ್ತಿಗಳು ಬಂದು ಅರ್ಚಕನೊಂದಿಗೆ ಆಡಳಿತ ವರ್ಗ ಹುಟ್ಟಿಕೊಂಡ ಬಗೆಯನ್ನು ಕುರಿತು ಎಂ.ಎಂ.ಕಲಬುರ್ಗಿ ಅವರು ಚರ್ಚಿಸಿದ್ದಾರೆ. ನಂತರ ದೇವರ ಹೆಸರಿನಲ್ಲಿ ನಡೆಯುವ ಶೋಷಣೆಯನ್ನು ತಪ್ಪಿಸಲು 'ಜ್ಞಾನವೇ ದೇವರು' ಎಂಬ ಸಿದ್ಧಾಂತದ ಹಿನ್ನೆಲೆಯನ್ನಿಟ್ಟು ಕೊಂಡು ಶಿಕ್ಷಣನಿಯಮಗಳ ರೂಪದಲ್ಲಿ ಮಠಗಳು ಅಸ್ತಿತ್ವಕ್ಕೆ ಬಂದವು. ಇಲ್ಲಿಯೂ ಕೂಡ ಯಾವ ರೀತಿ ಆಚಾರ್ಯರು ಅರ್ಚಕರಂತೆ ನಡೆದುಕೊಂಡರೆಂಬುದನ್ನು ಕಲ್ಯಾಣರಾವ್ ಜಿ. ಪಾಟೀಲ ಅವರು "ದೇವಾಲಯದ ಅರ್ಚಕರು, ಮಠದ ಅಚಾರ್ಯರು ಧರ್ಮದ ಹೆಸರಿನಲ್ಲಿ ಪುರೋಹಿತ ಸತ್ತೆಯನ್ನು ಗಟ್ಟಿಗೊಳಿಸಿಕೊಂಡರು"[೧೨] ಎಂದು ಚರ್ಚಿಸಿರುವುದು ಎಲ್ಲರೂ ಒಪ್ಪುವಂತಹ ವಿಷಯವೇ ಆಗಿದೆ. ಈ ರೀತಿಯ ದೇಗುಲ ವ್ಯವಸ್ಥೆ ಹಾಗೂ ಮಠವ್ಯವಸ್ಥೆಗಳನ್ನು ವಿರೋಧಿಸುವ ನೆಲೆಯಲ್ಲಿ ೧೨ನೆಯ ಶತಮಾನದಲ್ಲಿ 'ಅನುಭವ ಮಂಟಪ'ವನ್ನು ಶರಣರು ಸೃಷ್ಟಿಸಿದ ಪರ್ಯಾಯ ಸಂಸ್ಥೆಯಾಗಿದೆ. ಇಲ್ಲಿ ಜಾತಿಭೇದ, ಲಿಂಗಭೇದ, ವರ್ಗಭೇದಗಳೆನ್ನದೇ ಸಮಾನತೆಯ ನೆಲೆಯಲ್ಲಿ ಎಲ್ಲರಿಗೂ ಮುಕ್ತ ಅವಕಾಶ ಒದಗಿಸಿಕೊಟ್ಟಿದ್ದು ಈ 'ಅನುಭವ ಮಂಟಪ'. ಅನುಭವ ಮಂಟಪದ ಅಧ್ಯಕ್ಷತೆಯ ಕುರಿತಂತೆ ಕೂಡ ಎಂ.ಎಂ.ಕಲಬುರ್ಗಿ ಅವರು ಈ ಮುಂದಿನಂತೆ ಚರ್ಚಿಸಿದ್ದಾರೆ. "ಈ ಅನುಭವ ಮಂಟಪವನ್ನು ಸ್ಥಾಪಿಸಿದ ಬಸವಣ್ಣ ಅಧ್ಯಕ್ಷನಿಗಾಗಿ ೧೨ ವರ್ಷ ಕಾಯುವ ಪರಿಸ್ಥಿತಿ ನಿರ್ಮಾಣವಾಯಿತೆಂದು ವಚನ, ಕಾವ್ಯಗಳು ತಿಳಿಸುತ್ತವೆ. ಕಲ್ಯಾಣದ ಶರಣ ಸಮುದಾಯದಲ್ಲಿ ಇಷ್ಟು ದೀರ್ಘಕಾಲ ಒಬ್ಬನೂ ಸೂಕ್ತವ್ಯಕ್ತಿ ಸಿಗಲಿಲ್ಲವೆನ್ನುವುದು ನಂಬಲಾಗದ ವಿಷಯ. ಇದಕ್ಕೆ ಬೇರೆ ಕಾರಣವಿರಲೇಬೇಕು. ಅಲ್ಲಮನನ್ನು ಪೀಠಕ್ಕೆ ಕುಳ್ಳಿರಿಸಲಾಗಿ ಇದನ್ನು ಸಹಿಸಲಾರದೆ, ನೆರೆದಿದ್ದ ಜಂಗಮರು ಧಿಕ್ಕರಿಸಿ ಎದ್ದು ಹೋದರೆಂದು ಶೂನ್ಯಸಂಪಾದನೆ ಹೇಳುತ್ತದೆ. ಹೀಗೆ ಎದ್ದು ಹೋದವರು ಶರಣ ಚಳುವಳಿಯಲ್ಲಿ ಸೇರಿಕೊಂಡಿದ್ದ ನಕಲೀಶಾದಿ ಶೈವಮೂಲದ ಜಂಗಮರೇ ಆಗಿರಬಹುದು.

೧೨ನೆಯ ಶತಮಾನದ ಹೊತ್ತಿಗೆ ನಾಲ್ಕು ಶೈಲಪೀಠ(ನಕುಲೀಶ, ಪಾಶುಪತ, ಮಹಾಪ್ರತಿ, ಶೈವ)ಗಳು ಜಾತಿಪೀಠ, ವಂಶಪೀಠಗಳಾಗಿ ಬೆಳೆದಿದ್ದವು. ಇದನ್ನು ನಿರಾಕರಿಸುವ ರೀತಿಯಲ್ಲಿ ಬಸವಣ್ಣ ಶೂದ್ರ ಮೂಲದವನೂ, ಜ್ಞಾನಿಯೂ ಆದ ಅಲ್ಲಮನನ್ನು ಪೀಠವೇರಿಸಿದನೆಂದು ಕಾಣುತ್ತದೆ. ಇದಕ್ಕೆ ತಮ್ಮ ಸಮ್ಮತಿ ಇಲ್ಲ ಎನ್ನುವ ರೀತಿಯಲ್ಲಿ ಆ ಜಂಗಮರು ಎದ್ದು ಹೋದರು. ಶೂನ್ಯಸಂಪಾದನೆಯಲ್ಲಿ ಈ 'ಶೂನ್ಯಸಿಂಹಾಸನ ಪೀಠದ' ಪ್ರಕರಣದ ಬಳಿಕ 'ಆರೋಗಣ' ಪ್ರಕರಣ ಮುಗಿಯುವಷ್ಟರಲ್ಲಿ ಯಾವುದೇ ಅನುಭವಗೋಷ್ಠಿ ಜರುಗದೇ 'ಶರಣರ ಅವಸಾನ' ಪ್ರಕರಣ ಬರುವುದನ್ನು ನೋಡಿದರೆ, ಬಸವನ ಸಂಘಟನೆ ಬಿರುಕು ಬಿಡಲು ಈ ಪೀಠಾರೋಹಣ ಘಟನೆಯೇ ಕಾರಣವಾಗಿರಬೇಕೆನಿಸುತ್ತದೆ. ಹೀಗೆ ಶರಣ ಪರಿವಾರದಲ್ಲಿಯೇ ವಿರೋಧ ಪಕ್ಷವೊಂದು ಉದ್ಭವಿಸಿತೆಂದೂ, ಆ ಪೀಠವೇರಿದವರಲ್ಲಿ ಅಲ್ಲಮನೇ ಆದಿ, ಅಲ್ಲಮನೇ ಅಂತ್ಯನಾದನೆಂದೂ ಹೇಳಬೇಕಾಗುತ್ತದೆ. ಬಹುಶಃ ಧಿಕ್ಕರಿಸಿ ಹೋದ ಜಂಗಮರು, ಯಾರಿಗೂ ಈ ಪೀಠವೇರಲು ಮುಂದೆಯೂ ಅವಕಾಶ ಮಾಡಿಕೊಡಲಿಲ್ಲವಾಗಿ, ಅನೇಕ ವರ್ಷ ಅನುಭವ ಮಂಟಪ ಪರಿಕಲ್ಪನೆ ಮತ್ತೆ ಅನುಷ್ಠಾನಕ್ಕೆ ಬರಲೇ ಇಲ್ಲವೆನಿಸುತ್ತದೆ"[೧೩೧] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಸ್ಥಗಿತಗೊಂಡಿದ್ದ ಈ ಅನುಭವ ಮಂಟಪ ಚಾಲನೆ ಗೊಂಡಿದ್ದು ೧೬ನೆಯ ಶತಮಾನದಲ್ಲಿ ತೋಂಟದ ಸಿದ್ಧಲಿಂಗ ಯತಿಗಳು ಪೀಠವನ್ನು ಅಲಂಕರಿಸಿ ದಾಗಿನಿಂದ. ಆದ್ದರಿಂದ ಇವರನ್ನು 'ದ್ವಿತೀಯ ಅಲ್ಲಮ' ಎಂದು ಕರೆದಿರುವುದನ್ನು ಉಲ್ಲೇಖಿಸಿರುವುದು ಗಮನಾರ್ಹವಾಗಿದೆ. "ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ವೈಶ್ಯ ಶೂದ್ರರದು ಶ್ರಮಿಕ ವರ್ಗ, ಬ್ರಾಹ್ಮಣ–ಕ್ಷತ್ರಿಯರು ಶೋಷಕವರ್ಗ. ಬಸವಣ್ಣ ಈ ಶ್ರಮಿಕ ವರ್ಗವನ್ನು ಬೆಂಬಲವಾಗಿಟ್ಟುಕೊಂಡು ಆ ಶೋಷಕವರ್ಗದ ವಿರುದ್ಧ ಹೋರಾಡಿದ. ಹೀಗಾಗಿ ಆ ಕಾಲದಿಂದಲೂ ಬಸವಸಿದ್ಧಾಂತದ ಅಂದರೆ ಅನುಭವ ಮಂಟಪ ಸಂಸ್ಕೃತಿಯ ನಿಷ್ಠಾವಂತ ಅನುಯಾಯಿಗಳಾಗಿದ್ದ ವರ್ತಕ ಸಮಾಜದ ತೋಂಟದಾರ್ಯರೇ ಆ ಸಂಸ್ಕೃತಿಯನ್ನು ಮರುಸ್ಥಾಪಿಸಲು ಮುಂದೆ ಬಂದರೆಂಬುದು, ಶರಣ ಪರಂಪರೆಯ ದ್ವಿತೀಯ ಘಟ್ಟದ ನಾಯಕ ವ್ಯಕ್ತಿಗಳಾದರೆಂಬುದು ಅವಶ್ಯ ಗಮನಿಸಬೇಕಾದ ಸಂಗತಿಯಾಗಿದೆ"[೧೨೩] ಎಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ. ಜೊತೆಗೆ ನಾಯಕ ವ್ಯಕ್ತಿಯಾಗಿ ತೋಟದ ಸಿದ್ಧಲಿಂಗನು ೩ ನೆಲೆಯಲ್ಲಿ ಅನುಭವ ಮಂಟಪವನ್ನು ಪುನರುಜ್ಜೀವನಗೊಳಿಸಿದ್ದನ್ನು ತಿಳಿಸಿದ್ದಾರೆ.

೧. ಕಲ್ಯಾಣಕ್ಕೆ ಸೀಮಿತಗೊಂಡಿದ್ದ ಸ್ಥಾವರ ರೂಪದ ಅನುಭವ ಮಂಟಪವನ್ನು ತೋಂಟದಾರ್ಯರು ಗ್ರಾಮ ಪಟ್ಟಣಗಳಿಗೂ ವಿಸ್ತರಿಸುವ ಮೂಲಕ ಜಂಗಮ ರೂಪ ಕೊಟ್ಟರು. ೨. ಈ ಕೆಲಸವನ್ನು ತಾವಷ್ಟೇ ನಿರ್ವಹಿಸದೇ ೭೦೦ ಜನ ವಿರಕ್ತರನ್ನು ಸಿದ್ಧಪಡಿಸಿ ಅನುಭವ ಮಂಟಪವಾಗಿ ಸಂಚರಿಸುವಂತೆ ಮಾಡಿದ ಸಂಗತಿ ತುಂಬಾ ಮಹತ್ವಪೂರ್ಣವಾದದ್ದಾಗಿದೆ.

ತೋಂಟಾದಾರ್ಯರ ತರುವಾಯ ನೇರ ವಾರಸುದಾರಿಕೆಯ ಕುರಿತಂತೆ ಅಸ್ಪಷ್ಟತೆಯನ್ನು ಗುರುತಿಸಿದ ಎಂ.ಎಂ.ಕಲಬುರ್ಗಿ ಅವರು ಚೇಲಾಳಸ್ವಾಮಿ ಹರಪನಹಳ್ಳಿಯ ಗುಡ್ಡದ ಮೇಲೆ ಮಠ ಕಟ್ಟಿಸಿ, ಅನುಭವ ಮಂಟಪ ಸ್ಥಾಪಿಸಿದ ವಿಷಯ ದಾಖಲಿಸಿರುವುದನ್ನು ಚರ್ಚಿಸಿರುವುದನ್ನು ನೋಡು ವುದಾದರೆ,

"ಘಟಿಕ ಸ್ಥಳ ಹರಪುರದ ಗುಡ್ಡದ<br>
ಮಠದ ಷಟ್ಸ್ಥಲ ತತ್ವಕುಳ<br>
ಪುಟದ ಶರಣರ ಮಕುಟ ಪರಶಿವಯೋಗ ಮಂಟಪದ।<br>
ಘಟಿತ ಸಿಂಹಾಸನದ ಪ್ರಣಮದ<br>
ಪಟಲ ಪೀಠದ ಮೇಲೆ ಕಮಲದಿ<br>
ನಿಟಿಲ ನೇತ್ರವತಾರ ಬೇಲಳಸ್ವಾಮಿಯೊಪ್ಪಿಹರು॥[೧೩]

ಇದರಿಂದಾಗಿ ತೋಂಟದಾರ್ಯರು ಮತ್ತೆ ಆರಂಭಿಸಿದ್ದ ಅನುಭವಮಂಟಪವು ಸಂಚಾರವನ್ನು ಬಿಟ್ಟು ಸ್ಥಗಿತಗೊಂಡಿತು"ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

೩. ಅನುಭವ ಮಂಟಪವನ್ನು ಚಲನಶೀಲಗೊಳಿಸಿದ ತೋಂಟದಾರ್ಯರ ಅನುಭವ ಮಂಟಪವನ್ನು 'ಶೂನ್ಯ ಸಂಪಾದನೆ' ಹೆಸರಿನಲ್ಲಿ ಗ್ರಂಥಸ್ಥಗೊಳಿಸಲು ಶಿಷ್ಯರಿಗೆ ಪ್ರೇರಣೆ ನೀಡಿದರು.

"ತೋಂಟದ ಸಿದ್ಧಲಿಂಗ, ಶಿವಯೋಗಿಗಳ ಜನನದ ಉದ್ದೇಶ ಅನುಭವ ಮಂಟಪವನ್ನು ಪುನರುಜ್ಜೀವನಗೊಳಿಸುವುದು ಮತ್ತು ಅದನ್ನು ವ್ಯಕ್ತಿ ಮಾಧ್ಯಮ, ಗ್ರಂಥಮಾಧ್ಯಮಗಳಲ್ಲಿ ಪ್ರಸಾರ ಮಾಡುವುದೇ ಆಗಿದೆ"[೧೩೩] ಎಂಬ ಎಂ.ಎಂ.ಕಲಬುರ್ಗಿ ಅವರ ಮಾತು. ಅರ್ಥಪೂರ್ಣವಾಗಿದೆ. 'ಅನುಭವ ಮಂಟಪ' ಪುನರುಜ್ಜೀವನಗೊಳ್ಳುವಲ್ಲಿ ತೋಂಟದಾರ್‍ಯರ ಸಾಧನೆ ಅವಿಸ್ಮರಣೀಯವಾಗಿದೆ ಎಂದರೆ ತಪ್ಪಾಗಲಾರದು.

ಒಟ್ಟಾರೆ ಎಂ.ಎಂ.ಕಲಬುರ್ಗಿ ಅವರ ವಚನ ಅಧ್ಯಯನವನ್ನು ಈ ಮೇಲಿನಂತೆ ಮೂರು ರೀತಿಯಲ್ಲಿ ವರ್ಗೀಕರಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅವರಲ್ಲಿ ವಚನ ತತ್ವ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಬಂದ ಲೇಖನಗಳೆಂದು ಗುರುತಿಸುವ ಮೂಲಕ ಚರ್ಚಿಸಲಾಗಿದೆ. ವಚನಗಳು ಅಧ್ಯಯನದಲ್ಲಿ ಬಿಡಿ ಮುಕ್ತಕಗಳಾದ ವಚನಗಳ ಸಮಾಜಮುಖಿ ಹಾಗೂ ತಾತ್ವಿಕತೆಯ ನೆಲೆಯಲ್ಲಿ ಎಂ.ಎಂ.ಕಲಬುರ್ಗಿ ಅವರು ಗ್ರಹಿಸಿದ ರೀತಿಯನ್ನು ವಿಶ್ಲೇಷಿಸಲಾಗಿದೆ. ವಚನಕಾರರ ಅಧ್ಯಯನದಲ್ಲಿ ವಚನಕಾರರ ವೈಯಕ್ತಿಕ ಬದುಕು, ಜನನ-ಬಾಲ್ಯ-ಊರು ಇತ್ಯಾದಿಗಳಲ್ಲದೆ ಅವರು ಒಂದು ಪಂಥವಾಗಿ ಬೆಳೆದುಬಂದ ಬಗೆಯನ್ನು, ಅವರನ್ನು ಕುರಿತಾಗಿ ಬಂದ ಕಾವ್ಯೋಕ್ತ ಆಶಯಗಳನ್ನೊಳ ಗೊಂಡಂತೆ ಶಿವಶರಣರ ವೈಯಕ್ತಿಕ ಹಿನ್ನೆಲೆಗೆ ಸಂಬಂಧಿಸಿದ ಲೇಖನಗಳನ್ನು ಈ ಭಾಗದಲ್ಲಿ

ನಿರೂಪಿಸಲಾಗಿದೆ. ಕೊನೆಯದಾಗಿ ವಚನ ಕೃತಿಗಳ ಅಧ್ಯಯನದಲ್ಲಿ ಬಿಡಿ ಬಿಡಿಯಾದ ವಚನಗಳಿಂದ ನಿರೂಪಿತವಾದ ಇಡಿಯಾದ ಕೃತಿಗಳೆನಿಸಿದ ಶೂನ್ಯಸಂಪಾದನೆ, ಏಕೋತ್ತರ ಶತಸ್ಥಲ ಇತ್ಯಾದಿ ಸಾಹಿತ್ಯ ಪಠ್ಯಗಳಲ್ಲದೆ ಶರಣಸ್ಥಲಗಳು ವಚನ ಸಾಹಿತ್ಯ ಬೆಳೆದುಬಂದ ಕಾಲಮಾನಗಳ ಸ್ಥಿತ್ಯಂತರಗಳನ್ನು, ಅದರ ಪರಿಣಾಮಗಳನ್ನು ಇಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ. ವಚನಕಾರರು ಹಾಗೂ ವಚನಗಳ ಸಾಹಿತ್ಯಿಕ ಪರಿಚಲನೆಯ ಆಶಯಗಳನ್ನು ಒಳಗೊಂಡ ಲೇಖನಗಳನ್ನು ಅಧ್ಯಯನಕ್ಕೆ ಎತ್ತಿಕೊಳ್ಳಲಾಗಿದೆ.

**ಅಡಿಟಿಪ್ಪಣಿಗಳು**

೧. ಕಲಬುರ್ಗಿ ಎಂ.ಎಂ., ಮಾರ್ಗ-೩, ಪು.೪೨೩

೨. ಅದೇ, ಪು.೪೨೪

೩. ಅದೇ, ಪು.೪೨೪

೪. ಕಲಬುರ್ಗಿ ಎಂ.ಎಂ., ಮಾರ್ಗ-೪, ಪು.೪೧

೫. ಅದೇ, ಪು.೪೧

೬. ಅದೇ, ಪು.೪೨

೭. ಅದೇ, ಪು.೫೩

೮. ಅದೇ, ಮಾರ್ಗ-೭, ಪು.೧೫೬

೯. ಅದೇ, ಪು.೧೫೬

೧೦. ಅದೇ, ಪು.೧೫೭

೧೧. ಅದೇ, ಪು.೧೫೭

೧೨. ಕಲಬುರ್ಗಿ ಎಂ.ಎಂ., ಮಾರ್ಗ-೧, ಪು.೧೬೪

೧೩. ಅದೇ, ಪು.೧೬೫

೧೪. ಅದೇ, ಪು.೧೬೬

೧೫. ಅದೇ, ಪು.೧೬೬

೧೬. ಅದೇ, ಪು.೧೬೬

೧೭. ಅದೇ, ಪು.೧೬೬

೧೮. ಅದೇ, ಪು.೧೬೭

೧೯. ಅದೇ, ಪು.೧೬೭

೨೦. ಅದೇ, ಪು.೨೩೮

೨೧. ಅದೇ, ಪು.೨೩೯

೨೨. ಅದೇ, ಪು.೨೩೯

೨೩. ಅದೇ, ಪು.೧೬೪–೧೬೫

೨೪. ಅದೇ, ಪು.೨೫೭

೨೫. ಅದೇ, ಪು.೨೩೯

೨೬. ಅದೇ, ಪು.೨೩೯

೨೭. ಅದೇ, ಪು.೨೭೫

೨೮. ಅದೇ, ಪು.೨೭೬

೨೯. ಅದೇ, ಪು.೨೭೮

೩೦. ಅದೇ, ಪು.೨೪೦

೩೧. ಅದೇ, ಪು.೨೪೧

೩೨. ಅದೇ, ಪು.೨೪೨

೩೩. ಅದೇ, ಪು.೨೪೩

೩೪. ಅದೇ, ಪು.೨೪೮

೩೫. ಅದೇ, ಪು.೨೭೯

೩೬. ಅದೇ, ಪು.೨೮೦

೩೭. ಅದೇ, ಪು.೨೮೧

೩೮. ಅದೇ, ಪು.೩೦೮

೩೯. ಅದೇ, ಪು.೩೧೧

೪೦. ಅದೇ, ಪು.೩೧೨

೪೧. ಅದೇ, ಪು.೩೧೩

೪೨. ಕಲಬುರ್ಗಿ ಎಂ.ಎಂ., ಮಾರ್ಗ-೮, ಪು.೫೩

೪೩. ಅದೇ, ಪು.೫೫

೪೪. ಅದೇ, ಪು.೫೭

೪೫. ಅದೇ, ಪು.೫೮

೪೬. ಕಲಬುರ್ಗಿ ಎಂ.ಎಂ., ಮಾರ್ಗ-೪, ಪು.೧೭೪

೪೭. ಅದೇ, ಪು.೧೭೪

೪೮. ಅದೇ, ಪು.೧೭೫

೪೯. ಅದೇ, ಪು.೧೭೭

೫೦. ಅದೇ, ಪು.೧೭೭

೫೧. ಅದೇ, ಪು.೧೭೭

೫೨. ಅದೇ, ಪು.೧೬೯

೫೩. ಅದೇ, ಪು.೧೭೨

೫೪. ಕಲಬುರ್ಗಿ ಎಂ.ಎಂ., ಮಾರ್ಗ-೩, ಪು.೪೬೭

೫೫. ಅದೇ, ಪು.೪೬೯

೫೬. ಅದೇ, ಪು.೪೬೧

೫೭. ಅದೇ, ಪು.೪೬೯

೫೮. ಅದೇ, ಪು.೪೭೦

೫೯. ಅದೇ, ಪು.೪೭೧

೬೦. ಅದೇ, ಪು.೪೭೧

೬೧. ಅದೇ, ಪು.೪೭೧

೬೨. ಅದೇ, ಪು.೪೭೩

೬೩. ಅದೇ, ಪು.೪೭೩

೬೪. ಅದೇ, ಪು.೪೭೬

೬೫. ಅದೇ, ಪು.೪೭೬

೬೬. ಅದೇ, ಪು.೪೭೯

೬೭. ಅದೇ, ಪು.೪೮೫

೬೮. ಅದೇ, ಪು.೪೮೬

೬೯. ಅದೇ, ಪು.೪೮೭

೭೦. ಅದೇ, ಪು.೪೮೭

೭೧. ಅದೇ, ಪು.೪೯೧

೭೨. ಅದೇ, ಪು.೪೯೨

೭೩. ಅದೇ, ಪು.೪೮೮

೭೪. ಅದೇ, ಪು.೪೮೯

೭೫. ಅದೇ, ಪು.೪೮೯

೭೬. ಕಲ್ಯಾಣರಾವ್ ಜಿ.ಪಾಟೀಲ, ಎಂ.ಎಂ.ಕಲಬುರ್ಗಿ ಅವರ ಶೋಧಗಳು, ಪು.೨೯೭

೭೭. ಕಲಬುರ್ಗಿ ಎಂ.ಎಂ., ಮಾರ್ಗ-೩, ಪು.೪೯೪

೭೮. ಅದೇ, ಪು.೪೯೬

೭೯. ಅದೇ, ಪು.೪೯೮

೮೦. ಅದೇ, ಪು.೪೯೮

೮೧. ಅದೇ, ಪು.೫೦೦

೮೨. ಅದೇ, ಪು.೫೦೨

೮೩. ಅದೇ, ಪು.೫೦೫

೮೪. ಅದೇ, ಪು.೫೦೭

೮೫. ಅದೇ, ಪು.೫೦೮

೮೬. ಕಲಬುರ್ಗಿ ಎಂ.ಎಂ., ಮಾರ್ಗ-೧, ಪು.೧೫೬

೮೭. ಅದೇ, ಪು.೧೫೭-೧೫೯

೮೮. ಅದೇ, ಪು.೧೫೯

೮೯. ಅದೇ, ಪು.೧೬೧

೯೦. ಕಲಬುರ್ಗಿ ಎಂ.ಎಂ., ಮಾರ್ಗ-೭, ಪು.೩೧೨

೯೧. ಅದೇ, ಪು.೩೧೩

೯೨. ಅದೇ, ಪು.೩೧೪

೯೩. ಕಲಬುರ್ಗಿ ಎಂ.ಎಂ., ಮಾರ್ಗ-೧, ಪು.೧೭೮

೯೪. ಅದೇ, ಪು.೧೮೩

೯೫. ಅದೇ, ಪು.೧೮೪

೯೬. ಅದೇ, ಪು.೧೮೬

೯೭. ಅದೇ, ಪು.೧೮೭

೯೮. ಅದೇ, ಪು.೧೯೦

೯೯ ಅದೇ, ಪು.೧೯೩

೧೦೦. ಅದೇ, ಪು.೧೯೩

೧೦೧. ಕಲಬುರ್ಗಿ ಎಂ.ಎಂ., ಮಾರ್ಗ-೩, ಪು.೨೬೩

೧೦೨. ಅದೇ, ಪು.೨೬೩

೧೦೩. ಕಲ್ಯಾಣರಾವ್ ಜಿ.ಪಾಟೀಲ, ಎಂ.ಎಂ.ಕಲಬುರ್ಗಿ ಅವರ ಶೋಧಗಳು, ಪು.೨೩೧

೧೦೪. ಕಲಬುರ್ಗಿ ಎಂ.ಎಂ., ಮಾರ್ಗ-೩, ಪು.೨೬೫

೧೦೫. ಅದೇ, ಪು.೩೬೫

೧೦೬. ಅದೇ, ಪು.೩೬೯

೧೦೭. ಅದೇ, ಪು.೪೨೬

೧೦೮. ಕಲಬುರ್ಗಿ ಎಂ.ಎಂ., ಪರಿಕಲ್ಪನೆ, ಪು.೨೬೫

೧೦೯. ಕಲಬುರ್ಗಿ ಎಂ.ಎಂ., ಮಾರ್ಗ-೩, ಪು.೪೫೪

೧೧೦. ಅದೇ, ಪು.೫೯

೧೧೧. ಅದೇ, ಪು.೫೯

೧೧೨. ಅದೇ, ಪು.೬೦

೧೧೩. ಅದೇ, ಪು.೬೦

೧೧೪. ಅದೇ, ಪು.೬೧

೧೧೫. ಅದೇ, ಪು.೬೨

೧೧೬. ಅದೇ, ಪು.೬೨

೧೧೭. ಕಲಬುರ್ಗಿ ಎಂ.ಎಂ., ಮಾರ್ಗ-೭, ಪು.೩

೧೧೮. ಅದೇ, ಪು.೩

೧೧೯. ಅದೇ, ಪು.೨೮

೧೨೦. ಅದೇ, ಪು.೩೫

೧೨೧. ಕಲಬುರ್ಗಿ ಎಂ.ಎಂ., ಮಾರ್ಗ-೧, ಪು.೨೨೨

೧೨೨. ಅದೇ, ಪು.೨೨೪

೧೨೩. ಅದೇ, ಪು.೩೪೪

೧೨೪. ಅದೇ, ಪು.೩೫೦

೧೨೫. ಅದೇ, ಪು.೩೫೧

೧೨೬. ಅದೇ, ಪು.೩೫೫

೧೨೭. ಅದೇ, ಪು.೫೪೭

೧೨೮. ಅದೇ, ಪು.೫೫೯

೧೨೯. ಕಲಬುರ್ಗಿ ಎಂ.ಎಂ., ಮಾರ್ಗ-೩, ಪು.೨೯೫

೧೩೦. ಕಲ್ಯಾಣರಾವ್ ಜಿ.ಪಾಟೀಲ, ಎಂ.ಎಂ.ಕಲಬುರ್ಗಿ ಅವರ ಶೋಧಗಳು, ಪು.೩೫೭

೧೩೧. ಕಲಬುರ್ಗಿ ಎಂ.ಎಂ., ಮಾರ್ಗ-೩, ಪು.೩೫೯

೧೩೨. ಅದೇ, ಪು.೩೬೧

೧೩೩. ಅದೇ, ಪು.೩೬೧

## ಅಧ್ಯಾಯ: ಐದು

# ಎಂ.ಎಂ. ಕಲಬುರ್ಗಿ: ವಚನ ಪರಿಷ್ಕರಣೆ–ಸಂಪಾದನೆ

ಕನ್ನಡ ಸಾಹಿತ್ಯದಲ್ಲಿ ಸಂಪಾದನೆಗೆ ವಿಶಿಷ್ಟ ಮಹತ್ವವಿದೆ. ಸಂಪಾದನೆ ಎಂಬುದಕ್ಕೆ ವಿಶ್ವಕೋಶದಲ್ಲಿ ಗಳಿಕೆ, ಪ್ರಕಟಿಸತಕ್ಕ ಗ್ರಂಥ, ಪತ್ರಿಕೆ ಮೊದಲಾದವುಗಳ ಪರಿಷ್ಕರಣ ಎಂಬರ್ಥ ಪ್ರಾಪ್ತವಾಗಿದೆ. ಈ ಸಂಪಾದನೆಯನ್ನು ಎರಡು ನೆಲೆಗಳಲ್ಲಿ ಗುರುತಿಸಬಹುದು. ಪ್ರಾಚೀನ ಕೃತಿಗಳನ್ನು ಪರಿಷ್ಕರಿಸಿ ವ್ಯವಸ್ಥಿತವಾಗಿ ಕಟ್ಟಿಕೊಡುವುದು ಒಂದು ರೀತಿಯ ಸಂಪಾದನೆಯಾದರೆ, ಪ್ರಸ್ತುತ ದಿನಮಾನಗಳಲ್ಲಿ ಕತೆ, ಕವನ, ಲೇಖನಗಳನ್ನು ಒಟ್ಟುಗೂಡಿಸಿ ಕೃತಿರೂಪದ ಚೌಕಟ್ಟನ್ನು ಕೊಡುವುದು ಇನ್ನೊಂದು ರೀತಿಯ ಸಂಪಾದನೆ ಎನ್ನಬಹುದು. ಈ ರೀತಿಯ ಸಂಪಾದನೆ ಎಂಬುದನ್ನು ಎಂ.ಎಂ.ಕಲಬುರ್ಗಿ ಅವರು ತಮ್ಮ ಅಭಿಪ್ರಾಯದಲ್ಲಿ ವಿಶ್ಲೇಷಿಸಿರುವುದನ್ನು ನೋಡುವುದಾದರೆ ಸಂಪಾದನೆ ಎಂಬ ಪದಕ್ಕೆ ಸಾಹಿತ್ಯಿಕ ಸಂದರ್ಭದಲ್ಲಿ 'ಬೇರೊಬ್ಬರ ಬರವಣಿಗೆಗೆ ಸರಿಯಾದ ರೂಪಮುದ್ರೆ ಕೊಡುವುದು' ಎಂದು ಅರ್ಥ. ಈ 'ಸಂಪಾದನೆ' ಹೆಸರಿನಲ್ಲಿ ಸಮಾವೇಶಗೊಳ್ಳುವ ಕವನ, ಲೇಖನ ಸಂಪಾದನೆಗಳಿಗಿಂತ ತಲೆತಲಾಂತರದಿಂ ಸಾಗಿಬಂದ ಲಿಖಿತ ಸಾಹಿತ್ಯ ಮತ್ತು ವಾಚಿಕ ಸಾಹಿತ್ಯಗಳನ್ನು ಸಂಪಾದಿಸುವುದು ಭಿನ್ನವಾಗಿದ್ದು, ಇವುಗಳನ್ನು ಸಂಪಾದಿಸಲು ಬೇಕಾಗುವ ಮಾರ್ಗದರ್ಶಿ ಸೂತ್ರಗಳನ್ನೊಳಗೊಂಡ ಶಾಸ್ತ್ರಕ್ಕೆ Textual Criticism ಎಂದು ಹೆಸರು. 'ಪಾಠವಿಮರ್ಶೆ' ಎಂಬುದು ಇದರ ಕನ್ನಡ ಸಂವಾದಿ. ಇದಕ್ಕೆ ಪರ್ಯಾಯವಾಗಿ ಪಾಠಪರಿಶೋಧನೆ, ಪಾಠಪರಿಷ್ಕರಣ, ಪಾಠಸಂಸ್ಕರಣ ಮೊದಲಾದ ಪದಗಳು ನಮ್ಮಲ್ಲಿ ಬಳಕೆಯಲ್ಲಿದ್ದರೂ ಸಾಮಾನ್ಯವಾಗಿ Editing ಅರ್ಥದ 'ಸಂಪಾದನೆ' ಎಂಬ ಪದವನ್ನೇ ವ್ಯಾಪಕವಾಗಿ ಬಳಸುತ್ತಲಿದ್ದೇವೆ. ಈ ಸಂಪಾದನೆಗೆ ಸಂಬಂಧಿಸಿದ ಶಾಸ್ತ್ರ ಇತ್ತೀಚೆಗೆ ಸಾಹಿತ್ಯಾಭ್ಯಾಸದ ಪರಿಕರಗಳಾದ ವ್ಯಾಕರಣ, ನಿಘಂಟು, ಛಂದಸ್ಸು, ಅಲಂಕಾರ ಶಾಸ್ತ್ರಗಳಷ್ಟೇ ಪ್ರಮುಖವಾದ ಜ್ಞಾನಶಾಖೆಯಾಗಿ ನಮ್ಮಲ್ಲಿ ಬೆಳೆಯುತ್ತಲಿದೆ"[೧] ಎಂದಿದ್ದಾರೆ. ಇಲ್ಲಿ ಎರಡು ರೀತಿಯ ಸಂಪಾದನ ವೈಧಾನಿಕತೆಯನ್ನು ಎಂ.ಎಂ.ಕಲಬುರ್ಗಿ ಅವರು ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. ಪ್ರಸ್ತುತ

ದಿನಮಾನಗಳಲ್ಲಿ ಈ ರೀತಿಯ ಸಂಪಾದನ ಕಾರ್ಯಗಳು ಜರುಗುತ್ತಲಿದ್ದರೂ ಸಂಪಾದನೆಗಿಂತ ಗ್ರಂಥಸಂಪಾದನೆಯು ಇತ್ತೀಚೆಗೆ ಮಸುಕಾಗಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಸಂಪಾದನೆ ಎಂಬ ಅರ್ಥ ಉದಯಿಸಿದ್ದೇ ಗ್ರಂಥಸಂಪಾದನಾ ಕಾರ್ಯಗಳಿಂದ. ಆದರೆ ಪ್ರಸ್ತುತ ದಿನಮಾನಗಳಲ್ಲಿ ಹೊಸಪದ್ಧತಿಯ ಸಂಪಾದನೆ ಹೆಚ್ಚು ಜರೂರಾಗಿ ಸಾಗುತ್ತಲಿದೆ. ಇದೇನೇ ಸಂಗತಿ ಇದ್ದರೂ ಸಂಪಾದನೆಗಿಂತ ಗ್ರಂಥಸಂಪಾದನೆಗೆ ನಮ್ಮ ಕನ್ನಡ ಸಾಹಿತ್ಯದಲ್ಲಿ ವಿಶೇಷ ಮಹತ್ವವಿದೆ ಎನ್ನುವುದನ್ನು ಮರೆಯುವಂತಿಲ್ಲ.

ಗ್ರಂಥಸಂಪಾದನ ಶಾಸ್ತ್ರವು ಹೊಸದಾಗಿ ರೂಪ ತಳೆದ ಸಾಹಿತ್ಯ ಪ್ರಕಾರವಾಗಿದೆ. ಈ ಗ್ರಂಥಸಂಪಾದನೆಗೆ ಶ್ರೀಕಾರ ಹಾಕಿದವರೇ ಪಾಶ್ಚಾತ್ಯ ವಿದ್ವಾಂಸರು. ಕರ್ನಲ್ ಮೆಕೆಂಜಿ, ಮೊಗ್ಲಿಂಗ್, ವರ್ಥ್, ಸ್ಯಾಂಡರ್ಸನ್, ಜಿ.ಸ್ಟೀವನ್ಸನ್, ಎಫ್. ಕಿಟೆಲ್ ಮತ್ತು ಬಿ.ಎಲ್.ರೈಸ್ ಮುಂತಾದವರು ಕನ್ನಡ ಗ್ರಂಥಸಂಪಾದನೆಗಾಗಿ ದುಡಿದಂತವರು. ಇವರ ಪ್ರೇರಣೆಯೋ, ಪ್ರಭಾವವೋ ಎಂಬಂತೆ ದೇಶಿ ವಿದ್ವಾಂಸರು ಗ್ರಂಥಸಂಪಾದನ ಕಾರ್ಯದಲ್ಲಿ ತೊಡಗಿದರು. ಎಸ್.ಜಿ.ನರಸಿಂಹಾಚಾರ್ಯರು, ಕೆ.ಬಿ.ಪಾಠಕ್, ಎಂ.ಎ.ರಾಮಾನುಜಯ್ಯಾಂಗಾರ್ ಅವರು ಗ್ರಂಥಸಂಪಾದನೆಗೆ ಮಹತ್ವದ ಕಾಣಿಕೆ ಸಲ್ಲಿಸಿದವರು. ಫ.ಗು.ಹಳಕಟ್ಟಿ ಅವರು, ನಂತರದಲ್ಲಿ ಎಸ್.ಶಿವಣ್ಣ, ಸುಂಕಾಪುರ, ಆರ್.ಸಿ.ಹಿರೇಮಠ, ಎಲ್.ಬಸವರಾಜು, ಶಿ.ಶಿ.ಬಸವನಾಳ ಹಾಗೂ ಎಂ.ಎಂ.ಕಲಬುರ್ಗಿ ಅವರು ಗ್ರಂಥಸಂಪಾದನ ಕ್ಷೇತ್ರದಲ್ಲಿ ಸಾಕಷ್ಟು ದುಡಿದಂತವರು. ಗ್ರಂಥ ಸಂಪಾದನಕಾರ್ಯ ಪಾಶ್ಚಾತ್ಯರಿಂದ ಬಳುವಳಿ ರೂಪದಲ್ಲಿ ಬಂದಿದ್ದರೂ ಅದಕ್ಕೆಂದೇ ಕನ್ನಡದಲ್ಲಿ ಪ್ರತ್ಯೇಕವಾದ ರೂಪರೇಷೆಗಳಿರಲಿಲ್ಲ. ಅದೇ ಸಂದರ್ಭದಲ್ಲಿ ಎಂ.ಎ. ಪದವಿಗೆ 'ಗ್ರಂಥಸಂಪಾದನೆ' ವಿಷಯವನ್ನು ಪಠ್ಯವನ್ನಾಗಿ ಇಟ್ಟ ಸಂದರ್ಭದಲ್ಲಿ ಡಿ.ಎಲ್.ನರಸಿಂಹಾಚಾರ್ಯರು ಗ್ರಂಥ ಸಂಪಾದನೆಗೆಂದೇ ಒಂದು ಮಾದರಿ ಪುಸ್ತಕವನ್ನು ರಚಿಸುವ ಹಿನ್ನೆಲೆಯಲ್ಲಿ 'ಕನ್ನಡ ಗ್ರಂಥಸಂಪಾದನೆ' ಕೃತಿಯನ್ನು ೧೯೬೪ರಲ್ಲಿ ಹೊರತಂದರು. ಇದು ಪಾಶ್ಚಾತ್ಯ ವಿದ್ವಾಂಸರ ಗ್ರಂಥಸಂಪಾದನೆಯ ತತ್ವಸಿದ್ಧಾಂತಗಳನ್ನು ಅಳವಡಿಸಿಕೊಂಡು ರಚಿತವಾದ ಕೃತಿಯಾಗಿದೆ. ಇದೇ ಸಂದರ್ಭದಲ್ಲಿ ಎಸ್.ಎಂ.ಕತ್ರೆ ಅವರ 'Intruduction to Indian Textual Criticism' ಎಂಬ ಆಂಗ್ಲ ಕೃತಿಯನ್ನು ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟರು 'ಭಾರತೀಯ ಗ್ರಂಥಸಂಪಾದನಶಾಸ್ತ್ರ' ಎಂದು ೧೯೬೪ರಲ್ಲಿ ಅನುವಾದಿಸಿದ್ದಾರೆ. ಇದು ಪಾಶ್ಚಾತ್ಯ ಗ್ರಂಥಸಂಪಾದನೆ ಕೃತಿಯ ಅನುವಾದದ ಕೃತಿಯಾಗಿದೆ. ಈ ಎರಡೂ ಕೃತಿಗಳು ಪಾಶ್ಚಾತ್ಯ ಮಾದರಿಯನ್ನು ಒಳಗೊಂಡ ಕೃತಿಗಳಾಗಿರು ವುದರಿಂದ ಕನ್ನಡಕ್ಕಾಗಿಯೇ ಪ್ರತ್ಯೇಕ ತತ್ವಸಿದ್ಧಾಂತಗಳಿಂದ ಕೂಡಿದ ಕೃತಿ ಲಭ್ಯವಿಲ್ಲದ ಈ ಕೊರತೆಯನ್ನು ಗಮನಿಸಿದ ಎಂ.ಎಂ.ಕಲಬುರ್ಗಿ ಅವರು ಹೊಸ ಆಲೋಚನೆಯತ್ತ ಗಮನ

ಹರಿಸಿದರು. ಕನ್ನಡದಲ್ಲಿ ಸಂಪಾದನೆ ಮಾಡಬೇಕಾದ ಕೃತಿಗಳು ಸಾಕಷ್ಟಿವೆ. ಸಂಪಾದನೆಯ ಕಾರ್ಯದಲ್ಲಿ ತೊಡಗಿದ್ದ ಅವರಿಗೆ ಗ್ರಂಥಸಂಪಾದನೆಗೆ ಹೊಸರೂಪ ಕೊಡಬೇಕೆಂಬ ಉದ್ದೇಶದ ಹಿನ್ನೆಲೆಯಲ್ಲಿ 'ಕನ್ನಡ ಗ್ರಂಥಸಂಪಾದನ ಶಾಸ್ತ್ರ' ಎಂಬ ಕೃತಿಯನ್ನು ರಚಿಸುವ ಮೂಲಕ ಗ್ರಂಥ ಸಂಪಾದನೆಗೆ ಒಂದು ರೀತಿಯ ಶಾಸ್ತ್ರೀಯ ಚೌಕಟ್ಟನ್ನು ತಂದುಕೊಟ್ಟರು. ಡಿ.ಎಲ್.ನರಸಿಂಹಾಚಾರ್ ಅವರ 'ಕನ್ನಡ ಗ್ರಂಥಸಂಪಾದನೆ ಹಾಗೂ ಎಂ.ಎಂ.ಕಲಬುರ್ಗಿ ಅವರ 'ಕನ್ನಡ ಗ್ರಂಥ ಸಂಪಾದನ ಶಾಸ್ತ್ರ' ಕೃತಿಯು ೧೯೭೭ರಿಂದ ೧೯೯೩ರ ಒಳಗೆ ೮ ಮುದ್ರಣವನ್ನು ಕಂಡಿರುವುದು ಕೃತಿಯ ಮಹತ್ವ ತಿಳಿಯುತ್ತದೆ. ಈ ಎರಡೂ ಕೃತಿಗಳೂ ಗ್ರಂಥಸಂಪಾದನೆಯನ್ನು ಪಠ್ಯವನ್ನಾಗಿ ಅಭ್ಯಾಸ ಮಾಡುವವರಿಗೆ ಹಾಗೂ ಕೃತಿಗಳ ಸಂಪಾದನ ಕಾರ್ಯದಲ್ಲಿ ತೊಡಗುವವರಿಗೆ 'ಎರಡು ಕಣ್ಣುಗಳಿದ್ದಂತೆ' ಎಂದರೆ ತಪ್ಪಾಗಲಾರದು.

ಗ್ರಂಥಸಂಪಾದನೆಯನ್ನು ಕುರಿತಂತೆ ವಿವಿಧ ವಿದ್ವಾಂಸರು ತಮ್ಮದೇ ಆದ ನೆಲೆಯಲ್ಲಿ ವ್ಯಾಖ್ಯಾನಿಸಿದ್ದಾರೆ.

* ಡಿ.ಎಲ್.ನರಸಿಂಹಾಚಾರ್: "ಪರಂಪರಾಗತವಾಗಿ ಬಂದಿರುವ ಲಭ್ಯ ಹಸ್ತಪ್ರತಿಗಳ ಆಧಾರದಿಂದ ಮೂಲಗ್ರಂಥದ ಅಂದರೆ ಕವಿಯ ಸ್ವಹಸ್ತಾಕ್ಷರ ಪ್ರತಿಯ ಸ್ವರೂಪವೇನಿರಬಹುದೆಂಬುದನ್ನು ನಿರ್ಣಯಿಸಿ ಪರಿಷ್ಕರಣೆ ಮಾಡುವ ಕೆಲಸ ಗ್ರಂಥಸಂಪಾದನೆ"[೨] ಎಂದಿದ್ದಾರೆ.

* ದೇ.ಜವರೇಗೌಡರು: "ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸಿ ಹಲವು ಹಸ್ತಪ್ರತಿಗಳ ಸಹಾಯದಿಂದ ಶುದ್ಧಪಾಠಗಳನ್ನು ನಿರ್ಣಯಿಸುವುದೇ ಗ್ರಂಥಸಂಪಾದನೆ"[೩] ಎಂದಿದ್ದಾರೆ.

* ಶಿ.ಶಿ.ಬಸವನಾಳ: "ಒಂದು ಕೃತಿಯಲ್ಲಿ ಸೇರಿಕೊಂಡ ಸತ್ಯ ಮತ್ತು ಅಸತ್ಯ ಪಾಠಗಳನ್ನು ವ್ಯವಸ್ಥಿತ ವಿಧಾನಗಳ ಮೂಲಕ ಬಿಡಿಸಿ ನೋಡುವ ವೈಜ್ಞಾನಿಕ ಕಾರ್ಯವೇ ಗ್ರಂಥಸಂಪಾದನೆ"[೪] ಎಂದಿದ್ದಾರೆ.

* ಎಂ.ಚಿದಾನಂದಮೂರ್ತಿ: "ಒಂದೇ ಕೃತಿಯ ಬೇರೆ ಬೇರೆ ಹಸ್ತಪ್ರತಿಗಳನ್ನು ಸಂಗ್ರಹಿಸಿ ಅವುಗಳನ್ನು ಪರಸ್ಪರವಾಗಿ ಹೋಲಿಸಿ ಭಿನ್ನ ಪಾಠಗಳಿದ್ದರೆ ಗುರುತಿಸಿ, ಕವಿಯ ಮೂಲ ಪಾಠವನ್ನು ನಿರ್ಣಯಿಸುವ ಶಾಸ್ತ್ರವೇ ಗ್ರಂಥಸಂಪಾದನೆ"[೫] ಎಂದಿದ್ದಾರೆ.

* ಎಂ.ಎಂ.ಕಲಬುರ್ಗಿ: "ಪ್ರಾಚೀನ ಕೃತಿಗಳು ಪ್ರಕೃತಿಯ ಪ್ರಕೋಪಕ್ಕೆ ತುತ್ತಾಗಿ, ಜನತೆಯ ಉದ್ದೇಶಿತ ಮತ್ತು ಅನುದ್ದೇಶಿತ ಪಾಠ ವ್ಯತ್ಯಾಸಗಳಿಗೆ ಗುರಿಯಾಗಿ ವಿರೂಪಗೊಳ್ಳುವುದು ಸಹಜ. ವ್ಯವಸ್ಥಿತ ವಿಧಾನವನ್ನವಲಂಬಿಸಿ, ಈ ವಿರೂಪವನ್ನು ಒರೆಸಿ ಹಾಕಿ ಅವುಗಳನ್ನು ಮತ್ತೆ ಮೂಲರೂಪಕ್ಕೆ ತಿರುಗಿಸಬೇಕು, ಶುದ್ಧಗೊಳಿಸಬೇಕು. ಈ ಶುದ್ಧೀಕರಣ ಕ್ರಿಯೆ

ಗ್ರಂಥಸಂಪಾದನೆ, ಶುದ್ಧೀಕರಣ ಕ್ರಿಯಾಶೀಲ ಗ್ರಂಥಸಂಪಾದಕ, ಶುದ್ಧೀಕರಣ ವಿಧಾನವನ್ನು ನಿರೂಪಿಸುವ ಕೃತಿ ಗ್ರಂಥಸಂಪಾದನಾ ಶಾಸ್ತ್ರ"[೬] ಎಂದಿದ್ದಾರೆ. ಇದೇ ರೀತಿ ಗ್ರಂಥ ಸಂಪಾದನಾ ಶಾಸ್ತ್ರ ಕೃತಿಯಲ್ಲಿ ಶ್ರೀ ಸೀತಾರಾಮ ಜಾಗೀರದಾರ್ ಅವರು ವ್ಯಾಖ್ಯಾನಿಸಿದ್ದಾರೆ.

ಒಟ್ಟಾರೆಯಾಗಿ ಮೇಲಿನ ವಿದ್ವಾಂಸರ ಅಭಿಪ್ರಾಯವನ್ನು ಗಮನಿಸಿದಾಗ ಲಭ್ಯವಿರುವ ಹಸ್ತಪ್ರತಿಗಳ ಸಹಾಯದಿಂದ ಮೂಲಪಠ್ಯಕ್ಕೆ ಹತ್ತಿರವಾದಂತಹ ಗ್ರಂಥವನ್ನು ಪುನಾರಚಿಸುವ ಕಾರ್ಯವೇ ಗ್ರಂಥಸಂಪಾದನೆ ಎಂದು ಹೇಳಬಹುದು.

ಕನ್ನಡದ ಆಧುನಿಕ ಜ್ಞಾನಶಾಖೆಗಳಲ್ಲಿ ಹಸ್ತಪ್ರತಿಶಾಸ್ತ್ರ ಹಾಗೂ ಗ್ರಂಥಸಂಪಾದನಾ ಶಾಸ್ತ್ರಗಳು ಬಹುಮುಖ್ಯವಾದ ಶಾಸ್ತ್ರಗಳಾಗಿವೆ. ಈ ಕುರಿತಂತೆ ಸಾಕಷ್ಟು ಅಧ್ಯಯನಗಳು ನಡೆದಿವೆ. ಹಾಗೆಯೇ ನಡೆಯುತ್ತಲಿವೆ. ಸಂಗ್ರಹ, ಸಂಕಲನ, ಸಂಪಾದನೆ, ಪ್ರಕಟಣೆ ಮತ್ತು ಅಧ್ಯಯನ ಈ ಐದು ಹಂತಗಳಲ್ಲಿ ಹಸ್ತಪ್ರತಿ ಹಾಗೂ ಗ್ರಂಥಸಂಪಾದನೆಯ ಕಾರ್ಯ ಮುಂದುವರಿದಿದೆ. ಗ್ರಂಥಸಂಪಾದನೆ ಎಂ.ಎಂ.ಕಲಬುರ್ಗಿ ಅವರ ವಿಶೇಷ ಆಸಕ್ತಿ ಕ್ಷೇತ್ರ. ಕನ್ನಡ ಸಾಹಿತ್ಯ ಕೃತಿಗಳೆಲ್ಲವನ್ನು ಶುದ್ಧರೂಪದಲ್ಲಿ ಪರಿಷ್ಕರಣಗೊಳಿಸಿ ಪ್ರಕಟಿಸಬೇಕೆಂಬ ಹಂಬಲ ಎಂ.ಎಂ.ಕಲಬುರ್ಗಿ ಅವರಿಗಿತ್ತು. ಸಾಹಿತ್ಯ, ಸಂಸ್ಕೃತಿ ಹಾಗೂ ಚರಿತ್ರೆಯ ಉದ್ದೇಶ ಇಟ್ಟುಕೊಂಡು ಸಂಪಾದನಕಾರ್ಯ ಕೈಗೊಳ್ಳುವುದರ ಜೊತೆಗೆ ಅಳಿವಿನ ಅಂಚಿನಲ್ಲಿರುವ, ಉಳಿವಿನಿಂದ ನಾಶವಾಗುತ್ತಿರುವ ಹಸ್ತಪ್ರತಿಗಳ ಮೂಲಕ ಕೃತಿಯ ಜೀವಂತಿಕೆಯನ್ನು ಬಯಸುವ ಹಂಬಲ ಎಂ.ಎಂ.ಕಲಬುರ್ಗಿ ಅವರಿಗಿತ್ತು. ಆ ಹಿನ್ನೆಲೆಯಲ್ಲಿ ಚಾರಿತ್ರಿಕ ಕಾವ್ಯ, ಸಾಹಿತ್ಯ ಕೃತಿಗಳು ಹಾಗೂ ವಚನ ಸಾಹಿತ್ಯ ಕೃತಿಗಳ ಸಂಪಾದನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಸಂಪಾದನೆಯಲ್ಲಿ ತೊಡಗಿಕೊಂಡ ಅವರು ಗ್ರಂಥಸಂಪಾದನೆಗೆಂದೇ ಒಂದು ಮಹತ್ವದ ಕೃತಿಯನ್ನು ರಚನೆ ಮಾಡಿದ್ದಾರೆ. ಅದೇ ಈ 'ಕನ್ನಡ ಗ್ರಂಥಸಂಪಾದನಾ ಶಾಸ್ತ್ರ'. ಇದು ಗ್ರಂಥಸಂಪಾದನಾಕ್ಷೇತ್ರಕ್ಕೆ ಅಪೂರ್ವವಾದ ಕಾಣಿಕೆಯಾಗಿದೆ. ಇದರಲ್ಲಿ ಡಿ.ಎಲ್.ನರಸಿಂಹಾಚಾರ್ ಅವರಂತೆ ಪಾಶ್ಚಾತ್ಯ ಮಾದರಿಯನ್ನು ಅನುಸರಿಸದೇ ದೇಶಿ ಮಾದರಿಯಲ್ಲಿ ರಚಿಸಿರುವುದು ವಿಶೇಷವೆನಿಸುತ್ತದೆ. ಶಾಸ್ತ್ರಶುದ್ಧವಾಗಿ ವಿಷಯ ಮಂಡನೆ ಮಾಡುವಲ್ಲಿ, ಸರಳ ಶೈಲಿಗಳ ಬಳಕೆಯಿಂದ ಅಭ್ಯಾಸಿಗರಿಗೆ ಸುಲಭವಾಗಿ ಗ್ರಹಿಸಲು ಅನುಕೂಲಕರವಾಗಿದೆ. ಆರು ಕಾಂಡಗಳಿಂದ ಕೂಡಿದ್ದು, ಆ ಕಾಂಡಗಳಿಗೆ ಇರುವ ಶೀರ್ಷಿಕೆಗಳು ವಿನೂತನವೆನಿಸುತ್ತವೆ. ಮೊದಲನೇ ಕಾಂಡ ಇತಿಹಾಸಕಾಂಡ. ಇದರಲ್ಲಿ ಪ್ರಾಚೀನ ಮತ್ತು ಆಧುನಿಕ ಗ್ರಂಥಸಂಪಾದನೆಯ ಇತಿಹಾಸ ಬೆಳೆದುಬಂದ ಬಗೆಯನ್ನು ವಿವೇಚಿಸಿದ್ದಾರೆ. ಜೊತೆಗೆ ಗ್ರಂಥರಕ್ಷಣೆ, ಗ್ರಂಥಲೇಖನ, ಪಾಠರಕ್ಷಣೆ, ಪಾಠಸಂಗ್ರಹ ಹಾಗೂ ಪಾಠ ನಿರ್ಣಯ ಈ ಅಂಶಗಳನ್ನು ಕುರಿತು ವಿವರಿಸಲಾಗಿದೆ. ಆಧುನಿಕ ಇತಿಹಾಸ ಭಾಗದಲ್ಲಿ ಹಸ್ತಪ್ರತಿಗಳ

ಸಂಗ್ರಹ ಹಾಗೂ ಗ್ರಂಥಸಂಪಾದನ ಕಾರ್ಯಚಟುವಟಿಕೆಗಳ ಕುರಿತಂತೆ ಚರ್ಚಿಸಿದ್ದಾರೆ. ಎರಡನೆಯ ಕಾಂಡವಾದ 'ಲೇಖನಕಾಂಡ'ದಲ್ಲಿ ಲೇಖನ ಸಾಮಗ್ರಿಗಳು ಹಾಗೂ ಲಿಪಿಕಾರರ ಕುರಿತು ವಿವರಣೆ ಇದೆ. ಇವರು ಲಿಪಿಕಾರರನ್ನು ೧. ನಿಯುಕ್ತ ಲಿಪಿಕಾರರು, ೨. ವೃತ್ತಿಲಿಪಿಕಾರರು ೩. ಹವ್ಯಾಸಿ ಲಿಪಿಕಾರರು ಎಂದು ವರ್ಗೀಕರಿಸಿದ್ದಾರೆ. ನಂತರ ಸ್ಖಾಲಿತ್ಯ ಕಾಂಡದಲ್ಲಿ ಸ್ಖಾಲಿತ್ಯದ ಕಾರಣಗಳು ಹಾಗೂ ಸ್ಖಾಲಿತ್ಯದ ಸ್ವರೂಪಗಳನ್ನು ಉದಾಹರಣೆ ಸಮೇತ ವಿವರಿಸಿದ್ದಾರೆ. ನಂತರ ಹಸ್ತಪ್ರತಿ ಕಾಂಡದಲ್ಲಿ ಹಸ್ತಪ್ರತಿಗಳನ್ನು ೧. ಮೂಲಹಸ್ತಪ್ರತಿ, ೨. ಪರಂಪರಾಗತ ಹಸ್ತಪ್ರತಿ, ೩. ಶುದ್ಧ ಹಸ್ತಪ್ರತಿ, ೪. ಅಶುದ್ಧ ಹಸ್ತಪ್ರತಿ, ೫. ಏಕೈಕ ಹಸ್ತಪ್ರತಿ, ೬. ಸಂರಕ್ಷಿತ ಹಸ್ತಪ್ರತಿ ಎಂದು ಹೊಸ ರೀತಿಯಲ್ಲಿ ವರ್ಗೀಕರಿಸಿದ್ದಾರೆ. ಜೊತೆಗೆ ಹಸ್ತಪ್ರತಿಗಳ ವಂಶಸಂಬಂಧ ಕುರಿತಂತೆ ಚರ್ಚಿಸಿದ್ದಾರೆ. 'ಸಂಪಾದನಕಾಂಡ'ದಲ್ಲಿ ಸಂಪಾದಕನ ಕಾರ್ಯವಿಧಾನ, ಸಂಕೇತಗಳು, ಸಂಕ್ಷೇಪಗಳನ್ನು ಕುರಿತು ವಿವರಿಸಲಾಗಿದೆ. ಕೊನೆಯ ಕಾಂಡವಾದ ಶೇಷಕಾಂಡದಲ್ಲಿ ಸಂಪಾದಕನ ಅರ್ಹತೆ, ಅವನು ತಿಳಿದುಕೊಂಡಿರಬೇಕಾದ ವಿಷಯಗಳ ವ್ಯಾಪ್ತಿಯನ್ನು ಹಾಗೂ ಸಂಪಾದನೆಯ ಮಹತ್ವವನ್ನು ಸುದೀರ್ಘವಾಗಿ ವಿವೇಚಿಸುವ ಪ್ರಯತ್ನವನ್ನು ಮಾಡಿದ್ದಾರೆ. ಒಟ್ಟಾರೆಯಾಗಿ ಈ ಕೃತಿ ಗ್ರಂಥಸಂಪಾದನೆಯ ಕ್ಷೇತ್ರದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. "ಈ ಕೃತಿಯನ್ನು ಓದಿದ ಖ್ಯಾತ ವಿದ್ವಾಂಸರಾದ ಹಾ.ಮಾ.ನಾಯಕ ಅವರು ವಿದ್ವತ್ತು ಪಾಂಡಿತ್ಯ ಇವು ನಮ್ಮೊಂದಿಗೆ ಕೊನೆಗಾಣುತ್ತವೆಂದು ಭಾವಿಸಿರುವ ಜನ ಇನ್ನೂ ಇರುವಾಗಲೇ ನೀವು ಇಂಥ ಪುಸ್ತಕಗಳನ್ನು ಪ್ರಕಟಿಸಿರುವುದು ಅಭಿಮಾನದ ಮಾತು ಎಂದು ಹೃದಯ ತುಂಬಿ ಹೇಳಿದ್ದಾರೆ".[೭] ವಿದ್ವಾಂಸರ ಈ ಮಾತಿನಲ್ಲಿ ಎಂ.ಎಂ.ಕಲಬುರ್ಗಿ ಅವರ ಕನ್ನಡ ಗ್ರಂಥಸಂಪಾದನಾ ಶಾಸ್ತ್ರ ಕೃತಿಯ ಮಹತ್ವ ಎದ್ದು ಕಾಣುತ್ತದೆ.

ಕನ್ನಡ ಸಾಹಿತ್ಯ ಪರಂಪರೆಯಲ್ಲಿ ೧೨ನೆಯ ಶತಮಾನದಲ್ಲಿ ರಚಿತವಾದ ವಚನ ಸಾಹಿತ್ಯ ಮುಕ್ತಕ ಸಾಹಿತ್ಯ ವರ್ಗಕ್ಕೆ ಸೇರುವ ಪ್ರಕಾರವಾಗಿದೆ. ಇದು ತನ್ನದೇ ಆದ ಮಹತ್ವವನ್ನು ಒಳಗೊಂಡಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಈ ಮುಂದಿನಂತೆ ಹೇಳಿದ್ದಾರೆ. "ಪ್ರತಿಯೊಂದು ವಚನ ಅರ್ಥದೃಷ್ಟಿಯಿಂದ ಸ್ವತಂತ್ರ, ಗಾತ್ರದೃಷ್ಟಿಯಿಂದ ಚಿಕ್ಕದು, ರಚನಾದೃಷ್ಟಿಯಿಂದ ಸರಳವಾಗಿರುವ ಕಾರಣ ಇದನ್ನು ಬಿಡಿಸಿ ನೋಡಿದರೆ ಮುತ್ತಿನ ಬೆಲೆಯಿದೆ, ಕೂಡಿಸಿ ನೋಡಿದರೆ ಹಾರದ ಬೆಲೆಯಿದೆ."[೮] ಮೇಲ್ನೋಟಕ್ಕೆ ಸರಳ ಎನಿಸಿದರೂ ವಿಶೇಷ ಅರ್ಥವನ್ನು ತನ್ನಲ್ಲಿ ಅಡಗಿಸಿಕೊಂಡಿರುತ್ತದೆ. "ಪ್ರಧಾನವಾಗಿ ವಚನ ಸಾಹಿತ್ಯ ಹುಟ್ಟಿದುದು ಉತ್ತರ ಕರ್ನಾಟಕದಲ್ಲಿ. ಅದನ್ನಾಶ್ರಯಿಸಿ 'ಸಂಯೋಜನ ಸಾಹಿತ್ಯ' ಹುಟ್ಟಿದುದು ದಕ್ಷಿಣ ಕರ್ನಾಟಕದಲ್ಲಿ. ಆ ಪ್ರದೇಶದಲ್ಲಿ ಮುರುಘಾ, ಚೀಲಾಳ ಮೊದಲಾದ ಸಮಯಗಳ ಜೊತೆ ಹಸ್ತಪ್ರತಿಗಳ ಸಂರಕ್ಷಣೆ, ಸಂಯೋಜನೆ

ಕೆಲಸಕ್ಕಾಗಿಯೇ ವೀರಶೈವ 'ಸಂಪಾದನ ಸಮಯ'ವೊಂದು ಹುಟ್ಟಿಕೊಂಡು, ದಕ್ಷಿಣೋತ್ತರ ಹಬ್ಬಿತ್ತೆಂಬುದು ಅವಶ್ಯ ಗಮನಿಸಬೇಕಾದ ಸಂಗತಿಯಾಗಿದೆ. 'ಧರ್ಮಗ್ರಂಥ ರಕ್ಷಣೆ'ಯೂ ಒಂದು ಮತದ ಮುಖ್ಯ ಕರ್ತವ್ಯವೆಂಬುದನ್ನು ಇದು ಧ್ವನಿಸುತ್ತದೆ."[೯] ಇಲ್ಲಿ ಎಂ.ಎಂ.ಕಲಬುರ್ಗಿ ಅವರು ವಚನ ಸಾಹಿತ್ಯದ ಹುಟ್ಟು ಹಾಗೂ ಸಂಯೋಜನೆ ಕುರಿತು ಚರ್ಚಿಸುತ್ತ ಧರ್ಮಗ್ರಂಥ ರಕ್ಷಣೆಯನ್ನು ಮಾಡುವುದು ಮತದ ಕರ್ತವ್ಯ ಎಂಬ ಹಿನ್ನೆಲೆಯಲ್ಲಿ ವೀರಶೈವರು ಸಂಪಾದನೆ ಕೈಗೊಳ್ಳುತ್ತಿರುವರೆಂಬುದು ಧ್ವನಿಸುತ್ತದೆ ಎಂದಿದ್ದಾರೆ.

"ಕಲ್ಯಾಣಕ್ರಾಂತಿಯಿಂದಾಗಿ ಹತ್ತು ದಿಕ್ಕಿಗೆ ಹರಿದುಹೋಗಿ ಹಾಳಾಗುತ್ತಲಿದ್ದ ವಚನರಾಶಿ ಯಲ್ಲಿ ಸಿಕ್ಕಷ್ಟನ್ನು ಉಳಿಸಿಕೊಳ್ಳಲು ಮಾಡಿದ ವೈವಿಧ್ಯಪೂರ್ಣ ಪ್ರಯತ್ನವನ್ನು ನಾವು 'ಸಂಪಾದನೆ' ಹೆಸರಿನಿಂದ ಕರೆಯುತ್ತಿದ್ದರೂ ಅದರಲ್ಲಿ ಸಂಗ್ರಹ ಸಂಕಲನ, ಸಂಪಾದನ ಎಂಬ ಮೂರು ಪ್ರಭೇದಗಳು ಗೋಚರಿಸುತ್ತಿದ್ದು, ಅಭ್ಯಾಸದ ಅನುಕೂಲತೆ ದೃಷ್ಟಿಯಿಂದ ಈ ಮೂರು ಸಾಹಿತ್ಯ ಕ್ರಿಯೆಗಳನ್ನು 'ಸಂಯೋಜನ ಸಾಹಿತ್ಯ' ಎಂದು ಹೊಸ ಹೆಸರಿನಿಂದ ಕರೆಯಬಹುದಾಗಿದೆ. ಈ ಒಟ್ಟು ಕ್ರಿಯೆ ಒಂದು ಪ್ರಯೋಗವೆಂಬಂತೆ ಸಂಗ್ರಹದಿಂದ ಸಂಕಲನದತ್ತ, ಸಂಕಲನದಿಂದ ಸಂಪಾದನೆಯತ್ತ ಮುಂದುವರಿದಿದೆ. ಸಂಗ್ರಹಕ್ಕೆ ಪ್ರಯತ್ನ ಸಾಕು, ಸಂಕಲನಕ್ಕೆ ಪಾಂಡಿತ್ಯವೂ ಬೇಕು, ಸಂಪಾದನೆಗೆ ಹೆಚ್ಚಿನದಾಗಿ ಪ್ರತಿಭೆಯೂ ಬೇಕು."[೧೦] ಅಳಿವಿನ ಅಂಚಿನಲ್ಲಿದ್ದ ವಚನ ಸಾಹಿತ್ಯವನ್ನು 'ಸಂಪಾದನೆ' ಮಾಡುವ ಮೂಲಕ ಅವುಗಳ ಸಂರಕ್ಷಣೆ ಮಾಡಲಾಗಿದೆ. ಈ ಸಂಪಾದನೆಯು ಸಂಗ್ರಹ, ಸಂಕಲನ, ಸಂಪಾದನೆಯಿಂದ ಕೂಡಿರುವುದರಿಂದ ಇದನ್ನು ಸಂಯೋಜನ ಸಾಹಿತ್ಯ ಎಂಬ ಹೊಸ ಹೆಸರಿನಿಂದ ಕರೆದಿರುವುದು ವಿಶೇಷವೆನಿಸುತ್ತದೆ. ಅಳಿವಿನ ಅಂಚಿನಲ್ಲಿರುವ ವಚನ ಸಾಹಿತ್ಯವನ್ನು ಈ ಸಂಯೋಜನ ಮಾದರಿ ಮೂಲಕ ಸಂರಕ್ಷಣೆ ಮಾಡಲು ಸಾಕಷ್ಟು ವಿದ್ವಾಂಸರು ಶ್ರಮಿಸಿದ್ದಾರೆ. ಫ.ಗು.ಹಳಕಟ್ಟಿ ಅವರಿಗೂ ಮೊದಲು ಈ ಕಾರ್ಯ ಜರುಗಿರುವುದರ ಕುರಿತಂತೆ ಅಲ್ಲಲ್ಲಿ ಚರ್ಚೆ ನಡೆದಿದೆ. ೧೫ನೇ ಶತಮಾನದ ನೂರೊಂದು ವಿರಕ್ತರ ನೇತೃತ್ವದಲ್ಲಿ ಈ ಸಂಗ್ರಹಕಾರ್ಯ ಜರುಗಿದೆ ಎಂದು ಹಲವು ವಿದ್ವಾಂಸರು ಹೇಳಿದ್ದಾರೆ. ಅದೇನೇ ಇದ್ದರೂ ವಚನ ಎಂದಾಕ್ಷಣ ಬಸವಣ್ಣನವರು ನೆನಪಾಗುವಂತೆ ವಚನ ಸಾಹಿತ್ಯ ಸಂಪಾದನೆ ಎಂದಾಕ್ಷಣ ಫ.ಗು.ಹಳಕಟ್ಟಿ ಅವರ ನೆನಪಾಗುವುದು ಸಹಜ. ಫ.ಗು.ಹಳಕಟ್ಟಿ ಅವರು ಸಂಕಲನದ ಕಡೆಗೆ ಗಮನ ಕೊಡದೆ ಒಂದೆಡೆ ಸಂಗ್ರಹಿಸಬೇಕು, ವಚನ ಸಾಹಿತ್ಯವನ್ನು ಉಳಿಸಬೇಕು ಎಂಬ ಉದ್ದೇಶ ಅವರದ್ದಾಗಿತ್ತು. ಅದಕ್ಕೆ ಸಾಕ್ಷಿಯೆಂಬಂತೆ ಅವರ 'ವಚನಶಾಸ್ತ್ರ ಸಾರ' ಮೂರು ಸಂಪುಟಗಳು ಫ.ಗು.ಹಳ್ಳಕಟ್ಟಿ ಅವರ ನಂತರ ಶಿ.ಶಿ.ಬಸವನಾಳರ ಸಂಪಾದನ ಕಾರ್ಯ ತುಂಬಾ ವಿಶಿಷ್ಟವಾದದ್ದು. ಸಂಪಾದನೆಗೆ ಹೊಸರೂಪ ಕೊಟ್ಟವರು ಆರ್.ಸಿ.ಹಿರೇಮಠ

ಅವರು. "ಧಾರವಾಡ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠ, ಆರ್.ಸಿ.ಹಿರೇಮಠರ ಮೂಲಕ ನಡೆದ ಈ ಕೆಲಸ ಎಲ್ಲಾ ಮೂಲಗಳಿಂದ ವಚನಗಳನ್ನು ಸಂಗ್ರಹಿಸಿ ಸಂಪುಟವನ್ನು ರೂಪಿಸುವುದು, ಪ್ರಾಚೀನ ಕಾಲದ ಅಜ್ಞಾತ ವಚನ ಸಂಕಲನ ಗ್ರಂಥಗಳನ್ನು ಪ್ರಕಟಿಸುವುದು ಎಂದು ಎರಡು ತೆರನಾಗಿದೆ."[೧೧] ಆರ್.ಸಿ.ಹಿರೇಮಠರ ಈ ಸಂಪಾದನ ಕಾರ್ಯದಿಂದಾಗಿ ಪ್ರತಿಯೊಬ್ಬ ಶರಣನ ವಚನ ಸಂಖ್ಯೆಯ ಅಂದಾಜು ಮೊತ್ತದ ಅರಿವಾಯಿತು. ಹಾಗೆಯೇ ಈವರೆಗೆ ಅಜ್ಞಾತವಾಗಿದ್ದ ಅನೇಕ ವಚನ ಸಂಕಲನಗಳು ಬೆಳಕು ಕಂಡವು. ಜೊತೆಗೆ ಸುಮಾರು ೪೦೦೦ ಹಸ್ತಪ್ರತಿಗಳ ವಚನ ಭಂಡಾರವು ಅಸ್ತಿತ್ವಕ್ಕೆ ಬಂದಿತು. ವೀರಶೈವ ಸಾಹಿತ್ಯದ ಬಗ್ಗೆ, ವೀರಶೈವ ಸಮಾಜದ ಬಗ್ಗೆ ಅದರಲ್ಲಿಯೂ ವಚನ ಸಾಹಿತ್ಯದ ಬಗ್ಗೆ ಆರ್.ಸಿ.ಹಿರೇಮಠರಿಗೆ ಇದ್ದ ಅತಿಯಾದ ಭಕ್ತಿ, ವ್ಯಾಮೋಹಗಳೇ ಅವರಿಂದ ಇಷ್ಟು ಕೆಲಸ ಮಾಡಿಸಿದವು ಎನ್ನಬಹುದು. ಹಾಗೆಯೇ ಸಂಪಾದನ ಕಾರ್ಯದಲ್ಲಿ ಎಲ್.ಬಸವರಾಜು, ಎಸ್.ಶಿವಣ್ಣ, ಭೂಸನೂರಮಠ ಇವರಂತೆ ಎಂ.ಎಂ.ಕಲಬುರ್ಗಿ ಅವರು ಸಂಪಾದನ ಕಾರ್ಯದಲ್ಲಿ ತಮ್ಮನ್ನು ದುಡಿಸಿಕೊಂಡಿದ್ದಾರೆ. ಎಂ.ಎಂ.ಕಲಬುರ್ಗಿ ಅವರು ತಮ್ಮ ಗುರುಗಳಾದ ಆರ್.ಸಿ.ಹಿರೇಮಠ ಅವರ ಜೊತೆಗೆ ಸಂಪಾದನ ಕಾರ್ಯಕ್ಕೆ ಮೊದಲು ತೊಡಗಿಸಿಕೊಂಡಿದ್ದು ಚೆನ್ನಬಸವಣ್ಣನವರ ವಚನ ಸಂಪುಟ ಸಂಪಾದನೆಯ ಸಂದರ್ಭದಲ್ಲಿ. ಹಾಗಾಗಿ ಅವರ ಜೊತೆಗೆ ಸಂಪಾದನೆಗೆ ತೊಡಗಿಕೊಂಡ ಎಂ.ಎಂ.ಕಲಬುರ್ಗಿ ಅವರು ಗುರುಗಳನ್ನು ಮೀರಿಸುವಂತೆ ಬೆಳೆದದ್ದು ಒಂದು ವಿಪರ್ಯಾಸದ ಸಂಗತಿ, ಒಂದು ರೀತಿಯ ಹೆಮ್ಮೆಯ ಸಂಗತಿಯಾಗಿದೆ ಎಂದು ಹೇಳಬಹುದು. ಆ ರೀತಿಯಲ್ಲಿ ಬೆಳೆಯುವ ಮಟ್ಟಕ್ಕೆ ಸಂಪಾದನ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

ಎಂ.ಎಂ.ಕಲಬುರ್ಗಿ ಅವರಿಗೆ ವಚನ ಸಾಹಿತ್ಯದ ಮೇಲೆ ತೀವ್ರವಾದ ಆಸಕ್ತಿ ಇತ್ತು. ಈ ವಚನ ಸಾಹಿತ್ಯದ ಮೇಲಿನ ಅಸಕ್ತಿ ಇಮ್ಮಡಿಗೊಳ್ಳಲಿಕ್ಕೆ ಕೆಲವು ಕಾರಣಗಳನ್ನು ಗುರುತಿಸಬಹುದು. ಅವುಗಳೆಂದರೆ,

೧. ವಚನ ಸಾಹಿತ್ಯದ ಸಂಪಾದನೆಗೆ ಸಂಬಂಧಿಸಿದಂತೆ ಅವರ ಸಂಶೋಧನೆ ಪ್ರಾರಂಭಗೊಂಡಿದ್ದು ೧೯೬೭ರಿಂದ ತಮ್ಮ ಎಂ.ಎ. ಪದವಿ ಪಡೆದ ನಂತರ ಆರ್.ಸಿ.ಹಿರೇಮಠ ಅವರ ಪ್ರಧಾನ ಸಂಪಾದಕತ್ವದಲ್ಲಿ ರೂಪಿತವಾದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಆರಂಭವಾಗಿದ್ದ 'ಸಮಗ್ರ ವಚನ, ವಾಙ್ಮಯ ಸಂಶೋಧನ ಸಂಸ್ಕರಣ ಪ್ರಕಟಣ ಯೋಜನೆ'ಯಲ್ಲಿ ಸಹಾಯಕ ಸಂಶೋಧಕರಾಗಿ ಸೇರಿಕೊಂಡಿದ್ದರು. ಅಲ್ಲಿ ಒಂದು ವರ್ಷ ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಸ್ತಪ್ರತಿಗಳ ಸಂಗ್ರಹ, ಸೂಚೀಕರಣ, ವಚನಗಳ ನಕಲು, ಪರಿಷ್ಕರಣ ಇತ್ಯಾದಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಈ

ಯೋಜನೆಯ ಮೊದಲ ಕೃತಿ ೧೯೬೫ರಲ್ಲಿ 'ಚೆನ್ನಬಸವಣ್ಣನವರ ವಚನಗಳು' ಸಮಗ್ರ ಸಂಪುಟ ಪ್ರಕಟವಾಗುವಲ್ಲಿ ಅತ್ಯಂತ ನಿಷ್ಠೆಯಿಂದ ದುಡಿದರು.

೨. ಇನ್ನೊಂದು ಮುಖ್ಯ ಕಾರಣವೆಂದರೆ ಬಸವ ಪೀಠದ ಪ್ರಾಧ್ಯಾಪಕರಾಗಿ ಮತ್ತು ನಿರ್ದೇಶಕರಾಗಿ ನಿಯೋಜನೆಗೊಂಡಿದ್ದು.

ಈ ಎರಡೂ ಕಾರಣಗಳ ಪರಿಣಾಮವಾಗಿ ವಚನ ಸಾಹಿತ್ಯ ಸಂಗ್ರಹ, ಸಂಕಲನ, ಸಂಪಾದನೆ, ಪ್ರಕಟಣೆ ಹಾಗೂ ಅಧ್ಯಯನದಲ್ಲಿ ಜೀವನದುದ್ದಕ್ಕೂ ಕೃಷಿ ಮಾಡಲು ಸಾಧ್ಯವಾಗಿದೆ ಎನ್ನಬಹುದು.

## ೫.೧. ಗ್ರಂಥಸಂಪಾದನ ವೈಧಾನಿಕತೆ

ಗ್ರಂಥಸಂಪಾದನ ಕ್ಷೇತ್ರದ ನೆಲೆಗಳನ್ನು ಮೂರು ದೃಷ್ಟಿಯಿಂದ ವರ್ಗೀಕರಿಸಬಹುದು. ಮಾರ್ಗ ಸಾಹಿತ್ಯ ಸಂಪಾದನೆ, ದೇಶಿ ಸಾಹಿತ್ಯ ಸಂಪಾದನೆ ಮತ್ತು ಮೌಖಿಕ ಸಾಹಿತ್ಯ ಸಂಪಾದನೆ. ಈ ವಚನ ಸಾಹಿತ್ಯ ಸಂಪಾದನೆಯು ದೇಶಿ ಸಾಹಿತ್ಯ ಸಂಪಾದನಶಾಸ್ತ್ರಕ್ಕೆ ಸೇರುವ ಪ್ರಕಾರವಾಗಿದೆ. ಮಾರ್ಗ ಸಾಹಿತ್ಯ ಸಂಪಾದನೆ, ಮೌಖಿಕ ಸಾಹಿತ್ಯ ಸಂಪಾದನೆಯಂತೆ ವಚನ ಸಾಹಿತ್ಯ ಸಂಪಾದನೆಗೂ ಒಂದೇ ರೀತಿಯ ಸಂಪಾದನ ವೈಧಾನಿಕತೆಯನ್ನು ಹಿಂದಿನವರು ಅನುಸರಿಸಿಕೊಂಡು ಬಂದಿದ್ದರು. ಎಂ.ಎಂ.ಕಲಬುರ್ಗಿ ಅವರು ಸಂಪಾದನೆಯನ್ನು ಮಾಡುತ್ತ ಅದರ ಆಳವನ್ನು ಅರಿತ ಅವರು ವಚನಸಾಹಿತ್ಯ ಸಂಪಾದನೆಗೆ ಬೇರೊಂದು ವೈಧಾನಿಕತೆಯನ್ನು ತತ್ವ ಸಿದ್ಧಾಂತಗಳ ಹಿನ್ನೆಲೆಯಲ್ಲಿ ರೂಪಿಸಿದರು. ಈ ಹೊಸರೀತಿಯ ವೈಧಾನಿಕತೆಯನ್ನು ಅವರು ಕೆಲವು ಮಹತ್ವದ ಲೇಖನಗಳಲ್ಲಿ ತಿಳಿಸುವ ಪ್ರಯತ್ನವನ್ನು ಮಾಡಿದ್ದಾರೆ. ಆ ಲೇಖನಗಳನ್ನು ನೋಡುವುದಾದರೆ

**'ವಚನ ಪರಿಷ್ಕರಣ'** ಎಂಬ ಲೇಖನದಲ್ಲಿ ವಚನ ಪರಿಷ್ಕರಣದ ಕಾರ್ಯವಿಧಾನವನ್ನು ಕುರಿತು ಚರ್ಚಿಸಿದ್ದಾರೆ. ವಚನ ಸಾಹಿತ್ಯ ಪರಿಷ್ಕರಣ ಕಾರ್ಯದಲ್ಲಿ ಸಂಪಾದಕನಿಗೆ ಎದುರಾಗುವ ತೊಡಕುಗಳು ಮೂರು: ವಚನ ಸಾಹಿತ್ಯದ ಪಾಠ ತೊಡಕು, ವೀರಶೈವ ತತ್ವದ ತೊಡಕು, ಒಮ್ಮೊಮ್ಮೆ ವೀರಶೈವ ಸಮಾಜದ ತೊಡಕು. ಈ ತ್ರಿಶೂಲದಿಂದ ತಲೆತಪ್ಪಿಸಿಕೊಳ್ಳುವ ರೀತಿಯಲ್ಲಿ ವ್ಯವಹರಿಸಿದೆ. ಅದನ್ನು ಪ್ರಾಮಾಣಿಕವಾಗಿ; ಧೈರ್ಯದಿಂದ ಎದುರಿಸುವುದು ವಚನ ಸಂಪಾದಕನ ಧರ್ಮವಾಗಿದೆ"[೧] ಎಂದಿದ್ದಾರೆ. ಇಲ್ಲಿ ಮುಖ್ಯವಾಗಿ ಗಮನಿಸುವ ಸಂಗತಿ ಎಂದರೆ ವಚನ ಸಾಹಿತ್ಯ ಎಂದಾಕ್ಷಣ ವೀರಶೈವ ನೆನಪಾಗುತ್ತದೆ. ವೀರಶೈವ ತತ್ವ ಹಾಗೂ ಆ ಸಮಾಜದ ತೊಡಕುಗಳಿಗೆ ಎದೆಗುಂದಿ, ಪ್ರಾಮಾಣಿಕವಾಗಿ ಧೈರ್ಯದಿಂದ ಸಂಪಾದನೆ ಮಾಡಬೇಕೆಂದು

ಹೇಳುವ ಎಂ.ಎಂ. ಕಲಬುರ್ಗಿ ಅವರು ನುಡಿದಂತೆ ನಡೆಯುವ ವಿಶಿಷ್ಟ ವ್ಯಕ್ತಿತ್ವದವರು. ಯಾವುದೇ ಒಂದು ಕೃತಿಯು ಕೃತಿಕಾರರಿಂದ ಇಲ್ಲವೇ ಲಿಪಿಕಾರರಿಂದ ಕಣ್‌ತಪ್ಪಿನಿಂದ ಇಲ್ಲವೇ ಕೈತಪ್ಪಿನಿಂದ ಅಕ್ಷರ ಸ್ಖಾಲಿತ್ಯಗಳು ಸಂಭವಿಸಿ ಅರ್ಥಕ್ಕೆ ಬಾಧೆಯುಂಟಾಗುತ್ತದೆ. ಆದ್ದರಿಂದ ಪರಿಷ್ಕರಣದ ಮೂಲಕ ಕವಿಯ ಮೂಲಪಾಠವನ್ನು ಕಂಡುಹಿಡಿಯುವುದು ಅನಿವಾರ್ಯ. ಉಳಿದ ಸಾಹಿತ್ಯ ಪ್ರಕಾರಗಳಿಗಿಂತ ವಚನ ಸಾಹಿತ್ಯದಲ್ಲಿ ಈ ಪಾಠಾಂತರ ಕ್ರಿಯೆ ಅಧಿಕವಾಗಿರುವುದಕ್ಕೆ ಕಾರಣ ವಚನಗಳು ಮುಕ್ತಛಂದ, ಸರಳ ರಚನೆ ಮತ್ತು ಜನಪದ ಭಾಷೆ. ಇದರಿಂದಾಗಿ ವಿದ್ವಜ್ಜನತೆ ಮತ್ತು ಜನತೆಯ ಮಧ್ಯದಿಂದ ಇದರ ಪಾಠ ಶಿಷ್ಟಪದ ಸಾಹಿತ್ಯದಲ್ಲಿ ಸ್ಥಿರವೂ ಅಲ್ಲ, ಜನಪದ ಸಾಹಿತ್ಯದಷ್ಟು ಅಸ್ಥಿರವೂ ಅಲ್ಲ. ಶಿಷ್ಟ ಸಾಹಿತ್ಯದ ಪಾಠದ ಮೇಲೆ ಕವಿಯ ಅಧಿಕಾರವಿದ್ದರೆ, ಜನಪದ ಸಾಹಿತ್ಯ ಪಾಠದ ಮೇಲೆ ಜನತೆಯ ಅಧಿಕಾರವಿರುತ್ತದೆ. ಇವುಗಳ ಮಧ್ಯದ ವಚನ ಸಾಹಿತ್ಯದಲ್ಲಿ ಇಬ್ಬರ ಅಧಿಕಾರವಿರುವುದು ಸರಿಯಾದ ರೀತಿಯಲ್ಲಿ ವೀರಶೈವ ತತ್ವ ಸಿದ್ಧಾಂತಗಳಿಗೆ ಅನುಗುಣವಾಗಿ ವಚನಗಳನ್ನು ಪರಿಷ್ಕರಣೆ ಮಾಡಬೇಕೆಂಬುದು ಎಂ.ಎಂ.ಕಲಬುರ್ಗಿ ಅವರ ನಿಲುವಾಗಿದೆ.

ಎಂ.ಎಂ.ಕಲಬುರ್ಗಿ ಅವರು ಅನುದ್ದೇಶಿತ ಮತ್ತು ಉದ್ದೇಶಿತ ಪಾಠಾಂತರಗಳನ್ನು ೫ ರೀತಿಯಲ್ಲಿ ವರ್ಗೀಕರಿಸಿದ್ದಾರೆ. ಯಾವುದೇ ಉದ್ದೇಶಗಳಿಲ್ಲದೇ ಪಾಠಾಂತರಗಳು ಸಂಭವಿಸುವುದನ್ನು ಅನುದ್ದೇಶಿತ ಪಾಠಾಂತರಗಳು ಎನ್ನುವರು. ಇಲ್ಲಿ ಲಿಪಿಕಾರರು, ಸಹೃದಯರು ಹಾಗೂ ಗೇಯಕಾರರಿಂದ ಉಂಟಾದ ಪಾಠಾಂತರಗಳು ಕಂಡುಬರುತ್ತವೆ. ಲಿಪಿಕಾರರ ಮತ್ತು ಸಹೃದಯರ ಪಾಠಾಂತರಗಳು ಒಂದು ಕೃತಿಯನ್ನು ಸಂಪಾದನೆ ಮಾಡುವ ಸಂದರ್ಭದಲ್ಲಿ ಅಥವಾ ನಕಲು ಮಾಡುವ ಸಂದರ್ಭದಲ್ಲಿ ಲಿಪಿಕಾರರಿಂದ ಪಾಠಾಂತರಗಳು ಹುಟ್ಟಿಕೊಳ್ಳುವುದು ಸಹಜ. ಆ ಬಗೆಯನ್ನು ಎಂ.ಎಂ.ಕಲಬುರ್ಗಿ ಅವರು ಉದಾಹರಣೆ ಸಮೇತ ವಿವರಿಸಿದ್ದಾರೆ. ಉದಾಹರಣೆಗೆ

ಕೊಳದ ತಡಿಯಲೊಂದು ಹೊಜಸು(>ಹೊಲಸು)

ಕುಳ್ಳಿರ್ದಡೇನು'–ಅಕ್ಷರ ರೂಪಸಾದೃಶ್ಯ.

'ಸಸಿ(>ಶಶಿ)ಯೊಳಗಣ ರಸದ ರುಚಿಯಂತೆ'–ಅಕ್ಷರದ ಧ್ವನಿಸಾದೃಶ್ಯ

'ಸಾವಿರ ವರುಷ ಸಾಧನೆಯ ಮಾಡಿ ಹಾದರ(>ಆದರ)ದಲ್ಲಿ ಅಳಿದಂತಾಯಿತ್ತು'–ಪ್ರಾಂತಭೇದ

'ಸುಮತಿಯೆಂಬ ಹತ್ತಿ(>ಹಂತಿ)ಯ ಕೊಡು'–ಬರವಣಿಗೆಯ ರೀತಿ ದೋಷ

'ಬಸವರು ಪಂಕ(>ಪಂಕಜ)ದಲ್ಲಿ ಬಿದ್ದರೆ'–ಅಜ್ಞಾನ

‘ಶರಣರ ಅನುಭಾವ ಗಜವೈದ್ಯ(>ಜಗವೈದ್ಯ)ವಯ್ಯಾ’–ಅನವಧಾನ

‘ಓದಿತ್ತು ಕಾಣಿರೋ ಶುಕ(>ಶುನಕ)ನು’–ಅನ್ಯಾರ್ಥ”[೧೩]

ಈ ರೀತಿಯ ಪಾಠಾಂತರಗಳನ್ನು ಉದಾಹರಿಸಿದ್ದಾರೆ. ಇಲ್ಲಿ ಮುಖ್ಯವಾಗಿ ಎಂ.ಎಂ.ಕಲಬುರ್ಗಿ ಅವರು ಲಿಪಿಕಾರರಿಂದ ಅಕ್ಷರದ ರೂಪಸಾದೃಶ್ಯ, ಅಕ್ಷರದ ಧ್ವನಿಸಾದೃಶ್ಯ, ಬರವಣಿಗೆಯ ರೀತಿ ದೋಷ, ಅಜ್ಞಾನ, ಅನವಧಾನ, ಅನ್ಯಾರ್ಥ ಜ್ಞಾನದಿಂದ ಆಗುವ ತೊಂದರೆಗಳಿಂದ ಇಡೀ ವಚನದ ಅರ್ಥಕ್ಕೆ ಚ್ಯುತಿ ಬರುತ್ತದೆ. ಹಾಗಾಗಿ ಲಿಪಿಕಾರ ಸದಾ ಜಾಗರೂಕನಾಗಿರಬೇಕು. ಹಾಗೆಯೇ ಸಹೃದಯ ಕೂಡ ಅರ್ಥಕ್ಕೆ ಚ್ಯುತಿ ಬರದಂತೆ ಜಾಗರೂಕತೆಯನ್ನು ವಹಿಸಿದಾಗ ಮಾತ್ರ ಈ ರೀತಿ ತೊಂದರೆಗಳನ್ನು ತಪ್ಪಿಸಲು ಸಾಧ್ಯ ಎಂದಿದ್ದಾರೆ. ಗೇಯಕಾರರ ಪಾಠಾಂತರಗಳು: ಗದ್ಯ ಮಾಧ್ಯಮದಲ್ಲಿಯೇ ಹುಟ್ಟಿದ ವಚನ ಸಾಹಿತ್ಯವನ್ನು ಪದ್ಯ ಮಾಧ್ಯಮದಲ್ಲಿ ಹಾಡುವ ಮಾಧ್ಯಮವು ಪಾತ್ರವನ್ನು ಬದಲಿಸಿಕೊಳ್ಳುವಲ್ಲಿ ಪಾಠಗಳು ಉದುರುವುದು, ಜಿಗಿಯುವುದು, ವಿರೂಪಗೊಳ್ಳುವುದು ಸಹಜ. ಅಂತಹ ಸಂದರ್ಭದಲ್ಲಿ ಸಂಪಾದಕರು ಬಹಳ ಎಚ್ಚರಿಕೆಯಿಂದ ಪರಿಷ್ಕರಣ ಮಾಡಬೇಕಾಗುತ್ತದೆ ಎಂದು ಹೇಳಿದ್ದಾರೆ.

ಉದ್ದೇಶಿತ ಪಾಠಾಂತರಗಳು ಎಂದರೆ ಉದ್ದೇಶಪೂರ್ವಕವಾಗಿ ಪಾಠಾಂತರ ಕಾರ್ಯವನ್ನು ಮಾಡುವಂತಹದ್ದು. ಇದರಲ್ಲಿ ೨ ನೆಲೆಗಳನ್ನು ಗುರುತಿಸಬಹುದು. ಪ್ರಾಚೀನ ಸಂಪಾದನಕಾರರ ಪಾಠಾಂತರಗಳು ಮತ್ತು ಅವೀರಶೈವ ಪರಂಪರೆಯ ಪಾಠಾಂತರಗಳು “ಉದ್ದೇಶಿತ ಪಾಠಾಂತರಗಳಿಗೆ ಕಾರಣಗಳು ಅನೇಕ. ಅವುಗಳಲ್ಲಿ ಮುಖ್ಯವಾದದ್ದು ಏಕೋತ್ತರ ಶತಸ್ಥಲದ ಸಂಕಲನ ಕೃತಿ, ಶೂನ್ಯಸಂಪಾದನೆ ಕೃತಿಗಳ ರಚನೆ, ವಚನಗಳನ್ನು ಬಳಸಿ ಹೊಸದೊಂದು ಕೃತಿಯನ್ನು ರೂಪಿಸುವಾಗ ಶರಣರ ಮಾತುಗಳಿಗೆ ಪ್ರಾಮುಖ್ಯತೆ ಒದಗಿಸುವ ಸದುದ್ದೇಶದಿಂದ ಸಂಸ್ಕೃತ ಅವತರಣಿಕೆಗಳನ್ನು ಸೇರಿಸಿದರು. ಗಣಭಾಷ್ಯ ರತ್ನಮಾಲೆಯಲ್ಲಿ ಈ ಕ್ರಿಯೆ ಎದ್ದು ತೋರುತ್ತದೆ”[೧೪] ಎಂದು ಉದಾಹರಣೆ ಮೂಲಕ ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ.

“ಆಚಾರ ತನುಸಂಬಂಧವಾದಲೀ ಶ್ರೀ ಗುರು ಸನ್ನಿಹಿತನು ಅಜೆವು ಮನಸಂಬಂಧವಾದಲ್ಲಿ ಶಿವಲಿಂಗ ಸನ್ನಿಹಿತನು ಈ ಉಭಯವು; ಸಂಬಂಧವಾದಲ್ಲಿ ಜಂಗಮಲಿಂಗ ಸನ್ನಿಹಿತನು ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ತ್ರಿವಿಧ ಸಂಪನ್ನ ಶರಣನು”[೧೫]

ಮೂಲತಃ ಈ ವಚನ ಶರಣನಿಗೆ ಸಂಬಂಧಿಸಿದೆ. ಇದು ಬಸವಣ್ಣನೊಬ್ಬನಿಗೆ ಹೊಂದುವಂತೆ ತಿರುಚಿಕೊಂಡಿರುವುದನ್ನು ನೋಡಬಹುದು. “ಆಚಾರ ತನುಸಂಬಂಧವಾದಲ್ಲಿ ಗುರು ಸನ್ನಿಹಿತ ಬಸವಣ್ಣನು ಅಜೆವು, ಮನಸಂಬಂಧವಾದಲ್ಲಿ ಶಿವಲಿಂಗ ಸನ್ನಿಹಿತ ಬಸವಣ್ಣನು ಈ ಉಭಯವು,

ಸಂಬಂಧವಾದಲ್ಲಿ ಜಂಗಮಲಿಂಗ ಸನ್ನಿಹಿತ ಬಸವಣ್ಣನು. ಇದು ಕಾರಣ ಕೂಡಲಚೆನ್ನ ಸಂಗಯ್ಯನಲ್ಲಿ ತ್ರಿವಿಧ ಸಂಪನ್ನ ಶರಣ ಬಸವಣ್ಣನು"[೧೬]

ಇಲ್ಲಿ ಶೂನ್ಯಸಂಪಾದನೆಯ ವಚನಗಳ ಸಂಗ್ರಹ, ಸಂಪಾದನೆಯ ಅನುಕೂಲೀಕರಿಸಲು ಈ ಪಾಠಾಂತರಗಳನ್ನು ಮಾಡಿರುವುದನ್ನು ಗಮನಿಸಿದ ಎಂ.ಎಂ.ಕಲಬುರ್ಗಿ ಅವರು ಇದು ಉದ್ದೇಶಿತ ಪಾಠಾಂತರಗಳಿಗೆ ಮೂಲ ಕಾರಣ ಎಂದು ಸ್ಪಷ್ಟಪಡಿಸಿದ್ದಾರೆ. ಒಂದರ್ಥದಲ್ಲಿ ಸಂಪಾದನೆ ಮಾಡುತ್ತ ಎಂ.ಎಂ.ಕಲಬುರ್ಗಿ ಅವರು ವಚನಗಳ ಅರ್ಥವನ್ನು ಅಧ್ಯಯನಕ್ಕೆ ತೊಡಗಿಕೊಳ್ಳುವ ಪ್ರಯತ್ನವನ್ನು ಮಾಡಿದ್ದಾರೆ.

ವೀರಶೈವಪರ ಪಾಠಾಂತರಗಳು ಏಕೋತ್ತರ ಶತಸ್ಥಲದಂತ ಸಂಕಲನ ಕೃತಿ ಹಾಗೂ ಶೂನ್ಯಸಂಪಾದನೆ ಕೃತಿಗಳನ್ನು ರಚಿಸುವಲ್ಲಿ ವಚನಗಳನ್ನು ತಮಗೆ ಬೇಕಾದ ಹಾಗೇ ಉದ್ದೇಶ ಪೂರ್ವಕವಾಗಿ ತಿರುಚಿಕೊಂಡಿದ್ದು ಅಪಾಯದ ಸಂಗತಿಯಾಗಿದೆ. ಆದರೆ ಇದಕ್ಕಿಂತ ಇನ್ನು ಅಪಾಯದ ಸಂಗತಿಯೆಂದರೆ ಸ್ವಾರ್ಥಮೂಲವಾದ, ತತ್ವವಿರುದ್ಧವಾದ ಪಾಠಗಳನ್ನು ಬುದ್ಧಿ ಪೂರ್ವಕವಾಗಿ ಸೃಷ್ಟಿಸುವುದು. ಇದನ್ನು ಉದಾಹರಣೆ ಮೂಲಕ ಸ್ಪಷ್ಟಪಡಿಸುವುದು ಕಷ್ಟದ ಸಂಗತಿ ಎಂದು ಒಂದು ಚಿಕ್ಕ ಅಂಶವನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ. "ಪ್ರಭುದೇವನನ್ನು ವೈಭವೀಕರಿಸುವಲ್ಲಿ, ಸಿದ್ಧರಾಮನನ್ನು ಶೈವನೆಂದೇ ಸಾಧಿಸುವಲ್ಲಿ ಈ ಕ್ರಿಯೆ ಜರುಗಿರುವ ಸಾಧ್ಯತೆಯಿದೆ. 'ಪ್ರಭುದೇವ ಸಿದ್ಧರಾಮರ ವಾದದ ವಚನಗಳು ಎಂಬ ಸಂಕಲನವನ್ನು ಇಲ್ಲಿ ನೆನೆಯಬಹುದು"[೧೭] ಎಂದಿದ್ದಾರೆ.

ಎಂ.ಎಂ.ಕಲಬುರ್ಗಿ ಅವರು ಈ ಮೇಲಿನ ವರ್ಗೀಕರಣದ ಹಿನ್ನೆಲೆಯಲ್ಲಿ ಪಾಠಾಂತರ ಕ್ರಿಯೆಗೆ ಒದಗುವ ಅಡೆತಡೆಗಳನ್ನು ಸ್ಪಷ್ಟಪಡಿಸಿರುವ ರೀತಿಗಳನ್ನು ನೋಡಿದರೆ ಶುದ್ಧ ರೀತಿಯ ವಚನ ಸಾಹಿತ್ಯದ ಬಗೆಗಿನ ಕಾಳಜಿ ಅಭಿವ್ಯಕ್ತವಾಗಿರುವುದನ್ನುಗಮನಿಸಬಹುದು. ಎಂ.ಎಂ.ಕಲಬುರ್ಗಿ ಅವರು ವಚನಗಳ ಸಂಪಾದನೆಯಲ್ಲಿ ಆಶಯ ಪ್ರಧಾನಕ್ಕೆ ಹೆಚ್ಚು ಆದ್ಯತೆಯನ್ನು ನೀಡುವ ಅವರು ವೀರಶೈವ ತತ್ವದ ಆಶಯವೇ ವಚನ ಪರಿಷ್ಕರಣೆಯ ಮಾನದಂಡವಾಗಬೇಕು ಎಂದು ಬಯಸುವುದನ್ನು ಕೆಳಗಿನ ಮಾತುಗಳಲ್ಲಿ ನೋಡಬಹುದು. "ಮೂಲ ಆಕೃತಿಯನ್ನು ಸರಿ ಮಾಡಿಕೊಡುವುದೇ ಆಗಿದೆ. ಅಂದರೆ ಆ ಕೃತಿ ಸಂಪಾದನೆ ಎಂಬುದು ಆಶಯ ಸಂಪಾದನೆಯೇ ಸರಿ. ಒಂದೊಂದು ವಚನ ವೀರಶೈವದ ಒಂದೊಂದು ಆಶಯಕೋಶ ಆದುದರಿಂದ ವೀರಶೈವ ಆಶಯಕ್ಕೆ ತತ್ವಕ್ಕೆ ಧಕ್ಕೆ ಬರದಂತೆ ವರ್ತಿಸುವುದೇ ವಚನ ಪರಿಷ್ಕರಣ ಪ್ರಥಮ ಮತ್ತು ಪರಮ ಒರೆಗಲ್ಲಾಗಿದೆ."[೧೮] ಇಷ್ಟಕ್ಕೆ ಸುಮ್ಮನಾಗದೆ ವಚನ ಪರಿಷ್ಕರಣದಲ್ಲಿ ತಪ್ಪುಗಳು ತತ್ವ ಮತ್ತು ಆಶಯಕ್ಕೆ ಧಕ್ಕೆ ಬರಲು ಕಾರಣವನ್ನು ಈ ಕೆಳಗಿನ ಮಾತುಗಳಲ್ಲಿ ನೋಡಬಹುದು. "ವಚನಗಳಲ್ಲಿ

ಎಷ್ಟೋ ಅಭಾಸಗಳು, ವಿರೋಧಾಭಾಸಗಳು ಸಿಗುತ್ತವೆ. ಎಷ್ಟೋ ವಿಷಯಗಳು ಸತ್ಯದ ಒರೆಗಲ್ಲಿಗೆ ನಿಲ್ಲುವುದಿಲ್ಲ. ವಿದ್ವಾಂಸರಾದವರು ತತ್ವವನ್ನು ತಮತಮಗೆ ಸರಿಕಂಡಂತೆ ಪ್ರತಿಪಾದಿಸುತ್ತಲಿದ್ದಾರೆ. ಇದಕ್ಕೆ ಕಾರಣ ವೀರಶೈವದಲ್ಲಿ ಶೈವ ಬೆರೆತು ಹೋಗುವಲ್ಲಿ ತದನುಗುಣವಾಗಿ ಮೂಲ ವಚನಗಳನ್ನು ವ್ಯತ್ಯಾಸಗೊಳಿಸಿದ ಹೊಸವಚನಗಳನ್ನು ಕಟ್ಟಿ ಸೇರಿಸಿದ ಉಪಕ್ರಮ."[೧೯] ಈ ಮಾತುಗಳು ವೀರಶೈವ ಧರ್ಮದ ತತ್ವವೇ ಪರಮ ಸಾತ್ವಿಕ ಎಂದು ಭಾವಿಸಿ ವಚನಗಳನ್ನು ಸಂಪಾದನೆ ಪರಿಷ್ಕರಣ ಕಾರ್ಯ ನಡೆಯಬೇಕು ಎಂದು ಹೇಳುವ ಎಂ.ಎಂ.ಕಲಬುರ್ಗಿ ಅವರು ಶೈವಮತ ತತ್ವವನ್ನು ಹಿನ್ನೆಲೆಗೆ ಸರಿಸುವ ಪ್ರಯತ್ನವನ್ನು ಮಾಡಿರುವುದನ್ನು ಗಮನಿಸಬಹುದಾಗಿದೆ. ಸಂಪಾದಕನಿಗೆ ಸಂಗ್ರಹ, ಸಂಕಲನ, ಸಂಪಾದನ ಎಂಬ ಮೂರು ವರ್ಗಗಳಿಂದ ವಚನಗಳು ಲಭಿಸುತ್ತವೆ. ಸರ್ವ ಪುರಾತನರ ವಚನ ಕಟ್ಟುಗಳು ಸಂಗ್ರಹ, ತಾತ್ವಿಕ ಶ್ರೇಣಿಯ ಷಟ್‌ಸ್ಥಲ, ಏಕೋತ್ತರ ಶತಸ್ಥಲ ಇತ್ಯಾದಿಗಳು ಸಂಕಲನ, ಸಂಪಾದನಕಾರ್ಯ ಹಸ್ತಪ್ರವೇಶಕ್ಕೆ ಗುರಿಯಾದ ಶೂನ್ಯಸಂಪಾದನೆ ಇತ್ಯಾದಿಗಳು ಸಂಪಾದನೆ. ಇವುಗಳಲ್ಲಿ ಪಾಠದೃಷ್ಟಿಯಿಂದ ಮೊದಲಿನದು ಶುದ್ಧವಾಗಿದೆ. ಎರಡನೆಯದರಲ್ಲಿ ಒಂದು ತತ್ವಕ್ಕೆ ಬದ್ಧವಾಗಿ ವಚನಗಳನ್ನು ಶ್ರೇಣಿಗೊಳಿಸಬೇಕಾಗಿರುವುದರಿಂದ 'ಅನ್ಯತೆ' ಸೇರಿರುವ ಸಂಭವವಿದೆ. ಮೂರನೆ ಯದರಲ್ಲಿ ತತ್ವ ನಿರೂಪಣೆಯೊಂದಿಗೆ ಸಂಪಾದನಾಕಾರನೂ ತೊಡಗಿಕೊಳ್ಳುವುದರಿಂದ ಈ ಅನ್ಯತೆ ಇನ್ನೂ ವರ್ಧಿಸಿರುವ ಸಾಧ್ಯತೆಯಿದೆ ಎಂದು ಎಂ.ಎಂ.ಕಲಬುರ್ಗಿ ಅವರು ಹೇಳಿದ್ದಾರೆ.

ಸಂಗ್ರಹ ಸಂದರ್ಭದಲ್ಲಿ ಕೇವಲ ಒಂದೆಡೆ ಸಂಗ್ರಹ ಮಾಡುವ ಉದ್ದೇಶದಿಂದ ಅಕ್ಷರದ ಕಡೆಗೆ ಮಾತ್ರ ಗಮನ ಕೊಡಲಾಗುತ್ತದೆ. ಆದರೆ ಸಂಕಲನ ಎಂಬುದು ಒಂದು ತತ್ವಸಿದ್ಧಾಂತಗಳನ್ನು ಇಟ್ಟುಕೊಂಡು ಸಂಪಾದನೆ ಮಾಡುವುದರಿಂದ ತಪ್ಪುಗಳಾಗಿರುವ ಸಾಧ್ಯತೆಗಳಿವೆ. ಆದರೆ ಕೊನೆಯ ಹಂತ ಸಂಪಾದನೆಯಲ್ಲಿ ಉದ್ದೇಶಪೂರ್ವಕವಾಗಿಯೇ ತಪ್ಪುಗಳಾಗಿರುತ್ತವೆ ಎಂಬ ಅಂಶ ಇಲ್ಲಿ ವ್ಯಕ್ತವಾಗಿದೆ. ಸಂಪಾದನೆ ಮಾಡುವಾಗ ಸಂಪಾದನಕಾರನಿಗೆ ಸಂಗ್ರಹ, ಸಂಕಲನ, ಸಂಪಾದನೆಯ ಅರಿವು ಮುಖ್ಯವಾಗಿ ಗೊತ್ತಿರಬೇಕಾಗುತ್ತದೆ. ಆಯಾ ವಚನಕ್ಕೆ ಆಯಾ ವರ್ಗದ ಪಾಠಾಂತರಗಳನ್ನೇ ಗುರುತಿಸಿಕೊಳ್ಳಬೇಕೆಂಬ ಅಂಶವನ್ನು ತಿಳಿಸಿದ್ದಾರೆ. ಜೊತೆಗೆ "ಒಂದು ಕುಟುಂಬಕ್ಕೆ ಸಂಬಂಧಪಟ್ಟ ಹಸ್ತಪ್ರತಿಗಳನ್ನು ಮಾತ್ರ ಬಳಸಿ, ಆ ಕುಟುಂಬದ ಮೂಲಸ್ವರೂಪವನ್ನು ಪುನಾರಚನೆ ಮಾಡುವುದೇ ವಚನ ಸಾಹಿತ್ಯದ ಮಟ್ಟಿಗೆ ಶುದ್ಧಪರಿಷ್ಕರಣವೆಂದು ನನ್ನ ನಂಬುಗೆ"[೨೦] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅಂದರೆ ಇಲ್ಲಿ ಅದೇ ಕುಟುಂಬದ ಪ್ರತಿಯನ್ನು ಅದರಲ್ಲೂ ಶುದ್ಧವಾದ ಮೂಲಕ್ಕೆ ಹತ್ತಿರವಾದ ಒಂದು ಪ್ರತಿಯನ್ನು ಆಯ್ಕೆ ಮಾಡಿಕೊಂಡಾಗ ಶುದ್ಧಪಾಠ ರೂಪಿಸಲು ಸಾಧ್ಯವಾಗುವುದು.

ವಚನ ಸಾಹಿತ್ಯ: ಸಂಪಾದನೆ ವಿಧಾನ–ಇತಿಹಾಸ ಎಂಬ ಲೇಖನದಲ್ಲಿ ಸಂಪಾದನೆಯ ವಿಧಾನ ಹಾಗೂ ಸಂಪಾದನೆ ಕಾರ್ಯ ಬೆಳೆದುಬಂದ ಬಗೆಯನ್ನು ಕುರಿತು ಚರ್ಚಿಸಿದ್ದಾರೆ. ಸಂಪಾದನೆ ಎನ್ನುವುದು ಮೇಲ್ನೋಟಕ್ಕೆ ಸುಲಭವೆನ್ನುವಂತೆ ಕಂಡರೂ ಅದರ ಕಾರ್ಯ ಅತ್ಯಂತ ಕಠಿಣವಾದದ್ದೆ. ಗ್ರಂಥಸಂಪಾದನೆಯನ್ನು ಕರಗತ ಮಾಡಿಕೊಂಡ ಎಂ.ಎಂ.ಕಲಬುರ್ಗಿ ಅವರು ಅದಕ್ಕೆ ಸೂಕ್ತ ವಿಧಾನವನ್ನು ತಿಳಿಯಪಡಿಸಿರುವುದನ್ನು ಈ ಕೆಳಗಿನಂತೆ ಗಮನಿಸಲಾಗಿದೆ. "ಗ್ರಂಥಸಂಪಾದನೆ ಎನ್ನುವುದು ಯಾವುದೇ ಕೃತಿಯ ಪಾಠಾಂತರ ಮತ್ತು ಆಶಯಗಳನ್ನು ಅವಲಂಬಿಸಿ, ನಿಜಪಾಠವನ್ನು ನಿರ್ಣಯಿಸುವ ಹೊಣೆಯಾಗಿದೆ. ಆದುದರಿಂದ ವಚನಸಂಪಾದನೆಯಲ್ಲಿ ಅದರ 'ಪಾಠಾಂತರ ಸ್ವರೂಪ' ಮತ್ತು 'ಆಶಯ ಸ್ವರೂಪ'ಗಳ ಸ್ಪಷ್ಟ ಕಲ್ಪನೆ ಸಂಪಾದಕನಿಗಿರಬೇಕಾಗಿದ್ದು, ಆ ವಿವರ ಹೀಗಿದೆ: ಯಾವುದೇ ಸಾಹಿತ್ಯದ ವಾಚಕಲೋಕ ವಿಸ್ತಾರವಾದಷ್ಟೂ ಅದಕ್ಕೆ ಪಾಠಾಂತರ ಅಧಿಕ. ನಮ್ಮ ನಾಡಿನ ಬಹುದೊಡ್ಡ ಜನಾಂಗವಾದ ವೀರಶೈವ ಸಮಾಜ ಧಾರ್ಮಿಕ ಭಕ್ತಿ ಮತ್ತು ಸಾಹಿತ್ಯಿಕ ಆಸಕ್ತಿಗಳಿಂದ ನಡೆಸಿದ ಅಧ್ಯಯನ ಕಾರಣವಾಗಿ, ವಚನ ಸಾಹಿತ್ಯಕ್ಕೆ ತೆರೆ ತೆರೆಯಾಗಿ ಹುಟ್ಟಿಕೊಂಡಿರುವ ಪಾಠಾಂತರಗಳ ಸ್ವರೂಪವನ್ನು ಕುರಿತು ಚರ್ಚಿಸಿದ್ದಾರೆ.

ಪ್ರಾಚೀನ ಲಿಪಿಕಾರರ ಪಾಠಾಂತರಗಳು ಅಕ್ಷರದ ರೂಪಸಾದೃಶ್ಯ, ಧ್ವನಿಸಾದೃಶ್ಯ, ಬರವಣಿಗೆಯ ರೀತಿ ದೋಷ ಮತ್ತು ಲಿಪಿಕಾರರ ಅಜ್ಞಾನ, ಅನವಧಾನ, ಅನ್ಯಥಾಜ್ಞಾನ ಕಾರಣವಾಗಿ ಹಸ್ತಪ್ರತಿಗಳಲ್ಲಿ ಪಾಠಾಂತರಗಳು ಹುಟ್ಟಿಕೊಳ್ಳುವುದು ಸಹಜ. ಇದಕ್ಕೆ ಹೆಚ್ಚಿನದಾಗಿ ಲಿಪಿಕಾರರು ಪದ್ಯಕೃತಿ ಲಿಪಿಸುವಾಗ ತೋರುವ ಎಚ್ಚರವನ್ನು ಗದ್ಯಕೃತಿ ಲಿಪಿಸುವಾಗ ತೋರುವುದಿಲ್ಲವಾದುದರಿಂದ ಗದ್ಯಗಂಧಿಯಾದ ಅದರಲ್ಲಿಯೂ ಜನಪದ ಗದ್ಯಗಂಧಿಯಾದ ವಚನಗಳಿಗೆ ಪಾಠಾಂತರ ಇನ್ನೂ ಅಧಿಕ. ಇದಲ್ಲದೆ ಇದು ಧಾರ್ಮಿಕ ಸಾಹಿತ್ಯವನ್ನಾಗಿಸಿರುವುದರಿಂದ ವೀರಶೈವರು ಮಾತ್ರ ಇದನ್ನು ಪ್ರತಿಲಿಪಿಗೊಳಿಸುತ್ತ ಬಂದರು. ಈ ಕಾಲದ ವೀರಶೈವರ ಅಕ್ಷರ ಮತ್ತು ಭಾಷಾ ಜ್ಞಾನಗಳೂ ಸಾಮಾನ್ಯವಾಗಿ ಮಧ್ಯಮ ಮಟ್ಟದವು. ಹೀಗಾಗಿ ಮಿಕ್ಕ ಬ್ರಾಹ್ಮಣ, ಜೈನ ಹಸ್ತಪ್ರತಿಗಳಿಗಿಂತ, ವೀರಶೈವ ಹಸ್ತಪ್ರತಿಗಳಲ್ಲಿ, ಅದರಲ್ಲಿಯೂ ವಚನ ಹಸ್ತಪ್ರತಿಗಳಲ್ಲಿ ದೋಷ ಪಾಠಗಳು ಹೇರಳ ಸಂಖ್ಯೆಯಲ್ಲಿ ಹುಟ್ಟಿಕೊಂಡವು. ಇಲ್ಲಿ ಬರುವ ಸಂಸ್ಕೃತ ಶ್ಲೋಕಗಳ ಗತಿ ದೇವರೇ ಬಲ್ಲ.

ಪ್ರಾಚೀನ ಸಂಪಾದನಾಕಾರರ ಪಾಠಾಂತರಗಳು ಶರಣರ ವಚನಗಳನ್ನು ಮುಂದಿನವರು ವೈವಿಧ್ಯಮವಾಗಿ ಸಂಯೋಜಿಸಿದ ಫಲವಾಗಿ ವೀರಶೈವರಲ್ಲಿ 'ಸಂಪಾದನಾಸಾಹಿತ್ಯ'ವೆಂಬ ವಿಶಿಷ್ಟ ಪ್ರಕಾರವೊಂದು ವಿಪುಲ ಪ್ರಮಾಣದಲ್ಲಿ ಬೆಳೆದುಬಂದಿತು. ಸಕಲ ಪುರಾತನರ ವಚನಗಳಂಥ

'ಸಂಗ್ರಹ'ದಿಂದ ಪ್ರಾರಂಭವಾಗಿ, ಏಕೋತ್ತರ ಶತಸ್ಥಲಗಳಂಥ 'ಸಂಕಲನ'ಗಳಲ್ಲಿ ವೈವಿಧ್ಯಪೂರ್ಣವಾಗಿ ಬೆಳೆದು, ಶೂನ್ಯಸಂಪಾದನೆಗಳಂಥ 'ಸಂಪಾದನ' ಗ್ರಂಥಗಳಲ್ಲಿ ಅದು ಸಿದ್ಧಿಯನ್ನು ಮುಟ್ಟಿದೆ. ಆದರೆ 'ಸಂಗ್ರಹ'ಗಳಲ್ಲಿ ಅನುದ್ದೇಶಿತ ಪಾಠಾಂತರಗಳಾಗಿರಬಹುದು,'ಸಂಕಲನ'ಗಳಲ್ಲಿ ಅನುದ್ದೇಶಿತ ಪಾಠಾಂತರದ ಜೊತೆಗೆ ಕೂಟವಚನಗಳೂ ಸೇರಿಕೊಂಡವು. ಉದಾಹರಣೆಗೆ ಗಣಭಾಷಿತ ರತ್ನಮಾಲೆ 'ಸಂಪಾದನೆ'ಯಲ್ಲಿ ಸಂವಾದಕ್ಕೆ ಯೋಗ್ಯವಾಗುವಂತೆ ಮೂಲವಚನಗಳಿಗೆ ಉದ್ದೇಶಿತ ಪಾಠಾಂತರವನ್ನು ಸೃಷ್ಟಿಸುವ ಮತ್ತು ಹೊಸ ಕೂಟವಚನಗಳನ್ನು ಸೇರಿಸುವ ಕಾರ್ಯ ನಡೆಯಿತು. ಹೀಗಾಗಿ 'ಸಂಗ್ರಹ'ಗಳ ಪಾಠ ವಿಶ್ವಾಸಾರ್ಹವೆಂದೂ, 'ಸಂಕಲನ'ಗಳ ಪಾಠ ಅಷ್ಟು ವಿಶ್ವಾಸಾರ್ಹ ವಲ್ಲವೆಂದೂ 'ಸಂಪಾದನೆ'ಗಳ ಪಾಠ ಇನ್ನೂ ವಿಶ್ವಾಸಾರ್ಹವಲ್ಲವೆಂದೂ ಹೇಳಬೇಕಾಗುತ್ತದೆ. ಈ 'ಪಾಠಾಂತರ ಸ್ವರೂಪ'ದ ಬಗ್ಗೆ ಸ್ಪಷ್ಟ ತಿಳುವಳಿಕೆಯಿದ್ದರೆ ಮಾತ್ರ ವಚನ ಸಂಪಾದನೆ ನಿರ್ದಿಷ್ಟವಾಗುತ್ತದೆ.

ಎರಡನೆಯದಾಗಿ ತಾನು ಸಂಪಾದಿಸುತ್ತಿರುವ ಕೃತಿಯ 'ಆಶಯ ಸ್ವರೂಪ'ವನ್ನು ಸಂಪಾದಕ ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ವಚನ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಈ 'ಆಶಯ'ವೆಂಬುದು ವೀರಶೈವ ತತ್ವವೇ ಆಗಿದೆ. ಹೀಗಾಗಿ ಇಲ್ಲಿ ಸಂಪಾದನೆಯ ಅಂತಿಮ ಒರೆಗಲ್ಲು 'ವೀರಶೈವ ಸಿದ್ಧಾಂತ'ವೇ ಆಗಿದ್ದು, ಅದನ್ನು ತಿಳಿದವರು ಮಾತ್ರ ಈ ಕಾರ್ಯಕ್ಕೆ ಕೈ ಹಾಕಬೇಕು. ಹೆಚ್ಚಿನದಾಗಿ ಅಂದಿನ ಪರಿಸರ ಮತ್ತು ವಚನಭಾಷಾ ಸ್ವರೂಪದ ತಿಳುವಳಿಕೆಯೂ ಅವಶ್ಯ ಬೇಕು. ಈ ಎರಡೂ ಮುಖ್ಯ ತಿಳುವಳಿಕೆಗಳ ಹಿನ್ನೆಲೆಯಲ್ಲಿ ಸಂಪಾದಕ ವಚನ ಪರಿಷ್ಕರಣ ಕಾರ್ಯವನ್ನು ಕೈಗೊಳ್ಳಬೇಕಾಗುತ್ತದೆ. ಇಲ್ಲಿ ಸಂಪಾದಕನಾದವನು ಯಾವ ರೀತಿಯ ತಿಳುವಳಿಕೆ ಯಿಂದ ವಚನ ಪರಿಷ್ಕರಣ ಮಾಡಬೇಕೆಂಬ ಅಂಶವನ್ನು ಇಲ್ಲಿ ತಿಳಿಸಿದ್ದಾರೆ. ವಚನ ಪರಿಷ್ಕರಣ ಲೇಖನದಲ್ಲಿ ಚರ್ಚಿಸಿರುವ ಅಂಶವನ್ನು 'ವಚನ ಸಾಹಿತ್ಯ: ಸಂಪಾದನೆಯ ವಿಧಾನ–ಇತಿಹಾಸ' ಲೇಖನದಲ್ಲೂ ಚರ್ಚಿಸಿದ್ದಾರೆ. "ಶಿಷ್ಟಪದ ಸಾಹಿತ್ಯದಲ್ಲಿ ಒಂದು ಕೃತಿಯ ಎಲ್ಲ ಹಸ್ತಪ್ರತಿಗಳನ್ನು ಸಂಗ್ರಹಿಸಿ ಪಾಠ ನಿರ್ಣಯ ಮಾಡುವುದು ಸೂಕ್ತವಾಗಿದ್ದು, ಅದು ನಿಜಪಾಠದ ನೆಲೆಯನ್ನು ಬಹುಮಟ್ಟಿಗೆ ಮುಟ್ಟಿಸುತ್ತದೆ. ವಚನಗಳು ಜನಪ್ರಿಯ ಸಾಹಿತ್ಯ ವರ್ಗಕ್ಕೆ ಸಂಬಂಧಪಟ್ಟಿರುವ ಕಾರಣ ಅವುಗಳ ಪಾಠಾಂತರಗಳು ಕ್ರಮಬದ್ಧ ರೀತಿಯಲ್ಲಿ ಬೆಳೆದುಬಂದಿರುವುದಿಲ್ಲ. ಮೇಲಾಗಿ ಈ ಪಾಠಾಂತರಗಳೂ ಅಪಾರ ಸಂಖ್ಯೆಯಲ್ಲಿ ಬೆಳೆದು, ಒಂದು ಬಗೆಯ ದೊಡ್ಡ ಗೊಂದಲವೇ ಅಲ್ಲಿ ಏರ್ಪಟ್ಟಿರುತ್ತದೆ. ಇಂಥ ಸಂದರ್ಭದಲ್ಲಿ ಹೆಚ್ಚು ಹಸ್ತಪ್ರತಿಗಳನ್ನು ಸಂಗ್ರಹಿಸಿ ಪಾಠ ನಿರ್ಣಯಿಸುವುದೆಂದರೆ ಹೆಚ್ಚು ಅಶಾಸ್ತ್ರೀಯವಾಗಿ ಸಂಪಾದನೆ ಮಾಡಿದಂತೆಯೇ ಸರಿ."[೨೧] ಈ ರೀತಿಯಾದ ಸಂಪಾದನ ವಿಧಾನಗಳನ್ನು ತಿಳಿಸಿದ್ದಾರೆ.

ವಚನ ಸಾಹಿತ್ಯ ಸಂಪಾದನೆಯ ಇತಿಹಾಸವನ್ನು ಕುರಿತು ಚರ್ಚಿಸಿದ್ದಾರೆ. ಹಸ್ತಪ್ರತಿ ಉತ್ಪಾದನಾಕಾರ್ಯ ನಮ್ಮಲ್ಲಿ ಪ್ರಾರಂಭವಾಗಿ ನಕಲು, ಮರುನಕಲು, ಬಳಿನಕಲು ರೂಪದಲ್ಲಿ ಮುಂದುವರಿಯುತ್ತಲಿದ್ದ ಪ್ರಾಚೀನ ಕೃತಿಗಳು ಆವೃತ್ತಿ, ಮರು ಆವೃತ್ತಿ, ಬಳಿ ಆವೃತ್ತಿ ರೂಪದಲ್ಲಿ ಬೆಳಕು ಕಾಣತೊಡಗಿದವು. ಈ ಬಗೆಯ ಗ್ರಂಥಸಂಪಾದನೆಯನ್ನು ಮೊದಲು ಪ್ರಾರಂಭ ಮಾಡಿದವರು ಕ್ರೈಸ್ತಪಾದ್ರಿಗಳು ಪಂಪಭಾರತ, ಆದಿಪುರಾಣಗಳಂಥ ಜೈನಕೃತಿಗಳು, ಕುಮಾರವ್ಯಾಸ ಭಾರತದಂಥ ಬ್ರಾಹ್ಮಣಕೃತಿಗಳನ್ನು, ಬಸವಪುರಾಣ, ಚೆನ್ನಬಸವಪುರಾಣಗಳಂಥ ವೀರಶೈವ ಕೃತಿಗಳನ್ನು, ದಾಸರ ಕೀರ್ತನೆಗಳನ್ನು ಪ್ರಕಟಿಸಿದ ಇವರು ವಚನ ಸಾಹಿತ್ಯದ ಕಡೆಗೆ ಏಕೆ ಗಮನ ಹರಿಸಲಿಲ್ಲ ಎಂಬುದರ ಕುರಿತು ಎಂ.ಎಂ.ಕಲಬುರ್ಗಿ ಅವರು ಚರ್ಚಿಸಿರುವುದು ಗಮನಾರ್ಹ ಸಂಗತಿ. "ವೀರಶೈವ ಸಂಸ್ಕೃತ ಕೃತಿಗಳತ್ತ ವಾಲಿದ್ದ ಕಾರಣ ವಚನಗಳ ಬಗ್ಗೆ ಪೂಜ್ಯಭಾವನೆ ಮಾಯವಾಗಿದ್ದಿತ್ತು ಮತ್ತು ವಿದೇಶಿ ವಿದ್ವಾಂಸರಿಗೆ ವಚನಗಳ ಅಸ್ತಿತ್ವವೇ ತಿಳಿದಿರಲಿಲ್ಲವಾದುದರಿಂದ ಇವರು ವಚನ ಕೃತಿಗಳನ್ನು ಪ್ರಕಟಿಸಿರಲಿಲ್ಲವೆಂದು ಡಾ.ಎಲ್.ಬಸವರಾಜು ವಾದಿಸಿದ್ದಾರೆ" ಎಂದು ಹೇಳಿದ್ದಾರೆ. ಆದರೆ ಎಂ.ಎಂ.ಕಲಬುರ್ಗಿ ಅವರು ಈ ಅಂಶವನ್ನು ಒಪ್ಪದೇ ಮೆಕೆಂಜಿ, ಕಿಟೆಲ್ ಅವರಿಗೆ ವೀರಶೈವ ಮನೆಮಠಗಳಲ್ಲಿ ವಚನಕಟ್ಟುಗಳು ಲಭ್ಯವಾಗಿದ್ದರೂ ಪ್ರಕಟ ಮಾಡಲು ಮುಂದಾಗಲಿಲ್ಲ. ಅದಕ್ಕೆ ಬೇರೆ ಕಾರಣಗಳಿರಬಹುದೆಂಬುದರಲ್ಲಿ ಸತ್ಯಾಂಶವಾಡಗಿದೆ ಎಂಬುದನ್ನು ಎಂ.ಎಂ.ಕಲಬುರ್ಗಿ ಅವರ ಈ ಕೆಳಗಿನ ಮಾತುಗಳಲ್ಲಿ ಗಮನಿಸಬಹುದಾಗಿದೆ. "ಮಂಗಳೂರಿನ ಬಾಸೆಲ್ ಮಿಶನ್ ಪ್ರೆಸ್‌ನವರು ತಮ್ಮ 'ವಚನಶಾಸ್ತ್ರಸಾರ' ಹಸ್ತಪ್ರತಿಯನ್ನು ಮುದ್ರಿಸದೆ ಹಿಂದಿರುಗಿಸಿದುದರ ಬಗ್ಗೆ ಶ್ರೀ ಹಳಕಟ್ಟಿಯವರು ಹೇಳುವ ಈ ಕೆಳಗಿನ ಮಾತುಗಳು ನಮ್ಮ ಗಮನ ಸೆಳೆಯುತ್ತವೆ. 'ಇದನ್ನು(ವಚನಶಾಸ್ತ್ರ ಸಾರ-೧) ಸುಂದರವಾಗಿ ಅಚ್ಚು ಹಾಕಿಸಬೇಕೆಂದು ಮಂಗಳೂರು ಬಾಸೆಲ್ ಮಿಶನ್ ಪ್ರೆಸ್‌ಗೆ ಕಳುಹಿಸಿಕೊಟ್ಟಿದ್ದಲ್ಲದೆ, ಅವರು ತಿಳಿಸಿದಂತೆ ಈ ಕಾರ್ಯಕ್ಕೆ ಸುಮಾರು ೫೦೦ ರೂ. ಸಹ ಮುಂಗಡವಾಗಿ ಅವರಿಗೆ ಕಳಿಸಿಕೊಟ್ಟೆನು. ಆದರೆ ಆಶ್ಚರ್ಯದ ಸಂಗತಿಯೇನೆಂದರೆ ಮಿಶನ್ ಪ್ರೆಸ್ಸಿನವರು ಪರಧರ್ಮದವರ ಗ್ರಂಥಗಳನ್ನು ನಾವು ಅಚ್ಚು ಹಾಕುವುದಿಲ್ಲ ಮತ್ತು ನಿಮ್ಮ ಗ್ರಂಥದಲ್ಲಿ ಪರಮಾತ್ಮನ ಸಂಬಂಧವಾಗಿ ಇರುವ ವಿಚಾರಗಳನ್ನು ಪ್ರಕಟಪಡಿಸಲು ನಾವು ಇಷ್ಟಪಡುವುದಿಲ್ಲ. ಅವು ನಮ್ಮ ಕ್ರಿಶ್ಚಿಯನ್ ಧರ್ಮತತ್ವಗಳನ್ನು ಹೋಲುತ್ತವೆ. ಇಂಥ ಧಾರ್ಮಿಕ ಗ್ರಂಥಗಳನ್ನು ಅಚ್ಚು ಹಾಕುವುದರಿಂದ ನಮ್ಮ ಮಿಶನ್ನಿನ ಉದ್ದೇಶಕ್ಕೆ ಭಂಗ ಬರುತ್ತದೆ ಎಂಬ ಕಾರಣ ತೋರಿಸಿ ನಾನು ಕಳಿಸಿದ ಹಸ್ತಲಿಖಿತ ಗ್ರಂಥವನ್ನು ೫೦೦ ರೂ. ಮುಂಗಡ ಹಣವನ್ನು ನನಗೆ ತಿರುಗಿ ಕಳುಹಿಸಿದರು. ಈ ಮಾತುಗಳು ವಚನ ಸಾಹಿತ್ಯವನ್ನು ಪಾದ್ರಿಗಳು ಏಕೆ ಪ್ರಕಟಿಸಲಿಲ್ಲವೆಂಬ ರಹಸ್ಯದತ್ತ ಬೆರಳು ನೀಡುತ್ತವೆ"[೨೨] ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಪಾದ್ರಿಗಳಿಂದ ವಚನ ಸಾಹಿತ್ಯ ಪ್ರಕಟಣಾ ಕಾರ್ಯ ಸಾಧ್ಯವಾಗಲಿಲ್ಲ ಎಂಬ ಮಾತ್ರಕ್ಕೆ ವಚನ ಸಾಹಿತ್ಯ ನಿಂತು ಹೋಗಲಿಲ್ಲ. ಅದು ಯಾವ ರೀತಿಯಲ್ಲಿ ಹಂತ ಹಂತವಾಗಿ ಬೆಳವಣಿಗೆ ಹೊಂದಿತು ಎಂಬುದನ್ನು ೩ ನೆಲೆಗಳಲ್ಲಿ ವಿಭಾಗಿಸಿ ನೋಡಲು ಪ್ರಯತ್ನಿಸಿದ್ದಾರೆ. ೧. ಹಳಕಟ್ಟಿ ಪೂರ್ವಯುಗ, ೨. ಹಳಕಟ್ಟಿಯುಗ, ೩. ಬಸವನಾಳಯುಗ

೧. ಹಳಕಟ್ಟಿ ಪೂರ್ವಯುಗ ವಚನ ಸಾಹಿತ್ಯ ಪ್ರಕಟಣಾ ಕಾರ್ಯ ಆರಂಭವಾದದ್ದು ೧೮೮೩ರಲ್ಲಿ. ಅಪ್ರಮಾಣ ಕೂಡಲಸಂಗಮದೇವಾ ಮುದ್ರಿಕೆಯ 'ಶಿಖಾರತ್ನ ಪ್ರಕಾಶ'. ಇದರ ನಂತರ ಕೆಲವು ವಚನ ಕೃತಿಗಳು ಬೆಳಕು ಕಂಡವು. ಆದರೆ ವಚನ ಸಾಹಿತ್ಯ ಪ್ರಕಟಣೆ ವಿಸ್ತಾರವಾಗಲಿಲ್ಲ. ಆದರೆ ಆರ್. ನರಸಿಂಹಾಚಾರ್ ಅವರಿಂದ ಅದು ಸಾಧ್ಯವಾಯಿತು. ೧೯೦೭ರಲ್ಲಿ ಕವಿಚರಿತೆ ಸಂಪುಟ ಪ್ರಕಟಿಸುವ ಸಂಪುಟ ೧ ಮತ್ತು ೨ರಲ್ಲಿ ಸುಮಾರು ೬೦ ವಚನಕಾರರು ಬೆಳಕಿಗೆ ಬಂದರು. ೧೯೨೩ರಲ್ಲಿ ಹಳಕಟ್ಟಿ ಅವರು ವಚನಶಾಸ್ತ್ರಸಾರ ಪ್ರಕಟಿಸುವ ಹೊತ್ತಿಗೆ ಬಳ್ಳಾರಿ ಮುಂತಾದ ಪಟ್ಟಣಗಳ ಶೆಟ್ಟರು ವಚನಕೃತಿಗಳನ್ನು ಪ್ರಕಟಿಸಿದ್ದರು. ಹಾಗಾಗಿ ಈ ಕಾಲವನ್ನು ವಚನ ಸಾಹಿತ್ಯ ಪ್ರಕಟಣೆಯ ಅರುಣೋದಯ ಕಾಲವೆಂದು ಕರೆದಿದ್ದಾರೆ. ಇಲ್ಲಿ ನಡೆದದ್ದು ಆಧುನಿಕ ಅರ್ಥದ ಸಂಪಾದನೆಯ ಕಾರ್ಯವಲ್ಲ. ಕೇವಲ ಪ್ರಕಟಣೆಯ ಕಾರ್ಯ ಮತ್ತು ಹಸ್ತಪ್ರತಿಶೋಧ ಕಾರ್ಯ ಎಂದು ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಹಳಕಟ್ಟಿಯುಗ ವಚನ ಸಾಹಿತ್ಯ ಎಂದಾಕ್ಷಣ ನೆನಪಾಗುವುದು ಬಸವಣ್ಣನವರು. ಅಂತೆಯೇ ವಚನ ಸಾಹಿತ್ಯ ಪ್ರಕಟಣೆ ಎಂದಾಕ್ಷಣ ನೆನಪಾಗುವುದು ಫ.ಗು.ಹಳಕಟ್ಟಿಯವರು. ಇಷ್ಟರ ಮಟ್ಟಿಗೆ ದುಡಿದು 'ವಚನ ಪಿತಾಮಹ' ಎಂಬ ಕೀರ್ತಿಗೆ ಪಾತ್ರರಾಗಿದ್ದ ಇವರು ಹಿಂದೆ ನಡೆದ ವಚನಗಳ ಪ್ರಕಟಣೆ, ಸಂಶೋಧನೆಗಳಿಂದ ಪ್ರೇರಿತರಾಗದೆ, ಸ್ವಯಂ ಪ್ರೇರಣೆಯಿಂದಲೇ ಈ ಕೆಲಸಕ್ಕೆ ಕೈ ಹಾಕಿದಂತವರು. "೧೯೦೩ನೇ ಇಸ್ವಿಯಲ್ಲಿ ಗುಬ್ಬಿ ಮಲ್ಲಣಾರ್ಯರು ಮಾಡಿದ ಗಣಭಾಷ್ಯ ರತ್ನಮಾಲೆಯ ಒಂದು ಕೈಬರಹದ ಗ್ರಂಥವು ನನ್ನ ದೃಷ್ಟಿಗೆ ಬಿತ್ತು... ಅಂದಿನಿಂದ ನನಗೆ ಈ ವಚನಗಳ ವಿಷಯವಾಗಿ ಶೋಧನೆ ಮಾಡುವ ಕುತೂಹಲ ಹುಟ್ಟಿತು" ಎಂದು ಹಳಕಟ್ಟಿ ಅವರು ಹೇಳಿದ ಮಾತು ಸಾಕ್ಷಿ ಎಂದು ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಹಳಕಟ್ಟಿ ಅವರು ತಾವು ಸಂಗ್ರಹಿಸಿದ ವಚನಗಳ ಸಂಕಲನಗಳನ್ನು ವಚನಶಾಸ್ತ್ರ ಸಾರ ಭಾಗ ೧, ಭಾಗ ೨, ಭಾಗ ೩ ರೂದಲ್ಲಿ ಹೊರತಂದಿದ್ದಾರೆ.

೧. ವಚನಶಾಸ್ತ್ರ ಸಾರ ಭಾಗ ೧, ೧೯೨೩

ವಚನಶಾಸ್ತ್ರ ಸಾರ ಭಾಗ ೧, ಪೂರ್ವಾರ್ಧ ೧೯೩೧

(ದ್ವಿತೀಯ ಆವೃತ್ತಿ) ಉತ್ತರಾರ್ಧ, ೧೯೩೩

೨. ವಚನಶಾಸ್ತ್ರ ಸಾರ, ಭಾಗ ೩, ೧೯೩೮

೩. ವಚನಶಾಸ್ತ್ರ ಸಾರ, ಭಾಗ ೩, ಪೂರ್ವಾರ್ಧ-೧೯೩೯, ಉತ್ತರಾರ್ಧ ೧೯೫೩

ಹರ್ಡೇಕರ ಮಂಜಪ್ಪ ಮತ್ತು ಹಾವೇರಿಯ ಚೆನ್ನಮಲ್ಲಿಕಾರ್ಜುನರಿಂದ ವಚನ ಸಾಹಿತ್ಯಕ್ಕೆ ಸಂದ ಸೇವೆ ಮರೆಯುವಂತಿಲ್ಲ. ಹಾಗೆಯೇ ಇನ್ನೂ ಕೆಲವರು ಈ ಸಂದರ್ಭದಲ್ಲಿ ವಚನ ಪ್ರಕಟಣ ಕಾರ್ಯ ಮಾಡಿದ್ದಾರೆ. ಈ ಕಾಲಘಟ್ಟದಲ್ಲಿ ಹೆಸರಿಸಲೇಬೇಕಾದ ಇನ್ನೆರಡು ಗ್ರಂಥಗಳೆಂದರೆ ಆರ್.ಆರ್.ದಿವಾಕರ ಅವರ ವಚನಶಾಸ್ತ್ರ ರಹಸ್ಯ(೧೯೩೯) ಮತ್ತು ಎಂ.ಆರ್.ಶ್ರೀನಿವಾಸ ಮೂರ್ತಿ ಅವರ ವಚನಧರ್ಮಸಾರ(೧೯೫೫) ಇವೆರಡು ಸಂಪಾದಿತ ಕೃತಿಗಳಲ್ಲದಿದ್ದರೂ ವಚನಗಳ ವರ್ಗೀಕರಣ ವಿಷಯ ವಿವೇಚನೆ ವಿನೂತನವಾಗಿದೆ ಎಂಬುದನ್ನು ಒಪ್ಪಬೇಕಾಗುತ್ತದೆ ಎಂದು ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಬಸವನಾಳಯುಗದಲ್ಲಿ ಈ ವಚನ ಸಾಹಿತ್ಯ ಮೊದಲರೆಡು ಘಟ್ಟಗಳಲ್ಲಿ 'ಸಂಗ್ರಹ' ರೂಪದಲ್ಲಿ ಪ್ರಕಟವಾಗುತ್ತಿತ್ತು. ನಂತರ ಶಿ.ಶಿ.ಬಸವನಾಳರ ಕಾಲಘಟ್ಟದಲ್ಲಿ ಸಂಗ್ರಹ ಮೌಲ್ಯದಿಂದ ಸಂಪಾದನ ಮೌಲ್ಯಕ್ಕೆ ಬದಲಾವಣೆ ಕಂಡಿತು. ಇಂತಹದೊಂದು ಹೊಸವೈಧಾನಿಕತೆಯನ್ನು ರೂಪಿಸಿದ ಶ್ರೇಯಸ್ಸು ಶಿ.ಶಿ.ಬಸವನಾಳರಿಗೆ ಸಲ್ಲುತ್ತದೆ. ಫ.ಗು.ಹಳಕಟ್ಟಿ ಸಂಪಾದಿಸಿದ ಬಸವಣ್ಣನವರ ವಚನಗಳನ್ನು ಶಿ.ಶಿ.ಬಸವನಾಳರು 'ಬಸವಣ್ಣನವರ ಷಟ್‌ಸ್ಥಲ ವಚನಗಳು' ಕೃತಿಯನ್ನು ಸಂಪಾದಿಸಿದ್ದಾರೆ. ಈ ಕೃತಿಯನ್ನು ನೋಡಿದರೆ ಫ.ಗು.ಹಳಕಟ್ಟಿ ಅವರು ಸಂಪಾದಿಸಿದ ವಚನಗಳೇ ಇವು ಎಂಬ ಪ್ರಶ್ನೆ ಉದಯಿಸುವಂತಿವೆ. ಹಾಗೆಯೇ ನಂತರ ಈ ಕೃತಿಯನ್ನು ಹಲವು ಸಂಪಾದಕರು ಸಂಪಾದಿಸಿದರು. ಶಿ.ಶಿ.ಬಸವನಾಳರ ಕೃತಿಗೆ ಚ್ಯುತಿ ಬರದಿರುವುದು ಅದರ ಶಾಸ್ತ್ರ ಶುದ್ಧಿಗೆ ಸಾಕ್ಷಿಯಾಗಿದೆ ಎಂದು ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇವರ ನಂತರ ಉತ್ತಂಗಿ ಚೆನ್ನಪ್ಪ, ವೀ.ರು.ಕೊಪ್ಪಳ, ಹೊನಹಳ್ಳಿ ಪ್ರಭುಸ್ವಾಮಿಗಳು ಕೆಲವು ಕೃತಿಗಳನ್ನು ಪ್ರಕಟಿಸಿದ್ದಾರೆ. ಹಾಗೆಯೇ ಎಸ್.ಎಸ್.ಭೂಸನೂರು ಮಠ ಅವರು ಲಿಂಗ ಲೀಲಾ ವಿಲಾಸ ಚರಿತ್ರೆ, ಶೂನ್ಯ ಸಂಪಾದನೆ ಮತ್ತು ಏಕೋತ್ತರ ಷಟ್‌ಸ್ಥಲ ಎಂಬ ೩ ಸಂಕಲನ ಕೃತಿಗಳನ್ನು ಹೊರತಂದಿದ್ದು ವಿಶೇಷ ಸಂಗತಿಯಾಗಿದೆ. ಈ ಪರಂಪರೆಯಲ್ಲಿ ನೆನೆಯಬೇಕಾದ ದೊಡ್ಡ ಹೆಸರುಗಳೆಂದರೆ ಆರ್.ಸಿ.ಹಿರೇಮಠ ಹಾಗೂ ಎಲ್.ಬಸವರಾಜು. ಆರ್.ಸಿ.ಹಿರೇಮಠ

ಅವರ ಆಳವಾದ ವಿದ್ವತ್ತು, ಪರಿಷ್ಕರಣ ಪಾಂಡಿತ್ಯ ದಿಂದ ಚೆನ್ನಬಸವಣ್ಣನವರ ವಚನಗಳು(೧೯೬೫) ಬಸವಣ್ಣನವರ ವಚನಗಳು(೧೯೬೯), ಸಿದ್ಧಾರಾಮರ ವಚನಗಳು(೧೯೬೮), ಶಿವಶರಣೆಯರ ವಚನಗಳು(೧೯೬೮), ಅಲ್ಲಮಪ್ರಭುದೇವರ ವಚನಗಳು(೧೯೭೬). ಹೀಗೆ ಹಲವು ಸಂಕಲನ ಕೃತಿಗಳನ್ನು ಹೊರತಂದರು. ಎಲ್.ಬಸವರಾಜು ಅವರು ಅಲ್ಲಮನ ವಚನ ಚಂದ್ರಿಕೆ(೧೯೬೦), ಶಿವದಾಸ ಗೀತಾಂಜಲಿ(೧೯೬೩), ಅಲ್ಲಮನ ವಚನಗಳು(೧೯೭೦), ದೇವರದಾಸಿಮಯ್ಯನ ವಚನಗಳು(೧೯೭೦) ಇನ್ನು ಮುಂತಾದ ಕೃತಿಗಳಲ್ಲಿನ ಪಾಠಪರಿಷ್ಕರಣ ಪದ್ಧತಿ, ಅಭ್ಯಾಸಪೂರ್ಣ ಪ್ರಸ್ತಾವನೆ, ವೈವಿಧ್ಯಪೂರ್ಣ ಅನುಬಂಧಗಳು ಸಂಪಾದನೆಯ ವೈಶಿಷ್ಟ್ಯವನ್ನು ತಿಳಿಸುತ್ತವೆ. ಇವರ ನಂತರ ದೇವಿರಪ್ಪ, ಎಸ್.ಎಂ.ಹುಣಶ್ಯಾಳ, ಪರಶುರಾಮ, ಎಚ್.ಪಿ.ಮಲ್ಲದೇವರು, ಟಿ.ಸಿ.ಜವಳಿ ಮುಂತಾದವರು ಒಂದೋ ಎರಡೋ ಕೃತಿಗಳನ್ನು ಹೊರತಂದರೆ ಬಿ.ಎಸ್.ಸಣ್ಣಯ್ಯ ಅವರು ೪ ಕೃತಿಗಳನ್ನು ಹೊರತಂದಿದ್ದಾರೆ. ಇವರ ನಂತರ ಹೊಸತಲೆಮಾರಿನಲ್ಲಿ ಎಂ.ಎಂ.ಕಲಬುರ್ಗಿ, ವಿ.ಶಿವಾನಂದ, ಎಸ್.ವಿದ್ಯಾಶಂಕರ್, ಬಿ.ವ್ಹಿ.ಶಿರೂರ, ವಿ.ಬಿ.ರಾಜೂರ, ಬಿ.ಆರ್.ಹಿರೇಮಠ, ಹ.ನಂ.ವಿಕಯಕುಮಾರ, ಸಿದ್ಧಾಶ್ರಮ, ಎಸ್.ಉಮಾಪತಿಶಾಸ್ತ್ರಿ, ಪಿ.ಎಂ.ಗಿರಿರಾಜು, ಎಸ್.ಶಿವಣ್ಣ ಮೊದಲಾದವರು ಈ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ ಎನ್ನುತ್ತ ಎಂ.ಎಂ.ಕಲಬುರ್ಗಿ, ವಿ.ಬಿ.ರಾಜೂರ, ಎಸ್.ಶಿವಣ್ಣ ಹಾಗೂ ಪಿ.ಎಂ.ಗಿರಿರಾಜು ಅವರಿಂದ ಈ ಕ್ಷೇತ್ರಕ್ಕೆ ಇನ್ನೂ ವಿಶಿಷ್ಟ ಕಾಣಿಕೆ ಸಲ್ಲುವ ಸಾಧ್ಯತೆ ಇದೆ ಎಂದು ಭರವಸೆಯ ನುಡಿಗಳನ್ನಾಡಿದ್ದಾರೆ. ಕೊನೆಯದಾಗಿ ಈಗಲೂ ಕೂಡ ಬಸವನಾಳರ ಮಾದರಿಯಲ್ಲಿ ಸಂಪಾದನ ಕಾರ್ಯ ಮುಂದುವರೆಯುತ್ತಿರುವುದು ವಿಶೇಷ ಎಂಬ ಅಭಿಪ್ರಾಯವನ್ನು ಎಂ.ಎಂ.ಕಲಬುರ್ಗಿ ಅವರು ವ್ಯಕ್ತಪಡಿಸಿದ್ದಾರೆ.

ವಚನ ಪರೀಕ್ಷಿಕರಣ: 'ಈವರೆಗಿನ ಎರಡು ತಪ್ಪು ವಿಧಾನಗಳು' ಎಂಬ ಲೇಖನದಲ್ಲಿ ವಚನಸಾಹಿತ್ಯ ಪ್ರಕಟಣ ಕಾರ್ಯದ ಮೊದಲ ಎರಡು ಘಟ್ಟಗಳಿಂದ ಸಂಪಾದನ ಕಾರ್ಯದಲ್ಲಿ ಉದಯಿಸಿದ ತಪ್ಪುಗಳನ್ನು ಕುರಿತಂತೆ ಚರ್ಚಿಸಿದ್ದಾರೆ. ಆ ಎರಡು ಘಟ್ಟಗಳೆಂದರೆ, ವಿಜಾಪುರದ ಶಿವಾನುಭವ ಗ್ರಂಥಮಾಲೆಯ ಪ್ರಯತ್ನ. ಫ.ಗು.ಹಳಕಟ್ಟಿ, ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಪ್ರಯತ್ನ. ಆರ್.ಸಿ.ಹಿರೇಮಠ ಇವರಿಬ್ಬರ ಪರಿಶ್ರಮದಿಂದಾಗಿ ವಚನಸಂಪಾದನ ಕಾರ್ಯ ತುಂಬಾ ಜರೂರಾಗಿ ಸಾಗಿಬಂದಿತ್ತು. ಆ ಸಂದರ್ಭದಲ್ಲಿ ತಮಗರಿಯದಂತೆಯೇ ಷ.ಗು.ಹಳಕಟ್ಟಿ ಅವರಿಂದ ವಚನಮಿಶ್ರಣವಾದದ್ದು ಆರ್.ಸಿ.ಹಿರೇಮಠರಿಂದ ಪಾಠಮಿಶ್ರಣ ದೋಷಗಳು ಕಂಡು ಬಂದಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ವಚನಮಿಶ್ರಣ ಮಾಡೋದಕ್ಕೆ ಮೂಲಕಾರಣಗಳೇನು? ಯಾವ ರೀತಿಯಲ್ಲಿ

ವಚನ ಮಿಶ್ರಣ ಕಾರ್ಯ ಫ.ಗು.ಹಳಕಟ್ಟಿ ಅವರಿಗೆ ಅರಿವಿಲ್ಲದೇ ಜರುಗಿ ಹೋಯಿತೆಂಬುದನ್ನು ಕುರಿತು ಚರ್ಚಿಸಿದ್ದಾರೆ.

ಬಿಡಿರೂಪದ ಮುಕ್ತ ಸಾಹಿತ್ಯದ ವಚನ ಸಾಹಿತ್ಯವನ್ನು ಸಂಪಾದನಕಾರರು ಸಂಗ್ರಹ, ಸಂಕಲನ ಮತ್ತು ಸಂಪಾದನೆ ರೀತಿಗಳಲ್ಲಿ ಸಂಯೋಜಿಸಿರುವ ಕ್ರಮ ಒಂದಾದರೆ, ಇನ್ನೊಂದು ಪ್ರಯತ್ನವೆಂದರೆ ಶರಣರ ಹೆಸರಿನಲ್ಲಿ ಪ್ರಾಚೀನರು ಕೃತಕ ವಚನಗಳನ್ನು, ಕೃತಕ ಶರಣರನ್ನು ಸೃಷ್ಟಿಸಿ ಅವರ ಹೆಸರಿನಲ್ಲಿ ಕೃತಕ ವಚನಗಳನ್ನು ಬರೆಯುವುದರ ಜೊತೆಗೆ ಕೊಟ್ಟ ವಚನಗಳನ್ನೊಳಗೊಂಡ ಸಂಗ್ರಹ, ಸಂಕಲನ ಮತ್ತು ಸಂಪಾದನ ಕಟ್ಟುಗಳನ್ನು ರೂಪಿಸಿರುವುದು. ಈ ರೀತಿಯ ಕಟ್ಟುಗಳಿಂದ ತುಂಬಾ ತೊಂದರೆಗಳುಂಟಾಗಿವೆ. ಇದನ್ನು ಸರಿಪಡಿಸಬೇಕಾದರೆ "ಇಂಥ ಕಟ್ಟುಗಳಲ್ಲಿನ ಕೃತಕ ವಚನಗಳನ್ನು-ಕೃತಕ ವಚನಕಟ್ಟುಗಳನ್ನು ದೂರವಿಟ್ಟು, ನಿಜ ವಚನಗಳನ್ನು-ನಿಜ ವಚನಕಟ್ಟುಗಳನ್ನು ಮೂಲರೂಪದಲ್ಲಿಯೇ ಸಕಲ ಪುರಾತನರ ವಚನಗಳು, ಏಕೋತ್ತರ ಶತಸ್ಥಲ ವಚನಗಳು, ಶೂನ್ಯಸಂಪಾದನೆ ಎಂದು ಮುಂತಾಗಿ ಸ್ವತಂತ್ರವಾಗಿಯೇ ಪರಿಷ್ಕರಿಸಿ ಪ್ರಕಟಿಸಬೇಕಾಗುತ್ತದೆ. ಹಳಕಟ್ಟಿಯವರು ಹೀಗೆ ಮಾಡದೆ ನಿಜವಚನ, ಕೂಟವಚನಗಳನ್ನು ಬೆರಸಿ, ೧. ವಿಷಯನಿಷ್ಠವಾಗಿ ವರ್ಗೀಕರಿಸಿ ವಚನಶಾಸ್ತ್ರಸಾರ ಭಾಗ ೧, ೨, ೩ ಪ್ರಕಟಿಸಿದರು. ೨. ವ್ಯಕ್ತಿನಿಷ್ಠವಾಗಿ ಏಕೀಕರಿಸಿ ಮಡಿವಾಳ ಮಾಚಯ್ಯನ ವಚನಗಳು, ಅಂಬಿಗರ ಚೌಡಯ್ಯನ ವಚನಗಳು ಇತ್ಯಾದಿಗಳನ್ನು ಪ್ರಕಟಿಸಿದರು. ಹೀಗಾಗಿ ವಚನ ಸಾಹಿತ್ಯ ಪ್ರಕಟನೆಯ ಪ್ರಥಮ ಘಟ್ಟದಲ್ಲಿಯೇ ಅವರಿಗೆ ಅರಿಯದಂತೆಯೇ ನಿಜವಚನಗಳೊಂದಿಗೆ ಕೂಟವಚನಗಳು ದೊಡ್ಡ ಪ್ರಮಾಣದಲ್ಲಿ ಬೆರೆತುಹೋದವು"[೨೪] ಎಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ. ಹಾಗೆ ಮುಂದುವರಿದು ವಚನಶಾಸ್ತ್ರಸಾರ ಭಾಗ-೧ ಗ್ರಂಥದ ಪ್ರಸ್ತಾವನೆಯಲ್ಲಿ ತಾವು ಈ ಸಂಗ್ರಹಕ್ಕಾಗಿ ಬಳಸಿಕೊಂಡ ವಚನ ಕಟ್ಟುಗಳಾದಿಯನ್ನು ಕೊಟ್ಟಿರುವುದನ್ನು ಪಟ್ಟಿ ಮಾಡಿದ್ದಾರೆ. "೧. ಸರ್ವಪುರಾತನರ ವಚನಗಳು, ೨. ವಚನಗಳ ಸಂಗ್ರಹವು, ೩ ಬೆಡಗಿನ ವಚನಗಳು, ೪. ವಚನಗಳ ಸಂಗ್ರಹ, ೫. ವಚನ ಸಂಗ್ರಹ, ೬. ವಚನಸಂಗ್ರಹ-ಅಂಬಿಗರ ಚೌಡಯ್ಯ, ೭. ಲಿಂಗಚಿದವ್ವ ಬೋಧೆ, ೮. ನಿಜಶರಣೆಯ ವಚನಗಳು, ೯. ವಚನಗಳ ಸಂಗ್ರಹ-ಏಕೋತ್ತರ ಶತಸ್ಥಲ, ೧೦. ಏಕೋತ್ತರ ಶತಸ್ಥಲ, ೧೧. ಗಣಭಾಷ್ಯ ರತ್ನಮಾಲಾ, ೧೨. ಲಿಂಗಲೀಲಾ ವಿಲಾಸ(ಚಾರಿತ್ರ), ೧೩. ಸಂಬಂಧದ ವಚನಗಳು, ೧೪. ಆಚರಣೆಯ ವಚನಗಳು, ೧೫. ಅಷ್ಟಪರಣದ ವಚನಗಳು, ೧೬. ಸಿದ್ಧರಾಮೇಶ್ವರ ವಾದದ ವಚನ, ೧೭. ಸಿದ್ಧರಾಮೇಶ್ವರನು ಕಲ್ಯಾಣದಿಂದ ಬಂದ ಬಳಿಕ ವಾದ ಮಾಡಿದ ವಚನಗಳು, ೧೮. ಶೂನ್ಯಸಂಪಾದನೆ, ೧೯. ಬಸವಣ್ಣನವರ ವಚನಗಳು, ೨೦. ಚನ್ನಬಸವೇಶ್ವರ ವಚನಗಳು, ೨೧. ಸಿದ್ಧೇಶ್ವರ ವಚನಗಳು-ತೋಂಟದಾರ್ಯ, ೨೨.

ಖಂಡೇಶ್ವರ ವಚನಗಳು, ೨೩. ವೇದಸಂಜೀವಿನಿ, ೨೪. ಪ್ರಭುದೇವರ ವಚನಗಳು, ೨೫. ಶಿವಾಚಕ್ರ ವಚನ, ೨೬. ಗಣದಾಸಿ ವೀರದೊಡೆಯರ ವಚನ, ೨೭. ಘನಲಿಂಗನ ವಚನ, ೨೮. ಕಾಡಸಿದ್ಧೇಶ್ವರನ ವಚನ, ೨೯. ಸ್ವತಂತ್ರ ಸಿದ್ಧಲಿಂಗೇಶ್ವರನ ವಚನ, ೩೦. ಅಂಬಿಗರ ಚೌಡಯ್ಯನ ವಚನ." ಈ ಪಟ್ಟಿಯಲ್ಲಿ ಸಂಗ್ರಹ, ಸಂಕಲನ, ಸಂಪಾದನೆ ಎಂಬ ಮೂರು ರೀತಿಯ ವಚನ ಕಟ್ಟುಗಳು ಬೆರೆತುಹೋಗಿವೆ. ಇದರಿಂದ ಸಾಚಾವಚನ, ಖೋಟ ವಚನಗಳು ಬೆರೆತುಹೋಗಿ ನಿಜವಚನಗಳು ಯಾವುವು ಎಂಬುದನ್ನು ಗುರುತಿಸಲು ಕಷ್ಟಸಾಧ್ಯವಾಗುತ್ತದೆ ಎಂಬ ಅಂಶವನ್ನು ಇಲ್ಲಿ ಗಮನಿಸಬಹುದಾಗಿದೆ. ಈ ಕಟ್ಟುಗಳಲ್ಲಿ ಮುಖ್ಯ ಹಾಗೂ ಗೌಣ ಶೀರ್ಷಿಕೆಗಳ ಕೆಳಗೆ ಜೋಡಿಸಿ ವಚನಶಾಸ್ತ್ರಕಾರ, ಅಂಬಿಗರ ಚೌಡಯ್ಯನ ವಚನಗಳು ಗ್ರಂಥಗಳನ್ನು ಪ್ರಕಟಿಸಿದರು. ಈ ರೀತಿಯಾಗಿ ಮಾಡುವ ಬದಲು ಆಯಾ ಕಟ್ಟುಗಳನ್ನು ಸ್ವತಂತ್ರವಾಗಿ(ಏಕೋತ್ತರ ಶತಸ್ಥಲ ಇತ್ಯಾದಿ) ಪ್ರಕಟಿಸಿದ್ದಾರೆ. ಸಾಚಾ-ಖೋಟಾ ತನಗಳನ್ನು ಅರ್ಥ ಮಾಡಿಕೊಳ್ಳಲು ಅನುಕೂಲವಾಗುತ್ತಿತ್ತು ಎಂದಿದ್ದಾರೆ. ಹಾಗೆಯೇ ಈ ಲೇಖನದಲ್ಲಿ ಮುಂದುವರಿದು "ಆರಂಭದ ಪ್ರಯತ್ನದಲ್ಲಿಯೇ ಸಾಚಾವಚನ ರಾಶಿಯೊಂದಿಗೆ ಖೋಟಾವಚನರಾಶಿ ಬೆರೆತುಹೋಯಿತು. ಮೇಲಿನ ಯಾದಿಯಲ್ಲಿ ೧. ಲಿಂಗಚಿದಮೃತ ಬೋಧೆ, ೨. ನಿಜಾಚರಣೆಯ ವಚನಗಳು, ೩. ಸಿದ್ಧರಾಮೇಶ್ವರ ವಾದದ ವಚನ, ೪. ಸಿದ್ಧರಾಮೇಶ್ವರನು ಕಲ್ಯಾಣದಿಂದ ಬಂದ ಬಳಿಕ ವಾದ ಮಾಡಿದ ವಚನಗಳು. ಈ ಕೃತಿಗಳು ಖಂಡಿತವಾಗಿಯೂ ಇಡಿಯಾಗಿ ಇಲ್ಲವೇ, ಭಾಗಶಃ ಖೋಟಾವಚನ ಕಟ್ಟುಗಳು. ಇವು ಹಳಕಟ್ಟಿಯವರ ವಚನಶಾಸ್ತ್ರಸಾರ ಹೆಸರಿನ ಮಹತ್ವದ ಕೃತಿಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಸೇರಿಹೋದವು" ಎಂದು ವಿವರಣಾತ್ಮಕವಾಗಿ ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ. ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತೆ ಸಂಪುಟಗಳಲ್ಲಿ ಬಳಸಿರುವುದರ ಪರಿಣಾಮ ನಂತರ ಬಂದ ಎಲ್ಲಾ ವಿದ್ವಾಂಸರು ಅದನ್ನು ಅನುಕರಿಸಿದರು ಜೊತೆಗೆ ಅನುವಾದ ಕಾರ್ಯ ಮಾಡಿದರು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ನಂತರ ದಿನಮಾನಗಳಲ್ಲಿ ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿ ಪ್ರಕಟಣ ಸಂದರ್ಭದಲ್ಲಿ ಮುಕ್ತಿ ಕಂಠಾಭರಣ ಕೃತಿಯನ್ನು, ಲಿಂಗಚಿದಮೃತ ಬೋಧೆ, ಸಿದ್ಧರಾಮೇಶ್ವರ ವಾದದ ವಚನ, ಸಿದ್ಧರಾಮೇಶ್ವರನು ಕಲ್ಯಾಣದಿಂದ ಬಂದ ಬಳಿಕ ವಾದ ಮಾಡಿದ ವಚನಗಳು ಕೃತಿಗಳನ್ನು ಕೈಬಿಟ್ಟಿದ್ದು, ಸರಕಾರದ ಆವೃತ್ತಿಯ ಬಹುದೊಡ್ಡ ಸಾಧನೆಯಿಂದ ಖೋಟಾವಚನಗಳ ಮಿಶ್ರಣ ತಪ್ಪಿರುವುದು ವಚನಗಳ ಶುದ್ಧತೆಯ ಉಳಿವಿಗೆ ಶ್ರಮಿಸಿರುವುದನ್ನು ಸ್ಮರಿಸುತ್ತ ಎಂ.ಎಂ.ಕಲಬುರ್ಗಿ ಅವರು ಮೆಚ್ಚುಗೆಯನ್ನು ವ್ಯಕ್ತಪಡಿಸಿರುವುದನ್ನು ಗಮನಿಸಬಹುದು.

ಪರಿಷ್ಕರಣ-ಪರಿಷ್ಕರಣದ ಪರಿಷ್ಕರಣ ಎಂಬ ಲೇಖನದಲ್ಲಿ ಈಗಾಗಲೇ ಪರಿಷ್ಕರಣಗೊಂಡ ಕೃತಿಯನ್ನು ಮತ್ತೆ ಪರಿಷ್ಕರಣೆ ಮಾಡುವ ವಿಧಾನ ಹಾಗೂ ಹಿನ್ನೆಲೆಯನ್ನು ಕುರಿತು ಚರ್ಚಿಸಿದ್ದಾರೆ.

ವಚನ ಸಾಹಿತ್ಯ ಕುರಿತಂತೆ ಸಾಕಷ್ಟು ಪರಿಷ್ಕರಣ ಕಾರ್ಯಗಳು ನಡೆದಿರುವುದನ್ನು ಗಮನಿಸಿದ ಎಂ.ಎಂ.ಕಲಬುರ್ಗಿ ಅವರು ತಾವು ಪರಿಷ್ಕರಣ ಮಾಡುವ ಸಂದರ್ಭದಲ್ಲಿ ಎದುರಾದ ಸಮಸ್ಯೆಗಳಿಗೆ ಸೂಕ್ತ ಪರಿಹಾರಗಳನ್ನು ಕಂಡುಕೊಳ್ಳುವ ಮೂಲಕ ತಮ್ಮದೇ ಆದ ಹೊಸ ವೈಧಾನಿಕತೆಯನ್ನು ರೂಪಿಸಿಕೊಂಡಿರುವುದನ್ನು ನಾವು ಈಗಾಗಲೇ ಹಿಂದೆ ಚರ್ಚೆ ಮಾಡಿದ್ದೇವೆ. ಹಿಂದಿನವರ ಪರಿಷ್ಕರಣ ವಿಧಾನದಲ್ಲಿ ಆದ ದೋಷಗಳನ್ನು ಸರಿಪಡಿಸಿ ವಚನ ಸಾಹಿತ್ಯ ಸಮಗ್ರವಾಗಿ ಶುದ್ಧವಾದ ಸಂಪಾದನೆಯಾಗಬೇಕೆಂದರೆ ಪರಿಷ್ಕರಣದ ಪರಿಷ್ಕರಣ ಅಗತ್ಯ ಎಂದು ಕೆಲವು ಸೂಚನೆಗಳನ್ನು ಎಂ.ಎಂ.ಕಲಬುರ್ಗಿ ಅವರು ಈ ಲೇಖನದಲ್ಲಿ ನೀಡುವ ಪ್ರಯತ್ನವನ್ನು ಮಾಡಿದ್ದಾರೆ. ಮುದ್ರಣ ಯಂತ್ರದ ಆರಂಭದಲ್ಲಿ ಪ್ರಾಚೀನ ಕೃತಿಗಳನ್ನು ಸಾಮಾನ್ಯವಾಗಿ ಒಂದು ಹಸ್ತಪ್ರತಿಯನ್ನಿಟ್ಟುಕೊಂಡು ಪರಿಶೋಧಿಸಿ ಪ್ರಕಟಿಸುವುದು 'ಪ್ರಕಟಣ' ಯುಗವಾದರೆ, ಅನೇಕ ಹಸ್ತಪ್ರತಿಗಳಿಂದ ಉತ್ತಮಪಾಠವನ್ನು ಸ್ವೀಕರಿಸಿ ಭಿನ್ನಪಾಠಗಳನ್ನು ಅಡಿಯಲ್ಲಿ ಕೊಡುವ ಪದ್ಧತಿ ಬಂದ ಕಾಲವನ್ನು 'ಪರಿಷ್ಕರಣ ಯುಗ' ಎಂದಿದ್ದಾರೆ. ಪರಿಷ್ಕರಣ ಯುಗದಲ್ಲಿ ಮಾರ್ಗ ಸಾಹಿತ್ಯ ಸಂಪಾದನೆಯ ವಿಧಿವಿಧಾನಗಳನ್ನು ದೇಶಿಸಾಹಿತ್ಯಕ್ಕೂ ಅನ್ವಯಿಸಿದ ಕಾರಣ ದೊಡ್ಡದಾದ ದೋಷವೇ ಸಂಭವಿಸುವುದನ್ನು ಹೇಳುತ್ತಾರೆ. ಇದಕ್ಕೆ ನಿದರ್ಶನವಾಗಿ ಕರ್ನಾಟಕ ವಿಶ್ವವಿದ್ಯಾಲಯದ ವಚನ ಸಾಹಿತ್ಯ ಪ್ರಕಟಣೆ, ಮೈಸೂರು ವಿ.ವಿ. ದಾಸಸಾಹಿತ್ಯ ಪರಿಷ್ಕರಣೆ ಎನ್ನುತ್ತ ಹೊಸರೀತಿಯ ಸಂಪಾದನ ವೈಧಾನಿಕತೆಯನ್ನು ಕುರಿತು ಚರ್ಚಿಸಿದ್ದಾರೆ.

"ಮಾರ್ಗಸಾಹಿತ್ಯ ಸಂಪಾದನೆಗೆ ಹೆಚ್ಚು ಹಸ್ತಪ್ರತಿ ಬಳಸಿದಷ್ಟೂ ಸಂಪಾದನೆ ಹೆಚ್ಚು ಶುದ್ಧವಾಗುತ್ತದೆ. ದೇಶಿ ಸಾಹಿತ್ಯ ಸಂಪಾದನೆಗೆ ಹೆಚ್ಚು ಹಸ್ತಪ್ರತಿ ಬಳಸಿದಷ್ಟು ಸಂಪಾದನೆ ಹೆಚ್ಚು ಅಶುದ್ಧವಾಗುತ್ತದೆ. ಇದಕ್ಕೆ ಕಾರಣ ದೇಶಿ ಕಾವ್ಯಗಳಲ್ಲಿ ಪಾಠಾಂತರಗಳು ವಿಪರೀತ. ಈಗ ಒಂದೊಂದು ಹಸ್ತಪ್ರತಿಯಿಂದ ತಮತಮಗೆ ಸರಿಕಂಡ ಒಂದೊಂದು ಪಾಠವನ್ನು ಆಯ್ದುಕೊಂಡು, ಅಂತಿಮ ಪಠ್ಯ ನಿರ್ಣಯಿಸಿದರೆ ೧೦ ಪ್ರತಿಗಳನ್ನು ಬಳಸಿ, ತಮಗೆ ೧೧ನೆಯ ಪ್ರತಿಯನ್ನು ಸಿದ್ಧಪಡಿಸಿದಂತಾಗುತ್ತದೆಯೇ ಹೊರತು, ನಿಜಕೃತಿಯನ್ನು ಪುನಾರಚಿಸಿದಂತಾಗುವುದಿಲ್ಲ. ಆದುದರಿಂದ ಇಲ್ಲಿ ಕಾಲದೃಷ್ಟಿಯಿಂದ ಪ್ರಾಚೀನ, ಪ್ರತಿದೃಷ್ಟಿಯಿಂದ ಪರಿಪೂರ್ಣ, ಭಾಷಾದೃಷ್ಟಿಯಿಂದ ಶುದ್ಧವಾಗಿರುವ ಒಂದೇ ಒಂದು ಹಸ್ತಪ್ರತಿಯನ್ನು ಆಧಾರವಾಗಿಟ್ಟುಕೊಂಡು, ಅಲ್ಲಿ ಕಂಡುಬರುವ ಲಿಪಿಕಾರನ ದೋಷಗಳನ್ನು ನಿವಾರಿಸಿ, ಅಗತ್ಯವೆನಿಸಿದಲ್ಲಿ ಮಾತ್ರ ಒಂದೆರಡು ಬೇರೆ ಹಸ್ತಪ್ರತಿಗಳಿಂದ ಸೂಕ್ತ ಭಿನ್ನಪಾಠ ಸ್ವೀಕರಿಸಬೇಕು. ಇದರಿಂದ ಮಿಶ್ರಪಾಠವಾಗುವುದು ತಪ್ಪಿ, ಒಂದು ಪ್ರಾಚೀನ ಪ್ರತಿಯನ್ನಾದರೂ ಶುದ್ಧರೂಪದಲ್ಲಿ ಉಳಿಸಿಕೊಟ್ಟಂತಾಗುತ್ತದೆ. ಅಂದರೆ ಎಲ್ಲ ಪ್ರತಿಗಳಿಗೆ ಅಷ್ಟೇ ಮಹತ್ವಕೊಟ್ಟು "ಪಾಠ ಬೆರೆಸುವುದು" ಬೇರೆ, ಒಂದು ಉತ್ತಮ ಪ್ರತಿಗೆ ಮಹತ್ವ ಕೊಟ್ಟು

ಅವಶ್ಯವೆನಿಸಿದಲ್ಲಿ ಮಾತ್ರ ಅವುಗಳಿಂದ "ನೆರವು ಪಡೆಯುವುದು" ಬೇರೆ. ಇನ್ನು ಮುಂದೆ ದೇಶಿ ಕೃತಿಗಳ ಸಂಪಾದನೆಗೆ ನಾವು ಈವರೆಗೆ ಹೇಳಿದ ಹೊಸ ವಿಧಾನವನ್ನು ಅನ್ವಯಿಸಬೇಕಾಗಿದೆ." ಇಲ್ಲಿ ಎಂ.ಎಂ.ಕಲಬುರ್ಗಿ ಅವರು ಮಾರ್ಗ ಮತ್ತು ದೇಶಿಸಾಹಿತ್ಯಕ್ಕೆ ಬೇರೆ ರೀತಿಯ ಸಂಪಾದನ ವೈಧಾನಿಕತೆಯನ್ನು ಅನುಸರಿಸಬೇಕು. ಅದರಲ್ಲೂ ದೇಶಿಸಾಹಿತ್ಯ ಪ್ರಕಾರವಾದ ವಚನ ಸಾಹಿತ್ಯ ತುಂಬಾ ಚಿಕ್ಕದಾಗಿರುತ್ತದೆ. ಇದಕ್ಕೆ ಹಲವು ಹಸ್ತಪ್ರತಿಗಳಿಂದ ಪಾಠಸ್ವೀಕಾರ ಮಾಡಿದರೆ ವಚನಗಳ ಅರ್ಥಕ್ಕೆ ಭಂಗ ಬರುವ ಸಾಧ್ಯತೆ ಇದೆ. ಆದ ಕಾರಣ ಉತ್ತಮವಾದ ಪ್ರತಿಗೆ ಮಹತ್ವ ಕೊಟ್ಟು ಸಂಪಾದನೆ ಮಾಡಬೇಕು ಎಂದಿದ್ದಾರೆ. ಜೊತೆಗೆ ಇತ್ತೀಚೆಗೆ ಬಹುಶಿಸ್ತೀಯ ಅಧ್ಯಯನ ಕೂಡ ನಡೆಯುತ್ತಿದೆ. ಆದ್ದರಿಂದ ಸಂಪಾದನೆಯಲ್ಲಿ ಕಂಡುಬರುವ ದೋಷಗಳನ್ನು ನಿವಾರಿಸಬೇಕು. ಅದಕ್ಕಾಗಿ "ಸಂಪಾದಕ 'ಶಾಬ್ದಿಕ ಸಂಪಾದನೆ'ಯ ನೆಲೆಯಿಂದ 'ಸಾಂಸ್ಕೃತಿಕ ಸಂಪಾದನೆ'ಯ ನೆಲೆಗೆ ಸಾಗಬೇಕಾಗುತ್ತದೆ. ಶಾಬ್ದಿಕವಾಗಿ ಒಂದು ಪಾಠ, ಸಾಂಸ್ಕೃತಿಕವಾಗಿ ಒಂದು ಪಾಠ, ಎರಡೂ ಸರಿಯಿದ್ದರೆ ಶಾಬ್ದಿಕ ಪಾಠದಿಂದ ತೃಪ್ತನಾಗದೆ, ಸಾಂಸ್ಕೃತಿಕ ಪಾಠವನ್ನು ಒಪ್ಪಿಕೊಳ್ಳಬೇಕಾದ ಕ್ರಮವಿದು. ಸಾಂಸ್ಕೃತಿಕ ಅಭ್ಯಾಸಿಸಿ ಮಾತ್ರ ಈ ಕಾರ್ಯ ಮಾಡಬಲ್ಲ."[೨೬] ಸಂಪಾದಕ ಸಾಂಸ್ಕೃತಿಕ ನೆಲೆಯ ದೃಷ್ಟಿಕೋನದಿಂದ ಸಂಪಾದನೆ ಮಾಡಬೇಕಾಗುತ್ತದೆ ಎಂದಿದ್ದಾರೆ. ಈ ರೀತಿಯ ಪರಿಷ್ಕರಣದ ಹೊಸ ವಿಧಾನದ ಜೊತೆಗೆ ಜ್ಞಾನದ ಹೊಸ ಹೊಸ ಕ್ಷೇತ್ರಗಳ ತಿಳುವಳಿಕೆ ಮತ್ತು ಸಮಗ್ರ ಕೃತಿಗಳ ಸಂಕಲನದ ಜವಾಬ್ದಾರಿಗಳನ್ನು ಸಂಪಾದಕನಾದವನು ಹೊರಬೇಕಾಗಿದೆ ಎಂದಿದ್ದಾರೆ.

ಎಂ.ಎಂ.ಕಲಬುರ್ಗಿ ಅವರು ಇದುವರೆಗೆ ಹಲವು ಹಸ್ತಪ್ರತಿಗಳ ಸಹಾಯದಿಂದ ಒಂದು ಕೃತಿಯನ್ನು ಪರಿಷ್ಕರಣೆ ಮಾಡುತ್ತ ಬಂದಿದ್ದು, ಅವು ಮುದ್ರಣ ರೂಪದಲ್ಲಿ ನಮ್ಮೆದುರಿಗಿವೆ. ಹೀಗಿರುವಾಗ ಆ ಮುದ್ರಿತ ಆವೃತ್ತಿಗಳ ಸಂಪಾದನೆಯನ್ನು ಉತ್ತಮಪಡಿಸಬೇಕಾದ ಅಗತ್ಯ ಬರುವ ಸಾಧ್ಯತೆ ಇದ್ದಲ್ಲಿ ಪರಿಷ್ಕರಣದ ಪರಿಷ್ಕರಣ ಅಗತ್ಯ ಎನ್ನುತ್ತ ಸಂಪಾದಕನಾದವನು ಪರಿಷ್ಕರಣದ ಪರಿಷ್ಕರಣ ಮಾಡುವಾಗ ಈ ದಾರಿಗಳನ್ನು ಅನುಸರಿಸಬೇಕೆಂದು ಹೇಳಿದ್ದಾರೆ. ಅವುಗಳನ್ನು ನೋಡುವುದಾದರೆ,

ಮೊದಲಿನವರು ಬಳಸಿದ ಹಸ್ತಪ್ರತಿಗಳನ್ನು ಬಿಟ್ಟು ಹೊಸಹಸ್ತ ಪ್ರತಿಗಳನ್ನು ದೊರಕಿಸಿ ಕೊಂಡು, ಹೊಸ ಯೋಗ್ಯಪಾಠಗಳನ್ನು ಯೋಜಿಸುವುದು. ಹೊಸ ಹಸ್ತಪ್ರತಿಗಳು ಸಿಗದ ಪಕ್ಷದಲ್ಲಿ ಈ ಮೊದಲಿನವರು ಬಳಸಿದ ಹಸ್ತಪ್ರತಿಗಳನ್ನೇ ಮತ್ತೆ ಬಳಸಿದರೆ, ಅದು ತೋರಿಕೆಯ ಪಾಂಡಿತ್ಯ, ವ್ಯರ್ಥ ಪರಿಶ್ರಮವೆನಿಸುತ್ತದೆ. ಆದುದರಿಂದ ಇಂಥ ಸಂದರ್ಭದಲ್ಲಿ ಯಂತ್ರಪ್ರತಿಯನ್ನೇ ಒಂದು ಹಸ್ತಪ್ರತಿಯೆಂದು ಪರಿಗಣಿಸಿ, ಅದರ ಅಡಿಯಲ್ಲಿ ಸಂಗ್ರಹಗೊಂಡಿರುವ ಭಿನ್ನಪಾಠಗಳನ್ನೇ

ಭಿನ್ನ ಹಸ್ತಪ್ರತಿಗಳೆಂದು ಭಾವಿಸಿ, ಸೂಕ್ತಪಾಠ ನಿರ್ಣಯ ಮಾಡುವುದನ್ನೇ 'ಪರಿಷ್ಕರಣದ ಪರಿಷ್ಕರಣ' ಎಂದಿದ್ದಾರೆ. ಈ ಎರಡು ದಾರಿಗಳ ಮೂಲಕ ಸಂಪಾದಕನಾದವನು ಪರಿಷ್ಕರಣದ ಪರಿಷ್ಕರಣ ವಿಧಾನವನ್ನು ಅನುಸರಿಸುವ ಮೂಲಕ ಸಮಗ್ರ ವಚನ ಸಾಹಿತ್ಯದ ಶುದ್ಧಪಾಠ ನಿರೂಪಿಸಲು ಸಾಧ್ಯವೆಂದು ಎಂ.ಎಂ.ಕಲಬುರ್ಗಿ ಅವರು ಹೇಳುತ್ತ ಹೊಸ ವೈಧಾನಿಕತೆಯ ಹಿನ್ನೆಲೆಯಲ್ಲಿ ಚರ್ಚಿಸಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ಈ ಮೇಲಿನ ಮಹತ್ವಪೂರ್ಣ ಲೇಖನಗಳಲ್ಲಿ ವಚನ ಸಾಹಿತ್ಯ ಸಂಪಾದನೆಯ ಕಾರ್ಯದ ಇತಿಹಾಸ ಬೆಳೆದುಬಂದ ಬಗೆ ಹಾಗೂ ಪರಿಷ್ಕರಣ ಮಾದರಿಗಳ ಕುರಿತಂತೆ ಸುದೀರ್ಘವಾಗಿ ಚರ್ಚೆ ಮಾಡುವ ಮೂಲಕ ಸಂಪಾದಕರಿಗೆ ಸುಲಭ ಮಾರ್ಗವನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ. ತಾವು ಕಂಡುಕೊಂಡ ಹೊಸ ರೀತಿಯ ಪರಿಷ್ಕರಣ ಮಾದರಿಯನ್ನು ತಾವು ಸ್ವತಃ ಕೃತಿಗಳನ್ನು ಸಂಪಾದನೆ ಮಾಡುವ ಸಂದರ್ಭದಲ್ಲಿ ಅಳವಡಿಸಿಕೊಳ್ಳುವ ಮೂಲಕ ಮುಂದಿನ ಸಂಪಾದಕರಿಗೆ ಮಾದರಿಯಾಗಿದ್ದಾರೆ.

### ೫.೨. ಸಂಪಾದನ ಕೃತಿಗಳು

ಎಂ.ಎಂ.ಕಲಬುರ್ಗಿ ಅವರ ಆಸಕ್ತಿ ಕ್ಷೇತ್ರ ವಚನ ಸಾಹಿತ್ಯ. ಹಾಗಾಗಿ ಅವರ ವಚನ ಸಾಹಿತ್ಯ ಸಂಪಾದನ ಕಾರ್ಯ ತುಂಬ ವಿಸ್ತಾರವಾದದ್ದು. ಅವರೇ ಹೇಳುವಂತೆ ವಚನ ಸಾಹಿತ್ಯವನ್ನು ಸೃಷ್ಟಿಯ ನಂತರ ವಚನ ಸಂಗ್ರಹ, ವಚನ ಸಂಕಲನ ಮತ್ತು ವಚನ ಸಂಪಾದನೆ ಎಂದು ಅಧ್ಯಯನಕ್ಕೆ ಒಳಪಡಿಸಿರುವುದನ್ನು 'ವಚನ ಸಂಯೋಜನ ಸಾಹಿತ್ಯ ಪರಂಪರೆ' ಎಂದು ಗುರುತಿಸಿದ್ದಾರೆ. ಎಂ.ಎಂ.ಕಲಬುರ್ಗಿ ಅವರು ಈ ಪರಂಪರೆ ೧೨ನೆಯ ಶತಮಾನ ದಿಂದಲೇ ಆರಂಭವಾಗಿದೆ ಎಂದು ಹೇಳಬಹುದು. ಆದರೆ ಇದರ ಸೃಷ್ಟಿ ಚಿತ್ರಣ ಕಂಡುಬರುವುದು ೧೨ನೇ ಶತಮಾನದಿಂದ. ಈ ಪರಂಪರೆಯಲ್ಲಿ "ಯಾವುದೇ ತಾತ್ವಿಕ ಉದ್ದೇಶ ಇಟ್ಟುಕೊಳ್ಳದೇ ಒಬ್ಬೊಬ್ಬ ವಚನಕಾರನ ಹೆಸರಿನ ಅಡಿಯಲ್ಲಿ ಅವರ ವಚನಗಳನ್ನು ಕಲೆಹಾಕಿದುದು 'ಸಂಗ್ರಹ' ಎನಿಸಿದರೆ, ಒಂದು ನಿಶ್ಚಿತ ತಾತ್ವಿಕ ಹಿನ್ನೆಲೆಯನ್ನಿಟ್ಟುಕೊಂಡು(ಒಬ್ಬ ಅಥವಾ ಅನೇಕರ) ವಚನಗಳನ್ನು ಜೋಡಿಸಿದ ಸ್ಥಲಕಟ್ಟಿನ ಕೃತಿಗಳು ಸಂಕಲನ ಎನಿಸಿಕೊಳ್ಳುತ್ತವೆ. ವಚನಗಳನ್ನು ಸಂವಾದ ರೂಪದಲ್ಲಿ ಜೋಡಿಸಿದ ಕೃತಿಗಳು 'ಸಂಪಾದನೆ' ಎಂದು ಕರೆಸಿಕೊಳ್ಳುತ್ತವೆ"[೨೭] ಎಂದು ಎಂ.ಎಂ.ಕಲಬುರ್ಗಿ ಅವರು ಹೇಳಿದ್ದಾರೆ. "ಮೂರು ಘಟ್ಟಗಳಲ್ಲಿ ಕ್ರಮಿಸಿದ ಸಮಗ್ರ ವಚನ ಸಂಪಾದನ ಸಾಹಿತ್ಯವನ್ನು ಸ್ವರೂಪದ ದೃಷ್ಟಿಯಿಂದ ಆರ್.ಸಿ.ಹಿರೇಮಠರು ಸಂಕಲನಗಳು, ತಾತ್ವಿಕ ಸಂಕಲನಗಳು ಮತ್ತು ಸಂಪಾದನೆಗಳು ಎಂದು ಮೂರು ವಿಧವಾಗಿ ಕರೆದರೆ; ಕಲಬುರ್ಗಿ ಅವರು ಸಂಗ್ರಹ, ಸಂಕಲನ, ಸಂಪಾದನೆ ಎಂದು ವಿಭಜಿಸಿದ್ದಾರೆ".[೨೮] ಆರ್.ಸಿ.ಹಿರೇಮಠ

ಹಾಗೂ ಎಂ.ಎಂ.ಕಲಬುರ್ಗಿಯವರ ವಿಭಜನಕ್ರಮ ಮೇಲ್ನೋಟಕ್ಕೆ ಬೇರೆ ಎನಿಸಿದರೂ ಎರಡು ಒಂದೇ ಅರ್ಥವನ್ನೊಳಗೊಂಡಿವೆ. ಎಂ.ಎಂ.ಕಲಬುರ್ಗಿ ಅವರ ವಚನ ಸಾಹಿತ್ಯ ಸಂಪಾದನೆಯನ್ನು ವಚನ ಸಂಗ್ರಹ ಸಂಪಾದಿತ ಕೃತಿಗಳು, ವಚನ ಸಂಕಲನ ಸಂಪಾದಿತ ಕೃತಿಗಳು, ವಚನ ಸಂಪಾದನ ಸಂಪಾದಿತ ಕೃತಿಗಳು ಎಂದು ಸ್ಥೂಲವಾಗಿ ವರ್ಗೀಕರಿಸಬಹುದು.

೧. ವಚನ ಸಂಗ್ರಹ ಸಾಹಿತ್ಯ ಸಂಪಾದಿತ ಕೃತಿಗಳು

ಅ. ಬಸವಣ್ಣನವರ ವಚನ ಸಂಪುಟ

ಆ. ಸಂಕೀರ್ಣ ವಚನ ಸಂಪುಟ

ಇ. ಸಿದ್ಧರಾಮಯ್ಯದೇವರ ವಚನಗಳು(ಇತರರೊಂದಿಗೆ)

ಈ. ವಚನ

೨. ವಚನ ಸಂಕಲನ ಸಾಹಿತ್ಯ ಸಂಪಾದಿತ ಕೃತಿಗಳು

೧. ಬಸವಸ್ತೋತ್ರದ ವಚನಗಳು

೨. ಬಸವಣ್ಣನವರ ಟೀಕಿನ ವಚನಗಳು, ಸಂ.೧

೩. ಬಸವಣ್ಣನವರ ಟೀಕಿನ ವಚನಗಳು, ಸಂ.೨

೪. ಚೆನ್ನಬಸವಣ್ಣನವರ ಷಟ್‌ಸ್ಥಲ ವಚನ ಮಹಾಸಂಪುಟ

೫. ವಚನ ಸಂಕಲನ ಸಂಪುಟ ೪

೬. ವಚನಶಾಸ್ತ್ರ ಸಾರ(ಇತರರೊಂದಿಗೆ)

೭. ವಚನ ಸಂಕಲನ ಸಂಪುಟ ೬

೮. ಪರಮಾನಂದ ಸುಧೆ(ಇತರರೊಂದಿಗೆ)

೯. ಏಕೋತ್ತರ ಷಟ್‌ಸ್ಥಲ

೩. ವಚನ ಸಾಹಿತ್ಯ ಸಂಪಾದನ ಕೃತಿ

೧. ಶೂನ್ಯಸಂಪಾದನೆ

೪. ಇತರ ಸಂಪಾದನ ಕೃತಿಗಳು

೧. ಬಸವಮಾರ್ಗ ೧

೨. ಬಸವಮಾರ್ಗ ೨

೩. ಬಸವಮಾರ್ಗ ೩(ಶಿವಶರಣರ ಕಾಯಕ ಸಿದ್ಧಾಂತ)

೪. ವಚನ ಸಾಹಿತ್ಯ ಪ್ರಕಟಣ ಇತಿಹಾಸ

೫. ಸ್ವರವಚನ ವಿಚಾರ ಸಂಕಿರಣ

೬. ವಚನ ಸಾಹಿತ್ಯ ಪ್ರಾಚೀನ ಆಕರಕೋಶ

ಈ ಕೃತಿಗಳ ಜೊತೆಗೆ 'ವಚನವರ್ಷ' ದಿನಕ್ಕೊಂದು ವಚನ ಎಂಬ ಕೃತಿಯನ್ನು ಎಂ.ಎಂ.ಕಲಬುರ್ಗಿ ಅವರ ಮರಣಾನಂತರ ಅವರ ಆಸೆಯಂತೆ ಶ್ರೀಮತಿ ಉಮಾದೇವಿ ಕಲಬುರ್ಗಿ ಅವರು ಎಂ.ಎಂ.ಕಲಬುರ್ಗಿ ಅವರ ಹೆಸರಲ್ಲೆ ಸಂಪಾದಿಸಿದ್ದಾರೆ. ಪ್ರತಿಯೊಬ್ಬ ವ್ಯಕ್ತಿ ದಿನಕ್ಕೊಂದು ವಚನದಂತೆ ೩೬೫ ದಿನಗಳು ೩೬೫ ವಚನಗಳನ್ನು ಓದಬೇಕು. ಹಾಗೆಯೇ ಬಸವತತ್ವವನ್ನು ಪರಿಪಾಲನೆ ಮಾಡಬೇಕೆಂಬುದು ಈ ಕೃತಿಯ ಮಹತ್ವವಾಗಿದೆ.

ಎಂ.ಎಂ.ಕಲಬುರ್ಗಿ ಅವರ ವಚನಸಾಹಿತ್ಯ ಕೃತಿಗಳನ್ನು(ಇತರ ಸಂಪಾದನ ಕೃತಿಗಳನ್ನು ಹೊರತುಪಡಿಸಿ) ಗ್ರಂಥಸಂಪಾದನೆಯ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದು ಈ ಅಧ್ಯಯನದ ಮೂಲ ಉದ್ದೇಶವಾಗಿದೆ.

### ೧. ವಚನ ಸಂಗ್ರಹ ಸಾಹಿತ್ಯ ಸಂಪಾದಿತ ಕೃತಿಗಳು

'ಸಂಗ್ರಹ' ಎಂಬ ಪದಕ್ಕೆ ವಿಶ್ವಕೋಶಗಳಲ್ಲಿ ಒಟ್ಟುಗೂಡಿಸುವುದು, ರಾಶಿ, ದಾಸ್ತಾನು ಮುಂತಾದ ಅರ್ಥಗಳಿವೆ. ದೊರೆತಂತಹ ಮಾಹಿತಿಯನ್ನು ಇರುವಂತೆಯೇ ಯಥಾವತ್ತಾಗಿ ಒಂದೆಡೆ ಸಂಗ್ರಹಿಸುವ ಪ್ರಕ್ರಿಯೆಯೇ ಸಂಗ್ರಹ. ವೀರಣ್ಣ ರಾಜೂರ ಅವರು "ಯಾವುದೇ ತಾತ್ವಿಕ ಹಿನ್ನೆಲೆಯಲ್ಲದೇ ಒಬ್ಬೊಬ್ಬ ವಚನಕಾರ ಅಥವಾ ವಚನಕಾರ್ತಿಯರ ವಚನಗಳನ್ನು ಅಳವಡಿಸಿದ ಕೃತಿಗಳು ಸಂಗ್ರಹಗಳೆನಿಸುತ್ತವೆ"[೨೯] ಎಂದಿದ್ದಾರೆ. ಇದು ಸಾಮಗ್ರಿಮುಖಿಯಾದದ್ದು. "ವಚನಗಳ ಸಂಗ್ರಹಕಾರ್ಯ(೨ನೇ ಶತಮಾನದಲ್ಲಿ ವಚನ ಭಂಡಾರಿ ಶಾಂತರಸನ ನೇತೃತ್ವದಲ್ಲಿ ನಡೆಯುತ್ತಿದ್ದಿತೆಂದು ಪ್ರತೀತಿ. ಹೀಗೆ ಹೇಳಲು ಒಂದೆರಡು ಆಧಾರಗಳು ಸಿಗುತ್ತವೆ. ಆದರೆ ಇದರ ಒಂದು ಗಂಭೀರ ಪ್ರಯತ್ನ ಪ್ರಾರಂಭವಾದುದು ೧೫ನೇ ಶತಮಾನದಲ್ಲಿ. ನೂರೊಂದು ವಿರಕ್ತರ ನೇತೃತ್ವದಲ್ಲಿ ಈ ಕೆಲಸ ನಡೆಯಿತೆಂದು ಕೆಲವು ವಿದ್ವಾಂಸರು ಹೇಳುತ್ತಿದ್ದರೂ ಇವರು ಇಂದಿಗೂ ಒಂದು ಒಗಟಾಗಿ ಉಳಿದಿದ್ದಾರೆ. ಅದೇನೇ ಇದ್ದರೂ ವಚನಗಳ ಸಂಗ್ರಹಕ್ಕೆ ಸಂಬಂಧಪಟ್ಟಂತೆ ಬಹುಶಃ ಈ ಕಾಲದ ದೊಡ್ಡ ಪ್ರಯತ್ನವೆಂದರೆ 'ಸಕಲ ಪುರಾತನರ ವಚನ' ಕಟ್ಟುಗಳ ರಚನೆ. ಇವು ಕೋಲಶಾಂತಯ್ಯ, ಬಸವಣ್ಣ, ಗೋಗವ್ವೆಯರ ವಚನಗಳಿಂದ ಪ್ರಾರಂಭವಾಗುವ ಮೂರು ತೆರನಾದ ಕಟ್ಟುಗಳು. ಪ್ರತಿಯೊಬ್ಬ ಶರಣನ ಹೆಸರಿನ ಕೆಳಗೆ

ದೊರೆತಷ್ಟು(ಅಥವಾ ತಮಗೆ ಅವಶ್ಯವೆನಿಸಿದಷ್ಟು) ವಚನಗಳನ್ನು ಇಲ್ಲಿ ಸಂಗ್ರಹಿಸಿದ್ದಾರೆ." ಇದೇ ಲೇಖನದಲ್ಲಿ ಮುಂದುವರಿದು ಏಕವ್ಯಕ್ತಿಗೆ ಸಂಬಂಧಪಟ್ಟಂತೆ ಸಿದ್ಧರಾಮ, ಮಹಾದೇವಿ, ಗಣದಾಸಿ ವೀರಣ್ಣ ಮೊದಲಾದ ಶರಣರ ಹೆಸರಿನಲ್ಲಿ ವಚನವನ್ನು ಸಂಗ್ರಹಿಸಿದ ಬಿಡಿ ಕಟ್ಟುಗಳು ಸಿಗುತ್ತವೆ. ಇವುಗಳನ್ನು 'ಏಕಪುರಾತನ ವಚನ'ವೆಂದು ಕರೆಯಬಹುದು. ಇಲ್ಲಿ ಸಂಗ್ರಹ ಕಾರ್ಯ ಸಕಲಪುರಾತನರ ವಚನಕಟ್ಟು ಹಾಗೂ ಏಕಪುರಾತನ ವಚನಕಟ್ಟು ಎಂದು ಎರಡು ತೆರನಾಗಿರುವುದು ಕಂಡುಬರುತ್ತದೆ. ನೂರೊಂದು ವಿರಕ್ತರ ನೇತೃತ್ವದಲ್ಲಿ ಆದ ಈ ರೀತಿಯ ಸಂಗ್ರಹಕಾರ್ಯದ ವೈಧಾನಿಕತೆಗೆ ಅನುಗುಣವಾಗಿ ಹಲವು ವಿದ್ವಾಂಸರು ಸಂಗ್ರಹ ಕೃತಿಗಳನ್ನು ಹೊರತಂದಿದ್ದಾರೆ. ಇದಕ್ಕೆ ಎಂ.ಎಂ.ಕಲಬುರ್ಗಿ ಅವರು ಹೊರತಾಗಿಲ್ಲ. ಈ ಹಿಂದೆ ಸೂಚಿಸಿದಂತೆ ಇವರು ೪ ಸಂಗ್ರಹ ಕೃತಿಗಳನ್ನು ಪ್ರಕಟಿಸಿದ್ದಾರೆ. ಅವುಗಳನ್ನು ಕೆಳಕಂಡಂತೆ ವಿಶ್ಲೇಷಿಸಲಾಗಿದೆ.

**ಬಸವಣ್ಣನವರ ವಚನ ಸಂಪುಟ:** ಸಮಗ್ರ ವಚನ ಸಾಹಿತ್ಯ ಜನಪ್ರಿಯ ಆವೃತ್ತಿ ಪ್ರಕಟಣ ಯೋಜನೆಯಲ್ಲಿ ಸಂಪಾದನೆಗೊಂಡ ಈ ಸಂಪುಟ ೧೯೯೩ರಲ್ಲಿ ಪ್ರಥಮ ಆವೃತ್ತಿಯಾಗಿ ೨೦೦೧ರಲ್ಲಿ ದ್ವಿತೀಯ ಆವೃತ್ತಿಯಾಗಿ, ೨೦೧೭ರಲ್ಲಿ ಬೈಬಲ್ ಮಾದರಿಯ ತೃತೀಯ ಆವೃತ್ತಿಯಾಗಿ ಪ್ರಕಟಗೊಂಡಿದೆ. ಈ ೩ ಆವೃತ್ತಿಗಳ ಪರಿಷ್ಕರಣವನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ಗ್ರಂಥ ಸಂಪಾದನೆ ವಿಧಾನದ ದೃಷ್ಟಿಯಿಂದ ಮತ್ತು ಸಂಪಾದನೆಯ ಹಿಂದಿರುವ ಜನಪದ ಆಶಯದ ದೃಷ್ಟಿಯಿಂದ ಈ ಸಂಪುಟವನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಈ ಕೃತಿಯನ್ನು ಸಂಪಾದಿಸಿದ ಎಂ.ಎಂ.ಕಲಬುರ್ಗಿ ಅವರು ೧೨ ಪುಟಗಳ ವಿದ್ವತ್‌ಪೂರ್ಣ ಪ್ರಸ್ತಾವನೆಯನ್ನು ಬರೆದಿದ್ದಾರೆ. ಪ್ರಥಮವಾಗಿ ಸಮಾಜೋ–ಧಾರ್ಮಿಕ ಆಂದೋಲನ ಕನ್ನಡ ನೆಲದ ಮೇಲೆ ಜರುಗಿದ್ದು, ೧೨ನೆಯ ಶತಮಾನ. ಈ ಆಂದೋಲನದ ನಾಯಕ ವ್ಯಕ್ತಿ ಬಸವಣ್ಣ. ಈತ ಬರೆದದ್ದು ಕನ್ನಡದಲ್ಲಿ, ಬದುಕಿದ್ದು ಕನ್ನಡ ನಾಡಿನಲ್ಲಿ. ಹೀಗಿದ್ದು ಜಾಗತಿಕ ಪ್ರಸಿದ್ಧ ವಚನ ಸಾಹಿತ್ಯಕ್ಕೆ ಅಥವಾ ವಚನಕಾರರಿಗೆ ಸಿಗದಿರುವುದಕ್ಕೆ ಆಶ್ಚರ್ಯ ವ್ಯಕ್ತಪಡಿಸಿರುವ ಸಂಪಾದಕರು ವಚನಸಂಸ್ಕೃತಿ ಜಾಗತಿಕ ಸಂಸ್ಕೃತಿಯಾಗಿ ಮನ್ನಣೆಯನ್ನು ಪಡೆದ ರೀತಿಯನ್ನು ತಮ್ಮದೇ ಆದ ಅಧ್ಯಯನದ ತಿಳುವಳಿಕೆಯಲ್ಲಿ ಹೀಗೆ ನಿರೂಪಿಸಿದ್ದಾರೆ. "ಜಾಗತಿಸುವ ಮೂಲಕ ಬಸವಣ್ಣ ಕೇವಲ ಮಹಾಪುರುಷನಾಗಿ ಉಳಿಯದೇ, ಯುಗಪುರುಷನಾಗಿಯೂ ಬೆಳೆದಿದ್ದಾನೆ. ಸಾಮಾನ್ಯವಾಗಿ ಯುಗಪುರುಷರು ಸಾಮಾಜಿಕ, ಧಾರ್ಮಿಕ, ಸಾಹಿತ್ಯ ಹೀಗೆ ಜೀವನದ ಯಾವುದೋ ಒಂದು ಕ್ಷೇತ್ರಕ್ಕೆ ಹೊಸ ತಿರುವು ಕೊಟ್ಟ ಕಾರಣ, ಅವರು ಒಂದು ಕ್ಷೇತ್ರಕ್ಕೆ ಹೊಸ ತಿರುವು ತಂದು ಕೊಡುತ್ತಾರೆ. ಬಸವಣ್ಣ ಇಂಥ ಎಲ್ಲ ಕ್ಷೇತ್ರಗಳಿಗೂ ಹೊಸ ತಿರುವು ಕೊಟ್ಟ ಕಾರಣ, ಅವರು ಒಂದು ಕ್ಷೇತ್ರದ ಯುಗಪುರುಷರೆನಿಸದೆ, ಜೀವನದ ಎಲ್ಲ ಕ್ಷೇತ್ರಗಳ ಯುಗಪುರುಷರೆನಿಸಿದ್ದಾರೆ.

ಹೀಗಾಗಿ ಅವರನ್ನು ಜಗತ್ತು ಕಂಡ ಒಬ್ಬ ಅಪರೂಪದ 'ಸಮಗ್ರಯುಗಪುರುಷ'ರೆಂದು ಗುರುತಿಸಲಾಗುತ್ತಿದೆ."[೩೧] ಹೀಗೆ ಬಸವಣ್ಣನವರ ವ್ಯಕ್ತಿತ್ವವನ್ನು ನಿರೂಪಿಸುವುದರ ಮೂಲಕ ಬಸವಪೂರ್ವ ಯುಗದ ಕರ್ನಾಟಕದ ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕ ಸಂಗತಿಗಳನ್ನು ರಾಜಸತ್ತೆ, ಮತಸತ್ತೆ ಹೆಸರಿನಲ್ಲಿ ಚರ್ಚಿಸುತ್ತಾರೆ. ಜೊತೆಗೆ ಬಸವಣ್ಣನವರ ವೈಯಕ್ತಿಕ ಬದುಕಿನ ಇತಿಹಾಸವನ್ನು ಇಲ್ಲಿ ಪರಿಶೀಲಿಸಿದ್ದಾರೆ. ಒಟ್ಟಿನಲ್ಲಿ ಒಂದು ಸಾಹಿತ್ಯ ಕೃತಿಯ ಅಧ್ಯಾಯವನ್ನು ವ್ಯಕ್ತಿಶೋಧ, ಸಮಾಜಶೋಧ, ಮೌಲ್ಯಶೋಧ ಮತ್ತು ಸೌಂದರ್ಯ ಶೋಧದ ನೆಲೆಗಳಲ್ಲಿ ಅಧ್ಯಯನ ಮಾಡುವ ಉಪಕ್ರಮವನ್ನು ಈ ಕೃತಿ ಸಂಪಾದನೆಯ ಹಿಂದಿನ ಆಶಯವನ್ನು ತಮ್ಮ ಪ್ರಸ್ತಾವನೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಬಸವಣ್ಣನವರ ವಚನಗಳನ್ನು ಈ ಸಂಪುಟದಲ್ಲಿ ಷಟ್‌ಸ್ಥಲದ ವಚನ ಮತ್ತು ಹೆಚ್ಚಿನ ವಚನ ಎಂದು ಎರಡು ಕಾಂಡಗಳಲ್ಲಿ ಸಂಪಾದಿಸಿಕೊಟ್ಟಿದ್ದಾರೆ. ಷಟ್‌ಸ್ಥಲದ ವಚನಗಳು ೯೬೦, ಹೆಚ್ಚಿನ ವಚನಗಳು ೪೫೪, ಒಟ್ಟು ೧೪೧೪ ವಚನಗಳನ್ನು ಇಲ್ಲಿ ಸಂಪಾದಿಸಿಕೊಡಲಾಗಿದೆ. (ನನ್ನ ಈ ವಿಶ್ಲೇಷಣೆಗೆ ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿದ ೨೦೦೧ರ ಆವೃತ್ತಿಯನ್ನು ಬಳಸಿಕೊಂಡಿದ್ದೇನೆ.) ಕಾಂಡ ಒಂದಕ್ಕೆ ಷಟ್‌ಸ್ಥಲದ ವಚನಗಳು ಪ್ರಕಟವಾದ ಇತಿಹಾಸವನ್ನು ಮರಿಶಂಕರ ದೇವರು. ೧೮೮೯ರಲ್ಲಿ ಪ್ರಕಟಿಸಿದ ಬಸವಣ್ಣನವರ ವಚನಗಳು, ಶಿ.ಶಿ.ಬಸವನಾಳ ಅವರು ೧೯೫೧ರಲ್ಲಿ ಪ್ರಕಟಿಸಿದ ಬಸವಣ್ಣನವರ ಷಟ್‌ಸ್ಥಲದ ವಚನಗಳು, ಫ.ಗು.ಹಳಕಟ್ಟಿ ಅವರು ೧೯೨೬ರಲ್ಲಿ ಶ್ರೀ ಬಸವೇಶ್ವರ ವಚನಗಳು, ಆರ್.ಸಿ.ಹಿರೇಮಠ ಅವರು ೧೯೬೮ರಲ್ಲಿ ಭಕ್ತಿ ಭಂಡಾರಿ ಬಸವಣ್ಣನವರ ವಚನಗಳು, ಎಂ.ಎಂ.ಕಲಬುರ್ಗಿ ಅವರು ೧೯೮೧ರಲ್ಲಿ ಬಸವಣ್ಣನವರ ಟೀಕಿನ ವಚನಗಳು, ಎಲ್.ಬಸವರಾಜು ಅವರು ೧೯೯೦ರಲ್ಲಿ ಬಸವಣ್ಣನವರ ಷಟ್‌ಸ್ಥಲದ ವಚನಗಳು. ಈ ಪ್ರಕಟಿತ ಕೃತಿಗಳನ್ನಲ್ಲದೆ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ೫೧ನೇ ನಂಬರಿನ ತಾಳೆಗರಿಯ ಹಸ್ತಪ್ರತಿಯನ್ನು ಆಧಾರವಾಗಿಟ್ಟುಕೊಂಡು ಸಂಪಾದಿಸಲಾಗಿದೆ. ಈ ಎಲ್ಲಾ ಕೃತಿಗಳ ವಚನ ಸಂಖ್ಯೆಯ ವ್ಯತ್ಯಾಸವನ್ನು ಗುರುತಿಸಿರುವ ಎಂ.ಎಂ.ಕಲಬುರ್ಗಿ ಅವರು ತಮ್ಮ ಸಂಪಾದಿತ ಕೃತಿಗಳಲ್ಲಿ ವಚನ ಸಂಖ್ಯೆ ಮತ್ತು ವಚನಗಳ ಪುನರುಕ್ತಿಗಳಲ್ಲಿ ಸಮಸ್ಯೆಯಾಗದಂತೆ ಎಚ್ಚರ ವಹಿಸಿದ್ದಾರೆ. ಆದರೆ ವಚನಗಳ ಪಾಠ ಸಮಸ್ಯೆ ಬಂದಾಗ ಉತ್ತಮವಾದ ಪಾಠಗಳನ್ನು ಶೋಧಿಸಿ ಯೋಚಿಸಿ ಸಂಪಾದನ ಗುಣಮಟ್ಟವನ್ನು ಹೆಚ್ಚಿಸಲು ಪ್ರಯತ್ನಿಸಿದ್ದಾರೆ. ಎಂ.ಎಂ.ಕಲಬುರ್ಗಿ ಅವರು "ಇಲ್ಲಿರುವುದು ವಚನಗಳ ಪಾಠ ಸಮಸ್ಯೆ ಹೀಗಾಗಿ ಅನೇಕ ಕಡೆಗಳಲ್ಲಿ ಉತ್ತಮ ಪಾಠಗಳನ್ನು ಶೋಧಿಸಿ, ಯೋಚಿಸಿ ಆವೃತ್ತಿಯ

ಗುಣಮಟ್ಟವನ್ನು ಹೆಚ್ಚಿಸಲು ಪ್ರಯತ್ನಿಸಿದ್ದೇವೆ"೩೨ ಎಂದು ಪ್ರಸ್ತಾವನೆಯಲ್ಲಿ ತಿಳಿಸಿದ್ದಾರೆ. ಇಲ್ಲಿ ಪಾಠಾಂತರಗಳನ್ನು ನೀಡಲಾಗಿಲ್ಲ. ಹಾಗಾಗಿ ಹಿಂದಿನ ವಿದ್ವತ್ ಆವೃತ್ತಿಗಳ ಪಾಠಗಳ ಜೊತೆಯಲ್ಲಿ ಇಟ್ಟು ಪರಿಶೀಲಿಸಿದಾಗ ಎಂ.ಎಂ.ಕಲಬುರ್ಗಿ ಅವರ ಆವೃತ್ತಿಯ ಉತ್ತಮ ಪಾಠ ಕಂಡುಬಂದಿರುವುದನ್ನು ನಾವು ಗುರುತಿಸಬಹುದು. ಉದಾಹರಣೆಗೆ

ಗುರುವಚನವಲ್ಲದೆ ಜಂಗಮವೆಂದೆನಿಸದು
ಗುರುವಚನವಲ್ಲದೆ ನಿತ್ಯವೆಂದೆನಿಸದು
ಗುರುವಚನವಲ್ಲದೆ ನೇಮವೆಂದೆನಿಸದು
ತಲೆಯಿಲ್ಲದ ಅಚ್ಚಿಗೆ ಪಟ್ಟವ ಕಟ್ಟುವ
ಉಬಯ ಭ್ರಷ್ಟರ ಮೆಚ್ಚುವನೆ, ನಮ್ಮ ಕೂಡಲಸಂಗಮದೇವ"೩೩

ಇದು ಕಾಂಡ ೧ರ ೭ನೇ ಷಟ್‌ಸ್ಥಲ ವಚನ. ಈ ವಚನದಲ್ಲಿನ ೨ನೇ ಪಾದ 'ಗುರುವಚನವಲ್ಲದೆ ಜಂಗಮವೆಂದೆನಿಸದು' ಅಚ್ಚಾಗಿರಲಿಲ್ಲ. ಆದರೆ ಎಂ.ಎಂ.ಕಲಬುರ್ಗಿ ಅವರು ಇದಕ್ಕೆ ಯೋಗ್ಯಪಾಠವನ್ನು ನೀಡಲು ಪ್ರಯತ್ನಿಸಿದ್ದಾರೆ.

ಹೆಚ್ಚಿನ ವಚನಗಳು ಇರುವ ಕಾಂಡ ೨ರಲ್ಲಿ ವಚನಗಳನ್ನು ಅಕಾರಾದಿಯಾಗಿ ಜೋಡಿಸಲಾಗಿದೆ. ಆದರೆ ಈ ಅಕಾರಾದಿ ಜೋಡಣೆಯನ್ನು ಕಾಂಡ ಒಂದರಲ್ಲಿ ಕಾಣಲು ಶಕ್ಯವಿಲ್ಲ. ಆದರೆ ಶಿ.ಶಿ.ಬಸವನಾಳರು ಷಟ್‌ಸ್ಥಲದ ವಚನಗಳನ್ನು ಅಕಾರಾದಿಯಾಗಿ ಕೊಟ್ಟಿದ್ದಾರೆ. ನಂತರ ಹೆಚ್ಚಿನ ವಚನಗಳನ್ನು ಸೇರಿಸಿ ಕಠಿಣ ಶಬ್ದಗಳ ಅರ್ಥಗಳನ್ನು ನೀಡಿದ್ದಾರೆ. ಷಟ್‌ಸ್ಥಲ ವಚನಗಳನ್ನು ಅಕಾರಾದಿಯಾಗಿ ಕೊಡುವ ಪ್ರಶ್ನೆಯೇ ಉದ್ಭವಿಸುವುದಿಲ್ಲ ಎಂಬುದು ಎಂ.ಎಂ. ಕಲಬುರ್ಗಿ ಅವರಿಗೆ ಸ್ಪಷ್ಟವಾಗಿ ತಿಳಿದ ವಿಚಾರವಾಗಿದೆ. ಏಕೆಂದರೆ ಇಲ್ಲಿ ಸಿದ್ಧಾಂತ ಮುಖ್ಯ. ಲಿಂಗಾಯತ ಧರ್ಮದ ಷಟ್‌ಸ್ಥಲ ಸಿದ್ಧಾಂತಗಳಾದ ಭಕ್ತ, ಮಹೇಶ, ಪ್ರಸಾದ, ಪ್ರಾಣಲಿಂಗಿ, ಶರಣ, ಐಕ್ಯ ಸ್ಥಲಗಳಲ್ಲಿ ಮತ್ತೆ ಸ್ಥಲವಿನ್ಯಾಸಗಳು ಅವುಗಳಲ್ಲಿ ಸಂಬಂಧಿಸಿದ ಸಿದ್ಧಾಂತಗಳನ್ನು ಕುರಿತು ಇಲ್ಲಿಯ ವಚನಗಳು ಪ್ರತಿಪಾದಿಸುವುದರಿಂದ ಈ ವಚನಗಳನ್ನು ಅಕಾರಾದಿ ಬದಲಾಗಿ ಸಿದ್ಧಾಂತಗಳ ನೆಲೆಯಲ್ಲಿ ಸಂಪಾದಿಸುವ, ಅಧ್ಯಯನ ಮಾಡುವ ಉಪಕ್ರಮವನ್ನು ಕಾಣಬಹುದು. ಆದರೆ ಹೆಚ್ಚಿನ ವಚನಗಳು ಸಾಮಾನ್ಯವಾಗಿ ಪ್ರಕ್ಷಿಪ್ತತೆ, ಪುನರುಕ್ತಿ, ಮುದ್ರಿಕೆಯ ಪಲ್ಲಟ, ಒಂದು ವಚನ ಎರಡಾಗಿರುವುದು ಅಥವಾ ಎರಡು ವಚನಗಳು ಒಂದಾಗಿರುವುದು ಕಂಡುಬರುತ್ತದೆ. ಈ ಎಲ್ಲ ದೋಷಗಳನ್ನು ಪಾಠಪರಿಷ್ಕರಣದ ವಿಧಾನಗಳ ಹಿನ್ನೆಲೆಯಲ್ಲಿ ಚರ್ಚಿಸಿ ಸಂಪಾದನೆ ಮಾಡಿಕೊಟ್ಟಿರುವುದು ಇಲ್ಲಿಯ ವೈಶಿಷ್ಟ್ಯವಾಗಿದೆ.

ಎಂ.ಎಂ.ಕಲಬುರ್ಗಿ ಅವರು ಸರ್ಕಾರದ ಆವೃತ್ತಿಯಲ್ಲಿ ವಚನಗಳನ್ನು ಒಂದೇ ಮಗ್ಗುಲಿಗೆ ಅಚ್ಚು ಹಾಕಿಸಿದ್ದಾರೆ. ಜೊತೆಗೆ ಜನಪ್ರಿಯ ಆವೃತ್ತಿ ಆಗಿರುವುದರಿಂದ ಪಾಠಾಂತರಗಳನ್ನು ಅಡಿಯಲ್ಲಿ ನಿಡದೇ ಯೋಗ್ಯಪಾಠ ಸ್ವೀಕರಿಸಿ ಪರಿಷ್ಕರಿಸಿದ್ದುದರಿಂದ ಓದುಗರಿಗೆ ಪರಿಷ್ಕರಣದ ಸುಳಿವು ಗೋಚರವಾಗುವುದಿಲ್ಲ. ಪಾಠಾಂತರಗಳನ್ನು ಅಡಿಯಲ್ಲಿ ಸೂಚಿಸಿದ್ದರೆ ಅಭ್ಯಾಸಿಗಳಿಗೂ, ಸಂಶೋಧಕರಿಗೂ ಮುಂದಿನ ತಲೆಮಾರಿನ ಸಂಪಾದಕರಿಗೂ ತುಂಬಾ ಉಪಯುಕ್ತವಾಗುತ್ತಿತ್ತು. ಇವರ ಪಾಠಾಂತರಗಳನ್ನು ಗುರುತಿಸಬೇಕಾದರೆ ಕನ್ನಡ ವಿಶ್ವವಿದ್ಯಾಲಯದ ಆವೃತ್ತಿಯ ಅಡಿಯಲ್ಲಿ ನೀಡಿದ ಪಾಠಾಂತರಗಳನ್ನು ಗಮನಿಸಿದಾಗ ತಿಳಿದುಬರುತ್ತದೆ.

ಉದಾಹರಣೆಗೆ: ಬೆಕ್ಕು ಮುಟ್ಟಿಗೆ, ಹಸರಂಬಲಿಮುಟ್ಟಿಗೆ(ಎಂ.ಎಂ.ಕಲಬುರ್ಗಿ, ಅವೃತ್ತಿ ೩, ವಚನಸಂಖ್ಯೆ ೫೫೫, ಪು.೫೨

ಬೆಕ್ಕು ಮುಟ್ಟಿಗೆ, ಹಸರಂಬಲಿಮುಟ್ಟಿಗೆ(ಕನ್ನಡ ವಿಶ್ವವಿದ್ಯಾಲಯದ ಆವೃತ್ತಿ, ವಚನ ಸಂಖ್ಯೆ ೫೫೪, ಪು.೨೨೨)

ಹೀಗೆ ಕನ್ನಡ ವಿಶ್ವವಿದ್ಯಾಲಯದ ಆವೃತ್ತಿಯ ಪಾಠಾಂತರಗಳನ್ನು ಗಮನಿಸಿದಾಗ ಎಂ.ಎಂ.ಕಲಬುರ್ಗಿ ಅವರ ಪರಿಷ್ಕರಣದ ಯೋಗ್ಯಪಾಠದ ಅರಿವು ನಮಗಾಗುತ್ತದೆ. ಇದು ಜನಪ್ರಿಯ ಆವೃತ್ತಿ ಆಗಿರುವುದರಿಂದ ಪಾಠಾಂತರಗಳನ್ನು ಅಡಿಯಲ್ಲಿ ನೀಡದೇ ಈ ಕೃತಿ ಸಂಪಾದನೆ ಮಾಡಿರುವುದು ಸಂಪಾದಕರ ಒಂದು ವೈಶಿಷ್ಟ್ಯತೆ ಎನ್ನಬಹುದು. ಎರಡನೇ ಆವೃತ್ತಿಯಲ್ಲಿ ವಚನಗಳ ಪಾಠವನ್ನು ಮತ್ತೆ ಪರಿಷ್ಕರಣೆಗೊಳಪಡಿಸಿ ಶುದ್ಧೀಕರಿಸಿದ್ದಾರೆ. ಕೆಲವು ವಚನಗಳಿಗೆ ಊಹಾತ್ಮಕ ಪರಿಷ್ಕರಣೆ ಮಾಡಿದ್ದಾರೆ. ಉದಾಹರಣೆಗೆ ಸತ್ಯ(ಶುದ್ಧ)ವುಳ್ಳವರಿಗೆ ಗುರುವಿಲ್ಲ(೨ನೇ ಆವೃತ್ತಿ, ವಚನಸಂಖ್ಯೆ ೯೩೫) ಈ ರೀತಿಯಾಗಿ ಊಹಾತ್ಮಕ ಪರಿಷ್ಕರಣೆ ಅವಶ್ಯವೆನಿಸಿದ್ದಲ್ಲಿ ಮಾಡಿದ್ದಾರೆ.

ಎಂ.ಎಂ.ಕಲಬುರ್ಗಿ ಅವರು ೧೯೯೩ರಲ್ಲಿ ಬಸವಣ್ಣನವರ ವಚನ ಸಂಪುಟ ಪರಿಷ್ಕರಣೆ ಮಾಡುವ ಮೂಲಕ ಸಂಪಾದನೆ ಮಾಡಿದ್ದರೂ ಕೂಡ ೨೦೦೧ರ ೨ನೇ ಆವೃತ್ತಿಯ ಸಂದರ್ಭದಲ್ಲಿ ಮತ್ತೆ ಮರುಪರಿಷ್ಕರಣೆ ಮಾಡುವ ಮೂಲಕ ಸಂಪಾದಿಸಿದ್ದಾರೆ. ಹಾಗೆಯೇ ೩ನೇ ಆವೃತ್ತಿ ೨೦೧೬ರಲ್ಲಿ ಬೈಬಲ್ ಮುದ್ರಣ ಮಾದರಿಯಲ್ಲಿ ಪ್ರಕಟ ಮಾಡುವ ಸಂದರ್ಭದಲ್ಲಿ ಕೂಡ ೨ನೆಯ ಆವೃತ್ತಿಯಲ್ಲಿ ಉಳಿದುಕೊಂಡಿರುವ ಮುದ್ರಣ ದೋಷ ನಿವಾರಣೆ, ಪುನರುಕ್ತಿ ನಿವಾರಣೆ, ಕೃತಕ ವಚನ ನಿವಾರಣೆ ಮಾಡುವ ಮೂಲಕ ಹೊಸ ವಚನಗಳ ಸೇರ್ಪಡೆ, ಪಾಠಪರಿಷ್ಕರಣೆ ಇತ್ಯಾದಿ ಕೆಲಸಗಳನ್ನು ಶ್ರಮ ಶ್ರದ್ಧೆಯಿಂದ ಪೂರೈಸಿದ್ದೇವೆ. ಹಾಗೆಯೇ ಮುಂದುವರಿದು

"ಯಾರೇ ಮಾಡಿದರು ವಚನ ಪರಿಷ್ಕರಣವೆನ್ನುವುದು 'ಅಲ್ಪವಿರಾಮ, ಅರ್ಧವಿರಾಮಗಳ ಮೂಲಕ ಪೂರ್ಣವಿರಾಮದ ಕಡೆಗೆ ಸಾಗುವ ಕ್ರಿಯೆಯಾಗಿದೆ' ಎಂಬ ಸತ್ಯವನ್ನು ಸಹೃದಯರು ಅರ್ಥ ಮಾಡಿಕೊಳ್ಳಬೇಕೆಂದು ಕೋರುತ್ತೇವೆ"[೩೪] ಎಂದು ಬಿನ್ನವಿಸಿ ಕೊಂಡಿದ್ದಾರೆ.

**ಸಮಗ್ರ ವಚನ ಸಂಪುಟ**ವನ್ನು ಸಂಕೀರ್ಣ ವಚನ ಸಂಪುಟ ಒಂದು ಎಂದು ಕರೆದಿರುವುದಕ್ಕೆ ಕಾರಣಗಳು ಸ್ಪಷ್ಟವಾಗಿಯೇ ಇವೆ. ವಚನ ಪರಿಭಾಷಾಕೋಶವನ್ನು ಒಳಗೊಂಡಂತೆ ೧೫ ಸಂಪುಟಗಳ ವ್ಯಾಪ್ತಿಯಲ್ಲಿ ವಿಸ್ತಾರ ಪಡೆದಿರುವ ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿಗಳ ಮೊದಲ ೪ ಸಂಪುಟಗಳು ಬಸವಣ್ಣ, ಅಲ್ಲಮ, ಚೆನ್ನಬಸವಣ್ಣ, ಸಿದ್ಧರಾಮೇಶ್ವರರ ವಚನಗಳಿಗೆ ಸಂಬಂಧಿಸಿವೆ. ಈ ಮಹನೀಯರ ವಚನಗಳು ಹೆಚ್ಚು ಸಂಖ್ಯೆಯಲ್ಲಿ ರಚನೆಯಾಗಿದ್ದು, ಸಂಪುಟ ಸ್ವರೂಪವನ್ನು ಪಡೆದುಕೊಂಡಿದೆ. ಆದರೆ ಶಿವಶರಣೆಯರ ವಚನಗಳಾಗಲಿ, ಇತರೆ ಶರಣರ ವಚನಗಳಾಗಲಿ ಸಂಪುಟವಾಗುವಷ್ಟು ಹೆಚ್ಚಿನ ವಚನಗಳು ರಚನೆಯಾಗದ ಕಾರಣ ೨೪ ವಚನಕಾರರನ್ನು ಕೂಡಿಸಿ ೧ ಸಂಪುಟವನ್ನು ಸಿದ್ಧಪಡಿಸಲಾಗಿದೆ. ಹೀಗಾಗಿ ಸಂಕೀರ್ಣ ವಚನ ಸಂಪುಟಗಳ ೯ ಕೃತಿಗಳಾಗಿ ಈ ಯೋಜನೆಯಲ್ಲಿ ಆಕಾರ ಪಡೆದಿವೆ. ಹೀಗೆ ಸಂಕೀರ್ಣ ವಚನ ಸಂಪುಟ ೧ರ ಸಂಪಾದಕರಾಗಿ ಎಂ.ಎಂ.ಕಲಬುರ್ಗಿ ಅವರು ಮುಂದಿನ ಸಂಪುಟಗಳಲ್ಲಿ ಮಾರ್ಗಸೂಚಿಯನ್ನು ನೀಡಿದ್ದಾರೆ ಎನಿಸುತ್ತದೆ. ಅವರೇ ಹೇಳುವಂತೆ "ಸಮಗ್ರ ವಚನ ಸಾಹಿತ್ಯದ ಪ್ರಕಟಣ ಯೋಜನೆ ಒಂದು ಕೃತಿಯ ಪ್ರಕಟಣೆಯಲ್ಲಿ ೮೦೦ ವರ್ಷ ಕಾಲ ವ್ಯಾಪ್ತಿಯ ಒಂದು ಸಾಹಿತ್ಯ ಪ್ರಕಾರದ ಪ್ರಕಟಣೆಯಾಗಿದೆ. ಪ್ರಕಟವಾಗಿ ಹತ್ತು ಕಡೆ ಹಂಚಿಹೋದ, ಅಪ್ರಕಟಿತ ಸ್ಥಿತಿಯಲ್ಲಿ ಉಳಿದ, ಪಾಠಾಂತರ, ಪ್ರಕ್ಷಿಪ್ತತೆಗಳ ದಾಳಿಗೆ ಗುರಿಯಾಗುತ್ತಲೂ ಬಂದ ಈ ಸಾಹಿತ್ಯವನ್ನು ಸಂಗ್ರಹಿಸುವುದು, ಸಂಸ್ಕರಿಸುವುದು, ಸಂಯೋಜಿಸುವುದು ಶ್ರಮ ಶ್ರದ್ಧೆಗಳ ಕೆಲಸ ವಾಗಿದೆ. ಹೀಗಾಗಿ ಈ ಯೋಜನೆಗೆ ವಚನ ಸಾಹಿತ್ಯದ ಪ್ರಕಟಣ ಇತಿಹಾಸಕ್ಕೆ ಒಂದು ಐತಿಹಾಸಿಕ ಮಹತ್ವ ಸಲ್ಲುತ್ತದೆ."[೩೫]

ಸಂಕೀರ್ಣ ವಚನ ಸಂಪುಟ ಒಂದರಲ್ಲಿ ಬಸವಯುಗದ ಶರಣರ ವಚನಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಈ ಸಂಗ್ರಹದಲ್ಲಿ ಅಂಗಸೋಂಕಿನ ಲಿಂಗತಂದೆಗಳ ವಚನ(೧೧), ಅಂಬಿಗರ ಚೌಡಯ್ಯ ವಚನ(೨೭೮), ಅಗ್ಗವಣಿ ಹಂಪಯ್ಯಗಳ ವಚನ(೪), ಅಗ್ಗವಣಿ ಹೊನ್ನಯ್ಯಗಳ ವಚನ(೪), ಅಜಗಣ್ಣ ತಂದೆಗಳ ವಚನ(೧೦), ಅನಾಮಿಕ ನಾಚಯ್ಯಗಳ ವಚನ(೫), ಅಪ್ಪಿದೇವಯ್ಯಗಳ ವಚನ(೧), ಅಮರಗುಂಡಮಲ್ಲಿಕಾರ್ಜುನ ತಂದೆಗಳ ವಚನ(೨), ಅಮುಗೆದೇವಯ್ಯಗಳ ವಚನ(೩೦), ಅರಿವಿನ ಮಾರಿತಂದೆಗಳ ವಚನ(೩೦೯), ಅವಸರದ ರೇಕಣ್ಣಗಳ ವಚನ(೧೦೫), ಆದಯ್ಯಗಳ ವಚನ(೪೦೩), ಆನಂದಯ್ಯಗಳ ವಚನ(೨), ಆಯ್ದಕ್ಕಿ

ಮಾರಯ್ಯಗಳ ವಚನ(೪೨), ಉಗ್ಗಡಿಸುವ ಗಬ್ಬಿದೇವಯ್ಯಗಳ ವಚನ(೧೦), ಉಪ್ಪರಗುಡಿಯ ಸೋಮಿದೇವಯ್ಯಗಳ ವಚನ(೧೧), ಉರಿಲಿಂಗದೇವರ ವಚನ(೪೮), ಉರಿಲಿಂಗ ಪೆದ್ದಿಗಳ ವಚನ(೩೬೩), ಉಳಿಯಮೇಶ್ವರ ವಚನ, ಚಿಕ್ಕಣ್ಣಗಳ ವಚನ(೧೨), ಎಚ್ಚರಿಕೆ ಕಾಯಕದ ಮುಕ್ತನಾಥಯ್ಯಗಳ ವಚನ(೧೧), ಎಲೆಗಾರ ಕಾಮಣ್ಣಗಳ ವಚನ(೧), ಏಕಾಂತ ರಾಮಿತಂದೆಗಳ ವಚನ(೭), ಏಲೇಶ್ವರ ಕೇಶಯ್ಯಗಳವಚನ (೭೪) – ಒಕ್ಕಲಿಗ ಮುದ್ದಣ್ಣಗಳ ವಚನ(೧೨) ಒಟ್ಟು ೨೪ ವಚನಕಾರರ ೧೭೪೪ ವಚನಗಳು ಇಲ್ಲಿ ಸಂಪಾದಿತಗೊಂಡಿವೆ. ಈ ಎಲ್ಲಾ ವಚನಕಾರರ ಜೀವನಚರಿತ್ರೆಗಳನ್ನು ಸಂಕ್ಷಿಪ್ತವಾಗಿ ಕಾವ್ಯ, ಶಾಸನ, ಪುರಾತತ್ವಗಳ ಆಧಾರದ ಮೇಲೆ ಕಟ್ಟಿಕೊಟ್ಟಿದ್ದಾರೆ. ಈ ಸಂಪಾದನೆಯಲ್ಲಿ ಮುಖ್ಯವಾಗಿ ಗುರುತಿಸುವ ಅಂಶವೆಂದರೆ ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಪ್ರಭುದೇವರ ವಚನಗಳಂತೆ ಸ್ಥಲಕಟ್ಟುಗಳ ಬಂಧ ಅಷ್ಟಾಗಿ ಕಾಣಿಸುವುದರಿಂದ ದೊರೆತ ವಚನಗಳನ್ನು ಅಕಾರಾದಿಯಾಗಿ ಸಂಪಾದಿಸಿ ಕೊಡಲಾಗಿದೆ. ಮುಖ್ಯವಾಗಿ ಈ ವಚನಕಾರರ ವಚನಕಟ್ಟುಗಳು ದೊರೆಯುವುದು ವಚನ ಸಾಹಿತ್ಯರಚನೆಯ ನಂತರ ರಚನೆಯಾದ ಸಕಲಪುರಾತನರ ವಚನಗಳಂತೆ ಸಂಗ್ರಹ ಕೃತಿಗಳಲ್ಲಿ. ಹೀಗಾಗಿ ಒಂದರ್ಥದಲ್ಲಿ ಸಂಕೀರ್ಣ ವಚನ ಸಂಪುಟಗಳು ವಚನ ಸಂಗ್ರಹ ಕಾಲಘಟ್ಟದ ಪಠ್ಯಗಳಾಗಿ ಕಾಣಿಸುತ್ತವೆ. ತಾತ್ವಿಕ ದೃಷ್ಟಿಯಿಂದ ಇಲ್ಲಿ ಸಂಪಾದನೆಗೊಂಡ ೨೪ ಜನ ವಚನಕಾರರು ಅನೇಕ ಜಾತಿವೃತ್ತಿಗಳಿಂದ ಬಂದವರು. ಇವರ ಕಾಯಕಗಳೇ ವಿಚಿತ್ರವಾಗಿ ತೋರುತ್ತವೆ. ಅನಾಮಿಕ ನಾಚಯ್ಯ, ಉರಿಲಿಂಗಪೆದ್ದಿಯವರು ಶೂದ್ರರಾದರೇ, ಹಂಪಯ್ಯ ಹೊನ್ನಯ್ಯ ಅವರು ಅಗ್ಗವಣಿ ಕಾಯಕದವರು. ಅದೇ ರೀತಿ ಎಚ್ಚರಿಕೆ ಕಾಯಕ, ಎಲೆಯ ಕಾಯಕ, ಆಯ್ದಕ್ಕಿ ಕಾಯಕ, ಕೃಷಿ ಕಾಯಕ, ಅಂಬಿಗ ಕಾಯಕ ಹೀಗೆ ಬೇರೆ ಬೇರೆ ನೆಲೆಗಳಿಂದ ಬಂದರೂ ಇವರ ವಚನಗಳು ಲಿಂಗಾಯತ ವಿವಿಧ ತತ್ತ್ವಗಳ ಮೇಲೆ ಒಟ್ಟುಗೂಡಿ ಬದುಕಿದ ವೈವಿಧ್ಯಪೂರ್ಣ ಧ್ವನಿ ಇರುವುದನ್ನು ಸಂಪಾದಕರು ಗುರುತಿಸಿದ್ದಾರೆ.

ಇಲ್ಲಿ ಸಂಪಾದಿತಗೊಂಡ ವಚನಗಳ ಆಶಯವನ್ನು ಸಂಪಾದಕರಾದ ಎಂ.ಎಂ.ಕಲಬುರ್ಗಿ ಅವರು ಮೂರು ವರ್ಗಗಳಲ್ಲಿ ವಿಂಗಡಿಸಿದ್ದಾರೆ. ಲೋಕನೀತಿ, ಸಮಾಜವಿಮರ್ಶೆ ಮತ್ತು ಲಿಂಗಾಯತ ತತ್ವ ನಿರೂಪಣೆ, ಸಂಪಾದಕರೇ ಹೇಳುವಂತೆ ಧಾರ್ಮಿಕ ಮಹಾಪುರುಷರ ಸಾಹಿತ್ಯದಲ್ಲಿ ದಯೆ, ಅಹಿಂಸೆ, ಶಾಂತಿ ಇತ್ಯಾದಿ ಲೋಕನೀತಿ ಎದ್ದು ಕಾಣುವಂತೆ ಇಲ್ಲಿಯ ವಚನಕಾರರ ವಚನದಲ್ಲಿಯೂ ಲೋಕನೀತಿ ಕಾಣಿಸುತ್ತದೆ. ಅದೇ ರೀತಿ "ಶರಣರ ಆಂದೋಲನದ ಪ್ರಧಾನಗುರಿ ಸಮಾಜ ಸುಧಾರಣೆಯೂ ಆಗಿರುವುದು ಒಂದು ವಿಶೇಷ. ಈ ಕಾರಣಕ್ಕಾಗಿಯೇ ಅವರು ಭಾರತದ ಇತರ ಧಾರ್ಮಿಕ ಮಹಾಪುರುಷರಿಂದ ಭಿನ್ನರಾಗಿ ತೋರುತ್ತಾರೆ. ಈ

ಸಂಗ್ರಹದಲ್ಲಿಯ ಅಂಬಿಗರ ಚೌಡಯ್ಯ ಈ ಮಾತಿಗೆ ನಿದರ್ಶನವೆನಿಸಿದ್ದಾನೆ. ಆದರೆ ಅನಾಮಿಕ ನಾಚಯ್ಯ, ಉರಿಲಿಂಗಪೆದ್ದಿಗಳಂಥ ಕೆಳವರ್ಗದಿಂದ ಬಂದ ಶರಣರು ಸಮಾಜಸುಧಾರಣೆಯ ಬಗ್ಗೆ ಹೆಚ್ಚು ಮಾತನಾಡಿರುವುದು ಇಲ್ಲಿ ಗಮನಿಸತಕ್ಕ ಸಂಗತಿಯಾಗಿದೆ."[೩೬] ಧಾರ್ಮಿಕವಾಗಿ ಇಲ್ಲಿಯ ವಚನಗಳ ಲಿಂಗಾಯತ ತತ್ವಗಳನ್ನು ಸಾಮಾನ್ಯವಾಗಿ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಮೊದಲಾದ ಸಿದ್ಧಾಂತಗಳ ವ್ಯಾಪಕ ಚಿಂತನೆ ಎಲ್ಲ ವಚನಕಾರರಲ್ಲಿ ಕಾಣುವುದು ಸಹಜಗುಣ. ಆದರೆ ಸಂಪಾದಕರಾದ ಎಂ.ಎಂ.ಕಲಬುರ್ಗಿ ಅವರು ಅಪ್ರಸಿದ್ಧ ವಚನಕಾರರ ವಚನಗಳಲ್ಲಿ ನಿರೂಪಿತವಾಗಿರುವ ಧಾರ್ಮಿಕ ತತ್ವಗಳ ನೈಜತೆಯನ್ನು ಕುರಿತು ಹೀಗೆ ಹೇಳುತ್ತಾರೆ. "ಪಾಠಾಂತರ ರೂಪಾಂತರ ದಾಳಿಗಳಿಗೆ ತುತ್ತಾದ ಸುಪ್ರಸಿದ್ಧ ಶರಣರ ವಚನಗಳಿಗಿಂತ ಅಂಥ ದಾಳಿಗಳಿಂದ ದೂರ ಉಳಿದ ಇಲ್ಲಿಯ ಅರಿವಿನ ಮಾರಿತಂದೆ, ಅವಸರ ರೇಕಣ್ಣ, ಆದಯ್ಯ, ಏಲೇಶ್ವರ ಕೇತಯ್ಯ ಇವರ ವಚನಗಳಲ್ಲಿ ಆ ತತ್ವಗಳ ನಿಜಸ್ವರೂಪ ಉಳಿದುಕೊಂಡಿರುವುದು ವಿಶೇಷ ಸಂಗತಿಯಾಗಿದೆ. ಶರಣಸಿದ್ಧಾಂತದ ನಿಜಸ್ವರೂಪದ ಅಧ್ಯಯನಕ್ಕೆ ಇನ್ನು ಮೇಲೆ ಇವುಗಳತ್ತ ವಿದ್ವಾಂಸರು ಗಮನ ಕೊಡುವುದು ಅವಶ್ಯವಿದೆ. ಈವರೆಗೆ ಪ್ರಸಿದ್ಧ ಶರಣರ ವಚನಗಳಲ್ಲಿ ಪ್ರಸಿದ್ಧ ತತ್ವಗಳನ್ನು ಓದಿದ್ದ ನಮ್ಮ ಕಣ್ಣಿಗೆ ಈ ಅಪ್ರಸಿದ್ಧ ಶರಣರ ವಚನಗಳಲ್ಲಿ ಶರಣಸಿದ್ಧಾಂತದ ಹೊಸ ಹೊಸ ಮಗ್ಗುಲುಗಳು ಕಂಡುಬರುತ್ತವೆ. ಇವುಗಳ ಅಭ್ಯಾಸದಿಂದ ವೀರಶೈವದ ತಿಳುವಳಿಕೆ ಖಂಡಿತ ವರ್ಧಿಸುತ್ತದೆ."[೩೭] ಅದೇ ರೀತಿ ಅಂಬಿಗರ ಚೌಡಯ್ಯನ ವಚನಗಳು ಇತರ ವಚನಕಾರರಿಗಿಂತ ಭಿನ್ನವಾಗಿರುವುದನ್ನು ಗುರುತಿಸಿರುವ ಎಂ.ಎಂ.ಕಲಬುರ್ಗಿ ಅವರು ತಾತ್ವಿಕತೆಗಿಂತ ಅಂದರೆ ಧಾರ್ಮಿಕ ವಿಚಾರಗಳಿಗಿಂತ ನೈತಿಕ ಹಾಗೂ ಸಾಮಾಜಿಕ ವಿಚಾರಗಳೇ ಅಧಿಕವಾಗಿರುವುದನ್ನು ಗುರುತಿಸುತ್ತ ಲೋಕನೀತಿ ಹಾಗೂ ಸಮಾಜನೀತಿಗಳು ಒಂದು ಸಾಹಿತ್ಯದ ವಸ್ತುವಾದರೆ ಸಹಜವಾಗಿಯೇ ಸಾಹಿತ್ಯ ಪ್ರಗತಿಪರ ಮತ್ತು ಬಂಡಾಯದ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ರಚನಾದೃಷ್ಟಿಯಿಂದ ಈ ಸ್ವರೂಪದ ಸಾಹಿತ್ಯ ಸರಳತೆಗೆ ಹೊರಳುತ್ತದೆ. ಹೀಗೆ ಪ್ರಗತಿಪರ, ಬಂಡಾಯ, ಸರಳತೆ ಇರುವುದನ್ನು ಈ ಸಂಪುಟದ ವಚನಗಳ ಸಂಪಾದನೆಯಿಂದ ಮನವರಿಕೆ ಮಾಡಿಕೊಡುತ್ತಾರೆ.

ಸಿದ್ಧರಾಮಯ್ಯದೇವರ ವಚನಗಳನ್ನು ಎಂ.ಎಂ.ಕಲಬುರ್ಗಿ ಅವರು ಸಾ.ಶಿ.ಮರುಳಯ್ಯ ಅವರೊಂದಿಗೆ ೧೯೮ರಲ್ಲಿ ಪ್ರಕಟಿಸಿದ ಕೃತಿಯಾಗಿದೆ. ಈ ಕೃತಿಯು ಸಿರಿಗೆರೆ ಬೃಹನ್ಮಠಾಧೀಶರಾದ ಜಗದ್ಗುರು ಶ್ರೀ ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳ ಕೃಪಾನುದಾನದಿಂದ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿರಿಸಿದ ೧ ಲಕ್ಷ ರೂಪಾಯಿ ದತ್ತಿ ಹಣದಿಂದ ಪ್ರಕಟವಾದ ಕೃತಿಯಾಗಿದೆ. ಎಂ.ಎಂ.ಕಲಬುರ್ಗಿ ಅವರಿಗಿಂತ ಮೊದಲೇ ಸಿದ್ಧರಾಮನ ವಚನಗಳನ್ನು

ಕುರಿತು ಸಂಗ್ರಹಕಾರ್ಯ ಫ.ಗು.ಹಳಕಟ್ಟಿ ಹಾಗೂ ಆರ್.ಸಿ.ಹಿರೇಮಠರಿಂದ ಜರುಗಿದೆ. "ಫ.ಗು.ಹಳಕಟ್ಟಿ ಅವರಿಂದ ಸಂಪಾದಿತವಾಗಿ ಪ್ರಕಟವಾದ ಕೃತಿಯೆಂದರೆ 'ಸಿದ್ಧರಾಮೇಶ್ವರನ ವಚನಗಳು', ಶ್ರೀ ಗಂಥಮಾಲೆಯ ೩೦ನೇ ಕೃತಿಯಾಗಿರುವ ಈ ಆವೃತ್ತಿಯಲ್ಲಿ ೮೫೦ ವಚನಗಳಿವೆ. ಇದನ್ನು ಎರಡು ಕೈಬರಹದ ಪ್ರತಿಗಳ ಸಹಾಯದಿಂದ ಪರಿಷ್ಕರಿಸಲಾಗಿದೆ. ಪಾಠಾಂತರಗಳನ್ನು ನೀಡಿರುವುದಿಲ್ಲ, ಷಟ್‌ಸ್ಥಲದ ಬಳಕೆಯಿಲ್ಲ, ಒಂದು ಪುಟದ ಪ್ರಸ್ತಾವನೆಯಿದೆ. ಉತ್ತಮವಾಗಿ ಸಂಪಾದಿತವಾಗಿದ್ದು, ಅಚ್ಚುಕಟ್ಟಾಗಿ ಅಚ್ಚಾಗಿದೆ. ೧೯೬೮ರಲ್ಲಿ ಪ್ರಕಟಿತವಾಗಿರುವ ಇದೇ ವಚನಗಳನ್ನು ಸಂಪಾದಿಸಿರುವವರು ಆರ್.ಸಿ.ಹಿರೇಮಠ ಅವರು. ಇದರ ಪರಿಷ್ಕರಣಕ್ಕೆ '೭೫ ತಾಳೆಗರಿ ಪ್ರತಿಗಳು ೪೫ ಕಾಗದದ ಪ್ರತಿಗಳು ೧೨ ಮುದ್ರಿತ ಗ್ರಂಥಗಳ ಜತೆಗೆ ಶಾಸನಗಳಲ್ಲಿ ದೊರೆಯುವ 'ಸಿದ್ಧರಾಮನ ವಚನಗಳನ್ನು' ಇಲ್ಲಿ ಉಪಯೋಗಿಸಿರುವುದಾಗಿ ತಿಳಿಸಿದ್ದಾರೆ. ಇದರಲ್ಲಿ ಸಿದ್ಧರಾಮನ ೧೩೩೮ ವಚನಗಳಿವೆ. ಪಾಠಾಂತರಗಳು ಹೆಚ್ಚಿಲ್ಲದಿದ್ದರೂ, ಅಂಕಿಸಂಖ್ಯೆಗಳೇ ಬಹುವಾಗಿ ಕಂಡುಬರುತ್ತವೆ ಎಂದಿದ್ದಾರೆ."[೩೮] ಇಲ್ಲಿ ಫ.ಗು.ಹಳಕಟ್ಟಿ ಅವರು ಸಂಪಾದಿಸಿದ ವಚನಗಳನ್ನೇ ಆರ್.ಸಿ.ಹಿರೇಮಠರು ಸಂಪಾದಿಸಿರುವುದಾಗಿ ಬಿ.ಎಸ್.ಸಣ್ಣಯ್ಯ ಅವರು ಹೇಳಿದ್ದಾರೆ. ಇಲ್ಲಿ ಕಂಡುಬರುವ ಮುಖ್ಯ ಅಂಶವೆಂದರೆ, ಫ.ಗು.ಹಳಕಟ್ಟಿ ಸಂಪಾದಿಸಿದ ವಚನಗಳಿಗಿಂತ ಅಧಿಕ ಸಂಖ್ಯೆಯ ಸಿದ್ಧರಾಮನ ವಚನಗಳು ಆರ್.ಸಿ.ಹಿರೇಮಠರ ವಚನಸಂಪಾದನೆಯಲ್ಲಿ ದೊರೆತಿವೆ. ಎಂ.ಎಂ.ಕಲಬುರ್ಗಿ ಅವರಿಗೆ ದೊರೆತ ಹಸ್ತಪ್ರತಿ ವಿಶೇಷ ಬಗೆಯಿಂದ ಕೂಡಿದೆ ಎನ್ನಬಹುದು. ಎಂ.ಎಂ.ಕಲಬುರ್ಗಿ ಅವರಿಗೆ ತುಮಕೂರು ಜಿಲ್ಲೆ ತಿಪಟೂರು ತಾಲ್ಲೂಕು ಹೊನ್ನವಳ್ಳಿ ಗ್ರಾಮದಲ್ಲಿ ಶ್ರೀ ಕರಿಸಿದ್ಧೇಶ್ವರ ದೇವರ ಮಠದ ಅಧಿಪತಿಗಳಾದ ಷ.ಬ್ರ.ಶ್ರೀ ಶಿವಪ್ರಕಾಶ ಮಹಾಸ್ವಾಮಿಗಳ ಆಶೀರ್ವಾದದಿಂದ ದೊರೆತ ಹಸ್ತಪ್ರತಿಯಾಗಿದೆ. ಇದನ್ನು ಶ್ರೀಗಳು ಚಿಕ್ಕನಾಯಕನಹಳ್ಳಿ ತಾಲ್ಲೂಕು ಕುಪ್ಪೂರು ಗದ್ದುಗೆ ಮಠಾಧೀಶರಾದ ಷ.ಬ್ರ.ಶ್ರೀ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳ ಸಮ್ಮುಖದಲ್ಲಿ ತಮ್ಮ ಮಠದಲ್ಲಿನ ಸುಮಾರು ೪೪೮ ಓಲೆಕಟ್ಟುಗಳನ್ನು ನಮಗೆ ಗೌರವ ಭಾವನೆಯಿಂದ ಒಪ್ಪಿಸಿದರೆಂದು ಸಂಪಾದಕರೇ ಹೇಳಿಕೊಂಡಿದ್ದಾರೆ. ಆ ಓಲೆಕಟ್ಟಿನಲ್ಲಿ ಸಾಕಷ್ಟು ಕೃತಿಗಳು ಅಡಕವಾಗಿದ್ದು, 'ಸಿದ್ಧರಾಮಯ್ಯ ದೇವರ ವಚನ' ಓಲೆಕಟ್ಟು ಒಂದಾಗಿದೆ. ಎಂ.ಎಂ.ಕಲಬುರ್ಗಿ ಅವರು ದೊರೆತಂತಹ ಓಲೆಕಟ್ಟನ್ನು ಕುರಿತು 'ಈ ವಚನಗಳ ಕಟ್ಟು ಅಪರೂಪದ್ದು. ಇದು ಆರು ಸಾವಿರ ವಚನಗಳ ಕಟ್ಟು. ಆದರೆ ಅವರಿವರು ತಮಗೆ ಬೇಕಾದ ಗರಿಗಳನ್ನು ತೆಗೆದುಕೊಂಡು ಹೋಗಿ ಕೇವಲ ೧೩೧೩ ವಚನಗಳಿರುವಷ್ಟನ್ನು ಮಾತ್ರ ಬಿಟ್ಟು ಹೋಗಿದ್ದರು. ಅವುಗಳಲ್ಲಿ ವಚನಗಳು ಸಾಕಷ್ಟಿವೆ. ಈ ಕೃತಿಯನ್ನಿತ್ತು ಆಶೀರ್ವದಿಸಿದ ಪೂಜ್ಯ ಗುರುದ್ವಯರಿಗೆ ಸಾಷ್ಟಾಂಗ ಪ್ರಣಾಮಗಳನ್ನು ಅರ್ಪಿಸುತ್ತಿದ್ದೇವೆ."[೩೯] ಇಲ್ಲಿ ಸಂಪಾದಕರು ೧೩೧೩ ವಚನಗಳು ಲಭ್ಯವಾಗಿವೆ ಎಂದಿದ್ದಾರೆ.

ಆದರೆ ಮಾರ್ಗ ಸಂಪುಟ ೩ರಲ್ಲಿ 'ಕಾವ್ಯದಲ್ಲಿ ಬಾಚರಸನ ವಚನ-ಶಾಸನದಲ್ಲಿ ಸಿದ್ಧರಾಮನ ವಚನ' ಲೇಖನದಲ್ಲಿ ಇದೇ ಕಟ್ಟನ್ನು ಕುರಿತು ಹೇಳುತ್ತ "ಇತ್ತೀಚಿಗೆ ತಿಪಟೂರು ತಾಲ್ಲೂಕಿನ ಹೊನ್ನವಳ್ಳಿ ಕರಿಸಿದ್ಧ ದೇವರ ಮಠದಲ್ಲಿ ೬೦೦೦ ವಚನಗಳ ಹಸ್ತಪ್ರತಿ ಕಟ್ಟು ಲಭ್ಯವಾಗಿದೆ. ಇದರಲ್ಲಿ ಸಿದ್ಧರಾಮನ ೧೩೨೫ ವಚನ(ಸ್ವರವಚನ ಸೇರಿ)ಗಳಿದ್ದು, ಇವುಗಳಲ್ಲಿ ಅನೇಕ ಹೊಸ ವಚನಗಳಿವೆ"[೮೦] ಎಂದಿದ್ದಾರೆ. ಮೇಲೆ ಹೇಳಿದಂತೆ ೧೩೧೩ ವಚನಗಳ ಜೊತೆ ೧೨ ಸ್ವರವಚನ ಸೇರಿ ೧೩೨೫ ಎಂದು ಹೇಳಿರಬಹುದೆಂದು ಗಮನಿಸಬೇಕಾದ ಸಂಗತಿಯಾಗಿದೆ. ಅದನ್ನು ಪರಿಶೀಲಿಸಿದರೆ, ವಚನ, ಸ್ವರವಚನಗಳ ಸಂಖ್ಯೆ ತಿಳಿಯಬಹುದಾಗಿದೆ. ಜೊತೆಗೆ ೨೮ ಹೊಸ ವಚನಗಳ ಶೋಧ ವಿಶೇಷವೆಂದು ಹೇಳಬೇಕಾಗುತ್ತದೆ. ಒಟ್ಟಾರೆ ಸಿದ್ಧರಾಮನ ೧೩೨೫ ವಚನ, ಸ್ವರವಚನಗಳ ಉಳಿವಿಗೆ ಕಾರಣವಾದ ಶ್ರೇಯಸ್ಸು ಎಂ.ಎಂ.ಕಲಬುರ್ಗಿ ಅವರದ್ದಾಗಿದೆ.

'ವಚನ' ಬೆಂಗಳೂರಿನ ಬಸವಸಮಿತಿಯ ಅಡಿಯಲ್ಲಿ ಕರ್ನಾಟಕ ಸರ್ಕಾರದ ನೆರವಿನಿಂದ ಆರಂಭಿಸಿದ ಯೋಜನೆ. 'ವಚನ ಸಾಹಿತ್ಯ ಬಹುಭಾಷಾ ಅನುವಾದ ಯೋಜನೆ' ಎಂ.ಎಂ. ಕಲಬುರ್ಗಿ ಅವರ ಯೋಜನೆಗಳಲ್ಲಿ ಪ್ರಮುಖವಾದದ್ದು. ವೀರಣ್ಣ ರಾಜೂರ ಅವರು ಈ ಯೋಜನೆಯನ್ನು ಕುರಿತಂತೆ ವಚನ ಸಿದ್ಧಾಂತ-ಶರಣರ ವಿಶ್ವಮಾನ್ಯ ವಿಚಾರ ಹಾಗೂ ಜೀವನಮೌಲ್ಯಗಳು ವಿಶ್ವತೋಮುಖಿಯಾಗಿ ಪ್ರಸಾರವಾಗಬೇಕೆಂಬುದು ಈ ಯೋಜನೆಯ ಪರಮ ಗುರಿ" ಎಂದಿದ್ದಾರೆ. ಈ ಯೋಜನೆಗಾಗಿ ಎಂ.ಎಂ.ಕಲಬುರ್ಗಿ ಅವರು ಮೊದಲು ಮಾಡಿದ ಕಾರ್ಯ ಸಮಗ್ರ ವಚನ ಸಂಪುಟಗಳಿಂದ ೧೭೩ ಶರಣರ ೨೫೦೦ ವಚನಗಳನ್ನು ಆಯ್ದು 'ವಚನ' ಎಂಬ ಹೆಸರಿನಲ್ಲಿ '೨೦೧೨'ರಲ್ಲಿ ಹೊರತಂದರು. ಈ ಕೃತಿಯು ೨೦೧೩ರಲ್ಲಿ ದ್ವಿತೀಯ ಮುದ್ರಣ, ೨೦೧೭ರಲ್ಲಿ ತೃತೀಯ ಮುದ್ರಣವನ್ನು ಕಂಡಿದೆ. ಇಲ್ಲಿ ೨೨ ಭಾಷೆಗಳ ಅನುವಾದ ಕಾರ್ಯ ಮಾಡುವಲ್ಲಿ ಎಂ.ಎಂ.ಕಲಬುರ್ಗಿ ಅವರು ತುಂಬಾ ಶ್ರಮಿಸಿದ್ದಾರೆ. ಈ ವಚನ ಸಾಹಿತ್ಯ ವಿಶ್ವಮಾನ್ಯ ಮಟ್ಟಕ್ಕೇರಬೇಕೆಂಬ ಹಂಬಲದಿಂದಾಗಿ ಬಹುಭಾಷಾ ಯೋಜನೆ ಯಶಸ್ವಿಯಾಗಿದೆ ಎನ್ನಬಹುದು. ಈ ಕೃತಿಯ ಸಂಪಾದನ ಕಾರ್ಯವನ್ನು ಕುರಿತಂತೆ ಈ ಪ್ರಬಂಧದಲ್ಲಿ ಪ್ರತ್ಯೇಕ ಅಧ್ಯಾಯವನ್ನಾಗಿ ಚರ್ಚಿಸಲಾಗಿದೆ.

ಈ ಕೃತಿಯಲ್ಲಿ ಬಸವಣ್ಣನವರನ್ನು ಒಳಗೊಂಡಂತೆ ೧೭೩ ಶರಣರನ್ನು ಒಳಗೊಂಡಿರುವುದರಿಂದ ಇದನ್ನು ಸರ್ವಪುರಾತನರ ವಚನಕಟ್ಟಿನ ಮಾದರಿಯ ಸಂಗ್ರಹ ಕೃತಿಯಾಗಿದೆ.

ಈ ರೀತಿಯಾಗಿ ಎಂ.ಎಂ.ಕಲಬುರ್ಗಿ ಅವರು ಏಕಪುರಾತನರ ವಚನಕಟ್ಟು ಹಾಗೂ ಸರ್ವಪುರಾತನರ ವಚನಕಟ್ಟು ಎಂಬ ಎರಡು ರೀತಿಯ ಸಂಗ್ರಹಕಾರ್ಯವನ್ನು ಪೂರೈಸಿರುವುದು ವಿಶೇಷವೆನಿಸುತ್ತದೆ.

**ವಚನ ಸಂಕಲನ ಸಾಹಿತ್ಯ ಸಂಪಾದನೆ**

ವಚನ ಸಂಗ್ರಹ ಕಟ್ಟುಗಳು ಸಿದ್ಧಗೊಂಡ ನಂತರ ಆ ವಚನಗಳನ್ನು ಒಂದು ತತ್ವ ಇಲ್ಲವೇ ಸಿದ್ಧಾಂತಗಳ ದೃಷ್ಟಿಕೋನದಿಂದ ವ್ಯವಸ್ಥಿತವಾಗಿ ಸಂಯೋಜನೆಗೊಳಿಸಿದ ಸಾಹಿತ್ಯವನ್ನು ಸಂಕಲನ ಸಾಹಿತ್ಯವೆಂದು ಕರೆಯಬಹುದು. ವೀರಣ್ಣ ರಾಜೂರ ಅವರು "ಒಂದು ನಿಶ್ಚಿತ ತಾತ್ವಿಕ ಹಿನ್ನೆಲೆ ಇಟ್ಟುಕೊಂಡು ಸ್ಥಲಸಹಿತವಾಗಿ, ಇಲ್ಲವೆ ಸ್ಥಲರಹಿತವಾಗಿ ವಚನಗಳನ್ನು ಅಳವಡಿಸಿದ ಕೃತಿಗಳು ಸಂಕಲನಗಳೆನಿಸುತ್ತವೆ"[೪೧] ಎಂದಿದ್ದಾರೆ. ವಿಶೇಷವಾಗಿ ವಚನಗಳಿಗೆ ಅನ್ವಯಿಸಿ ಹೇಳುವ ಸಂಕಲನ ಪದಪ್ರಯೋಗ ವಿಶೇಷವಾಗಿರುವ ಪರಿಭಾಷಾ ಪದವಾಗಿದೆ. ಅಂದರೆ ಒಂದು ವಚನದ ಹಿಂದಿರುವ ಆಶಯವನ್ನು ತಾತ್ವಿಕವಾಗಿ ನಿರೂಪಿಸುವುದನ್ನು ಇಲ್ಲಿ ಕಾಣುತ್ತೇವೆ. ಪ್ರಾಯಶಃ ವಚನ ರಚನೆಯಲ್ಲಿ ತೊಡಗಿದ ವಚನಕಾರರಿಗೆ ಸಮಾಜ ಮುಖ್ಯವಾಗಿತ್ತು. ಅಧ್ಯಾತ್ಮ ಗೌಣವಾಗಿತ್ತು. ಹೀಗಾಗಿ ಅವರಿಂದ ರಚಿತವಾದ ವಚನಗಳು ಆಯಾ ಸಮಾಜದ ಆಯಾ ಸಂಗತಿಗೆ ಸಂಬಂಧಿಸಿದಂತೆ ಅಭಿವ್ಯಕ್ತಗೊಂಡ ಸಂದರ್ಭ ಸಾಹಿತ್ಯ ಎನ್ನಬಹುದು. ಹೀಗಾಗಿ ಒಬ್ಬ ವಚನಕಾರ ಷಟ್‌ಸ್ಥಲವನ್ನು, ಅಷ್ಟಾವರಣವನ್ನು ಪಂಚಾಚಾರವನ್ನು ಗಮನದಲ್ಲಿಟ್ಟುಕೊಂಡು ವಚನಗಳನ್ನು ರಚಿಸಿರುವುದು ಸಾಧ್ಯವೂ ಇಲ್ಲ. ಸಾಧ್ಯವೂ ಅಲ್ಲ. ಹೀಗಾಗಿ ವಚನ ರಚನೆಯ ನಂತರ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಿದ ಪರಿಣಾಮವಾಗಿ ಸಿದ್ಧಗೊಂಡ ಸಿದ್ಧಾಂತ ಕೃತಿಗಳೇ ವಚನ ಸಂಕಲನ ಕೃತಿಗಳೆಂದು ಕರೆಸಿಕೊಂಡವು. ಇಲ್ಲಿ ಒಂದು ತತ್ವ ಒಂದು ಆಯ್ಕೆ ಇರುವುದನ್ನು ಗಮನಿಸಬಹುದು. ಈ ಸ್ವರೂಪದ ಸಾಹಿತ್ಯವನ್ನು ಕುರಿತಂತೆ ಕಲಬುರ್ಗಿ ಅವರು ಹೀಗೆ ಹೇಳುತ್ತಾರೆ.

"ಶರಣ ಸಮುದಾಯದಲ್ಲಿ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರ ವಚನಗಳಿಂದ ಮಾತ್ರ ರೂಪಿಸಿದ ಷಟ್ಸ್ಥಲ ಕಟ್ಟುಗಳು ಸಿಗುತ್ತವೆ. ಈ ವಿನ್ಯಾಸ ಹಲವು ಬಗೆಯಾಗಿದೆ. ಭಕ್ತಿ, ಮಹೇಶ, ಪ್ರಸಾದಿ... ಎಂದು ಮುಂತಾಗಿ ಆರು ಸ್ಥಲಗಳುಳ್ಳದ್ದು ಮತ್ತು ಭಕ್ತನ ಭಕ್ತ, ಭಕ್ತನ ಮಹೇಶ ಎಂದು ಮುಂತಾಗಿ ೩೬ ಸ್ಥಲಗಳುಳ್ಳದು. ಸ್ಥಲವಿನ್ಯಾಸವಾದರೆ; ಭಕ್ತನ ಆಚಾರಲಿಂಗ, ಭಕ್ತನ ಗುರುಲಿಂಗ... ಎಂದು ಮುಂತಾಗಿ ೩೬ ಸ್ಥಲಗಳುಳ್ಳದ್ದು 'ಅನುಭಾವ ಸ್ಥಲವಿನ್ಯಾಸ'ವೆನಿಸುತ್ತದೆ. ಇವುಗಳಲ್ಲಿ ಮಹಾಲಿಂಗದೇವ ಸಂಕಲಿಸಿದ ಪ್ರಭುದೇವರ ವಚನಗಳ ಕಟ್ಟು ಭಕ್ತ, ಮಹೇಶ... ರೀತಿಯ ಆರು ಸ್ಥಲಗಳ ಅನಾಮಧೇಯನು ಸಂಕಲಿಸಿದ ಬಸವಣ್ಣನವರ ಷಟ್‌ಸ್ಥಲದ ವಚನಗಳ ಕಟ್ಟು ಭಕ್ತನ ಭಕ್ತ, ಭಕ್ತನ ಮಹೇಶ... ರೀತಿಯ ಮೂವತ್ತಾರು ಸ್ಥಲಗಳ 'ಆಚರಣೆಯ ಸ್ಥಲವಿನ್ಯಾಸ'ದಲ್ಲಿ ಸಿಗುತ್ತವೆ. ಚನ್ನಬಸವಣ್ಣನವರ ವಚನಕಟ್ಟುಗಳು ಮಾತ್ರ ಮೇಲೆ ಹೇಳಿದ ಮೂರು ರೀತಿಯಲ್ಲಿ ಸಿಗುತ್ತಿದ್ದು, ಇವುಗಳನ್ನು ರೂಪಿಸಿದ ಸಂಕಲನಕಾರರ ಹೆಸರು ಮಾತ್ರ

ಗೊತ್ತಾಗುವುದಿಲ್ಲ."[೨] ಹೀಗೆ ಷಟ್ಸ್ಥಲದ ಕಟ್ಟು, ಏಕೋತ್ತರದ ಷಟ್ಸ್ಥಲ ಕಟ್ಟುಗಳನ್ನು ಇತರ ಸ್ಥಲಕಟ್ಟು ಸಂಕಲನಗಳು ವೈವಿಧ್ಯಪೂರ್ಣವಾಗಿ ರಚನೆಯಾಗಿವೆ. ಉದಾಹರಣೆಗೆ ಕಲ್ಲುಮಠದ ಪ್ರಭುದೇವರ ಲಿಂಗಲೀಲಾವಿಲಾಸ ಚಾರಿತ್ರ್ಯದಂತಹ ಧಾರ್ಮಿಕ ಸಂಕಲನ ಕೃತಿಯೊಂದು ರಚನೆಯಾಗಿರುವುದನ್ನು ಗಮನಿಸಬಹುದು. ಇದೇ ಮಾದರಿಯಲ್ಲಿ ಆಚರಣೆ ವಚನಗಳು, ಸ್ತೋತ್ರದ ವಚನಗಳು ರಚನೆಯಾಗಿವೆ. ಈ ಮಾದರಿಯ ಸಂಕಲನ ಸಾಹಿತ್ಯ ಸಂಪಾದನೆಯಲ್ಲಿ ಎಂ.ಎಂ.ಕಲಬುರ್ಗಿ ಅವರು ಸಂಪಾದಿಸಿದ ಕೃತಿಗಳಲ್ಲಿ ಬಸವಸ್ತೋತ್ರದ ವಚನಗಳು, ಬಸವಣ್ಣನವರ ಟೀಕಿನ ವಚನಗಳು ಭಾಗ ೧, ಭಾಗ ೨, ಚೆನ್ನಬಸವಣ್ಣನವರ ಷಟ್ಸ್ಥಲ, ವಚನ ಮಹಾಸಂಪುಟ, ವಚನ ಸಂಕಲನ ಸಂಪುಟ-೪ ಮತ್ತು ಸಂಪುಟ-೬, ವಚನಶಾಸ್ತ್ರ ಸಾರ, ಪರಮಾನಂದಸುಧೆ, ಏಕೋತ್ತರ ಷಟ್‌ಸ್ಥಲ ಕೃತಿಗಳನ್ನು ಹೆಸರಿಸಬಹುದು.

ಬಸವಸ್ತೋತ್ರದ ವಚನಗಳು ಈ ಕೃತಿ ಚೆನ್ನಂಜೆದೇವರು ಸಂಪಾದಿಸಿದ ಬಸವಸ್ತೋತ್ರದ ವಚನಗಳು ಮತ್ತು ಬೋಳಬಸವದೇವರು ಸಂಪಾದಿಸಿದ ಬಸವಸ್ತೋತ್ರದ ವಚನಗಳು ಹೆಸರಿನ ಅಖಂಡ ಕೃತಿ. ಈ ಕೃತಿಯನ್ನು ಕರ್ನಾಟಕ ವಿಶ್ವವಿದ್ಯಾಲಯದ ಬಸವೇಶ್ವರ ಪೀಠದಿಂದ ರಜತಮಹೋತ್ಸವ ಪ್ರಕಟಣೆಯಾಗಿ ಸಂಪಾದಿಸಿ ಕೊಡಲಾಗಿದೆ. ಬಸವಣ್ಣನವರ ಲೋಕೋತ್ತರ ಆಚಾರ-ವಿಚಾರಗಳಿಗೆ ಲೋಕವಿಸ್ತಾರವಾದ ಕ್ಷಿತಿಜವನ್ನು ಕಲ್ಪಿಸುವುದು ಬಸವೇಶ್ವರ ಪೀಠದ ಉದ್ದೇಶದಲ್ಲಿ ಒಂದು. ಈ ಉದ್ದೇಶಗಳನ್ನು ಸಂಶೋಧನೆ, ಸಂಪಾದನೆ, ವಿಮರ್ಶೆ ಹಾಗೂ ಅನುವಾದ ಎಂಬ ನಾಲ್ಕು ನೆಲೆಗಳಲ್ಲಿ ಈಡೇರಿಸುವ ಪ್ರಯತ್ನವನ್ನು ಪೀಠವು ಮಾಡಿಕೊಂಡು ಬಂದಿದೆ. ಅದರ ಅಂಗವಾಗಿ ಬಸವಣ್ಣನವರನ್ನು ಕುರಿತು ಸ್ತೋತ್ರ ಮಾಡಿದ ವಚನಗಳನ್ನು ಸಂಪಾದಿಸಿದ ಚೆನ್ನಂಜೆದೇವರ ಪಠ್ಯವನ್ನು ಮತ್ತು ಬೋಳ ಬಸವರಾಜದೇವರ ಪಠ್ಯವನ್ನು ಸಂಯೋಜಿಸಿಕೊಡಲಾಗಿದೆ. ಈ ಕೃತಿಯ ಆರಂಭದಲ್ಲಿ ಸಂಪಾದಕರಾದ ಕಲಬುರ್ಗಿ ಅವರು ೨೨ ಪುಟಗಳ ಪ್ರಸ್ತಾವನೆಯನ್ನು ಬರೆದು ವಚನ ಸಾಹಿತ್ಯದ ಉಗಮಕ್ಕೆ ಕಾರಣವನ್ನು ನೀಡಿದ್ದಾರೆ. ೮೦೦ ವರ್ಷಗಳ ಇತಿಹಾಸವಿರುವ ಲಿಂಗಾಯತ ಸಾಹಿತ್ಯದ ಪ್ರಥಮ ಬೆಳೆ ವಚನ ಸಾಹಿತ್ಯ. ಇಂತಹ ವಚನ ಸಾಹಿತ್ಯ ಹರಿಹರ, ಭೀಮಕವಿ, ಮಹಾಲಿಂಗದೇವ, ಷಡಕ್ಷರಿ, ಶೂನ್ಯಸಂಪಾದನಕಾರರು ಇವರಿಗೆ ಕಾವ್ಯದ ವಸ್ತುವಾಗಿರುವುದು ಕುತೂಹಲದ ಸಂಗತಿ. ಈ ಅಂಶವನ್ನು ಕುರಿತು ಎಂ.ಎಂ.ಕಲಬುರ್ಗಿ ಅವರು ಸೃಜನ ಸಾಹಿತ್ಯದಲ್ಲಿ ಹರಿಹರನದು ಚಾರಿತ್ರಿಕ ಸಾಹಿತ್ಯ, ಭೀಮಕವಿಯದು ಪುರಾಣ ಸಾಹಿತ್ಯವಾದರೆ, ಸಂಪಾದನ ಸಾಹಿತ್ಯದಲ್ಲಿ ಮಹಾಲಿಂಗ ದೇವನದು ತತ್ವಸಂಪಾದನೆ ಎಂದು ವರ್ಗೀಕರಿಸುವುದರ ಮೂಲಕ ವಚನ ಸಾಹಿತ್ಯದ ಸೃಜನಸೃಷ್ಟಿ ಮತ್ತು ಸಂಪಾದನ ಸಾಹಿತ್ಯದ ಮರುಸೃಷ್ಟಿಯನ್ನು ವಿವೇಚಿಸಿದ್ದಾರೆ. ಅಂದರೆ ಸಾಮಾಜಿಕ ಧಾರ್ಮಿಕ ಕ್ಷೇತ್ರದಲ್ಲಿ ಹೊಸ ಮನ್ವಂತರವನ್ನು ಹುಟ್ಟುಹಾಕಿದ ಶರಣಚಳುವಳಿ ಸಾಹಿತ್ಯ

ಕ್ಷೇತ್ರದಲ್ಲಿಯೂ ನವೀನ ಅಭಿವ್ಯಕ್ತಿಯನ್ನು ರೂಢಿಸಿಕೊಂಡಿರುವುದನ್ನು ಪ್ರಸ್ತಾಪಿಸಿರುತ್ತಾರೆ. ಹೀಗೆ ವಚನ ಸಾಹಿತ್ಯದ ಉಗಮ, ರೂಪ, ಸ್ವರೂಪ ಕುರಿತು ಪ್ರಸ್ತಾಪಿಸಿದರೆ ಎಂ.ಎಂ.ಕಲಬುರ್ಗಿ ಅವರು ಆ ಸಾಹಿತ್ಯಕ್ಕಿರುವ ಸಂವೇದನಾ ಗುಣವನ್ನು ಚರ್ಚಿಸುತ್ತಾರೆ. ಇದರ ಪರಿಣಾಮವಾಗಿ ಶಿವಶರಣರ ವಚನಗಳನ್ನು ಅಥವಾ ಶಿವಶರಣರ ಚರಿತ್ರೆಯನ್ನು ೧೫ನೇ ಶತಮಾನದಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯರಂತಹ ಅನುಭಾವಿಗಳು ಹಾಡುಕಟ್ಟಿ ಪ್ರಸಾರಿಸಿದಂತೆ ತೋರುತ್ತದೆ. ಹೀಗೆ ವಚನ ಸಾಹಿತ್ಯ ಕಂಠಸ್ಥವಾಗಿ ಮತ್ತು ಗ್ರಂಥಸ್ಥವಾಗಿ ಉಳಿದುಬಂದ ಪರಿಣಾಮವಾಗಿ ವಚನಗಳ ಜೀವನಮೌಲ್ಯಗಳನ್ನು ಕಾವ್ಯತತ್ವದ ಮೌಲ್ಯಗಳನ್ನಾಗಿ ರೂಪಿಸುವುದು ಕಂಡುಬರುತ್ತದೆ. ಹೀಗೆ ವಚನ ಸಾಹಿತ್ಯ ಸಂಗ್ರಹಗೊಂಡು ಚರಿತ್ರೆಯ ಭಾಗವಾಗಿ ಉಳಿದ ಸಂದರ್ಭದಲ್ಲಿ ಅದರ ಸಂರಕ್ಷಣೆಗಾಗಿ ಸಂಪಾದನ ಘಟ್ಟವೊಂದು ಮೈತೆರೆದುಕೊಂಡಿತು. ಈ ಕುರಿತು ಎಂ.ಎಂ.ಕಲಬುರ್ಗಿ ಅವರೇ ಹೇಳುವಂತೆ "ಕಲ್ಯಾಣ ಮಂಡಲದ ಶಿವಭಕ್ತ ಸಂತಾನವೆನಿಸಿ 'ಜಂಗಮಸ್ಥಲವಾಂತು ಪರಮಷಟ್ಥ್ಸಲವನುದ್ಧರಿಸಿದ' ನೂರೊಂದು ವಿರಕ್ತರ ಧರ್ಮರಕ್ಷೆ ಮತ್ತು ಇವರ 'ಪಾದಾಯುಗದ ನೆರೆನಂಬಿ ಭಜಿಸುತ ಜ್ಞಾನಪಲ್ಲವಿಸೆ ಅಘದ ಬೇರಂ ಪರಿದು ಅತಿಧರ್ಮದಿಂದ' ರಾಜ್ಯವಾಳುತ್ತಿದ್ದ ಪ್ರೌಢದೇವರಾಯ, ಅವನ ಮಂತ್ರಿವರ್ಗದ ಲಕ್ಕಣ, ಜಕ್ಕಣರ ರಾಜರಕ್ಷೆಗಳ ಬಲದಿಂದ 'ಪರತರ ಶಿವಾನುಭಾವಿಗಳ ಪರಿಮಿತಗೃಹಂ ಪರಿಕಪರಿಗಿದು ವಿಜಯಲಕ್ಯಾಣ'ವೆಂಬಂತೆ ಹಂಪೆಯಲ್ಲಿ ಕಲ್ಯಾಣದ ಶರಣವಾತಾವರಣ ಮತ್ತೆ ತಲೆದೋರಿತು. ಈ ಯುಗದ ವೀರಶೈವರಿಗೆ 'ಸೃಜನಸಾಹಿತ್ಯ'ವನ್ನು ಸೃಷ್ಟಿಸುವಷ್ಟೇ ಮಹತ್ವದ್ದೆನಿಸಿತು; ಹಾಳಾಗುತ್ತಲಿದ್ದ ವಚನ ಸಾಹಿತ್ಯವನ್ನು ರಕ್ಷಿಸುವುದು. ಈಗ

ಲಕ್ಕಣ್ಣದಣ್ಣಾಯಕರು ಮುನ್ನ ಭಂಡಾರಿ
ಜಕ್ಕಪ್ಪ ಕಲ್ಲೆಹದ ಕೇತಿಸೆಟ್ಟಿಯರಿವರು
ಲಕ್ಕಸಂಖ್ಯೆಯವಿತ್ತಮಂ ವೆಚ್ಚಿಸುತ್ತ......

ವೀರಶೈವೋದ್ಧಾರ ಕಾರ್ಯದಲ್ಲಿ ನಿರತರಾದರು. ಇವರ ಪ್ರಯತ್ನದಿಂದಾಗಿ ಶರಣರ ಜೀವನಚರಿತ್ರೆಯನ್ನು ಬೆಳಕಿಗೆ ತರುವ, ಅಲ್ಲಲ್ಲಿ ಜೀವ ಹಿಡಿದಿದ್ದ ವಚನ ಸಾಹಿತ್ಯವನ್ನು ಶೋಧಿಸುವ, ಸಂಗ್ರಹಿಸುವ, ಟೀಕೆ-ಟಿಪ್ಪಣಿ ಬರೆವ, ಓದುವ, ವ್ಯಾಖ್ಯಾನಿಸುವ ಕಾರ್ಯಗಳು ಭರದಿಂದ ನಡೆದವು. ಈ ಆಂದೋಲನದ ಪ್ರಥಮ ಪ್ರಯತ್ನವೆಂದರೆ, ಗೊಗ್ಗವ್ವೆಯ ವಚನದಿಂದ, ಕೋಲಾಶಾಂತಯ್ಯನ ವಚನದಿಂದ ಮತ್ತು ಬಸವಣ್ಣನ ವಚನದಿಂದ ಪ್ರಾರಂಭವಾಗುವ 'ಸರ್ವಪುರಾತನರ ವಚನಗಳು' ಹೆಸರಿನ ಮೂರು ಬಗೆಯ ಕಟ್ಟುಗಳ ರಚನೆ. ಒಮ್ಮೆ ಇಂಥ ಕಟ್ಟುಗಳು ಅಸ್ತಿತ್ವಕ್ಕೆ ಬರುವುದೇ ತಡ. ಈ ಮಾದರಿಯಲ್ಲಿ ಬೇರೆ ಬೇರೆ ದೃಷ್ಟಿಕೋನಗಳಿಂದ ಹೊಸ ಹೊಸ ಸಂಪಾದನ ಕೃತಿಗಳನ್ನು ರೂಪಿಸುವ ಮಹಾಕಾರ್ಯ ವ್ಯಾಪಕವಾಗಿ ನಡೆಯಿತು.

ತಮಿಳುನಾಡಿನ 'ಸಂಘಂ ಸಾಹಿತ್ಯ ಸಂಕಲನ'ದ ಆಂದೋಲನಕ್ಕೆ ಸಮಾನವಾದ, ಈ ಸಂಪಾದನ ಕಾರ್ಯದ ಉತ್ಕೃಷ್ಟ ಕೃತಿಗಳೆನಿಸಿದ ಮಹಾಲಿಂಗದೇವನ 'ಏಕೋತ್ತರ ಶತಸ್ಥಲ' ಮತ್ತು ಕಲ್ಲುಮಠದ ಪ್ರಭುದೇವರ 'ಲಿಂಗಲೀಲಾ ವಿಲಾಸಚಾರಿತ್ರಗಳು' ಹುಟ್ಟಿ ಬರುವಲ್ಲಿ, ನೂರೊಂದು ವಿರಕ್ತರ ಕಾಲದ 'ಸಂಪಾದನ ಸಾಹಿತ್ಯ'ದ ಪ್ರಥಮಘಟ್ಟ ಪರ್ಯವಸಾನಗೊಳ್ಳುತ್ತದೆ."[೪೩] ಈ ಸಂಪಾದನ ಸಮಯವನ್ನು ಹಲವು ಕಾವ್ಯಗಳ ಆಧಾರದಿಂದ ತೋಂಟದ ಸಿದ್ಧಲಿಂಗಯತಿಗಳ ಶಿಷ್ಯ, ಪ್ರಶಿಷ್ಯರನ್ನು ಗುರುತಿಸಿಕೊಡಲಾಗಿದೆ. ಈ ಶಿಷ್ಯ ಪರಂಪರೆಯಲ್ಲಿ ನೂರೊಂದು ವಿರಕ್ತರು ಕೈಕೊಂಡಿದ್ದ ವಚನ ಸಾಹಿತ್ಯದ ಸಂಗ್ರಹಕಾರ್ಯ ವಚನಗಳಿಗೆ ಟೀಕೆ, ಟಿಪ್ಪಣಿ, ವ್ಯಾಖ್ಯಾನ ಬರೆಯುವುದರ ಮೂಲಕ ಸಂಕಲನ ಹೆಸರಿನಿಂದ ಮುನ್ನಡೆಯಿತು. ತೋಂಟದ ಸಿದ್ಧಲಿಂಗಯತಿಗಳ ಶಿಷ್ಯರಾದ ಗರುನಂಜ, ಸ್ವತಂತ್ರ ಸಿದ್ಧಲಿಂಗ, ಬೋಳಬಸವ, ಚೆನ್ನಂಜೆದೇವ, ಗುಮ್ಮಳಾಪುರದ ಸಿದ್ಧಲಿಂಗ, ಕಟ್ಟಿಗೆಹಳ್ಳಿ ಸಿದ್ಧಲಿಂಗ, ಗೂಳೂರ ಸಿದ್ಧವೀರಣ್ಣ, ಎಳಮಲೆಯ ಗುರುಶಾಂತದೇವ, ಸಂಪಾದನೆಯ ಸಿದ್ಧವೀರಣಾರ್ಯ, ಸಂಪಾದನೆಯ ಗುರುಲಿಂಗದೇವ, ಸಂಪಾದನೆಯ ಪರ್ವತೇಶ ಮುಂತಾದವರು ಸಂಪಾದನ ಸಮಯವನ್ನು ಪ್ರತ್ಯೇಕ ಶಾಖೆಯನ್ನಾಗಿ ಬೆಳೆಸಿದರು. ಹೀಗಾಗಿ ಲಿಂಗಾಯಿತ ಸಂಪಾದನಾ ಸಾಹಿತ್ಯ ಸಂಗ್ರಹ ಮತ್ತು ಸಂಪಾದನೆ ಎಂಬ ಎರಡು ಶಾಖೆಯಲ್ಲಿ ಬೆಳೆದುಬಂದಿತು. ಸರ್ವಪುರಾತನರ ವಚನಗಳು, ಮಿತ್ರಸ್ತೋತ್ರದ ವಚನಗಳು, ಬಸವಸ್ತೋತ್ರದ ವಚನಗಳು, ಶರಣಸ್ತೋತ್ರದ ವಚನಗಳು ಸಂಗ್ರಹಗಳೆನಿಸಿದರೆ, ಏಕೋತ್ತರ ಶತಸ್ಥಲಗಳು ಸಂಪಾದನೆಯೆನಿಸುತ್ತವೆ ಎಂದು ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯಪಡುತ್ತಾರೆ. ಆದರೆ ಎಂ.ಎಂ.ಕಲಬುರ್ಗಿ ಅವರ ಈ ವರ್ಗೀಕರಣ ಸರಿಯೆನಿಸುವುದಿಲ್ಲ. ಏಕೆಂದರೆ, ಈಗಾಗಲೇ ನನಗೆ ತಿಳಿದಿರುವ ಏಕೋತ್ತರ ಷಟ್‌ಸ್ಥಲದ ವಚನಕಟ್ಟುಗಳನ್ನು ಸಂಕಲನಗಳೆಂದು ತೀರ್ಮಾನಿಸ ಲಾಗಿದೆ. ಶೂನ್ಯ ಸಂಪಾದನೆಗಳನ್ನು ಸೃಷ್ಟಿಯ ವಚನ, ವಚನಗಳಂತಹ ಕಟ್ಟುಗಳನ್ನು ಸಂಪಾದನೆ ಯೆಂದು ಹೇಳಲಾಗಿದೆ. ಹೀಗಾಗಿ ವೀರಶೈವ ಸಂಪಾದನ ಸಾಹಿತ್ಯವನ್ನು ಸಂಗ್ರಹ ಮತ್ತು ಸಂಪಾದನೆ ಎಂದು ವರ್ಗೀಕರಿಸಿರುವ ಕಲಬುರ್ಗಿ ಅವರ ವರ್ಗೀಕರಣವನ್ನು ಹೀಗೆ ಪರಿಷ್ಕರಿಸಬಹುದಾಗಿದೆ.

**ವೀರಶೈವ ಸಂಪಾದನ ಸಾಹಿತ್ಯ**

ಸಂಗ್ರಹ, ಸಂಕಲನ, ಸಂಪಾದನೆ

೧. ಸಕಲಪುರಾತನರ ವಚನಗಳು ೧. ಸ್ಥಲಕಟ್ಟಿನ ವಚನಗಳು ೧. ಶೂನ್ಯಸಂಪಾದನೆಗಳು

೨. ಏಕಪುರಾತನರ ವಚನಗಳು ೨. ಇತರ ಸ್ಥಲಕಟ್ಟಿನ ವಚನಗಳು

ಚೆನ್ನಂಜೆದೇವರು, ಬೋಳಬಸವದೇವರು ಸಂಪಾದಿಸಿದ ಬಸವಸ್ತೋತ್ರದ ವಚನಗಳು ಇಲ್ಲವೇ ಶೂನ್ಯಸಂಪಾದನೆಯಂತಹ ಕೃತಿಗಳ ಸಂಪಾದನ ವಿಧಾನವನ್ನು ಕುರಿತು ಚರ್ಚಿಸಿದ್ದಾರೆ. ಪಾಠಶುದ್ಧಿ, ಪಾಠಪರಿಷ್ಕರಣ, ಪಾಠಾಂತರಕ್ಕೆ ಕಾರಣಗಳನ್ನು ಹುಡುಕುವುದರ ಮೂಲಕ ಆ ಕಾಲದ ಸಂಪಾದಕರಿಗೆ ಎದುರಾದ ಸಮಸ್ಯೆಯನ್ನು ತಮ್ಮ ಪ್ರಸ್ತಾವನೆಯಲ್ಲಿ ಬಿಚ್ಚಿಡುತ್ತಾರೆ. "ಅದೇನೇ ಇದ್ದರೂ ಇಲ್ಲಿಯ ಬಹುಪಾಲು ವಚನಗಳು ಪ್ರಾಮಾಣಿಕವಾಗಿವೆ ಎಂಬುದನ್ನು ಈ ಕಾರ್ಯದಲ್ಲಿ ದುಡಿದು ನಮಗೆ ಅಪಾರವಾದ ವಚನ ಸಾಹಿತ್ಯವನ್ನು ಉಳಿಸಿಕೊಟ್ಟ ಪುಣ್ಯ ಈ ಸಂಪಾದನಾಕಾರರಿಗೆ ಸಲ್ಲುತ್ತದೆಂಬುದನ್ನು ಮರೆಯುವಂತಿಲ್ಲ."[೪೪]

ಬಸವಸ್ತೋತ್ರದ ವಚನಗಳನ್ನು ಸಂಪಾದಿಸಿದ ಚೆನ್ನಂಜೆದೇವ ಮತ್ತು ಬೋಳಬಸವರಾಜ ದೇವರ ಇತಿವೃತ್ತವನ್ನು ತ್ರಿವಿಧಿ ವ್ಯಾಖ್ಯಾನ, ಚತುರಾಚಾರ್ಯಪುರಾಣ, ಸಿದ್ಧೇಶ್ವರ ಪುರಾಣಗಳ ಆಧಾರಗಳಿಂದ ನಿರೂಪಿಸುವ ಪ್ರಯತ್ನ ಮಾಡಿದ್ದಾರೆ. ತೋಂಟದ ಸಿದ್ಧಲಿಂಗಯತಿಯ ಮೂರನೇ ತಲೆಮಾರಿನವನಾದ ಹರತಾಳ ಚೆನ್ನಂಜೆದೇವ ಸಂಪಾದನೆಯ ಚೆನ್ನಂಜೆದೇವನೆಂದೇ ಪ್ರಸಿದ್ಧಿಯಾಗಿದ್ದಾನೆ. ಹರತಾಳ ಗ್ರಾಮಸೂಚಿಯಾಗಿದ್ದರೆ, ಸಂಪಾದನೆ ಕಾಯಕಸೂಚಿಯಾಗಿದೆ. ಈ ಚೆನ್ನಂಜೇದೇವನ ಪರಂಪರೆ ಎರಡು ಕವಲಾಗಿ ಒಡೆದು ಪರ್ವತೇಂದ್ರನ ಪರಂಪರೆ ಮತ್ತು ಎಳೆಮಲೆಯ ಗುರುಶಾಂತ ದೇವನ ಪರಂಪರೆಯಾಗಿ ಮುಂದುವರಿದಿದೆ. ಎಳೆಮಲೆಯ ಗುರುಶಾಂತದೇವನ ಶಿಷ್ಯನಾದ ಸಂಪಾದನೆಯ ಸಿದ್ಧವೀರಣಾಚಾರ್ಯನ ಶಿಷ್ಯ ಸಂಪಾದನೆಯ ಬೋಳಬಸವೇಶ, ಹೀಗಾಗಿ ಬಸವಸ್ತೋತ್ರದ ವಚನಗಳು ಹೆಸರಿನ ಗ್ರಂಥಗಳು ಒಂದೇ ಗುರುಪರಂಪರೆಯ ಇಬ್ಬರು ವ್ಯಕ್ತಿಗಳಿಂದ ರಚನೆಯಾಗಿರುವುದನ್ನು ಮತ್ತು ಈ ಇಬ್ಬರಲ್ಲಿಯೂ ಎರಡು ಕುಟುಂಬಗಳಾಗಿ ಕವಲೊಡೆದಿರುವುದನ್ನು ಸಾಧಾರಪೂರ್ವಕವಾಗಿ ಎಂ.ಎಂ.ಕಲಬುರ್ಗಿ ಅವರು ದಾಖಲಿಸಿದ್ದಾರೆ. ಅದೇನೇ ಇದ್ದರೂ ಬಸವಣ್ಣನಂತಹ ಒಬ್ಬ ವ್ಯಕ್ತಿಯನ್ನು ಕುರಿತು ಹಲವಾರು ಕಾವ್ಯಗಳು ರಚನೆಯಾಗಿರುವುದು ಐತಿಹಾಸಿಕವಾಗಿ ಕುತೂಹಲವನ್ನು ಉಂಟು ಮಾಡುತ್ತವೆ. ಅದಕ್ಕೆ ಎಂ.ಎಂ.ಕಲಬುರ್ಗಿ ಅವರು ಕೊಡುವ ಕಾರಣ ಅತ್ಯಂತ ಮಹತ್ವವಾದದ್ದು. "ವೀರಶೈವ ನಿರ್ಣಯ ಪರಮಾವಾತಾರ' ಎನಿಸಿದ ಬಸವಣ್ಣನವರು ವೀರಶೈವದ ಉಸಿರು. ಮಾನವನಾಗಿ ಹುಟ್ಟಿ ದೇವಮಾನವನಾಗಿ ಬೆಳೆದ ಈತನ ನಾಮ ವೀರಶೈವರಿಗೆ ಮಂತ್ರ ಸ್ವರೂಪ. ಕಳೆದ ೮೦೦ ವರ್ಷಗಳಿಂದಲೂ ಸುಖದುಃಖಗಳಲ್ಲಿ ನಿತ್ಯ ಸ್ಮರಣೀಯವಾಗಿ, ವೀರಶೈವ ಹಸ್ತಪ್ರತಿಗಳ ಪ್ರಾರಂಭದಲ್ಲಿ 'ಶ್ರೀ ಗುರು ಬಸವಲಿಂಗಾಯನಮಃ' ಎಂದು ಸ್ವಸ್ತಿಲೇಖನವಾಗಿ ಈ ಹೆಸರು ಬಳಕೆಯಾಗುತ್ತ ಬಂದಿದೆ. ಹೀಗೆ ತಮ್ಮ ಅಂತರಂಗ ಬಹಿರಂಗಗಳಲ್ಲಿ ತುಂಬಿ ತುಳುಕುತ್ತಿರುವ ಈ ವಿಭೂತಿ ವ್ಯಕ್ತಿತ್ವವನ್ನು ಕಂಡು ಮಂತ್ರಮುಗ್ಧರಾದ ಶಿವಶರಣರು, ಶಿವಕವಿಗಳು

ಮನದಣಿ ಹೊಗಳಿದ್ದಾರೆ. ಯಾವ ಶರಣರ ವಿಷಯವಾಗಿಯೂ ಇಲ್ಲದಷ್ಟು ಸ್ತುತಿರೂಪದ ಅನೇಕ ವಚನಗಳೂ ಚರಿತ್ರೆ, ಪುರಾಣರೂಪದ ಅನೇಕ ಕಾವ್ಯಗಳೂ ಬಸವಣ್ಣನವರ ಬಗೆಗೆ ಕನ್ನಡದಲ್ಲಿ ಕಣ್ಣು ತೆರೆದಿವೆ. ಇವುಗಳಲ್ಲಿ ಒಂದು ಕಡೆ ಶಿವಕವಿಗಳ ಕೃತಿಗಿದ್ದ ಪದ್ಯಗಳನ್ನು ಆಯ್ದುಕೊಂಡು "ಬಸವಸ್ತೋತ್ರದ ಷಟ್ಪದಿ" ಮುಂತಾದವುಗಳನ್ನು ಸಂಪಾದಿಸಿದರೆ, ಇನ್ನೊಂದು ಕಡೆ ಶಿವಶರಣರ ಸಾಹಿತ್ಯದಿಂದ ವಚನಗಳನ್ನು ಆಯ್ದುಕೊಂಡು 'ಬಸವಸ್ತೋತ್ರದ ವಚನ'ಗಳನ್ನು ಸಂಪಾದನಕಾರರು ಸಂಪಾದಿಸಿದ್ದಾರೆ.[೪೫]

ಈ ಸಂಪಾದನೆಯಲ್ಲಿ ಸಿದ್ಧರಾಮ, ಉರಿಲಿಂಗ ಪೆದ್ದಿ, ತೋಂಟದ ಸಿದ್ಧಲಿಂಗ, ಸೊಡ್ಡಳ ಬಾಚರಸ, ಅಕ್ಕಮಹಾದೇವಿ, ಮರುಳಶಂಕರದೇವ, ಅಕ್ಕನಾಗಮ್ಮ, ನೀಲಲೋಚನೆ, ಮೇದಾರ ಕೇಶಯ್ಯ, ಮರುಳಶಂಕರದೇವ, ಕಿನ್ನರಿಬೊಮ್ಮಯ್ಯ, ಹಾವಿಹಾಳ ಕಲ್ಲಯ್ಯ, ಬಹುರೂಪಿ ಚೌಡಯ್ಯ, ಮೋಳಿಗೆ ಮಾರಯ್ಯ, ಹಡಪದ ಅಪ್ಪಣ್ಣ, ಸ್ವತಂತ್ರ ಸಿದ್ಧಲಿಂಗೇಶ, ಆಯ್ದಕ್ಕಿ ಮಾರಯ್ಯ, ಸೋಮನಾಥ ಮುಂತಾದ ವಚನಕಾರರ ೨೪೮ ವಚನಗಳು ಈ ಸಂಕಲನದಲ್ಲಿ ಸಮಾವೇಶಗೊಳಿಸ ಲಾಗಿದೆ. ಇಲ್ಲಿಯ ವಚನಗಳು ಬಸವಣ್ಣನ ತೀರಾ ವೈಯಕ್ತಿಕ ಬದುಕನ್ನು ಕಟ್ಟಿಕೊಡುತ್ತವೆ. ಬಸವಣ್ಣನವರ ಸಾಧನೆ ಮತ್ತು ಆತನ ವ್ಯಕ್ತಿತ್ವದ ಘನತೆಯನ್ನು ಓದುಗರ ಕಣ್ಣು ಮುಂದೆ ಸುಳಿಯುವಂತೆ ಮಾಡಿದ ಸಂಪಾದಕರ ಶ್ರಮವನ್ನು ಸ್ಮರಿಸಿರುವ ಕಲಬುರ್ಗಿ ಅವರು ಅಪ್ರಕಟಿತ ಸ್ಥಿತಿಯಲ್ಲಿ ಉಳಿದ ಕೃತಿಯೊಂದನ್ನು ಸಂಪಾದಿಸಿಕೊಡುವುದರ ಮೂಲಕ ವಚನ ಸಾಹಿತ್ಯದ ಉಪೇಕ್ಷಿತ ನೆಲೆಗಳನ್ನು ಪರಿಶೋಧಿಸಿದ ಕೀರ್ತಿಗೆ ಭಾಜನರಾಗಿದ್ದಾರೆ.

ಚೆನ್ನಂಜೇದೇವನ 'ಬಸವಸ್ತೋತ್ರದ ವಚನಗಳು' ಕೃತಿ ಶ್ರೀ ಎಸ್.ಎಂ.ಹುಣಸ್ಯಾಳ ಮತ್ತು ಶ್ರೀ ಸಿ.ಎಚ್.ಅನ್ನದಾನಯ್ಯ ಅವರಿಂದ ೧೯೬೮ರಲ್ಲಿ ಪ್ರಕಟಗೊಂಡಿದೆ. ಆದರೆ ಬೋಳಬಸವ ರಾಜದೇವರ 'ಬಸವಸ್ತೋತ್ರದ ವಚನಗಳು' ಪ್ರಥಮ ಸಲ ಪ್ರಕಟವಾಗಿದೆ. 'ಈ ಎರಡಕ್ಕೂ ಕ್ರಮವಾಗಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರದ ತಾಳೆಗರಿ ಪ್ರತಿ ನಂ.೩೧೪(ಚೆ) ಮತ್ತು ನಂ.೩೨೩(ಬ)ಗಳನ್ನು ಮೂಲಮಾತೃಕೆಗಳೆಂದು ಬಳಸಿಕೊಂಡಿದ್ದೇವೆ. ಪಾಠಾಂತರಗೋಸ್ಕರ ಚೆನ್ನಂಜೆದೇವರ ಕೃತಿಗೆ ಶ್ರೀ ಹುಣಸ್ಯಾಳ(ಹು) ಅವರ ಪ್ರಕಟನೆಯನ್ನು ಬೋಳಬಸವರಾಜ ದೇವರ ಕೃತಿಗೆ ಕನ್ನಡ ಅಧ್ಯಯನ ಪೀಠದ ವಚನ ಭಂಡಾರದ ಹಸ್ತಪ್ರತಿ ೧೧೫(ಬ೨)ಯನ್ನೂ ಬಳಸಿಕೊಳ್ಳಲಾಗಿದೆ. ಅವಶ್ಯವೆನಿಸಿದಲ್ಲಿ ಎರಡಕ್ಕೂ ಕನ್ನಡ ಅಧ್ಯಯನ ಪೀಠ ಪ್ರಕಟಿಸಿರುವ 'ಚೆನ್ನಬಸವಣ್ಣನವರ ವಚನಗಳು'(ಚಟ) 'ಶ್ರೀ ಸಿದ್ಧರಾಮೇಶ್ವರ ವಚನಗಳು'(ಸಿ), ಶಿವಶರಣೆಯರ ವಚನಗಳು(ಶಿವ), ಡಾ.ಎಲ್.ಬಸವರಾಜು ಸಂಪಾದಿಸಿದ 'ಅಲ್ಲಮನ ವಚನ ಚಂದ್ರಿಕೆ' ಈ ಗ್ರಂಥಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಹಸ್ತಪ್ರತಿಗಳಲ್ಲಿ

ವಚನಗಳ ತಲೆಯ ಮೇಲೆ ಇಲ್ಲದ ಆ ಶರಣರ ಹೆಸರುಗಳನ್ನು ಇಲ್ಲಿ ಶೀರ್ಷಿಕೆಯಾಗಿ ಕೊಡಲಾಗಿದೆ. ಹೀಗೆ ಕೊಡುವಲ್ಲಿ ತುಂಬ ಎಚ್ಚರ ವಹಿಸಿದರೂ ಚೆನ್ನಂಜೆದೇವರ ಸಂಪುಟದ ೧೩೫ನೆಯ ವಚನದ ಮೇಲೆ 'ನೀಲೋಚನೆ' ಎಂಬ ಶೀರ್ಷಿಕೆ ಬಿಟ್ಟು ಹೋಗಿದೆ. ೧೩೭ನೆಯ ವಚನದ ಮೇಳೆ ಹಡಪದ ಅಪ್ಪಣ್ಣಕ್ಕೆ ಬದಲು ನೀಲಲೋಚನೆ ಎಂದು ಅಚ್ಚಾಗಿದೆ. ಈ ದೋಷವನ್ನು ವಿದ್ವಾಂಸರು ಮನ್ನಿಸಬೇಕೆಂದು ವಿನಮ್ರತೆ ತೋರಿದ್ದಾರೆ.

ಈ ಕೃತಿಯಲ್ಲಿ ಸಂಪಾದಕರು ಲಿಪಿಕಾರರು ಅನುದ್ದೇಶಿತ ಪಾಠಾಂತರಗಳನ್ನು ಬಿಟ್ಟರೂ ಉದ್ದೇಶಿತ ಪಾಠಾಂತರ, ರೂಪಾಂತರಗಳನ್ನು ಕೂಡ ಗುರುತಿಸಿದ್ದಾರೆ. ಶೂನ್ಯಸಂಪಾದನೆಯ ವಚನಗಳ ಸಂಗ್ರಹ ಸಂಪಾದನೆಯ ಅನುಕೂಲಕರಿಸುವುದಕ್ಕೆ ಕೆಲವು ಪಾಠಾಂತರಗಳಾಗಿವೆ. ಅವುಗಳನ್ನು ನೋಡುವುದಾದರೆ,

"ತನುವು ಕೊಟ್ಟು ತನು ಬಯಲಾಯಿತ್ತು.
ಮನವ ಕೊಟ್ಟು ಮನ ಬಯಲಾಯಿತ್ತು.
ಧನವ ಕೊಟ್ಟು ಧನ ಬಯಲಾಯಿತ್ತು.
ಈ ತ್ರಿವಿಧವನು ಕೊಟ್ಟ ಕಾರಣ
ಕೂಡಲಚೆನ್ನ ಸಂಗಯ್ಯನಲ್ಲಿ ಬಸವಣ್ಣಂಗೆ ಬಯಲ ಸಮಾಧಿಯಾಯಿತ್ತಯ್ಯಾ"

ಮೂಲತಃ ಬಸವಣ್ಣನ ಸ್ತುತಿಯಾಗಿರುವ ಈ ವಚನವನ್ನು 'ಬಸವಸ್ತೋತ್ರದ ವಚನ' ಕೃತಿಗೆ ಬರಮಾಡಿಕೊಳ್ಳುವಲ್ಲಿ ಬೋಳ ಬಸವರಾಜದೇವರು

ತನುವಕೊಟ್ಟು ತನು ಬಯಲಾಯಿತ್ತು, ಬಸವಣ್ಣಂಗೆ
ಮನವಕೊಟ್ಟು ಮನ ಬಯಲಾಯಿತ್ತು, ಬಸವಣ್ಣಂಗೆ
ಧನವಕೊಟ್ಟು ಧನ ಬಯಲಾಯಿತ್ತು, ಬಸವಣ್ಣಂಗೆ
ಈ ತ್ರಿವಿಧವನು ಕೊಟ್ಟ ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ
ಬಸವಣ್ಣಂಗೆ ಬಯಲ ಸಮಾಧಿಯಾಯಿತ್ತಯ್ಯಾ."[೪೬]

ಜನಪ್ರಿಯವಾದ ವಚನಸಾಹಿತ್ಯಕ್ಕೆ ಭದ್ರಬುನಾದಿಯನ್ನು ಹಾಕಿದವರು ಬಸವಾದಿ ಶರಣರು. ಜನಜೀವನದ ಪ್ರತಿಬಿಂಬವಾಗಿರುವ ವಚನ ಸಾಹಿತ್ಯ ವಾಸ್ತವತೆಗೆ ತುಂಬಾ ಹತ್ತಿರವಾದ ಕೈಪಿಡಿಯಾಗಿದೆ. ಬಸವಯುಗ ವಚನಗಳ ಸೃಷ್ಟಿಯ ಸಂದರ್ಭವಾದರೆ ಬಸವೋತ್ತರಯುಗ ಸಂಗ್ರಹ-ಸಂಕಲನ-ಸಂಪಾದನೆಗೊಳಪಡಿಸುವ ಟೀಕೆ ಟಿಪ್ಪಣಿ ಕಾರ್ಯ ಕೈಗೊಂಡ ಸಂದರ್ಭ ಬಸವಣ್ಣನನ್ನು ಕುರಿತು ಅಭ್ಯಾಸ ಮಾಡುವ ವಿದ್ವಾಂಸರಿಗೆ ಒಂದೆರಡು ಟೀಕೆಗಳು ಮಾತ್ರ ಇವೆ ಎಂದು

ಅವುಗಳ ಅಧ್ಯಯನದಲ್ಲಿ ತೊಡಗಿದಾಗ ೫ ಟೀಕೆಗಳು ದೊರೆತು ವಿಸ್ತಾರವಾದ ಹೊಸದೊಂದು ಕ್ಷೇತ್ರವೇ ಬೆಳಕಿಗೆ ಬಂದಿದೆ ಎನ್ನುತ್ತ "ಈ ಟೀಕಿನ ವಚನಗಳು ಸುಮಾರು ೧೫ರಿಂದ ೧೯ನೆಯ ಶತಮಾನದವರೆಗಿನ ವೀರಶೈವ ವಿದ್ವಾಂಸರು ಬಸವಣ್ಣನವರ ಬರವಣಿಗೆಯನ್ನು ಅರ್ಥ ಮಾಡಿಕೊಳ್ಳಲು, ಅರ್ಥ ಮಾಡಿಸಲು ನಡೆಸಿದ ಪ್ರಯತ್ನದ ಫಲವೆನಿಸಿವೆ. ಹೀಗಾಗಿ ಈ ಕೃತಿಗಳು ನಮ್ಮ ನಾಡಿನಲ್ಲಿ ಬಸವಣ್ಣನವರ ವಚನಗಳ ಅಧ್ಯಯನಕಾರ್ಯ 'ನಡೆದುಬಂದ ದಾರಿ'ಯನ್ನು ಸೂಚಿಸುವ ಕೈಗಂಬಗಳಾಗಿವೆ"[೪೭] ಎಂಬ ಎಂ.ಎಸ್.ಸುಂಕಾಪುರ ಅವರ ಅಭಿಪ್ರಾಯವನ್ನು ಗಮನಿಸಿದಾಗ ಟೀಕಾ ಸಾಹಿತ್ಯ ಒಂದು ಹೊಸ ಸಾಹಿತ್ಯ ಕ್ಷೇತ್ರವಾಗಿ ಆಗತಾನೆ ಬೆಳಕಿಗೆ ಬಂದಿರುವುದು ತಿಳಿಯುತ್ತದೆ. ಕನ್ನಡ ಸಾಹಿತ್ಯದಲ್ಲಿಯೇ ಬಸವಣ್ಣನನ್ನು ಕುರಿತು ಹುಟ್ಟಿದ ಕೃತಿಗಳು ಬೇರೊಬ್ಬರ ವಿಷಯದಲ್ಲಿ ಹುಟ್ಟಿಲ್ಲ, ಅದೇ ರೀತಿ ಅವರ ವಚನ ಸಂಪುಟಕ್ಕೆ ಬರೆಯಲಾಗಿಲ್ಲ"[೪೮] ಎಂದು ಎಂ.ಎಂ.ಕಲಬುರ್ಗಿ ಅವರ ಬಸವಣ್ಣನವರನ್ನು ಕುರಿತಂತಹ ಈ ಅಭಿಪ್ರಾಯ ಪೂರಕವೇ ಆಗಿದೆ.

ಬಸವಣ್ಣನವರ ಷಟ್‌ಸ್ಥಲದ ವಚನಗಳಿಗೆ ಪ್ರಾಚೀನ ಕಾಲದಲ್ಲಿ ಐದು ಜನ ಟೀಕೆಗಳನ್ನು ರಚಿಸಿದ್ದಾರೆ. ಈ ೫ ಟೀಕೆಗಳನ್ನೊಳಗೊಂಡ ಸಂಯುಕ್ತ ಸಂಪುಟವೇ ಬಸವಣ್ಣನವರ ಟೀಕಿನ ವಚನಗಳು, ಸಂಪುಟ ೧, ೧೯೭೮ ಮತ್ತು ಸಂಪುಟ ೨, ೧೯೮೧ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಬಸವೇಶ್ವರ ಪೀಠದ ಮೂಲಕ ಎಂ.ಎಂ.ಕಲಬುರ್ಗಿ ಅವರು ಪರಿಷ್ಕರಿಸಿ ಪ್ರಕಟಿಸಿದ್ದಾರೆ. ಎಂ.ಎಂ.ಕಲಬುರ್ಗಿ ಅವರಿಗಿಂತ ಪೂರ್ವದಲ್ಲಿ ಬಸವಣ್ಣನವರ ಟೀಕಿನ ವಚನಗಳನ್ನು ವಿರೂಪಾಕ್ಷಪ್ಪ ಚೆನ್ನಪ್ಪ ಮಾಳಗಿ ೧೯೫೪ ಮತ್ತು ಎಸ್.ಎಂ.ಹುಣಸ್ಯಾಳ, ೧೯೭೧ರಲ್ಲಿ ಪರಿಷ್ಕರಿಸಿ ಪ್ರಕಟಿಸಿದ್ದರು. ಆದರೆ ಸಮಗ್ರವಾಗಿ ಪರಿಷ್ಕರಿಸಿರಲಿಲ್ಲ. ಆ ಕೆಲಸವನ್ನು ಪೂರ್ಣಗೊಳಿಸುವ ಹಿನ್ನೆಲೆಯಲ್ಲಿ ೫ ಟೀಕೆಗಳನ್ನು ಒಂದೆಡೆ ತರುವಲ್ಲಿ ಎಂ.ಎಂ.ಕಲಬುರ್ಗಿ ಅವರ ಪಾತ್ರ ಮಹತ್ವದ್ದಾಗಿದೆ.

'ಬಸವಣ್ಣನವರ ಷಟ್‌ಸ್ಥಲ ವಚನಗಳು' ಗ್ರಂಥಕ್ಕೆ ಈವರೆಗೆ ೫ ಜನ ಟೀಕೆ ಬರೆದಿದ್ದು, ಅದೇ ಹೆಸರಿನಲ್ಲಿ I, II, III, IV, V ಸಂಕೇತಗಳಿಂದ ಪ್ರಕಟವಾಗಿವೆ. ಎಂ.ಎಂ.ಕಲಬುರ್ಗಿ ಅವರು ಈ ಕೃತಿಯನ್ನು ಸಂಪಾದಿಸುವಾಗ I ಮತ್ತು IIನೆಯ ಟೀಕಾಕಾರರ ಹೆಸರು ತಿಳಿದಿಲ್ಲ ಎನ್ನುತ್ತ ಉಳಿದ ಮೂವರು ಟೀಕಾಕಾರರನ್ನು ಹೆಸರಿಸಿದ್ದಾರೆ. ಅಷ್ಟಕ್ಕೆ ಅವರ ಸಂಶೋಧನೆಯನ್ನು ಬಿಡದೇ ಮತ್ತೆ ಬಸವಣ್ಣನವರ ಟೀಕಾ ಸಾಹಿತ್ಯ ಕುರಿತಂತೆ ಆಳವಾದ ಅಧ್ಯಯನದಲ್ಲಿ ತೊಡಗಿದ ಸಂದರ್ಭದಲ್ಲಿ I ನೆಯ ಟೀಕಾಕಾರನನ್ನು ಶೋಧಿಸಿರುವುದನ್ನು ಮಾರ್ಗ ೧

ಸಂಪುಟದಲ್ಲಿ ಬಸವಣ್ಣವರ ಷಟ್‌ಸ್ಥಲ ವಚನವ್ಯಾಖ್ಯಾನದ ಕರ್ತೃ ಲೇಖನದಲ್ಲಿ ಚರ್ಚಿಸಿದ್ದಾರೆ. ಈವರೆಗೆ ಮರೆಯಾಗಿದ್ದ ಈತನನ್ನು ಶೋಧಿಸುವಲ್ಲಿ ಸಿದ್ಧವೀರಸ್ವಾಮಿ ಕೃತ 'ಮುಕ್ತಿಕಂಠಾಭರಣ' ಹೆಸರಿನ ವಚನ ಸಂಕಲನದ ಗ್ರಂಥ ನೆರವಾದ ಕಾರಣ ಟೀಕಾಕಾರನ ಹೆಸರನ್ನು ನಿರ್ಣಯಿಸಲು ಸಾಧ್ಯವಾದ ಬಗೆಯನ್ನು ತಿಳಿಸಿದ್ದಾರೆ. ಮುಕ್ತಿಕಂಠಾಭರಣದಲ್ಲಿ ಉದ್ಧರಿಸಲಾದ ಟೀಕೆ ಈಗ ಪ್ರಕಟವಾದ 'ಬಸವಣ್ಣನವರ ಟೀಕಿನ ವಚನಗಳು' ಗ್ರಂಥದ I ನೆಯ ಟೀಕೆಯಲ್ಲಿ ಸಿಗುವುದರಿಂದ ಇದನ್ನು ಬರೆದವನು ಹುಮನಾಬಾದ್ ವಿರಕ್ತ ಮಠದ ನಿರಂಜನಸ್ವಾಮಿ ಎಂದು ಸ್ಪಷ್ಟವಾಗುತ್ತದೆ"[೪೯] ಎಂದು ಹೇಳಿರುವುದನ್ನು ಗಮನಿಸಿದಾಗ ಎಂ.ಎಂ.ಕಲಬುರ್ಗಿ ಅವರಿಗಿದ್ದ ಅಧ್ಯಯನ ತುಡಿತ ನಮಗೆ ಗೋಚರವಾಗುತ್ತದೆ. "ಎಸ್.ಶಿವಣ್ಣ ಅವರು ಇದರ ಟೀಕಾಕಾರ ಹುಮನಾಬಾದಿನ ನಿರಂಜನಸ್ವಾಮಿ ಎಂದು ಗುರುತಿಸಿದ್ದಾರೆ."[೫೦] ಇಲ್ಲಿ ಎಸ್.ಶಿವಣ್ಣ ಹಾಗೂ ಎಂ.ಎಂ.ಕಲುಬುರ್ಗಿ ಅವರ ಇಬ್ಬರ ಅಭಿಪ್ರಾಯ ಒಂದೇ ಆಗಿರುವುದರಿಂದ Iನೇ ಟೀಕಾಕಾರ ಹುಮನಾಬಾದಿನ ನಿರಂಜನ ಸ್ವಾಮಿಗಳು ಎಂಬುದನ್ನು ನಾವೆಲ್ಲ ಒಪ್ಪಬೇಕಾಗುತ್ತದೆ. IIನೆಯ ಟೀಕಾಕಾರ ಅಜ್ಞಾತವಾಗಿದ್ದಾನೆ. ಬಹುಶಃ ಎಂ.ಎಂ.ಕಲಬುರ್ಗಿ ಅವರು ಇನ್ನು ಕೆಲವು ಕಾಲ ಬದುಕಿದ್ದರೆ ಈ II ನೆಯ ಟೀಕಾಕಾರನನ್ನು ಹುಡುಕುತ್ತಿದ್ದರೆನಿಸುತ್ತದೆ. ನಂತರ IIIನೆಯ ಟೀಕಾಕಾರ ಸೋಮಶೇಖರ ಶಿವಯೋಗಿ(ಕಾಲ ೧೮೦೦) IVನೆಯ ಟೀಕಾಕಾರ ಗುರುಬಸವರಾಜದೇವ(ಕಾಲ ೧೭ನೆಯ ಶತಮಾನ) Vನೆಯ ಟೀಕಾಕಾರ ಪರ್ವತ ಶಿವಯೋಗಿ.

ಎಂ.ಎಂ.ಕಲಬುರ್ಗಿ ಅವರು ಈ ಐದು ಟೀಕಾಕಾರರ ಪರಿಷ್ಕರಣಕ್ಕಾಗಿ ಎಂಟು ಹಸ್ತಪ್ರತಿಗಳನ್ನು ಬಳಸಿಕೊಂಡಿದ್ದಾರೆ. Iನೆಯ ಟೀಕಾಕಾರನ ವಚನಗಳ ಪರಿಷ್ಕರಣಕ್ಕೆ ೨ ಪ್ರತಿಗಳನ್ನು 'ಕನ್ನಡ ಅಧ್ಯಯನ ಪೀಠ'ದ ಹಸ್ತಪ್ರತಿ ಭಂಡಾರದಿಂದ ಬಳಸಿಕೊಂಡಿದ್ದಾರೆ. ಇದು ೪೮೧ನೆಯ ಕ್ರಮಾಂಕಿನ ಪ್ರತಿಯಾಗಿದ್ದು, ಕೋರಿಕಾಗದದ ಹಸ್ತಪ್ರತಿಯಾಗಿದೆ. ಇದರಲ್ಲಿ ೧ರಿಂದ ೪೧೪ ಪುಟಗಳಿವೆ. ಇದರಲ್ಲಿ ೯೭೧ ವಚನಗಳಿಗೆ ಟೀಕೆ ಬರೆಯಲಾಗಿದೆ. ಇದಕ್ಕೆ 'ಕ' ಸಂಕೇತವನ್ನು ಎಂ.ಎಂ.ಕಲಬುರ್ಗಿ ಅವರು ನೀಡಿದ್ದಾರೆ. ಇನ್ನೊಂದು ಅದೇ ಹಸ್ತಪ್ರತಿ ಭಂಡಾರದ ೨೭೪೪ ಕ್ರಮಾಂಕಿನ ಹಸ್ತಪ್ರತಿಯಾಗಿದ್ದು, ಇದರಲ್ಲಿ ೯೫೮ ವಚನಗಳಿಗೆ ಟೀಕೆ ಬರೆಯಲಾಗಿದೆ. ಇದಕ್ಕೆ 'ಗ' ಎಂಬ ಸಂಕೇತ ನೀಡಿದ್ದಾರೆ.

IIನೆಯ ಟೀಕಾರನ ವಚನಗಳ ಪರಿಷ್ಕರಣಕ್ಕೆ ಎರಡು ಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರದ ೭೧೫ನೆಯ ಕ್ರಮಾಂಕಿನ ತಾಳೆಪ್ರತಿಯಾಗಿದೆ. ಇದಕ್ಕೆ 'ಚ' ಎಂಬ ಸಂಕೇತ ನೀಡಿದ್ದಾರೆ. ಇನ್ನೊಂದು ಎಸ್.ಆರ್.ಗುಂಜಾಳ ಅವರ ಬಳಿ ಇದ್ದ ಕೋರಿಕಾಗದದ ಪ್ರತಿ ಇದಕ್ಕೆ 'ಜ' ಸಂಕೇತ ನೀಡಲಾಗಿದೆ.

IIIನೆಯ ಟೀಕಾಕಾರ ಸೋಮಶೇಖರ ಶಿವಯೋಗಿ ಅವರ ಕೃತಿಗೆ ೨ ಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಅವೆರಡೂ ಎಸ್.ಉಮಾಪತಿ ಅವರ ಬಳಿ ಇದ್ದ ಪ್ರತಿಗಳು. ಇವುಗಳಿಗೆ 'ಟ', 'ಡ' ಎಂಬ ಸಂಕೇತ ನೀಡಲಾಗಿದೆ.

IVನೆಯ ಗುರುಬಸವರಾಜ ದೇವರ ಕೃತಿಗೆ ಒಂದು ಪ್ರತಿಯನ್ನು ಬಳಸಿದ್ದಾರೆ. ಇದು ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರದ ಪ್ರತಿಯಾಗಿದ್ದು, ಇದಕ್ಕೆ 'ತ' ಎಂಬ ಸಂಕೇತವನ್ನು ನೀಡಲಾಗಿದೆ.

Vನೆಯ ಪರ್ವತ ಶಿವಯೋಗಿಯ ಕೃತಿಗೆ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದ ೧೧೪೯ನೆಯ ಕ್ರಮಾಂಕಿನ ತಾಳೆಗರಿ ಪ್ರತಿಯನ್ನು ಬಳಸಿಕೊಂಡಿದ್ದಾರೆ. ಇದರಲ್ಲಿ ೨೦೨ ವಚನಗಳಿಗೆ ಟೀಕೆಗಳನ್ನು ಬರೆದಿದ್ದಾರೆ. ಈ ಪ್ರತಿಗೆ 'ಪ' ಎಂಬ ಸಂಕೇತವನ್ನು ನೀಡಲಾಗಿದೆ.

ಬಸವಣ್ಣನವರ ಟೀಕಿನ ವಚನ ಪರಿಷ್ಕರಣ ವಿಷಯ ಕುರಿತಂತೆ ಸಂಪಾದಕರು ಪ್ರಸ್ತಾವನೆಯಲ್ಲಿ "ಒಂದು ಕೃತಿಯ ಎಲ್ಲ ಕುಟುಂಬಗಳ ಒಂದೊಂದು ಉತ್ತಮ ಪ್ರತಿಗಳನ್ನು ಆಯ್ದುಕೊಳ್ಳುವುದು ಲೇಸು" ಎಂಬ ತತ್ವದ ಮೇಲೆ ಈ ಸಂಪುಟಗಳನ್ನು ಪರಿಷ್ಕರಿಸಲಾಗಿದೆ ಎಂದಿದ್ದಾರೆ.

ಬಸವಣ್ಣನ ಟೀಕಿನ ವಚನಗಳು ಸಂಪುಟ ೧ರಲ್ಲಿ ಭಕ್ತಸ್ಥಲದ ೫೨೭ ವಚನಗಳ ಟೀಕೆಗಳಿದ್ದು, ದ್ವಿತೀಯ ಸಂಪುಟದಲ್ಲಿ ೪೩೪ ಷಟ್‌ಸ್ಥಲದ ವಚನ ಟೀಕೆಗಳ ಜೊತೆಗೆ ೬೦ ಹೆಚ್ಚಿನ ವಚನಗಳನ್ನು 'ಲಿಂಗ ಲೀಲಾ ವಿಲಾಸ ಚಾರಿತ್ರ್ಯ', 'ಏಕೋತ್ತರ ಶತಸ್ಥಲಸಾರ', 'ವಿಶೇಷಾನುಭವ ಷಟ್‌ಸ್ಥಲ' ಮತ್ತು ಇತರ ಟೀಕೆಗಳಿಂದ ಸಂಗ್ರಹಿಸಿ ಸಂಪಾದಿಸಲಾಗಿದೆ. ಸಂಪಾದಕರು ಟೀಕಾಗ್ರಂಥಗಳನ್ನು ಸುಲಭವಾಗಿ ಗ್ರಹಿಸಲು ರೋಮನ್ ಅಂಕಿಯನ್ನು ಬಳಸಿದ್ದಾರೆ. ವಚನದ ಪಾಠಾಂತರ ಸೂಚನೆಗೆ ಇಂಗ್ಲಿಷ್ ಅಂಕಿಗಳನ್ನು, ಟೀಕೆಗಳ ಪಾಠಾಂತರ ಸೂಚನೆಗೆ ಕನ್ನಡ ಅಂಕಿಗಳನ್ನು ಬಳಸಿಕೊಂಡಿದ್ದಾರೆ. ಒಂದು ವಚನ ಮತ್ತು ಅದರ ಎಲ್ಲ ಟೀಕೆಗಳನ್ನು ಬೇರ್ಪಡಿಸಲು ಸರಳರೇಖೆಯನ್ನು(–) ಒಂದು ವಚನದ ಟೀಕೆಯಿಂದ ಟೀಕೆಯನ್ನು ಬೇರ್ಪಡಿಸಲು ತುಂಡು ಸರಳರೇಖೆಯನ್ನು(– – –) ಟೀಕೆಯಿಂದ ಪಾಠಾಂತರಗಳನ್ನು ಬೇರ್ಪಡಿಸಲು ಒಂದು ಸರಳರೇಖೆಯನ್ನು(……) ಬಳಸಿಕೊಂಡಿದ್ದಾರೆ. ಇದೊಂದು ಸಂಪಾದಕರ ಹೊಸ ಬಗೆಯ ಆಲೋಚನ ಕ್ರಮವಾಗಿದೆ.

ಸಂಪಾದಕರು ಪ್ರಸ್ತಾವನೆಯಲ್ಲಿ ಪ್ರಾಚೀನ ಟೀಕಾಸಾಹಿತ್ಯ, ಕನ್ನಡದಲ್ಲಿ ಟೀಕಾಸಾಹಿತ್ಯ, ವೀರಶೈವ ಟೀಕಾಸಾಹಿತ್ಯ ಕುರಿತು ಚರ್ಚಿಸಿದ್ದಾರೆ. ನಂತರ ಪ್ರತಿಯೊಬ್ಬ ಟೀಕಾಕಾರನ ಹೆಸರು,

ಕಾಲ, ದೇಶ, ಸ್ಥಳ ಮೊದಲಾದವುಗಳನ್ನು ಶೋಧಿಸುತ್ತ ಪ್ರತಿಯೊಬ್ಬ ಟೀಕಾ ಕೃತಿಗಳ ಟೀಕೆಗಳ ವೈಶಿಷ್ಟ್ಯತೆಯನ್ನು ಉದಾಹರಣೆ ಸಮೇತ ಸಂಪಾದಕರು ಗುರುತಿಸಿದ್ದಾರೆ. ಅನುಬಂಧದಲ್ಲಿ ಸಂಪುಟ ೧ ಮತ್ತು ಸಂಪುಟ ೨ಕ್ಕೆ ಪ್ರತ್ಯೇಕವಾಗಿ ಪ್ರತಿ ವಚನಕ್ಕೆ ಲಭ್ಯವಿರುವ ಟೀಕಾಕಾರರ ಟೀಕೆಗಳ ಕೋಷ್ಟಕವನ್ನು ಎರಡು ರೀತಿಯಲ್ಲಿ ನೀಡಿದ್ದಾರೆ. ವಚನಗಳ ಅನುಲೋಮಕ್ರಮದಲ್ಲಿ ಹಾಗೂ ವಚನಗಳ ಅಕ್ಷರಾನುಕ್ರಮಣಿಕೆಯಲ್ಲಿ ಎಂದರೆ ಅಕಾರಾದಿಯಾಗಿ ನೀಡಿದ್ದಾರೆ. ಈ ಎರಡೂ ಪದ್ಧತಿಯ ವಚನಗಳ ಕ್ರಮಣಿಕೆಯಲ್ಲಿ ಒಂದು ವಚನಗಳಿಗೆ ಲಭ್ಯವಿರುವ ಟೀಕೆಯನ್ನು 'Y' ಸೂಚನೆಯಿಂದ, ಲಭ್ಯವಿರದ ಟೀಕೆಯನ್ನು 'N' ಸೂಚನೆಯಿಂದಲೂ ಸೂಚಿಸಿದ್ದಾರೆ.

ಬಸವಣ್ಣನವರ ವಚನಗಳಿಗೆ ಲಭ್ಯವಿರುವ ಏಕೈಕ ಟೀಕಾಕಾರನ ಟೀಕಿನ ವಚನಗಳನ್ನು ಪರಿಷ್ಕರಿಸಿ ಸಂಪಾದಿಸುವುದು ತುಂಬ ಕಷ್ಟಕರವಾದ ಕೆಲಸ. ಅಂತೂ ಕೆಲಸಕ್ಕೆ ಕೈಹಾಕುವ ಮೂಲಕ ಬಸವಣ್ಣನ ವಚನಗಳ ೫ ಟೀಕೆಗಳನ್ನು ಒಂದೆಡೆ ತಂದ ಶ್ರೇಯಸ್ಸು ಎಂ.ಎಂ.ಕಲಬುರ್ಗಿ ಅವರಿಗೆ ಸಲ್ಲುತ್ತದೆ. ಇದು ವಚನ ಟೀಕಾಸಾಹಿತ್ಯ ಸಂಪಾದನ ಕೃತಿಗಳಲ್ಲಿಯೇ ಒಂದು ಮೈಲುಗಲ್ಲು ಎಂದರೆ ತಪ್ಪಾಗಲಾರದು.

**೨. ಬಸವಣ್ಣನವರ ಟೀಕಿನ ವಚನಗಳು ಸಂ.೧ ಸಂ.೨**

೧೯೭೮ರಲ್ಲಿ ಶ್ರೀ ಬಸವೇಶ್ವರ ಪೀಠದ ಅಡಿಯಲ್ಲಿ ಸಂಪಾದನೆಗೊಂಡ ಕೃತಿಯಾಗಿದೆ. ಈ ಕೃತಿಯು ಬಸವಣ್ಣನವರ ಷಟ್‌ಸ್ಥಲ ವಚನಗಳಿಗೆ ೫ ಜನ ಟೀಕಾಕಾರರು ಟೀಕೆಯನ್ನು ಬರೆದ ವಿಶೇಷ ಕೃತಿಯಾಗಿದೆ. ಇದು ವಚನ ಟೀಕಾಸಾಹಿತ್ಯ ಸಂಪಾದನ ಕೃತಿಗಳಲ್ಲಿಯೇ ಒಂದು ಮೈಲುಗಲ್ಲು ಎಂದರೆ ತಪ್ಪಾಗಲಾರದು. "ಇಲ್ಲಿ ೯೬೧ ಷಟ್‌ಸ್ಥಲಗಳಿಗೆ ಐದು ಜನ ಪ್ರಾಚೀನ ಟೀಕಾಕಾರರು, ಹೆಚ್ಚುವರಿ ೯೦ ವಚನಗಳಿಗೆ ಲಿಂಗವೀಲಾವಿಲಾಸ ಚಾರಿತ್ರ, ಏಕೋತ್ತರ ಷಟ್‌ಸ್ಥಲ, ವಿಶೇಷಾನುಭವ ಷಟ್‌ಸ್ಥಲಕಾರರು ಬರೆದ ಟೀಕೆಗಳನ್ನು ಸಂಯೋಜಿಸಿ ಸಂಪಾದಿಸಿ ಕೊಡಲಾಗಿದೆ. ಹೀಗಾಗಿ ಒಟ್ಟು ೧೦೫೧ ವಚನಗಳಿಗೆ ಒಂದರಿಂದ ಐದು ಟೀಕೆಗಳು ಇಲ್ಲಿ ದೊರೆಯುತ್ತವೆ. ಇದರ ಕೆಲವು ವೈಶಿಷ್ಟ್ಯಗಳನ್ನು ಹೀಗೆ ಗುರುತಿಸಬಹುದು.

೧. ವಚನಗಳ ಟೀಕಾಸಾಹಿತ್ಯವನ್ನು ಇಷ್ಟು ದೊಡ್ಡ ಪ್ರಮಾಣದಲ್ಲಿ ಬೆಳಕಿಗೆ ತಂದ ಪ್ರಥಮ ಪ್ರಯತ್ನವಿದು.

೨. ಈ ಪ್ರಯತ್ನದ ಮೂಲಕ ಮತ್ತು ಪ್ರಸ್ತಾವನೆಯಲ್ಲಿ ಆಡಿದ ಕೆಲವು ಮಾತುಗಳ ಮೂಲಕ ವಚನ ಸಾಹಿತ್ಯಕ್ಕೆ ಇರುವ ಟೀಕೆಯೆಂಬ ಹೊಸ ಕ್ಷೇತ್ರದ ಕಡೆಗೆ ವಿದ್ವಾಂಸರ ಗಮನ ಸೆಳೆಯಲಾಗಿದೆ.

೩. ಶಿಷ್ಟಪದ ಸಾಹಿತ್ಯ ಸಂಪಾದನಾ ಸೂತ್ರಗಳಿಂದ ಭಿನ್ನವಾದ ಸೂತ್ರಗಳಿಂದ ವಚನ ಸಾಹಿತ್ಯವನ್ನು ಸಂಪಾದಿಸಬೇಕು ಎನ್ನುತ್ತ ಕೆಲವು ಮಾರ್ಗದರ್ಶಿ ಸೂತ್ರಗಳನ್ನು ಅಲ್ಲಿ ಕೊಡಲಾಗಿದೆ. ಇಂಥ ಹಲವಾರು ಮೌಖಿಕ ಅಂಶಗಳನ್ನೊಳಗೊಂಡ ಇದು ಐದು ಜನ ಟೀಕಾಕಾರರ ತುಲನಾತ್ಮಕ ಅಭ್ಯಾಸಕ್ಕೆ ಬಸವಣ್ಣನವರ ಸಮಗ್ರ ಅಧ್ಯಯನಕ್ಕೆ ಉಪಯುಕ್ತ ಗ್ರಂಥವೆಂದು ಹೇಳಬಹುದು"[೫೧] ಎಂಬ ಶಿರೂರ ಅವರ ಮಾತನ್ನು ಇಲ್ಲಿ ಸ್ಮರಿಸಬೇಕಾಗುತ್ತದೆ. "೫ ಟೀಕೆಗಳಿಗೆ ಸಂಬಂಧಿಸಿ ದೊರೆಯುವ ಎಲ್ಲ ಹಸ್ತಪ್ರತಿಗಳನ್ನು ಪರಿಶೀಲಿಸಿ, ಪಾಠಾಂತರಗಳನ್ನು ಗುರುತಿಸಿ ತುಂಬ ಅಚ್ಚುಕಟ್ಟಾಗಿ ಪರಿಷ್ಕರಿಸಿರುವುದು ಪ್ರಸ್ತಾವನೆಯಲ್ಲಿ ಟೀಕಾಸಾಹಿತ್ಯ ಪರಂಪರೆ, ವಚನ ಟೀಕಾಸಾಹಿತ್ಯದ ಬೆಳವಣಿಗೆ, ಪ್ರಸ್ತುತ ಟೀಕೆಗಳ ಸ್ವರೂಪ, ಟೀಕಾಕಾರರ ಇತಿವೃತ್ತ–ದೃಷ್ಟಿಧೋರಣೆ, ಟೀಕೆಗಳ ಸಾಧನೆ–ಶಿಲ್ಪ–ಸಾಂಸ್ಕೃತಿಕ ಮಹತ್ವ, ಪರಿಷ್ಕರಣ ವಿಧಾನ, ಹಸ್ತಪ್ರತಿಗಳ ಪರಿಚಯ ಇತ್ಯಾದಿ ತತ್ಸಂಬಂಧಿ ಎಲ್ಲ ಸಂಗತಿಗಳನ್ನು ವ್ಯವಸ್ಥಿತವಾಗಿ ಅಳವಡಿಸಿರುವುದು, ಅನುಬಂಧಗಳಲ್ಲಿ ವಚನಗಳ ತೌಲನಿಕ ಅಕಾರಾದಿ, ಗಮನಾರ್ಹ ಪದಕೋಶ ಜೋಡಿಸಿರುವುದು, ಕೃತಿ ಮುದ್ರಣದಲ್ಲಿ ನೂತನ ವಿನ್ಯಾಸವನ್ನು ರೂಪಿಸುವುದು ಈ ಕೃತಿಯ ಇತರ ವೈಶಿಷ್ಟ್ಯಗಳೆನಿಸಿವೆ. ಒಟ್ಟಾರೆ ವಚನ ಟೀಕಾಸಾಹಿತ್ಯ ಸಂಪಾದನೆಗೆ ಇದು ಒಂದು ಅಪೂರ್ವ ಮಾದರಿ ಎನಿಸಿದೆ"[೫೨] ಎಂಬ ವೀರಣ್ಣ ರಾಜೂರ ಅವರ ಮಾತು ಔಚಿತ್ಯಪೂರ್ಣವಾಗಿದೆ.

'ಚೆನ್ನಬಸವಣ್ಣನವರ ಷಟ್ಸ್ಥಲವಚನ ಮಹಾಸಂಪುಟ'ವು ಷಟ್ಸ್ಥಲ ಕ್ರಮದ ಮೂರು ವಚನಕೃತಿಗಳ ಸಂಯುಕ್ತ ಸಂಪುಟವಿದು. ಇದರಲ್ಲಿ 'ಅನುಭಾವ ಷಟ್ಸ್ಥಲದ ವಚನಗಳು' ಕೃತಿ ಈಗಾಗಲೇ ಪ್ರಕಟವಾದ ಕೃತಿ. ಆದರೆ ಇನ್ನುಳಿದ ೨ ಕೃತಿಗಳು ಮೊದಲ ಬಾರಿಗೆ ಪ್ರಕಟವಾಗಿವೆ. ಎಂ.ಎಂ.ಕಲಬುರ್ಗಿ ಅವರು ಪ್ರಸ್ತಾವನೆಯಲ್ಲಿ "ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವ ಈ ಮೂವರು ಹನ್ನೆರಡನೆಯ ಶತಮಾನದ ಶರಣ ಸಿದ್ಧಾಂತದ ಮೂರು ಪ್ರಮುಖ ಕ್ಷಣಗಳನ್ನು ಪ್ರತಿನಿಧಿಸುತ್ತಾರೆ. ಪ್ರಧಾನವಾಗಿ ಬಸವಣ್ಣನವರದು ಸಾಮಾಜಿಕ ಸಿದ್ಧಾಂತ, ಪ್ರಭುದೇವರದು ಆಧ್ಯಾತ್ಮಿಕ ಸಿದ್ಧಾಂತ. ಚೆನ್ನಬಸವಣ್ಣನವರದು ಧಾರ್ಮಿಕ ಸಿದ್ಧಾಂತ"[೫೩] ಎಂದು ಹೇಳಿದ್ದಾರೆ. ಅಂಗವು ಲಿಂಗವಾಗಿರುವ ವಿಕಾಸಕ್ರಮದ ಹಂತಗಳನ್ನೇ 'ಷಟ್‌ಸ್ಥಲ'ವೆಂದು ವೀರಶೈವ ಕರೆಯುತ್ತದೆ ಎಂದು ಎಂ.ಎಂ.ಕಲಬುರ್ಗಿ ಅವರು ಹೇಳಿದ್ದಾರೆ. ಜೊತೆಗೆ ಬಸವಣ್ಣ ಮತ್ತು ಚೆನ್ನಬಸವಣ್ಣನ ಷಟ್‌ಸ್ಥಲದ ಬಗೆಗಿನ ವಿಚಾರವನ್ನು ಇಲ್ಲಿ ಚರ್ಚಿಸಲು ಪ್ರಯತ್ನಿಸಿದ್ದಾರೆ. "ವೀರ ಶೈವನಾವನು ಕ್ರಮೇಣ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಹಂತಗಳನ್ನೇರಿ ಕೊನೆಗೆ ಐಕ್ಯಸ್ಥಿತಿ

ಪಡೆಯಬೇಕೆಂಬುದು ಬಸವಣ್ಣನವರ ಷಟ್‌ಸ್ಥಲ ಪ್ರತಿಪಾದನೆಯಾಗಿದ್ದಿತು. ಚೆನ್ನಬಸವಣ್ಣ ಇದರಿಂದ ಭಿನ್ನನಾಗುತ್ತಾನೆ. ಯಾವುದೇ ವ್ಯಕ್ತಿ ಹುಟ್ಟುತ್ತಲೇ ಮೇಲೆ ಹೇಳಿದ ಆರರಲ್ಲಿ ಯಾವುದೋ ಒಂದು ಸ್ಥಳ ಮನೋಧರ್ಮದವನೆನಿಸುತ್ತಿದ್ದು, ಅವನು ಆಯಾ ಸ್ಥಲಮನೋಧರ್ಮದಿಂದಲೇ ಭಕ್ತ, ಮಹೇಶಾದಿ ೬ ಸ್ಥಲಗಳನ್ನು ಏರಬೇಕೆಂದು ಪ್ರತಿಪಾದಿಸುತ್ತಾನೆ ಚೆನ್ನಬಸವಣ್ಣ. ಇದನ್ನು ಬಸವಣ್ಣ ಒಪ್ಪುತ್ತಾರೆ. ಈ ವಿಚಾರಗಳನ್ನು ತಿಳಿಸುವ ಬಸವಣ್ಣ, ಚೆನ್ನಬಸವಣ್ಣನವರ ವಚನಗಳು ಹೀಗಿವೆ;

ಮೆಲ್ಲಮೆಲ್ಲನೆ ಭಕ್ತನೆನಿಸಿಕೊಂಬೆ
ಮೆಲ್ಲಮೆಲ್ಲನೆ ಮಹೇಶ್ವರನೆನಿಸಿಕೊಂಬೆ
ಮೆಲ್ಲಮೆಲ್ಲನೆ ಪ್ರಸಾದಿಯೆನಿಸಿಕೊಂಬೆ
ಮೆಲ್ಲಮೆಲ್ಲನೆ ಪ್ರಾಣಲಿಂಗಿಯೆನಿಸಿಕೊಂಬೆ
ಮೆಲ್ಲಮೆಲ್ಲನೆ ಶರಣನೆನಿಸಿಕೊಂಬೆ
ಮೆಲ್ಲಮೆಲ್ಲನೆ ಐಕ್ಯನೆನಿಸಿಕೊಂಬೆ
ಮೆಲ್ಲಮೆಲ್ಲನೆ ಷಟ್‌ಸ್ಥಲಮೀರೆ
ನಿರವಯಸ್ಥಲವನ್ನೈದುವೆ ಕೂಡಲಸಂಗಮದೇವಾ.

ಬಸವಣ್ಣನವರು ಮೊದಲು ಪ್ರತಿಪಾದಿಸುತ್ತಿದ್ದ ಷಟ್‌ಸ್ಥಲ ಪದ್ಯವಿದು. ಚೆನ್ನಬಸವಣ್ಣನವರು ಇದನ್ನು ಖಂಡಿಸುತ್ತ,

ಮೆಲ್ಲಮೆಲ್ಲನೆ ಭಕ್ತ, ಮೆಲ್ಲಮೆಲ್ಲನೆ ಮಹೇಶ್ವರ,
ಮೆಲ್ಲಮೆಲ್ಲನೆ ಪ್ರಸಾದಿ, ಮೆಲ್ಲಮೆಲ್ಲನೆ ಪ್ರಾಣಲಿಂಗಿ,
ಮೆಲ್ಲಮೆಲ್ಲನೆ ಶರಣ, ಮೆಲ್ಲಮೆಲ್ಲನೆ ಐಕ್ಯರಾದೆವೆಂಬರು ನಿಮ್ಮ ಶರಣರು
ತಾವೇನು ಮರುಜವಣೀಯ ಕೊಂಡರೆ?
ಆವ ಸ್ಥಲದಲಿ ನಿಂದರೆಯಾ
ಆ ಸ್ಥಲದಲಿ ಷಡುಸ್ಥಲವಡಗದಿದ್ದರೆ
ಆ ಭಕ್ತಿಯ ಬಾಯಲ್ಲಿ ಹುಡಿಹೊಯ್ಯನೆ ಕೂಡಲ ಚನ್ನಸಂಗಮದೇವ?

ಎಂದು ಷಟ್‌ಸ್ಥಲದಲ್ಲಿ ಹೊಸಪದ್ಧತಿಯನ್ನು ಪ್ರತಿಪಾದಿಸುತ್ತಾರೆ. ಬಸವಣ್ಣ ಇದನ್ನು ಒಪ್ಪುತ್ತ,

ಮೆಲ್ಲಮೆಲ್ಲನೆ ಭಕ್ತಾದ್ಯೈಕ್ಯಾಂತವಾದೆಹೆನೆಂದು
ತಾಮಸಜ್ಞಾನದಲ್ಲಿರಲು

ಅದಕ್ಕೆ 'ನೀನು ನಿತ್ಯವ ಪಡೆದು ಬಂದೆಯಾ' ಎಂದು
ನಿಂದ ಸ್ಥಲದಲ್ಲಿಯೇ ನಿಜಷಡುಸ್ಥಲವಡಗಿದ್ದಡೆ
ಜಂಗಮದಾಸೋಹವೇಕೆಂದು ಹೇಳಿ ನಿಜವಕರುಣಿಸಿದನಾಗಿ
ಲಿಂಗಜಂಗಮದ ಭೇದವ ಚೆನ್ನಬಸವಣ್ಣ ಬಲ್ಲ(ಬವ.೧೯೭೪)

ಎಂದು ಹೇಳಿದ್ದಾರೆ.[೫೪] ಇದು ಹೊಸಪದ್ಧತಿಯ ಷಟ್‌ಸ್ಥಲದ ಕುರಿತ ಚರ್ಚೆಯಂತಿದೆ. ಇಲ್ಲಿ ಆರು ಸ್ಥಲವನ್ನು ಸ್ಥಾಯಿಯಾಗಿಟ್ಟುಕೊಂಡು ಆರು ಹಂತಗಳಲ್ಲಿ ವಿಕಾಸಗೊಳ್ಳುತ್ತ ಅಂತಿಮ ಹಂತ ಪಡೆಯುವವನೇ ಮಿಶ್ರಷಟ್‌ಸ್ಥಲವೆಂದು ಕರೆಯುತ್ತಾರೆ. ಈ ಷಟ್‌ಸ್ಥಲವನ್ನು ಮೊದಲಿಗೆ ಪ್ರತಿಪಾದಿಸಿರುವುದು ಚನ್ನಬಸವಣ್ಣ. ಹಾಗಾಗಿ ಅವನಿಗೆ 'ಷಟ್‌ಸ್ಥಲ ಚಕ್ರವರ್ತಿ' ಎಂದು ಗೌರವ ಪ್ರಾಪ್ತಿಯಾಗಿರುವುದನ್ನು ಸ್ಮರಿಸಿದ್ದಾರೆ.

"ಗ್ರಂಥಸಂಪಾದನ ಪ್ರಸಂಗದಲ್ಲಿ ಶಿಷ್ಟಸಾಹಿತ್ಯದ ಸಂಪಾದನೆಗೆ ಬಳಸುವ ಸೂತ್ರಗಳನ್ನೇ ವಚನ ಸಾಹಿತ್ಯ ಸಂಪಾದನೆಗೂ ವಿದ್ವಾಂಸರು ಅನ್ವಯಿಸುತ್ತಲಿದ್ದಾರೆ. ಇದು ಸಮರ್ಪಕ ವಿಧಾನವಲ್ಲವೆಂದು ಕಾಣುತ್ತದೆ. ಹಸ್ತಪ್ರತಿಗಳನ್ನು ಹೆಚ್ಚು ಸಂಖ್ಯೆಯಲ್ಲಿ ಸಂಗ್ರಹಿಸಿದಷ್ಟು ಶಿಷ್ಟ ಸಾಹಿತ್ಯ ಸಂಪಾದನೆ ಹೆಚ್ಚು ಶುದ್ಧವಾಗುತ್ತಿದ್ದರೆ, ವಚನ ಸಾಹಿತ್ಯ ಸಂಪಾದನೆ ಹೆಚ್ಚು ಅಶುದ್ಧವಾಗುವ ಸಂಭವವಿದೆ. ಏಕೆಂದರೆ ಇಲ್ಲಿ ವಿಭಿನ್ನ ಸಂಪ್ರದಾಯದ ಎಲ್ಲ ಹಸ್ತಪ್ರತಿಗಳಿಂದ ಪಾಠಗಳನ್ನು ಆಯ್ದುಕೊಂಡು, ನಮ್ಮದೇ ಆದ ಬೇರೊಂದು ಪಾಠ ರೂಪಿಸುವ ಅಪಾಯವಿದೆ. ಆದುದರಿಂದ ವಚನಗಳನ್ನು ಪರಿಷ್ಕರಿಸುವಲ್ಲಿ ಒಂದು ಉತ್ತಮ ಹಸ್ತಪ್ರತಿಯನ್ನು ಆಯ್ದುಕೊಂಡು ಅಲ್ಲಿಯ ವಚನಗಳ ಶಿಲ್ಪಕ್ಕೆ ಭಂಗ ಬರದಂತೆ ಅಂದರೆ ಅವರ ಪಾಠಸಂಪ್ರದಾಯಕ್ಕೆ ಧಕ್ಕೆ ಆಗದಂತೆ ಭಾಷಿಕ ದೋಷಗಳನ್ನು ದೂರ ಮಾಡಬೇಕು, ಅವಶ್ಯವಿದ್ದಲ್ಲಿ ಮಾತ್ರ ಅದೇ ಕುಟುಂಬದ ಬೇರೊಂದು ಹಸ್ತಪ್ರತಿಯಿಂದ ಪಾಠಾಂತರ ಗುರುತಿಸಿಕೊಂಡು, ಆ ವಚನವನ್ನು ಸುಧಾರಣೆ ಮಾಡಿಕೊಳ್ಳಬೇಕು. ಸರಿಯಾದ ಅರ್ಥ ಕೊಡುವ ಮಟ್ಟಕ್ಕೆ ಅದನ್ನು ತಂದು ನಿಲ್ಲಿಸಬೇಕು. ವಚನ ಸಾಹಿತ್ಯ ಸಂಪಾದನೆಯಲ್ಲಿ ಇದೇ ಸರಿಯಾದ ವಿಧಾನವಾಗಿದೆ. ಪ್ರಸ್ತುತ ಕೃತಿಯನ್ನು ಈ ವಿಧಾನದ ಆದರ್ಶದಲ್ಲಿ ಪರಿಷ್ಕರಿಸಲಾಗಿದೆ"[೫೫] ಎಂದು ಪ್ರಸ್ತಾವನೆಯಲ್ಲಿಯೇ ಸಂಪಾದಕರು ಹೇಳಿಕೊಂಡಿದ್ದಾರೆ.

**೧. ಚನ್ನಬಸವರಾಜಶೇಖರ ಷಟ್‌ಸ್ಥಲ ವಚನ**

ಭಕ್ತನ ಭಕ್ತ, ಭಕ್ತನ ಮಹೇಶ್ವರ ರೀತಿಯ ಸ್ಥಲವಿವೇಚನೆಯುಳ್ಳ ೮೭೧ ವಚನಗಳ ಸಂಕಲನ ಕೃತಿಯಾಗಿದೆ. ಇದನ್ನು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಹಸ್ತಪ್ರತಿಗಳ

ವರ್ಣನಾತ್ಮಕ ಸೂಚಿ VIII-IIರಲ್ಲಿ ಈ ಪ್ರತಿಯನ್ನು ಗಮನಿಸಿ ಇದು ಚೆನ್ನಬಸವಣ್ಣನವರ ಷಟ್‌ಸ್ಥಲವಚನ ಕಟ್ಟುಗಳಲ್ಲಿಯೇ ದೊಡ್ಡ ಗಾತ್ರದ್ದಾಗಿರುವುದನ್ನು ಗಮನಿಸಿದರು. ಇದನ್ನು ತರಿಸಿಕೊಂಡು ಪ್ರತಿ ಮಾಡಿಸಿ, 'ಮೂ' ಎಂಬ ಸಂಕೇತವನ್ನು ಕೊಟ್ಟರು. ನಂತರ ಶರಣಸ್ಥಲದವರೆಗೆ ಮಾತ್ರ ಇರುವ ಈ ಸಂಪ್ರದಾಯದ ತಾಳೆಗರಿಯ ಒಂದು ಅಪೂರ್ಣ ಪ್ರತಿ ಧಾರವಾಡದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿಭಂಡಾರದಲ್ಲಿ ಇರುವ ವಿಷಯ ತಿಳಿದ ಎಂ.ಎಂ.ಕಲಬುರ್ಗಿ ಅವರು 'ಅ' ಸಂಕೇತದಿಂದ ಅವಶ್ಯವೆನಿಸಿದಲ್ಲಿ ಮಾತ್ರ ಬಳಸಿಕೊಂಡಿದ್ದಾರೆ. ಜೊತೆಗೆ ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ ಚೆನ್ನಬಸವಣ್ಣನವರ ವಚನಗಳು(ದ್ವಿಆ.) ಕೃತಿಯ ಪಾಠಗಳನ್ನು ಅವಶ್ಯವಿದ್ದಲ್ಲಿ ಬಳಸಿಕೊಂಡು ಈ ಕೃತಿಯನ್ನು ಸಂಪಾದನೆ ಮಾಡಿದ್ದಾರೆ. ಜೊತೆಗೆ ಈ ಕೃತಿ ಸಂಪಾದನೆಯ ಸಂದರ್ಭದಲ್ಲಿ ೮೧ ಹೊಸ ವಚನಗಳು ದೊರಕಿವೆ. ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ ಚೆನ್ನಬಸವಣ್ಣನವರ ವಚನಗಳ ದ್ವಿತೀಯ ಆವೃತ್ತಿಯಲ್ಲಿ ಸಿಗುವ ಸಮಾನ ವಚನಗಳನ್ನು ಈ ಕೃತಿಯ ಪರಿಷ್ಕರಣದಲ್ಲಿ ಆಯಾ ವಚನಗಳ ಮುಂದೆ ಚೌಕ ಕಂಸಿನಲ್ಲಿ ಸೂಚಿಸಲಾಗಿದೆ. ಹಾಗೆ ಸೂಚಿಸಿದವುಗಳನ್ನು ಹೊಸವಚನಗಳೆಂದು ಭಾವಿಸಬೇಕು ಎಂದು ತಿಳಿಸಿದ್ದಾರೆ. ಉದಾ–

"ಅನ್ನವನ್ನಿಕ್ಕಿದರೆ ಪುಣ್ಯವಹುದು, ವಸ್ತ್ರವ ಕೊಟ್ಟರೆ ಧರ್ಮವಹುದು,
ಹಣವ ಕೊಟ್ಟರೆ ಶ್ರೇಯಹದು,
ತ್ರಿಕರಣ ಶುದ್ಧವಾಗಿ ನೆನೆದರೆ ಮುಕ್ತಿಯಹುದು,
ಕೂಡಲ ಚೆನ್ನಸಂಗಯ್ಯನ"[೫೬]

**೨. 'ಚೆನ್ನಬಸವೇಶ್ವರದೇವರು ನಿರೂಪಿಸಿದ ಅನುಭಾವಷಟ್ಸ್ಥಲದ ವಚನಗಳು'**

ಭಕ್ತನ ಆಚಾರಲಿಂಗ, ಭಕ್ತನ ಶಿವಲಿಂಗ.... ಈ ರೀತಿಯ 'ಅನುಭಾವಸ್ಥಲ' ಪದ್ಧತಿಯಲ್ಲಿ ವಚನಗಳನ್ನು ಸಂಕಲಿಸಿದ ಷಟ್‌ಸ್ಥಲಕೃತಿ, ಚೆನ್ನಬಸವಣ್ಣನವರ ಷಟ್‌ಸ್ಥಲ ಕಟ್ಟುಗಳಲ್ಲಿಯೇ ಜನಪ್ರಿಯವಾಗಿ ಹೆಚ್ಚು ಪ್ರತಿಗಳು ಹುಟ್ಟಿಕೊಂಡಿವೆ. ಈ ಕೃತಿಯನ್ನು ೧೯೧೧ರಲ್ಲಿ ಬಳ್ಳಾರಿಯ ಶಿವಲಿಂಗ ಶೆಟ್ರು, ೧೯೨೬ರಲ್ಲಿ ಫ.ಗು.ಹಳಕಟ್ಟಿ ಪ್ರಕಟಿಸಿದರು. ನಂತರ ಆರ್.ಸಿ.ಹಿರೇಮಠರು ಪ್ರಕಟಿಸಿದ್ದರೂ ಮಧ್ಯೆ ಮಧ್ಯೆ ಹೊಸ ವಚನಗಳನ್ನು ಸೇರಿಸಿಕೊಂಡದ್ದರಿಂದ ಈ ಕಟ್ಟಿನ ಮೂಲ ಸ್ವರೂಪ ಕಳೆದುಕೊಂಡಿದೆ.

೩೨೨ ವಚನಗಳ ಈ ಕೃತಿ ಪರಿಷ್ಕರಣಕ್ಕಾಗಿ ಎಂ.ಎಂ.ಕಲಬುರ್ಗಿ ಅವರು ಕನ್ನಡ ಅಧ್ಯಯನ ಪೀಠದ ತಾಳೆಗರಿ ಪ್ರತಿಯನ್ನು 'ಮೂ' ಸಂಕೇತದಿಂದ ಆಧಾರ ಪ್ರತಿಯಾಗಿ ಇಟ್ಟುಕೊಂಡು ಅವಶ್ಯವೆನಿಸಿದಲ್ಲಿ ಕರ್ನಾಟಕ ವಿ.ವಿ.ಯ ಪ್ರಕಟಣೆಯಾದ ಚೆನ್ನಬಸವಣ್ಣನವರ

ವಚನಗಳು(ದ್ವಿಆ.) ಕೃತಿಯನ್ನು ಭಿನ್ನಪಾಠಗಳಿಗಾಗಿ ಬಳಸಿಕೊಂಡಿದ್ದಾರೆ. ಹಾಗೆಯೇ ಈ ಆವೃತ್ತಿಯಲ್ಲಿ ಸಿಗುವಂತಹ ಸಮಾನವಾದ ವಚನಗಳನ್ನು ಪರಿಷ್ಕರಿಸಿ ವಚನಗಳ ಮುಂದೆಯೇ ಚೌಕ ಕಂಸಿನಲ್ಲಿ ಸೇರಿಸಿರುವುದಾಗಿ ಹೇಳಿದ್ದಾರೆ.

**೩. ಚೆನ್ನಬಸವಣ್ಣನವರ ಷಡುಸ್ಥಲದ ನಿರ್ಣಯ**

ಭಕ್ತ, ಮಹೇಶ್ವರ, ಪ್ರಸಾದಿ..... ಹೀಗೆ ಆರು ಸ್ಥಲಗಳಲ್ಲಿ ಚೆನ್ನಬಸವಣ್ಣನವರ ೧೨೪ ವಚನಗಳನ್ನೊಳಗೊಂಡ ಕೃತಿಯಾಗಿದೆ. ಕನ್ನಡ ಅಧ್ಯಯನ ಪೀಠದ 'ಮೂ' ಪ್ರತಿಯನ್ನು ಆಧಾರವಾಗಿ ಇಟ್ಟುಕೊಂಡು, ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಕಾಗದಪ್ರತಿಯನ್ನು 'ಅ' ಸಂಕೇತದಿಂದ ಪಾಠಾಂತರಕ್ಕೆ ಅವಶ್ಯವಿದ್ದಲ್ಲಿ ಮಾತ್ರ ಬಳಸಿಕೊಳ್ಳಲಾಗಿದೆ. ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ ಚೆನ್ನಬಸವಣ್ಣನವರ ವಚನಗಳ ಕೃತಿಯನ್ನು(ದ್ವಿಆ.) ಪಾಠಾಂತರಕ್ಕಾಗಿ ಬಳಸಿಕೊಳ್ಳಲಾಗಿದ್ದು, ಈ ಆವೃತ್ತಿಯಲ್ಲಿ ಕಂಡುಬರುವ ಸಮಾನ ವಚನಗಳನ್ನು ಪ್ರಸ್ತುತ ಪರಿಷ್ಕರಣದ ಆಯಾ ವಚನಗಳ ಮುಂದೆಯೇ ಚೌಕ ಕಂಸಿನಲ್ಲಿ ತೋರಿಸಿದ್ದಾರೆ. ಹಾಗೆ ತೋರಿಸಿದವು ಹೊಸ ವಚನಗಳೆಂದು ಭಾವಿಸಬೇಕೆಂದು ಎಂ.ಎಂ.ಕಲಬುರ್ಗಿ ಅವರು ಹೇಳಿದ್ದಾರೆ.

ವಚನ ಸಾಹಿತ್ಯದಲ್ಲಿ ಸಿದ್ಧರಾಮನ ಹೆಸರಿನಲ್ಲಿ ಪ್ರಕ್ಷಿಪ್ತ ವಚನಗಳ ಸಂಖ್ಯೆ ಅಧಿಕವಾಗಿ ಕಂಡುಬಂದರೆ ಚೆನ್ನಬಸವಣ್ಣನವರ ವಚನಗಳಿಗೆ ಪಾಠಾಂತರ ಪ್ರಮಾಣ ಅಧಿಕವಾಗಿ ಕಂಡುಬಂದಿದೆ ಎಂದು ಅದಕ್ಕೆ ಕೆಲವು ಕಾರಣಗಳನ್ನು ಸ್ಪಷ್ಟಪಡಿಸಿದ್ದಾರೆ.

* ಚೆನ್ನಬಸವಣ್ಣನವರ ವಚನಗಳ ಮುಖ್ಯವಸ್ತು ಧಾರ್ಮಿಕ ತತ್ವಧರ್ಮದ ವಾರಸುದಾರರು ಕಾಲಕ್ಕೆ ತಕ್ಕಂತೆ ಮತ್ತು ತಮ್ಮ ಅಭಿರುಚಿಗೆ ತಕ್ಕಂತೆ ಇಲ್ಲಿಯ ಪಾಠಗಳನ್ನು ಲೋಪ, ಆಗಮ, ಆದೇಶ ರೂಪದಲ್ಲಿ ಮಾರ್ಪಾಡುಗೊಳಿಸುತ್ತ ಬಂದುದೇ ಇದಕ್ಕೆ ಕಾರಣವಾಗಿರಬಹುದು. ಆದುದರಿಂದ ಚೆನ್ನಬಸವಣ್ಣನವರ ವಚನಗಳು ಸಂಕ್ಷಿಪ್ತ ಪಾಠಸಂಪ್ರದಾಯ, ವಿಸ್ತಾರ ಪಾಠಸಂಪ್ರದಾಯ ಇತ್ಯಾದಿ ರೀತಿಗಳಲ್ಲಿ ಮಾರ್ಪಡುತ್ತಾ ಬಂದವು. ಮೇಲಾಗಿ ಎಲ್ಲರ ವಚನಗಳಿಗಿಂತ ಚೆನ್ನಬಸವಣ್ಣನವರ ವಚನಗಳು ಧಾರ್ಮಿಕ ಸಂದರ್ಭದಲ್ಲಿ ಹೆಚ್ಚು ಪ್ರಯೋಜಕ ವೆನಿಸುವುದರಿಂದ ಅವುಗಳ ಲಿಪಿಕರಣ ಕಾರ್ಯವೂ ಪದೇ ಪದೇ ನಡೆದಿದೆ. ಈಗ ಲಿಪಿಕಾರರ ಅಜ್ಞಾನ, ಅನ್ಯಥಾಜ್ಞಾನ, ಅನವಧಾನಗಳಿಂದಾಗಿಯೂ ಈ ಪಾಠಾಂತರ ಕ್ರಿಯೆ ವರ್ಧಿಸಿದೆ ಎಂದು ಎಂ.ಎಂ.ಕಲಬುರ್ಗಿ ಅವರು ತಿಳಿಸಿದ್ದಾರೆ.
* ವಚನಗಳಲ್ಲಿ ಬಳಕೆಯಾಗಿರುವ ಸಂಸ್ಕೃತ ಶ್ಲೋಕಗಳ ಪ್ರಕ್ಷಿಪ್ತತೆ, ಪಾಠಾಂತರ ಇನ್ನೊಂದು ಸಮಸ್ಯೆಯೆನಿಸಿದೆ.

* ಮುದ್ರಿತ ಪಲ್ಲಟವು ಕೂಡ ಪಾಠಾಂತರಕ್ಕೆ ಸಮಸ್ಯೆಯಾಗಿ ಗೋಚರಿಸುತ್ತದೆ. ಕೆಲವೊಮ್ಮೆ ಬಸವಣ್ಣನ ವಚನಗಳು ಚೆನ್ನಬಸವಣ್ಣನವರ ಹೆಸರಿನಲ್ಲಿ ಚೆನ್ನಬಸವಣ್ಣನವರ ವಚನಗಳು ಬಸವಣ್ಣನವರ ಹೆಸರಿನಲ್ಲಿ ಕಂಡುಬರುತ್ತವೆ. ಈ ಪ್ರಮಾದ ಕಾರಣವಾಗಿ ಬಸವಣ್ಣನವರ ಕೆಲವು ವಚನಗಳು ಇಲ್ಲಿ 'ಕೂಡಲ ಚೆನ್ನಸಂಗಮದೇವಾ' ಮುದ್ರಿಕೆಯಿಂದ ಸೇರಿಕೊಂಡಿವೆ. ಸಂಕಲನದ ಮೂಲ ಚೌಕಟ್ಟಿಗೆ ಭಂಗ ಬರಬಾರದೆಂದು ಅಡಿಯಲ್ಲಿ ನಿಜವಾದ ವಚನಕಾರನ ಸೂಚನೆ ಕೊಟ್ಟು ಅವುಗಳನ್ನು ಹಾಗೆಯೇ ಇಟ್ಟುಕೊಂಡಿದ್ದೇನೆ ಎಂದಿದ್ದಾರೆ. ಉದಾ:

"ಕೊಲ್ಲೆನಯ್ಯ ಪ್ರಾಣಿಗಳ, ಮೆಲ್ಲೆನಯ್ಯಾ ಬಾಯಿಚ್ಚೆಯ,
ಒಲ್ಲೆನಯ್ಯ ಪರಸತಿಯ ಸಂಗವ, ಒಲ್ಲೆನಯ್ಯ ಮುಂದೆ ತೊಡಕೆಂಬುದ
ಬಳ್ಳದ ಬಾಯಂತೆ ಒಂದೆ ಮನವ ಮಾಡಿ, ನಿಲ್ಲೆಂದು ನಿಲ್ಲಿಸಯ್ಯ
ಕೂಡಲ ಚೆನ್ನಸಂಗಮದೇವಾ"[೫೭]

ಈ ವಚನ ಬಸವಣ್ಣನವರ ಹೆಸರಿನಲ್ಲಿ ಸಿಗುತ್ತದೆ. ಈ ರೀತಿಯ ಹಲವು ವಚನಗಳನ್ನು ನಾವು ಗುರುತಿಸಬಹುದು.

'ವಚನಶಾಸ್ತ್ರಸಾರ' ಎಂಬ ಈ ಕೃತಿಯು ವಚನ ಸಾಹಿತ್ಯದ ಸಂಕಲನ ಗ್ರಂಥಗಳ ಇತಿಹಾಸದಲ್ಲಿ ಶಿವಗಣಪ್ರಸಾದಿ ಮಹಾದೇವಯ್ಯನ ಶೂನ್ಯಸಂಪಾದನೆಯ ತರುವಾಯ ಅದೇ ಮಾದರಿಯಲ್ಲಿ ರೂಪಗೊಂಡ ವಿಶಿಷ್ಟವಾದ ಕೃತಿಯಾಗಿದೆ. ಫ.ಗು.ಹಳಕಟ್ಟಿಯವರು ಕಠಿಣ ಪರಿಶ್ರಮದಿಂದ ೧೯೨೩ರಲ್ಲಿ ಬೆಳಗಾವಿಯಿಂದ ಪ್ರಕಟಿಸಿದ್ದಾರೆ. ಫ.ಗು.ಹಳಕಟ್ಟಿಯವರು ವೀರಶೈವಧರ್ಮದ ಷಟ್ಸ್ಥಲ ಸಿದ್ಧಾಂತದ ಸ್ವರೂಪವನ್ನು ಶರಣರ ವಚನಗಳ ಮೂಲಕ ವಿವರಿಸುವ ಪ್ರಯತ್ನ ಮಾಡಿದ್ದಾರೆ. ಫ.ಗು.ಹಳಕಟ್ಟಿಯವರು ಈ ಕೃತಿಯನ್ನು ಹೊರತರುವಾಗ ಮೊದಲಬಾರಿಗೆ "ಈ ಗ್ರಂಥ ರಚನೆಯಲ್ಲಿ ನಾನು ಪ್ರತಿಯೊಂದು ಸ್ಥಲದ ಪ್ರಾರಂಭದಲ್ಲಿ ಆ ಸ್ಥಲದ ಸಾಮಾನ್ಯ ತತ್ವಗಳನ್ನು ಮೊದಲಿಗೆ ನಿರೂಪಿಸಲಿಕ್ಕೆ ಪ್ರಯತ್ನಿಸಿದ್ದೇನೆ. ಆಮೇಲೆ ಆ ತತ್ವಗಳಿಗೆ ಆ ಸ್ಥಲದ ಆಚರಣೆಗೆ ಸಂಬಂಧಿಸಿದ ವಿಷಯಗಳನ್ನು ವಿವರಿಸಿದ್ದೇನೆ. ಕಟ್ಟಕಡೆಗೆ ಆ ಸ್ಥಲದ ಆಚಾರಗಳ ಅತಿರೇಕ ಮತ್ತು ಅವುಗಳ ದುರುಪಯೋಗ ಇವುಗಳನ್ನು ನಿರ್ದೇಶಿಸಿದ್ದೇನೆ. ಈ ಸಂಗತಿಯನ್ನು ಪ್ರತಿಯೊಂದು ಸ್ಥಲದಲ್ಲಿಯೂ ವಾಚಕರು ಈ ಗ್ರಂಥದಲ್ಲಿ ಕಂಡುಕೊಳ್ಳಬಹುದು ಮತ್ತು ಪ್ರತಿಯೊಂದು ವಿಷಯ ನಿರೂಪಣೆಯಲ್ಲಿ ಪ್ರಥಮದಲ್ಲಿ ಆ ವಿಷಯಕ್ಕೆ ಸಂಬಂಧಿಸಿದ ಸುಲಭವಾದ ಮತ್ತು ತೀವ್ರವಾಗಿ ತಿಳಿಯುವ ವಚನಗಳನ್ನು ಕೊಟ್ಟಿದ್ದೇನೆ. ಆದರೆ ಹಿಂದುಗಡೆ ಈ ಗ್ರಂಥವು ಬಹಳ ದೊಡ್ಡದಾಗುವ ಸಂಭವ ತೋರಿತು. ಇದರಿಂದ ವಾಚಕರಿಗೆ ಬೇಸರಿಕೆಯಾಗಬಹುದೆಂದು ತಿಳಿದು ನಾನು ಯಾವ ವಿಷಯದಲ್ಲಿ ದ್ವಿರುಕ್ತಿಗಳು ಹೆಚ್ಚಾಗಿವೆಯೋ

ಅವುಗಳಲ್ಲಿಯ ವಚನಗಳನ್ನು ತೆಗೆದು ಹಾಕಿದೆನು. ಆದರೆ ನೈತಿಕ ವಿಷಯಗಳು ಮತ್ತು ವಚನಕಾರರ ಮತಕ್ಕೆ ಈಗ ವಿರೋಧವಾಗಿ ಪ್ರಚಲಿತವಾಗಿರುವ ರೂಢಿಗಳು ಮತ್ತು ಆಚಾರಗಳು ಇವುಗಳ ಸಂಬಂಧದ ವಚನಗಳನ್ನು ಮಾತ್ರ ತೆಗೆದು ಹಾಕಿಲ್ಲ. ಅವುಗಳಲ್ಲಿ ಹೆಚ್ಚಿಗೆ ಪುನರುಕ್ತಿಗಳುಂಟಾದರೂ ಕೂಡ ಅವುಗಳನ್ನು ನಾನು ಬುದ್ಧ್ಯಾ ಹಾಗೆಯೇ ಬಿಟ್ಟಿದ್ದೇನೆ"[೫೮] ಎಂಬ ವಿವರಣೆಯಲ್ಲಿ ವಚನಗಳನ್ನು ಸಂಯೋಜಿಸಿದ ಕ್ರಮ, ಸಂಪಾದನೆಯ ಉದ್ದೇಶ ಮತ್ತು ಪ್ರಾಧಾನ್ಯತೆಯನ್ನು ತಿಳಿಸುತ್ತ ಇಡೀ ಗ್ರಂಥದ ಸ್ವರೂಪವನ್ನು ಸ್ಪಷ್ಟಪಡಿಸಿದ್ದಾರೆ. ಫ.ಗು.ಹಳಕಟ್ಟಿಯವರು ಈ ಗ್ರಂಥವನ್ನು ಸಂಪಾದಿಸಲು ಒಟ್ಟು ೩೦ ಆಕರಗಳನ್ನು ಬಳಸಿಕೊಂಡಿದ್ದಾರೆ. ಅತಿ ಹೆಚ್ಚು ಆಕರಗಳನ್ನು ಬಳಸಿರುವುದು ಒಂದು ವಿಶೇಷ ಸಂಗತಿಯಾಗಿದೆ.

ನಂತರ ೧೯೩೧ರಲ್ಲಿ ವಚನಶಾಸ್ತ್ರಸಾರ ಭಾಗ-೧ ಪೂರ್ವಾರ್ಧ ಎಂಬ ಹೆಸರಿನಿಂದ ಹಳಕಟ್ಟಿಯವರೆ ಪರಿಷ್ಕರಿಸಿ ಶಿವಾನುಭವ ಗ್ರಂಥಮಾಲೆಯಿಂದ ಪ್ರಕಟಿಸಿದ್ದರು. ಇದು ಒಟ್ಟು ೪೨೦ ಪುಟಗಳನ್ನು ಹೊಂದಿರುತ್ತದೆ. ಇದರಲ್ಲಿ ಲಿಂಗ, ಪರಮಾತ್ಮ, ದೀಕ್ಷೆ, ಭಕ್ತ ಮತ್ತು ಮಹೇಶ್ವರ ಸ್ಥಲದ ವಚನಗಳು ಸಮಾವೇಶಗೊಂಡಿವೆ. ಇದರಲ್ಲಿ ಹೆಚ್ಚಿನ ವಚನಗಳನ್ನು ಸೇರಿಸಿದ್ದಾರೆ. ಇದರಲ್ಲಿ ೧೮೯ ಉಪಶೀರ್ಷಿಕೆಗಳಿದ್ದು, ಒಟ್ಟು ೧೬೧೪ ವಚನಗಳನ್ನು ಸಂಕಲನಗೊಳಿಸಿದ್ದಾರೆ. ಅದೇ ರೀತಿ ವಚನಶಾಸ್ತ್ರಸಾರ ಉತ್ತರಾರ್ಧ ೧೯೩೩ರಲ್ಲಿ ಶಿವಾನುಭವ ಗ್ರಂಥಮಾಲೆಯಿಂದ ಪ್ರಕಟಗೊಂಡಿದೆ. ಇದರಲ್ಲಿ ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಸ್ಥಲ ಮತ್ತು ನಿರವಯಕ್ಕೆ ಸಂಬಂಧಿಸಿದ ವಚನಗಳಿವೆ. ೪೯ ಉಪಶೀರ್ಷಿಕೆಗಳಿದ್ದು, ೧೦೧೬ ವಚನಗಳು ಸಂಕಲನಗೊಂಡಿವೆ. ಫ.ಗು.ಹಳಕಟ್ಟಿಯವರು ಸಂಪಾದಿಸಿದ ಈ ಕೃತಿಯನ್ನು ಎಂ.ಎಂ.ಕಲಬುರ್ಗಿ ಹಾಗೂ ವೀರಣ್ಣ ರಾಜೂರ ಅವರು ವಚನಶಾಸ್ತ್ರಸಾರ ಭಾಗ-೧ ಪೂರ್ವಾರ್ಧ ಮತ್ತು ಉತ್ತರಾರ್ಧ ಎಂಬ ಎರಡೂ ಕೃತಿಗಳನ್ನು ಸಂಪಾದಿಸಿದ್ದಾರೆ.

ಫ.ಗು.ಹಳಕಟ್ಟಿ ಅವರ ಸಂಪಾದನ ವಿಧಾನಕ್ಕೂ ಎಂ.ಎಂ.ಕಲಬುರ್ಗಿ ಮತ್ತು ವೀರಣ್ಣ ರಾಜೂರ ಅವರ ಸಂಪಾದನ ವಿಧಾನಕ್ಕೂ ಭಿನ್ನತೆ ಏನೆಂಬುದನ್ನು ಪ್ರಸ್ತಾವನೆಯಲ್ಲಿ ಸ್ಪಷ್ಟಪಡಿಸಿದ್ದಾರೆ. "ಹಳಕಟ್ಟಿ ಅವರದು ಅನೇಕ ವಚನ ಉಪಶೀರ್ಷಿಕೆಗಳನ್ನು ಹೊಸದಾಗಿ ಸೇರಿಸಿಕೊಂಡ ರೂಪಾಂತರ ಪರಿಷ್ಕರಣ; ನಮ್ಮದು ಪಾಠಾಂತರ ಪರಿಷ್ಕರಣ."[೫೯] ಇಲ್ಲಿ ಫ.ಗು.ಹಳಕಟ್ಟಿ ಅವರದು ಹೊಸದಾಗಿ ಸೇರಿಸುವ ಹಿನ್ನೆಲೆಯಲ್ಲಿ ಪರಿಷ್ಕರಣ ಕಾರ್ಯ ಮಾಡಿದರೆ ಎಂ.ಎಂ. ಕಲಬುರ್ಗಿ ಮತ್ತು ವೀರಣ್ಣ ರಾಜೂರ ಅವರದು ಅರ್ಥಕ್ಕೆ ಚ್ಯುತಿ ಬರುವಲ್ಲಿ ಮಾತ್ರ ಪಾಠಾಂತರ ಪರಿಷ್ಕರಣಕ್ಕೆ ಗಮನ ಕೊಟ್ಟಿದ್ದಾರೆ. ಹಾಗೆಯೇ ಅವರ ಕೃತಿಯ ಚೌಕಟ್ಟನ್ನು,

ಕೃತಿಯಲ್ಲಿನ ವಚನಗಳ ಚೌಕಟ್ಟನ್ನು ರಕ್ಷಿಸುವುದರ ಜೊತೆಗೆ ಅರ್ಥಕ್ಕೆ ಧಕ್ಕೆ ಬರುವಲ್ಲಿ ಮಾತ್ರ ಪಾಠಾಂತರ ಪರಿಷ್ಕರಣ ಮಾಡುವುದು ತಮ್ಮ ಸಂಪಾದನೆಯ ಉದ್ದೇಶವಾಗಿದೆ ಎಂದಿದ್ದಾರೆ. ಈವರೆಗೆ ಕನ್ನಡದಲ್ಲಿ ಹಸ್ತಪ್ರತಿಗಳನ್ನಿಟ್ಟುಕೊಂಡು ವಿದ್ವಾಂಸರು ಪರಿಷ್ಕರಣ ಕಾರ್ಯವನ್ನು ಪೂರೈಸಿದುದುಂಟು. ಆದರೆ ಒಬ್ಬರು ಸಂಪಾದಿಸಿದ ವಚನ ಕೃತಿಯನ್ನು, ಅದೂ ಅವರು ಬಳಸಿದ ಹಸ್ತಪ್ರತಿಗಳು ಲಭ್ಯವಿಲ್ಲದಾಗ ಇನ್ನೊಬ್ಬರು ಪರಿಷ್ಕರಿಸುವುದು ಕನ್ನಡದಲ್ಲಿಯೇ ಹೊಸ ಅನುಭವ, ಹೊಸ ಉಪಕ್ರಮ, ಎರಡನೆಯದಾಗಿ ಈ ಕಾರ್ಯವನ್ನು ಕಾವ್ಯಸಾಹಿತ್ಯ ವಿಷಯವಾಗಿ ಮಾಡುವುದು ಕಠಿಣ. ಏಕೆಂದರೆ ಕಾವ್ಯಸಾಹಿತ್ಯದಲ್ಲಿ ಪಾಠಾಂತರಗಳು ವಿರಳ ಮತ್ತು ವ್ಯವಸ್ಥಿತ; ವಚನ ಪಾಠಗಳು ಲೋಪ, ಆಗಮ, ಆದೇಶ ಕಾರಣವಾಗಿ ಸಂಕ್ಷಿಪ್ತ, ವಿಸ್ತರ, ಪಲ್ಲಟ ಇತ್ಯಾದಿ 'ರೂಪ'ಗಳಲ್ಲಿ ಸಿಗುತ್ತವೆ. ಹೀಗಾಗಿ ಇವುಗಳಲ್ಲಿ ಹಳಕಟ್ಟಿಯವರು ಇಟ್ಟುಕೊಂಡ ವಚನ 'ರೂಪ'ವನ್ನು ನಾವು ಮೊದಲು ಒಪ್ಪಿಕೊಂಡು, ಅದರಲ್ಲಿಯೇ ಪಾಠಶುದ್ಧಿ ಮಾಡಬೇಕಾಗುತ್ತದೆ. ಇದನ್ನು ಮನಗಂಡು ಹಳಕಟ್ಟಿಯವರು ಸ್ವೀಕರಿಸಿದ ವಚನ ರೂಪಕ್ಕೂ ಧಕ್ಕೆ ಬರದಂತೆ, ಜೊತೆಗೆ ವೀರಶೈವ ತತ್ವಕ್ಕೂ ಚ್ಯುತಿ ಬರದಂತೆ, ಗ್ರಂಥಸಂಪಾದನ ಶಾಸ್ತ್ರಕ್ಕೂ ಭಂಗ ಬರದಂತೆ, ಈ ತ್ರಿಶೂಲ ಸಾಕ್ಷಿಯಾಗಿ ನಾವು ಪರಿಷ್ಕರಣ ಕಾರ್ಯವನ್ನು ನಿರ್ವಹಿಸಿದ್ದೇವೆ"[೬೦] ಎಂದು ಹೇಳುವಲ್ಲಿ ಎಂ.ಎಂ.ಕಲಬುರ್ಗಿ ಅವರ ಗ್ರಂಥಸಂಪಾದನೆಯಲ್ಲಿನ ಜಾಗ್ರತೆ ಎದ್ದು ತೋರುತ್ತದೆ. "ಪ್ರಸ್ತುತ ಕೃತಿಯ ಪರಿಷ್ಕರಣಕ್ಕೋಸುಗ ನಾವು ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟಿತ ಆವೃತ್ತಿಗಳನ್ನು ಬಳಸಿಕೊಂಡಿದ್ದೇವೆ. ಹಳಕಟ್ಟಿ ಆವೃತ್ತಿಯಲ್ಲಿ ಯಾವುದೇ ವಚನ ತನ್ನಷ್ಟಕ್ಕೆ ತಾನು ಸಮಂಜಸ ಅರ್ಥ ಕೊಡದಿದ್ದಲ್ಲಿ ಮಾತ್ರ ಅನ್ಯ ಆವೃತ್ತಿಗಳ ನೆರವಿನಿಂದ ಅದನ್ನು ಪರಿಷ್ಕರಿಸಿದ್ದೇವೆ. ಅನ್ಯ ಆವೃತ್ತಿಗಳ ಪಾಠಾಂತರಗಳು ಅಸಮರ್ಪಕವೆನಿಸಿದಾಗ ಮಾತ್ರ ಊಹೆ ಮಾಡಿದ್ದೇವೆ. ಊಹೆಗೂ ನಿಲುಕದ ಪಾಠಗ್ರಂಥಗಳನ್ನು ಹಾಗೆಯೇ ಇಟ್ಟಿದ್ದೇವೆ. ಕೆಲವು ವಚನಗಳು ಈಗ ಪ್ರಕಟವಾದ ಯಾವುದೇ ಬೇರೆ ಆವೃತ್ತಿಯಲ್ಲಿ ಸಿಗುವುದಿಲ್ಲ. ಇಂಥಲ್ಲಿ 'ಏಕೈಕ ಹಸ್ತಪ್ರತಿ ಪರಿಷ್ಕರಣ ಪದ್ಧತಿ'ಯನ್ನು ಅನುಸರಿಸಿದ್ದೇನೆ"[೬೧] ಎಂದಿದ್ದಾರೆ. ಇಲ್ಲಿ ಸಂಪಾದಕರು ಹಸ್ತಪ್ರತಿಗಳನ್ನು ಬಳಕೆ ಮಾಡಿಕೊಂಡ ಬಗೆ ಹಾಗೂ ಪಾಠಾಂತರ ಸಂದರ್ಭದಲ್ಲಿ ಪಾಠಾಂತರಗಳು ಅಸಮರ್ಪಕವೆನಿಸಿದಾಗ ಸಂಪಾದಕ ಊಹೆ ಮಾಡುತ್ತಾನೆ. ಒಂದು ವೇಳೆ ಊಹೆಗೂ ನಿಲುಕದಾದಾಗ ಪಾಠವನ್ನು ಇದ್ದಂತೆಯೇ ಉಳಿಸುವುದು ಸಂಪಾದಕನ ಧರ್ಮವಾಗಿದೆ. ಹಾಗೆಯೇ ಏಕೈಕ ಹಸ್ತಪ್ರತಿ ಪರಿಷ್ಕರಣ ಪದ್ಧತಿ ಕುರಿತು ಹೇಳಿರುವುದು ವಿಶೇಷವಾಗಿದೆ. ಸಂಪಾದಕರು ಈ ಕೃತಿಯ ಸಂಪಾದನೆಯ ವೈಧಾನಿಕತೆಯನ್ನು ಅಳವಡಿಸಿಕೊಂಡಿರುವುದನ್ನು ಉದಾಹರಣೆ ಸಮೇತ ವಿಶ್ಲೇಷಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

೧. ಅನ್ಯ ಆವೃತ್ತಿಗಳಲ್ಲಿ ಲಭ್ಯವಾದ ಯೋಗ್ಯಪಾಠವನ್ನು ಅಂಕಿಗಳ ಮಧ್ಯದಲ್ಲಿ ಮೇಲೆ ಸ್ವೀಕರಿಸಿದ್ದೇವೆ. ಮೂಲದ ಅಸ್ವೀಕೃತ ಪಾಠವನ್ನು(ಮೂ) ಸಂಕೇತದಿಂದ ಅಡಿಯಲ್ಲಿ ಕೊಟ್ಟಿದ್ದೇವೆ.

ಉದಾ: "ಕುರುಹುಂಟೇ[೨೩] ಮರುಳೆ[೨೩] ಲಿಂಗಕ್ಕೆ?"[೮] ಈ ಪಾಠದ ಅಡಿಯಲ್ಲಿ ೨೩–೨೪ ಮರಳಿ(ಮೂ) ಎಂದು ಸೂಚಿಸಿದೆ.

೨. ಮೂಲದಲ್ಲಿಲ್ಲದ, ಆದರೆ ಅನ್ಯ ಆವೃತ್ತಿಗಳಿಂದ ಸ್ವೀಕರಿಸಿದ ಅಧಿಕ ಪಾಠವನ್ನು ಚೌಕ ಕಂಸಿನಲ್ಲಿ ಇಟ್ಟುಕೊಂಡಿರುವುದನ್ನು ತಿಳಿಸಿದ್ದಾರೆ.

ಉದಾ: "ಮನದಲ್ಲಿ ಭೇದ(ವಲ್ಲದೆ) ವಸ್ತುವಿನಲ್ಲಿ ಭೇದವಿಲ್ಲವಯ್ಯಾ"[೬೩] ಇಲ್ಲಿ ಅನ್ಯ ಆವೃತ್ತಿ ಪಾಠವನ್ನು ಸೇರಿಸಿಕೊಂಡಿರೊದ್ದರಿಂದಲೇ ಈ ವಚನಕ್ಕೆ ಅರ್ಥಪ್ರಾಪ್ತಿಯಾಗುವುದು ಗೋಚರವಾಗುತ್ತದೆ.

೩. ಮೂಲದಲ್ಲಿಯೂ ಬೇರೆ ಆವೃತ್ತಿಯಲ್ಲಿಯೂ ಪಾಠವಿಲ್ಲದಿದ್ದರೆ, ಇದೂ ಅಯೋಗ್ಯವಾಗಿದ್ದರೆ ಆ ಸ್ಥಲದಲ್ಲಿ ಮಾಡಿದ ಊಹಿತ ಹೊಸ ಪಾಠಕ್ಕಾಗಿ ವಕ್ರಕಂಸ ಬಳಸಿದ್ದೇವೆ.

ಉದಾ: "ಶಿವನು ಜಗದ್ಭರಿತನೆಂದೆಂಬವರ ಬಾಯಲ್ಲಿ......

ಶಿವನು ಜಗದ್ಭರಿತನೆಂದ ಜೆ(ಯ)ದೊಡೆ ತಾನೆ ಗುರು....."[೬೪]

೪. ಎರಡು ವಚನಗಳು ಒಂದಾಗಿದ್ದಲ್ಲಿ ಸಾಧ್ಯವಿದ್ದಲ್ಲೆಲ್ಲ ಬಿಡಿಸಿ ಇಟ್ಟಿದ್ದೇವೆ ಎಂದು ಆ ವಚನಗಳ ಸಂಖ್ಯೆಯನ್ನು ತಿಳಿಸಿದ್ದಾರೆ. ೫೧೩–೫೧೪, ೧೬೮೪–೧೬೮೫, ೨೧೨೬–೨೧೨೭, ೨೪೫೨–೨೪೫೩ ಹಾಗೆಯೇ ಒಂದೇ ವಚನ ಎರಡಾಗಿದ್ದಲ್ಲಿಯೂ ಸೂಚಿಸಿದ್ದಾರೆ. ಉದಾ: ೧೬೩೧–೧೬೩೨.

೫. ಅಂಕಿತ ತಪ್ಪಿದ್ದಲ್ಲಿಯೂ ತಿದ್ದುಪಡಿ ಮಾಡಿದ್ದಾರೆ. ಉದಾ: ೧೩೪೨, ೧೩೬೭, ೧೯೧೩, ೨೪೫೪.

ಉದಾ: [೫೪] ಕಟ್ಟಿದೆನೊರೆಯ, ಬಿಟ್ಟೆ ಜಮ್ಮೊಗೆಯ ನೆರೆ ಮುಟ್ಟಿ ಬಂದಿರಾವಡೆ........

.......ಕೂಡಲಸಂಗಮದೇವ[೫೪] ಇದು ಬಸವಣ್ಣನವರ ವಚನ, ಆದರೆ ಫ.ಗು.ಹಳಕಟ್ಟಿ ಸಂಪಾದನೆಯಲ್ಲಿ 'ಗುಹೇಶ್ವರಾ' ಎಂದಿದೆ. ಹಾಗಾಗಿ ತಿದ್ದುಪಡಿ ಮಾಡಿ ಅಡಿಯಲ್ಲಿ ೫೪–೫೪ ಗುಹೇಶ್ವರಾ(ಮೂ) ಎಂದು ಸೂಚಿಸಿದ್ದಾರೆ.

ಈ ರೀತಿಯಲ್ಲಿ ಸಂಪಾದನೆಯ ವೈಧಾನಿಕತೆಯನ್ನು ನಮ್ಮೆದುರಿಗೆ ಬಿಟ್ಟಿರುವುದು ಎಂ.ಎಂ.ಕಲಬುರ್ಗಿ ಅವರ ವಿಶೇಷತೆ ಎನ್ನಬಹುದು. ಜೊತೆಗೆ "ಶಿಥಿಲವಾದ ವಚನಮಂಟಪವೊಂದನ್ನು ಜೀರ್ಣೋದ್ಧಾರ ಮಾಡಿದ, ವಚನಪಿತಾಮಹ ಡಾ.ಹಳಕಟ್ಟಿಯವರ ಸೇವೆ ಮಾಡಿದ ಧನ್ಯತೆ ನಮಗುಂಟಾಗಿದೆ. ಹೀಗೆ ಶ್ರಮ-ಭಕ್ತಿಗಳಿಂದ ಕೆಲಸ ಮಾಡಿದರೂ ಉಳಿದಿರಬಹುದಾದ ದೋಷಗಳಿಗೆ ಸಹೃದಯರು ನಮ್ಮನ್ನು ಮನ್ನಿಸಬೇಕೆಂದು, ಅವುಗಳನ್ನು ಸೂಚಿಸಿ, ಮುಂದಿನ ಆವೃತ್ತಿ ಇನ್ನೂ ಶುದ್ಧವಾಗುವುದಕ್ಕೆ ಸಹಕರಿಸಬೇಕೆಂದು ಬಿನ್ನವಿಸಿಕೊಳ್ಳುತ್ತೇವೆ"[೬೫] ಎಂದು ವಿನಂತಿಸಿಕೊಂಡಿರುವುದು ಎಂ.ಎಂ.ಕಲಬುರ್ಗಿ ಅವರ ವಿದ್ವತ್ತಿನ ವಿನಯಕ್ಕೆ ಪರಮ ನಿದರ್ಶನವಾಗಿ ಕಂಡುಬರುತ್ತದೆ.

'ವಚನ ಸಂಕಲನ ಸಂಪುಟ ೪' ಈ ಕೃತಿಯ ಮಿಶ್ರಷಟ್ಸ್ಥಲದ ವಚನ ಟೀಕಿನ ಏಕೋತ್ತರ ಶತಸ್ಥಲ ಮತ್ತು ಸಕಲ ಪುರಾತನರ ವಚನ ಹೀಗೆ ಮೂರು ಸಂಕಲನಗಳ ಸಂಯುಕ್ತವಾಗಿದೆ. ಈ ಸಂಕಲನಗಳ ಸಂಪುಟವನ್ನು ಅನುಕ್ರಮವಾಗಿ ಎಂ.ಎಂ.ಕಲಬುರ್ಗಿ ಅವರು ಬಿ.ಆರ್.ಹಿರೇಮಠ ಹಾಗೂ ಎಸ್.ಶಿವಣ್ಣ ಅವರೊಡಗೂಡಿ ಸಂಪಾದನೆ ಮಾಡಿದ್ದಾರೆ. ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಗದಗದಿಂದ ೧೯೭೨ರಲ್ಲಿ ಪ್ರಕಟಗೊಂಡ ಕೃತಿಯಾಗಿದೆ. ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನ ಸಾಹಿತ್ಯ ಪ್ರಕಟನ ಮಾಲೆಯ ೪೩ನೆಯ ಕೃತಿಯಾಗಿದೆ.

ಚೆನ್ನಬಸವಣ್ಣನವರ ೪೭ ವಚನಗಳನ್ನೊಳಗೊಂಡ ಈ ಕಟ್ಟು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದಲ್ಲಿ ದೊರೆತಿದೆ ಎನ್ನುತ್ತಾ ಈ ಭಂಡಾರದ ಸೂಚಿ VII-೪೯೪ರ ಕೆಳಗೆ ನಮೂದಿಸಲ್ಪಟ್ಟ ಕೆ.ಬಿ.೬೯೭: ೮ನೆಯ ನಂಬರಿನ ಕಾಗದದ ಪ್ರತಿ ಎಂದಿದ್ದಾರೆ. ೬" X ೮.೫" ಆಕಾರದ ಈ ಕಟ್ಟಿನಲ್ಲಿಯ ೮ನೆಯ ಕೃತಿಯಾದ ಇದು II ಪ್ರತಿಗಳನ್ನು(೧೦ರಿಂದ ೨೦) ಆಧರಿಸಿದ್ದು, ತಕ್ಕಮಟ್ಟಿಗೆ ಚೆನ್ನಾಗಿರುವುದನ್ನು ತಿಳಿಸಿದ್ದಾರೆ. ಇಂತದ್ದೆ ಇನ್ನೊಂದು ಪ್ರತಿ ಲಂಡನ್ನಿನ 'ಬ್ರಿಟಿಶ್ ಲೈಬ್ರರಿ ರೆಪರನ್ಸ್ ಡಿವಿಜನ್' ಸಂಸ್ಥೆಯಲ್ಲಿ ಕಂಡುಬರುವುದನ್ನು ಹೇಳುತ್ತ ಅದರ ನಂ. Oriental 9656 ಎಂದು ಸೂಚಿಸಿದ್ದಾರೆ. ಈ ಕೃತಿಯ ಸಂಪಾದನೆಯನ್ನು ಕುರಿತಂತೆ ಸಂಪಾದಕರು ಈ ಮುಂದಿನಂತೆ ಹೇಳಿರುವುದನ್ನು ಗಮನಿಸಬಹುದು. "ಈ ಕೃತಿ ಪರಿಷ್ಕರಣಕ್ಕಾಗಿ ಸಂಪಾದಕರು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿಯನ್ನು ಆಧಾರವಾಗಿಟ್ಟುಕೊಂಡು, ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ 'ಚೆನ್ನಬಸವಣ್ಣನವರ ವಚನಗಳ'(ದ್ವಿತೀಯ ಆವೃತ್ತಿಯನ್ನು)ಪಾಠಪರಿಷ್ಕರಣಕ್ಕೆ ಬಳಸಿಕೊಂಡಿದ್ದೇವೆ. ಇಲ್ಲಿಯ ಕೆಲವು ವಚನಗಳು ಮುಂದೆ ನಾವು ಚೌಕ ಕಂಸಿನಲ್ಲಿ ಸೂಚಿಸಿದ

ಸಂಖ್ಯೆ ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿರುವ ಚೆನ್ನಬಸವಣ್ಣನವರ ವಚನಗಳು(ದ್ವಿತೀಯ ಆವೃತ್ತಿ) ಗ್ರಂಥದಲ್ಲಿರುವ ಸುಮಾರು ಎಂಟು ವಚನಗಳು(೨, ೩, ೬, ೯, ೧೩, ೨೩, ೪೧, ೪೪) ಈ ಕೃತಿಯ ಮೂಲಕ ಪ್ರಥಮಸಲ ಬೆಳಕಿಗೆ ಬರುತ್ತಲಿದೆ. ಈ ಬಗೆಯಲ್ಲಿ ಕೃತಿಯನ್ನು ಹೊರತರುವ ಮೂಲಕ ಚೆನ್ನಬಸವ ಸಾಹಿತ್ಯದ ಇನ್ನೊಂದು ಹೊಸಪುಟ ಕತ್ತಲೆಯಿಂದ ಬೆಳಕಿಗೆ ಬರುತ್ತಲಿದೆಯೆಂದೇ ಹೇಳಬಹುದು." ಇಲ್ಲಿ ಸಂಪಾದನೆಗೆ ಆಯ್ದುಕೊಂಡ ಪ್ರತಿ ಬಗ್ಗೆ ಚರ್ಚಿಸಿದ್ದಾರೆ. ಜೊತೆಗೆ ಹೊಸ ವಚನಗಳನ್ನು ಶೋಧಿಸಿರುವುದು ವಿಶೇಷ ಸಂಗತಿಯಾಗಿದೆ.

ಎಂ.ಎಂ.ಕಲಬುರ್ಗಿ ಅವರು ಷಟ್‌ಸ್ಥಲ ಹಾಗೂ ಮಿಶ್ರಷಟ್‌ಸ್ಥಲವನ್ನು ಕುರಿತಂತೆ ಪ್ರಸ್ತಾವನೆಯಲ್ಲಿ ಚರ್ಚಿಸಿದ್ದಾರೆ. "ವ್ಯಕ್ತಿ ಕಲ್ಯಾಣ, ಸಮಾಜ ಕಲ್ಯಾಣಗಳು ಸಮಸಮವಾಗಿ ಸಾಗಬೇಕಾದುದು ಪರಿಪೂರ್ಣ ಸಮಾಜದ ಲಕ್ಷಣ. ಇವುಗಳಲ್ಲಿ ವೀರಶೈವ 'ಜಂಗಮದಾಸೋಹ' ಸಮಾಜ ಕಲ್ಯಾಣದ ಸಾಧ್ಯವಾದರೆ, 'ಲಿಂಗಪೂಜೆ' ವೃತ್ತಿ ಕಲ್ಯಾಣದ ಸಾಧನವಾಗಿದೆ. ಈ ಲಿಂಗಪೂಜ ಮಧ್ಯಮದಿಂದ ವ್ಯಕ್ತಿ ಆರು ಹಂತಗಳಲ್ಲಿ ತನ್ನನ್ನು ಉನ್ನತೀಕರಿಸಿಕೊಂಡು ಶುದ್ಧ ನಾಗುತ್ತಾನೆ. ಈ ಆರು ಹಂತಗಳನ್ನೇ ವೀರಶೈವದಲ್ಲಿ 'ಷಟ್‌ಸ್ಥಲ'ವೆಂದು ಕರೆಯುತ್ತಾರೆ.

ಈ ಷಟ್‌ಸ್ಥಲವನ್ನು ಅನುಸಂಧಾನ(Practice) ಮತ್ತು ಅನುಸರಣೆ(Function) ಹೀಗೆ ಎರಡು ದೃಷ್ಟಿಯಿಂದ ವೀರಶೈವದಲ್ಲಿ ವಿವರಿಸಲಾಗಿದೆ. ಇವುಗಳಲ್ಲಿ ಒಂದನ್ನು ಆಚರಣೆಯ ಸ್ಥಲಕ್ರಮವೆಂದು, ಇನ್ನೊಂದನ್ನು ಅನುಭಾವಸ್ಥಲ ಕ್ರಮವೆಂದು ಕರೆಯುತ್ತಾರೆ. ಇವುಗಳಿಗೆ ಇರುವ ಇನ್ನೊಂದು ಹೆಸರು ಅಂಗಸ್ಥಲಕ್ರಮ, ಲಿಂಗಸ್ಥಲಕ್ರಮ, ಅನುಭಾವ ಸ್ಥಲವೆಂಬುದು ಐದು ಇಂದ್ರಿಯಗಳನ್ನು ಲಿಂಗ ಮಾಡಿಕೊಂಡು ಪಂಚಭೂತಗಳೆಂಬ ಪದಾರ್ಥವನ್ನು ಪ್ರಸಾದ ರೂಪದಿಂದ ಅನುಭವಿಸುವುದನ್ನು ಪ್ರತಿಪಾದಿಸುತ್ತಿದ್ದಾರೆ. ಆಚರಣೆಯ ಸ್ಥಲವೆಂಬುದು ಭಕ್ತನಾದವನು ಕ್ರಮೇಣ ಶ್ರದ್ಧೆ, ನಿಷ್ಠೆ, ಅವಧಾನ, ಅನುಭಾವ, ಆನಂದ, ಸಮರಸ ಭಾವಗಳನ್ನು ಬೆಳೆಸಿಕೊಳ್ಳುತ್ತ ಈ ಭಾವನೆಗಳಿಗೆ ಅನುಗುಣವಾಗಿ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಕರಣ, ಐಕ್ಯಗಳೆಂಬ ಆರು ಸ್ಥಿತಿಗಳನ್ನು ಅಳವಡಿಸಿಕೊಳ್ಳುವುದಾಗಿದೆ. ಇದು ಆಗಮೋಕ್ತ ಷಟ್‌ಸ್ಥಲ. ಆದರೆ ವ್ಯಕ್ತಿ ಹುಟ್ಟುತ್ತಲೇ ಅದರಲ್ಲಿ ಒಂದು ಸ್ಥಳ 'ಸ್ಥಿತಿ'ಯವನಾಗಿರುತ್ತಿದ್ದು, ಅವನು ಆ ಸ್ಥಿತಿಯಿಂದಲೆ ಆರು ಸ್ಥಲಗಳನ್ನು ಏರಬೇಕಾಗುತ್ತದೆ ಎಂಬುದು ೧೨ನೇ ಶತಮಾನದಲ್ಲಿ ಶರಣರು ಸ್ಥಾಪಿಸಿದ ಹೊಸ ವಿಚಾರ. ಇಲ್ಲಿ ಭಕ್ತನ ಭಕ್ತಸ್ಥಲ, ಭಕ್ತನ ಮಹೇಶ್ವರ ಸ್ಥಲ, ಭಕ್ತನ ಪ್ರಸಾದಿ ಸ್ಥಲ, ಭಕ್ತನ ಪ್ರಾಣಲಿಂಗಿ ಸ್ಥಲ, ಭಕ್ತನ ಶರಣಸ್ಥಲ, ಭಕ್ತನ ಐಕ್ಯಸ್ಥಲ.

ಅದೇ ರೀತಿ ಮಾಹೇಶ್ವರನ ಮಹೇಶ್ವರಸ್ಥಲ, ಮಾಹೇಶ್ವರನ ಭಕ್ತಸ್ಥಲ, ಮಾಹೇಶ್ವರನ ಪ್ರಸಾದಿಸ್ಥಲ, ಮಾಹೇಶ್ವರನ ಪ್ರಾಣಲಿಂಗಿಸ್ಥಲ, ಮಾಹೇಶ್ವರನ ಕರಸ್ಥಲ, ಮಾಹೇಶ್ವರನ ಐಕ್ಯಸ್ಥಲ,

ಪ್ರಸಾದಿಯ ಪ್ರಸಾದಿಸ್ಥಲ, ಪ್ರಸಾದಿಯ ಭಕ್ತಸ್ಥಲ, ಪ್ರಸಾದಿಯ ಮಾಹೇಶ್ವರಸ್ಥಲ, ಪ್ರಸಾದಿಯ ಪ್ರಾಣಲಿಂಗಿಸ್ಥಲ, ಪ್ರಸಾದಿಯ ಶರಣಸ್ಥಲ, ಪ್ರಸಾದಿಯ ಐಕ್ಯಸ್ಥಲ, ಪ್ರಾಣಲಿಂಗಿಯ ಪ್ರಾಣಲಿಂಗಿಸ್ಥಲ, ಪ್ರಾಣಲಿಂಗಿಯ ಭಕ್ತಸ್ಥಲ, ಪ್ರಾಣಲಿಂಗಿಯ ಮಹೇಶ್ವರಸ್ಥಲ, ಪ್ರಾಣಲಿಂಗಿಯ ಪ್ರಸಾದಿಸ್ಥಲ, ಪ್ರಾಣಲಿಂಗಿಯ ಶರಣಸ್ಥಲ, ಪ್ರಾಣಲಿಂಗಿಯ ಐಕ್ಯಸ್ಥಲ. ಶರಣನ ಶರಣಸ್ಥಲ, ಶರಣನ ಭಕ್ತಸ್ಥಲ, ಶರಣನ ಮಹೇಶ್ವರಸ್ಥಲ, ಕರಣನ ಪ್ರಸಾದಿಸ್ಥಲ, ಶರಣನ ಪ್ರಾಣಲಿಂಗಿಸ್ಥಲ, ಶರಣನ ಐಕ್ಯಸ್ಥಲ, ಐಕ್ಯನ ಐಕ್ಯಸ್ಥಲ, ಐಕ್ಯನ ಭಕ್ತಸಲ, ಐಕ್ಯನ ಮಹೇಶ್ವರಸ್ಥಲ, ಐಕ್ಯನ ಪ್ರಸಾದಿ ಸ್ಥಲ, ಐಕ್ಯನ ಪ್ರಾಣಲಿಂಗಿಸ್ಥಲ, ಐಕ್ಯನ ಶರಣಸ್ಥಲ ಎಂಬ ಸ್ಥಲ ವ್ಯವಸ್ಥೆಯನ್ನು ಪ್ರತಿಪಾದಿಸಲಾಗಿದೆ. ಆಚರಣೆಯ ಸ್ಥಲಕ್ಕೆ ಸಂಬಂಧಿಸಿದ ಈ ಎರಡು ಪ್ರಕಾರಗಳಲ್ಲಿ ಒಂದನ್ನು ಕ್ರಮಸಮುಚ್ಚಯ ವೆಂದು ಇನ್ನೊಂದನ್ನು ಸಮಸಮುಚ್ಚಯವೆಂದು ಕರೆಯುತ್ತಾರೆ. ಇಷ್ಟಲಿಂಗೋಪಾಸನೆಯ ಮೂಲಕ ಲಿಂಗವನ್ನು, ಕ್ರಮವಾಗಿ ಲಿಂಗವಾಗಿಸಿಕೊಳ್ಳುವ ಕ್ರಮಗಳಾಗಿವೆ.

ಮೇಲೆ ಹೇಳಿದ ೩೬ ಸ್ಥಲಗಳ ವ್ಯವಸ್ಥೆಯನ್ನು ಮಿಶ್ರಷಟ್‌ಸ್ಥಲವೆಂದು ಕರೆಯುತ್ತಾರೆ. 'ಭಕ್ತನ ಆಚಾರಲಿಂಗದಿಂದ ಭಕ್ತನ ಗುರುಲಿಂಗದಿ...' ಈ ರೀತಿಯ ಸೇರಿಸಿದ ವಚನ ಕೃತಿಗಳಿಗೂ 'ಮಿಶ್ರಷಟ್‌ಸ್ಥಲವೆಂದೇ ಕರೆಯುತ್ತಾರೆ"[೬೬] ಎಂದಿದ್ದಾರೆ. ಸಂಪಾದಕರು ಷಟ್‌ಸ್ಥಲ ಹಾಗೂ ಮಿಶ್ರಷಟ್‌ಸ್ಥಲಗಳ ಬಗೆಗಿನ ಸ್ಪಷ್ಟ ಚಿತ್ರಣವನ್ನು ತಿಳಿಸಿಕೊಟ್ಟಿದ್ದಾರೆ.

ಈ ಮಿಶ್ರಷಟ್‌ಸ್ಥಲ ಕೃತಿಯಲ್ಲಿನ ೧೮ ಸಾಕಾರಸ್ಥಲ, ೧೮ ನಿರಾಕಾರ ಸ್ಥಲ ಕುರಿತಂತೆ ಒಂದು ವಚನದ ಮೂಲಕ ಸ್ಪಷ್ಟಪಡಿಸಿದ್ದಾರೆ.

"ಸಾಕಾರ ಹದಿನೆಂಟು ಕುಳವನಂಗದಲ್ಲಿ ಆಚರಿಸುತ್ತ
ಅಲ್ಲಲ್ಲಿಗೆ ಭಕ್ತ, ಅಲ್ಲಲ್ಲಿಗೆ ಮಾಹೇಶ್ವರ, ಅಲ್ಲಲ್ಲಿಗೆ ಪ್ರಸಾದಿಯಪ್ಪ
ಆ ಸಾಕಾರವನೇನೆಂದುಪಮಿಸುವೆ!
ನಿರಾಕಾರ ಹದಿನೆಂಟು ಕುಳವನಾತ್ಮದಲ್ಲಿ ಆಚರಿಸುತ್ತ
ಅಲ್ಲಲ್ಲಿಗೆ ಪ್ರಾಣಲಿಂಗಿ, ಅಲ್ಲಲ್ಲಿಗೆ ಶರಣ, ಅಲ್ಲಲ್ಲಿಗೆ ಐಕ್ಯನಾಗಪ್ಪ
ಆ ನಿರಾಕಾರವನೇನೆಂದುಪಮಿಸುವೆ!
ಇಂತು ಉಭಯ ಸ್ಥಲಕುಳ ಒಂದಾಗಿ ನಿಂದ
ನಿಜಘನದಲ್ಲಿ ಕುಳುವಡಗಿತ್ತು ಕೂಡಲ ಚೆನ್ನಸಂಗಾ"[೬೭]

ಈ ಮೇಲಿನ ವಚನದ ವಿವರಣೆಯಂತೆ ಪ್ರಸ್ತುತ ಕೃತಿಯಲ್ಲಿ ಸಾಕಾರ ೧೮ ಸ್ಥಲಕ್ಕೆ ೧೮ ವಚನ, ನಿರಾಕಾರ ೧೮ ಸ್ಥಲಕ್ಕೆ ೧೮ ವಚನಗಳನ್ನು ಚನ್ನಬಸವಣ್ಣನವರ ವಚನದಿಂದ ಆಯ್ದು ಸಂಯೋಜಿಸಿದ್ದಾರೆ.

ವಚನಸಂಕಲನ ಸಂಪುಟ ೬ ಈ ಕೃತಿಯು 'ಚೆನ್ನದಣ್ಣಾಯಕರ ವಚನ' ಮತ್ತು 'ಚೆನ್ನವೀರಣ್ಣೊಡೆಯರು ಸಂಕಲಿಸಿದ ಮಿಶ್ರ ಷಟ್‌ಸ್ಥಲದ ವಚನ' ಹೀಗೆ ಎರಡು ಸಂಕಲನಗಳ ಸಂಯುಕ್ತವಾಗಿದೆ. ಈ ಸಂಕಲನಗಳ ಸಂಪುಟವನ್ನು ಅನುಕ್ರಮವಾಗಿ ಎಂ.ಎಂ.ಕಲಬುರ್ಗಿ ಅವರು ಜಿ.ಎ.ಶಿವಲಿಂಗಯ್ಯ ಅವರೊಡಗೂಡಿ ಸಂಪಾದನೆ ಮಾಡಿದ್ದಾರೆ. ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗದಿಂದ ೨೦೦೨ರಲ್ಲಿ ಪ್ರಕಟಗೊಂಡ ಕೃತಿಯಾಗಿದೆ. ಸಮಗ್ರ ವೀರಶೈವ ಅಪ್ರಕಟಿತ ಪ್ರಾಚೀನ ಸಾಹಿತ್ಯ ಪ್ರಕಟನ ಮಾಲೆಯ ೫೮ನೆಯ ಕೃತಿಯಾಗಿದೆ. ಚೆನ್ನಬಸವಣ್ಣನವರ ಷಟ್‌ಸ್ಥಲವಚನ ಮಹಾಸಂಪುಟದಲ್ಲಿ ಚೆನ್ನಬಸವಣ್ಣನವರ ೩ ಕೃತಿಗಳ ಸಂಯೋಜನೆ ಇದೆ. ಈ ಕೃತಿಗಳನ್ನು ಬಿಟ್ಟು ಇನ್ನು ಮೂರು ಕೃತಿಗಳನ್ನು ಸಂಪಾದಿಸಿದರೆ ಚೆನ್ನಬಸವಣ್ಣನವರ ಸಮಗ್ರ ಕೃತಿಗಳ ಸಂಪಾದನ ಕಾರ್ಯ ಮುಗಿಯುತ್ತದೆ ಎಂದಿದ್ದರು. ಈಗಾಗಲೇ ವಚನಸಂಕಲನ ಸಂಪುಟ ೪ರಲ್ಲಿ 'ಮಿಶ್ರಷಟ್‌ಸ್ಥಲದ ವಚನ' ಕೃತಿಯನ್ನು ಪ್ರಕಟಿಸಲಾಗಿದೆ. ಇದೇ ಸಂಸ್ಥೆಯಿಂದ ಉಳಿದ 'ಚೆನ್ನದಣ್ಣಾಯಕರ ವಚನ' ಮತ್ತು 'ಚೆನ್ನವೀರಣ್ಣೊಡೆಯರು ಸಂಕಲಿಸಿದ ಮಿಶ್ರಷಟ್‌ಸ್ಥಲದ ವಚನ' ಕೃತಿಗಳನ್ನು ವಚನ ಸಂಕಲನ ಸಂಪುಟ ೬ರಲ್ಲಿ ಪ್ರಕಟಿಸಲಾಗಿದೆ. ಇದರಲ್ಲಿ ಎಂ.ಎಂ.ಕಲಬುರ್ಗಿ ಅವರು ಚೆನ್ನದಣ್ಣಾಯಕರ ವಚನ ಕೃತಿಯನ್ನು ಸಂಪಾದಿಸಿದ್ದಾರೆ. 'ಚೆನ್ನದಣ್ಣಾಯಕರ ವಚನ' ಹೆಸರಿನ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯಲ್ಲಿ 'ಚೆನ್ನದಣ್ಣಾಯಕರ ವಚನ' ಹೆಸರಿನ ತಾಳೆಗರಿ ಪ್ರತಿಯೊಂದು(ನಂ.೨೧೫೫) ಸಿಗುತ್ತದೆ. ಇದು ಮದ್ರಾಸ್ ಓರಿಯಂಟಲ್ ರಿಸರ್ಚ್ ಲೈಬ್ರರಿಯಿಂದ ಬಂದ ಪ್ರತಿ(ಮದ್ರಾಸ್ ಓ.ಆರ್.ಆಯ್.ಸೂಚಿ VI-೫೬೦). ಈ ಸೂಚಿಯ ಪ್ರತಿಯಲ್ಲಿ ೬ ಸ್ಥಲಗಳಲ್ಲಿ ಕ್ರಮವಾಗಿ ೪೨, ೩೫, ೭೯, ೧೦, ೧೨, ೨ ಹೀಗೆ ಒಟ್ಟು ೧೮೦ ವಚನಗಳಿವೆಯೆಂದು ತಿಳಿದುಬರುತ್ತದೆ. ಆದರೆ ಇದು ಪೂರ್ಣ ಪ್ರಮಾಣದಲ್ಲಿ ದೊರೆತಿಲ್ಲವೆಂದು ಸಂದೇಹ ತಲೆದೋರಿದೆ ಎಂದಿದ್ದಾರೆ. ಅಂದರೆ ಈ ಪ್ರತಿ ಪ್ರಸಾದಿಸ್ಥಲದ ಪೂರ್ವದವರೆಗೆ ಮಾತ್ರ ಇದೆಯೇ? ಐಕ್ಯಸ್ಥಲದವರೆಗೆ ಇದೆಯೇ? ಭಕ್ತಸ್ಥಲ, ಮಾಹೇಶ್ವರಸ್ಥಲಗಳಲ್ಲಿ ಕಾಣಸಿಗದ ಅವಾಂತರ ಸ್ಥಲಗಳು ಪ್ರಸಾದಿಸ್ಥಲದಲ್ಲಿ ಮಾತ್ರ ಕಂಡುಬರುತ್ತವೆಯೇ ಎಂಬ ಸಂದೇಹ ತಲೆದೂರುತ್ತದೆ. ಅದೇನೆ ಇರಲಿ ಒಂದು ಸಂತೋಷದ ಸಂಗತಿಯೆಂದರೆ ಅದರಲ್ಲಿ ಹೊಸ ೨೧ ವಚನ(೭, ೪೭, ೪೮, ೭೦, ೭೫, ೮೩, ೮೭, ೯೦, ೯೧, ೧೦೬, ೧೧೨, ೧೧೩, ೧೧೪, ೧೧೫, ೧೧೬, ೧೧೯, ೧೬೩, ೧೬೫, ೧೭೨)ಗಳಿವೆ. ಅಪೂರ್ಣವಾಗಿದ್ದರೂ ಖಿಲವಾಗಿದ್ದರೂ ಇದೊಂದು ಪ್ರತಿಯೂ ನಾಶವಾಗಬಾರದೆಂದು ಇಲ್ಲಿ ಪ್ರಕಟಿಸಲಾಗಿದೆ"[೬೮] ಹೊಸ ವಚನಗಳನ್ನು ಶೋಧಿಸಿರು ವುದು, ಅಪೂರ್ಣವಾಗಿದ್ದರೂ ತುಂಬಾ ಖಿಲವಾಗಿದ್ದರೂ ಇದನ್ನು ಸಂಪಾದಿಸಿರುವುದರ ಹಿಂದೆ

ಇರುವ ಒಂದು ಪ್ರತಿ ನಾಶವಾಗಬಾರದೆಂಬ ಉದ್ದೇಶ ಅಡಗಿದೆ. ಇಲ್ಲಿ ಎಂ.ಎಂ.ಕಲಬುರ್ಗಿ ಅವರಿಗಿರುವ ಪ್ರತಿಗಳ ಬಗೆಗಿನ ಕಾಳಜಿ ಎದ್ದು ಕಾಣುತ್ತದೆ.

ಈ ಕೃತಿ ಸಂಪಾದನೆಗೆ ಎಂ.ಎಂ.ಕಲಬುರ್ಗಿ ಅವರು ಆಳವಡಿಸಿಕೊಂಡ ಸಂಪಾದನ ವೈಧಾನಿಕತೆಯನ್ನು ಈ ಕೆಳಗಿನಂತೆ ನೀಡಲಾಗಿದೆ. ಈ ಪ್ರತಿಯ ಆಕಾರ ೧"X ೯"

* ಎಂ.ಎಂ.ಕಲಬುರ್ಗಿ ಅವರು ಸಂಪಾದಿಸಿರುವ ಪ್ರತಿಯಲ್ಲಿ ವಚನದ ಕ್ರಮಾಂಕದ ಮುಂದೆ ಚೌಕ ಕಂಸಿನಲ್ಲಿ ಅಂಕಿಯನ್ನು ಬಳಸಿದ್ದಾರೆ, ಆರ್.ಸಿ.ಹಿರೇಮಠರು ಸಂಪಾದಿಸಿದ 'ಚೆನ್ನಬಸವಣ್ಣನವರ ವಚನಗಳು' ಕೃತಿಯ ದ್ವಿ.ಆ.ಯಲ್ಲಿನ ವಚನ ಸಂಖ್ಯೆಯನ್ನು ಸೂಚಿಸುತ್ತದೆ.
* ಹಸ್ತಪ್ರತಿಯಲ್ಲಿ ಖಿಲವಾಗಿರುವ ಭಾಗದ ಸೂಚನೆಗಾಗಿ.... ಹೀಗೆ, ಲಿಪಿಕಾರನ ಅನವಧಾನ ದಿಂದಾಗಿ ಬಿಟ್ಟುಹೋಗಿರುವ ಭಾಗದ ಸೂಚನೆಗಾಗಿ X ಸಂಕೇತವನ್ನು ಬಳಸಿದರೆ, 'ಮೂ' ಎಂಬುದು ಮೂಲಪ್ರತಿ ಎಂಬುದರ ಸಂಕ್ಷಿಪ್ತ ರೂಪವಾಗಿದೆ ಎಂದು ಸೂಚನೆ ಕೊಟ್ಟಿದ್ದಾರೆ.
* ತುಂಬಾ ಖಿಲವಾಗಿರುವುದರಿಂದ ವಚನದ ಮೊದಲ ಸಾಲನ್ನು ಇದನ್ನೊಳಗೊಂಡಿರುವ ವಚನವನ್ನು ಮುದ್ರಿತ ಪ್ರತಿ(ಚೆನ್ನಬಸವಣ್ಣನವರ ವಚನಗಳು, ಸಂಪಾದಕರು: ಆರ್.ಸಿ.ಹಿರೇಮಠ, ದ್ವಿತೀಯ ಆವೃತ್ತಿ)ಯಲ್ಲಿ ಶೋಧಿಸಿ, ಅದರ ಸಹಾಯದಿಂದಲೇ ಪರಿಷ್ಕರಿಸಿರುವುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ.

ಒಟ್ಟಾರೆಯಾಗಿ ಅದರಲ್ಲಿ ಯಾವ ಯಾವ ವಚನಗಳು ಸಂಕಲನಗೊಂಡಿವೆ ಎಂಬುದಾದರೂ ಗೊತ್ತಾಗಲಿ ಎಂದು ಹೀಗೆ ಮಾಡಿರುವುದಾಗಿ ಪ್ರಸ್ತುತ ಸಂಪಾದಕರೇ ಹೇಳಿಕೊಂಡಿದ್ದಾರೆ.

'ಪರಮಾನಂದ ಸುಧೆ' ಕೃತಿಯನ್ನು ಎಂ.ಎಂ.ಕಲಬುರ್ಗಿ ಅವರು ವೀರಣ್ಣ ರಾಜೂರ ಅವರೊಂದಿಗೆ ೨೦೧೦ರಲ್ಲಿ ಲಿಂಗಾಯತ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗದಿಂದ ಪ್ರಕಟವಾಗಿದೆ. 'ಪರಮಾನಂದ ಸುಧೆ' ಎಂಬ ಈ ಕೃತಿಯು ವಚನಗಳ ಸಂಕಲನ ಗ್ರಂಥವಾಗಿದೆ. ಇದು ನಿಪ್ಪಾಣಿ ನಗರದ ಶ್ರೀ ಅಪ್ಪಾಸಾಹೇಬರ ಗುರುಬಸವರಾಜ ನಂದಿಮಠ ಅವರ ಮನೆಯಲ್ಲಿ ದೊರೆತ ಏಕೈಕ ಅಪ್ರಕಟಿತ ಹಸ್ತಪ್ರತಿಯಾಗಿದೆ. ಇದರ ಕರ್ತೃ ಯಾರೆಂಬುದು ತಿಳಿಯದಾಗಿದೆ. ಕಾಲದ ಉಲ್ಲೇಖವು ಎಲ್ಲಿಯೂ ಕಂಡುಬರುವುದಿಲ್ಲ. ಆದರೆ ೧೬ನೆಯ ಶತಮಾನದ ಸಿದ್ಧಲಿಂಗ ಶಿವಯೋಗಿ ಮೊದಲಾದವರ ವಚನಗಳನ್ನು ಈ ಕೃತಿಯಲ್ಲಿ ಬಳಸಿರುವುದರಿಂದ ಇದು ಆ ಬಳಿಕ ಹುಟ್ಟಿದೆಯೆಂಬ ಅಭಿಪ್ರಾಯ ಎಂ.ಎಂ.ಕಲಬುರ್ಗಿ ಅವರದ್ದಾಗಿದೆ. ಈ ಕೃತಿಯಲ್ಲಿ ೧೨ನೆಯ ಶತಮಾನದಿಂದ ೧೬ನೆಯ ಶತಮಾನದವರೆಗಿನ ಒಟ್ಟು ೬೨ ಜನ ಶರಣರ ವಚನಗಳು ಸಂಕಲನಗೊಂಡಿವೆ. ಚೆನ್ನಬಸವಣ್ಣನವರ ೫೪,

ಅಲ್ಲಮನ ೯೮, ತೋಂಟದ ಸಿದ್ಧಲಿಂಗನ ೯೫, ಉರಿಲಿಂಗಪೆದ್ದಿಯ ೩೨ ಮತ್ತು ೦೨ ಕಾಲಜ್ಞಾನ ವಚನಗಳು ಇಲ್ಲಿ ಹೊಸದಾಗಿ ಸೇರ್ಪಡೆಯಾಗಿವೆ. ಆದರೆ ಇಲ್ಲಿ ಬಸವಣ್ಣನ ಕೇವಲ ೮ ವಚನಗಳಿರುವುದು ಗಮನಾರ್ಹವಾಗಿದೆ. ಹಾಗೆಯೇ ಮೋಳಿಗೆಯ ಮಹಾದೇವಿ, ಬೊಂತಾದೇವಿ, ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀ, ಅಮುಗೆ ರಾಮಯ್ಯ, ಅಕ್ಕಮಹಾದೇವಿ ಹೀಗೆ ಐದು ಜನ ಶಿವಶರಣೆಯರ ವಚನಗಳೂ ಇಲ್ಲಿವೆ. 'ಏಕೋರಾಮೇಶ್ವರ' 'ಧರ್ಮಸ್ವರೂಪ ಬಸವಣ್ಣ' ಮುದ್ರಿಕೆಯ ವಿನೂತನ ವಚನಗಳೆರಡೂ ಇಲ್ಲಿವೆ. 'ಶೂನ್ಯನಾಥ' ಮುದ್ರಿಕೆಯಲ್ಲಿ ೧೮ ವಚನಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಜೊತೆಗೆ ೩೮ ಸ್ವರವಚನಗಳನ್ನು ಇಲ್ಲಿ ಸೇರಿಸಲಾಗಿದೆ. ಇದುವರೆಗೂ ಯಾವ ವಚನ ಸಂಕಲನದಲ್ಲಿಯೂ ಪ್ರಕಟವಾಗದಿರುವ ನಿಜಗುಣ ಶಿವಯೋಗಿಯ ೮ ಸ್ವರವಚನಗಳು ಇಲ್ಲಿವೆ. ಹೀಗೆ ಅನೇಕ ಹೊಸ ವಚನಗಳ ದೃಷ್ಟಿಯಿಂದ ಮತ್ತು ವಚನ ಸಾಹಿತ್ಯದ ಪ್ರಕಟಣೆಯ ಇತಿಹಾಸದಲ್ಲಿ ಈ ಸಂಕಲನವೂ ವಿಶಿಷ್ಟ ದಾಖಲೆಯಾಗಿರುವುದನ್ನು ಕಲಬುರ್ಗಿ ಅವರು ಶೋಧಿಸಿದ್ದಾರೆ. ಎಂ.ಎಂ.ಕಲಬುರ್ಗಿ ಅವರು ಈ ವಿಚಾರವನ್ನು ಕುರಿತು "ಪರಾಮಾನಂದ ಸುಧೆಯಲ್ಲಿ ಜ್ಞಾನಪಾದ, ಕ್ರಿಯಾಪಾದ, ಚರ್ಯಾಪಾದ, ಯೋಗಪಾದ ಎಂದು ನಾಲ್ಕು ಪಾದಗಳು ಇವುಗಳಲ್ಲಿ ಕ್ರಮವಾಗಿ ೧೧೧, ೧೨೧, ೨೧೦, ೧೮೧ ವಚನಗಳು ಇವೆ. ಸಾಮಾನ್ಯವಾಗಿ ಇಲ್ಲಿ ೧೨ನೆಯ ಶತಮಾನದ ಶರಣರ ವಚನಸಂಖ್ಯೆ ಅಧಿಕವಾಗಿದ್ದರೂ ೧೬ನೆಯ ಶತಮಾನದ ತೋಂಟದ ಸಿದ್ಧೇಶ್ವರ ವಚನಗಳು ದೊಡ್ಡ ಪ್ರಮಾಣದಲ್ಲಿವೆ. ಇವರ ಎಡ ಬಲದ ಕರಸ್ಥಲದ ವೀರಣ್ಣ, ಕರಸ್ಥಲದ ಮಲ್ಲಿಕಾರ್ಜುನ, ಸ್ವತಂತ್ರ ಸಿದ್ಧಲಿಂಗ, ಘನಲಿಂಗದೇವರ ಕೆಲವು ವಚನಗಳೂ ಇಲ್ಲಿವೆ. ಹೆಚ್ಚಿನದಾಗಿ ಈವರೆಗೆ ಗೊತ್ತಿರದ ಶೂನ್ಯನಾಥ, ಏಕೋರಾಮೇಶ್ವರಲಿಂಗ, ಧರ್ಮಸ್ವರೂಪ ಬಸವಣ್ಣ ಮುದ್ರಿಕೆಯ ವಚನಗಳೂ ಇಲ್ಲಿ ಕಂಡುಬರುತ್ತವೆ. ಇದರ ಇನ್ನೊಂದು ವೈಶಿಷ್ಟ್ಯವೆಂದರೆ, ಒಂದೆರಡು ಕಡೆ ವಚನಸೃಷ್ಟಿಯ ಸಂದರ್ಭ ಸೂಚನೆ ಯೆಂಬಂತೆ ಕಾಲಜ್ಞಾನದ ವಚನಗಳನ್ನೂ ಇಲ್ಲಿ ಸೇರಿಸಲಾಗಿದೆ. ಇದರಿಂದಾಗಿ ಇದು ಪ್ರಮುಖವಾಗಿ ಧಾರ್ಮಿಕ ಸಾಹಿತ್ಯವಾಗಿದ್ದರೂ ಗೌಣವಾಗಿ 'ಚಾರಿತ್ರಿಕ ಸಾಹಿತ್ಯ'ವೂ ಎನಿಸಿದೆ. ಅಲ್ಲಲ್ಲಿ ಸ್ವರ ವಚನಗಳನ್ನು ಸೇರಿಸಿರುವುದರಿಂದ ಇದಕ್ಕೆ ಗೀತ ಗಾಯನಯೋಗ್ಯ ಸ್ವರೂಪವೂ ಪ್ರಾಪ್ತವಾಗಿದೆ.[೬]

'ಪರಮಾನಂದ ಸುಧೆ' ಕಾಗದ ಪ್ರತಿಯಾಗಿದ್ದು, ಏಕೈಕ ಹಸ್ತಪ್ರತಿಯಿಂದ ಸಂಪಾದಿಸಲಾಗಿದೆ. ಇದರ ಆಕಾರ ೧೧ x ೪, ಹಾಳೆಗಳ ಸಂಖ್ಯೆ ೧೩೯. ಈ ಪ್ರತಿ ಪೂರ್ಣಪ್ರಮಾಣದಲ್ಲಿ ದೊರೆತಿದೆ. ಇದರ ಅಕ್ಷರ ಸ್ಫುಟ, ಭಾಷೆ ಬಹುಮಟ್ಟಿಗೆ ಶುದ್ಧವಾಗಿದೆ. ತೀರ ಇತ್ತೀಚೆಗೆ ಬೆಳಕಿಗೆ ಬಂದ ಈ ಕೃತಿಯ ಇನ್ನೊಂದು ಪ್ರತಿ ಲಭ್ಯವಾಗಿಲ್ಲ. ಹಾಗಾಗಿ ಇದ್ದ ಈ ಒಂದು ಪ್ರತಿ ಕೈತಪ್ಪಿ ಹೋಗಬಾರದೆಂದು ಏಕೈಕ ಹಸ್ತಪತ್ರಿಯಿಂದಲೇ ಪರಿಷ್ಕರಿಸಿ ಸಂಪಾದಿಸಿದ್ದೇವೆ ಎಂದು ಸಂಪಾದಕರೆ ಹೇಳಿಕೊಂಡಿದ್ದಾರೆ.

'ಏಕೋತ್ತರ ಶತಸ್ಥಲ' ವಚನ ಗ್ರಂಥವನ್ನು ಗದುಗಿನ ಶ್ರೀತೋಂಟದಾರ್ಯ ಸಂಸ್ಥಾನ ಮಠದ ಲಿಂಗಾಯತ ಅಧ್ಯಯನ ಸಂಸ್ಥೆಯಿಂದ ೨೦೧೪ರಲ್ಲಿ ಎಂ.ಎಂ.ಕಲಬುರ್ಗಿ ಅವರು ವೀರಣ್ಣ ರಾಜೂರ ಅವರೊಡಗೂಡಿ ಸಂಪಾದಿಸಿದ ಸಂಕಲನ ಕೃತಿಯಾಗಿದೆ. ಏಕೋತ್ತರ ಶತಸ್ಥಲ ಸಿದ್ಧಾಂತ ಕುರಿತಂತೆ ಎಂ.ಎಂ.ಕಲಬುರ್ಗಿ ಅವರು ಪ್ರಸ್ತಾವನೆಯಲ್ಲಿ ಚರ್ಚಿಸಿದ್ದಾರೆ. "ವಿಶ್ವಚೈತನ್ಯವನ್ನು ಲಿಂಗಾಯತಧರ್ಮವು ಮಹಾಲಿಂಗವೆಂದು ಕರೆದಿದ್ದು, ಇದರ ಕಣವಾಗಿರುವ ಲಿಂಗವು ಮಲತ್ರಯದ ಆವರಣದಿಂದಾಗಿ ಅಂಗ(ವ್ಯಕ್ತಿ)ವೆನಿಸಿಕೊಳ್ಳುತ್ತದೆ. ಈ ಅಂಗವು ತನಗೆ ಆವರಿಸಿದ ಮಲತ್ರಯವನ್ನು ನಿವಾರಿಸಿಕೊಂಡು ಷಟ್ಸ್ಥಲಗಳ ಮೂಲಕ ವಿಕಾಸಗೊಳ್ಳುತ್ತ, ತನ್ನ ಮೂಲ ರೂಪವಾಗಿರುವ ಲಿಂಗವಾಗುವುದು, ಮಹಾಲಿಂಗದಲ್ಲಿ, ಸಮರಸಗೊಳ್ಳುವುದು ಇಲ್ಲಿ ಮುಖ್ಯವಾಗಿದೆ. ಹೀಗೆ ಅಂಗವು ಷಟ್ಸ್ಥಲಗಳ ಮೂಲಕ ಲಿಂಗವಾಗುವ 'ಅಂಗ ಷಟ್ಸ್ಥಲ'ವನ್ನು ಮತ್ತು ಈ ಲಿಂಗವು ಷಟ್ಸ್ಥಲಗಳನ್ನು ಆಚರಿಸುತ್ತ ಮಹಾಲಿಂಗದಲ್ಲಿ ಸಮರಸವಾಗುವ 'ಲಿಂಗ ಷಟ್ಸ್ಥಲ'ಗಳನ್ನು ಪ್ರತಿಪಾದಿಸುವುದೇ ಏಕೋತ್ತರ ಶತಸ್ಥಲ ಸಿದ್ಧಾಂತದ ವಿಷಯವಾಗಿದೆ. ಈ ಅಂಗಷಟ್ಸ್ಥಲ ಮತ್ತು ಲಿಂಗ ಷಟ್ಸ್ಥಲಗಳ ಅವಾಂತರಗಳು ಹೀಗಿವೆ:

ಅಂಗ ಷಟ್ಸ್ಥಲ: ೧. ಭಕ್ತಸ್ಥಲದ ಅವಾಂತರ ಅಂಗಸ್ಥಲಗಳು ೧೫.

೨. ಮಾಹೇಶ್ವರ ಸ್ಥಲ ಅವಾಂತರ ಅಂಗಸ್ಥಲಗಳು ೯.

೩. ಪ್ರಸಾದಿಸ್ಥಲದ ಅವಾಂತರ ಅಂಗಸ್ಥಲಗಳು ೭.

೪. ಪ್ರಾಣಲಿಂಗಿಸ್ಥಲದ ಅವಾಂತರ ಅಂಗಸ್ಥಲಗಳು ೫.

೫. ಶರಣಸ್ಥಲದ ಅವಾಂತರ ಅಂಗಸ್ಥಲಗಳು ೪.

೬. ಐಕ್ಯಸ್ಥಲದ ಅವಾಂತರ ಅಂಗಸ್ಥಲಗಳು ೪. ಹೀಗೆ ಒಟ್ಟು ಅಂಗಷಟ್ಸ್ಥಲಗಳು ೪೪.

ಲಿಂಗಷಟ್ಸ್ಥಲ: ೧. ಭಕ್ತಸ್ಥಲಾಶ್ರಿತ ಆಚಾರಲಿಂಗದ ಅವಾಂತರ ಲಿಂಗಸ್ಥಲಗಳು ೯.

೨. ಮಹೇಶ್ವರಸ್ಥಲಾಶ್ರಿತ ಗುರುಲಿಂಗ ಅವಾಂತರ ಲಿಂಗಸ್ಥಲಗಳು ೯.

೩. ಪ್ರಸಾದಿಸ್ಥಲಾಶ್ರಿತ ಶಿವಲಿಂಗದ ಅವಾಂತರ ಲಿಂಗಸ್ಥಲಗಳು ೯.

೪. ಪ್ರಾಣಲಿಂಗಿಸ್ಥಲಾಶ್ರಿತ ಜಂಗಮಲಿಂಗದ ಅವಾಂತರ ಲಿಂಗಸ್ಥಲಗಳು ೯.

೫. ಶರಣಸ್ಥಲಾಶ್ರಿತ ಪ್ರಸಾದಲಿಂಗದ ಅವಾಂತರ ಲಿಂಗಸ್ಥಲಗಳು ೯.

೬. ಐಕ್ಯಸ್ಥಲಾಶ್ರಿತ ಮಹಾಲಿಂಗದ ಅವಾಂತರ ಲಿಂಗಸ್ಥಲಗಳು ೧೨.

ಹೀಗೆ ಒಟ್ಟು ಲಿಂಗಷಟ್ಸ್ಥಲಗಳು ೫೭.

ಈ ೪೪ ಅಂಗಷಟ್ಸ್ಥಲ + ೫೭ ಲಿಂಗಷಟ್ಸ್ಥಲ=೧೦೧ ಸ್ಥಳಗಳ ಪ್ರತಿಪಾದನೆಯೇ ನೂರೊಂದು ಸ್ಥಳ ಅಥವಾ ಏಕೋತ್ತರ ಶತಸ್ಥಲ ಸಿದ್ಧಾಂತವಾಗಿದೆ"[೭೦] ಎಂದು ಏಕೋತ್ತರ ಶತಸ್ಥಲ ಸಿದ್ಧಾಂತವನ್ನು ಕುರಿತಂತೆ ಕರ್ತೃವನ್ನು ಕುರಿತಂತೆ ಸಾಕಷ್ಟು ಚರ್ಚೆಗಳು ಉಂಟಾಗಿವೆ. ಇದರ ಕರ್ತೃವನ್ನು ಕುರಿತಂತೆ ಪುಲಿಗೆರೆಯ ಪುರವರಾಧೀಶ್ವರನಾದ ಮಹಾಲಿಂಗದೇವನೋ ಅಥವಾ ಜಕ್ಕಣಾರ್ಯನೋ ಎಂಬ ಪ್ರಶ್ನೆ ಕುರಿತಂತೆ ಎಂ.ಎಂ.ಕಲಬುರ್ಗಿ ಅವರು ಚರ್ಚಿಸಿದ್ದಾರೆ. "ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರವು 'ಕುಮಾರ ಬಂಕನಾಥದೇವರ ಶಿಷ್ಯರಾದ ಜಕ್ಕಣಾರ್ಯ ಪಂಡಿತರು ತಮ್ಮ ಗುರು ನಿರೂಪದಿಂದ ಸಕಲ ಪುರಾತನರ ವಚನಗಳಿಂದ ಏಕೋತ್ತರ ಶತಸ್ಥಲವ ಸೂತ್ರವ ಕಲ್ಪಿಸಿ ಸ್ಥಲವಿಟ್ಟು ರಚಿಸಿದರೆಂದು ಹೇಳುತ್ತ, ಇದರ ಕರ್ತೃ ಜಕ್ಕಣಾರ್ಯನೆಂದು ಸ್ಪಷ್ಟಪಡಿಸಿದೆ. ನಾವು ಇಲ್ಲಿ ಬಳಸಿದ ಬೆಂಗಳೂರು ವಿಶ್ವವಿದ್ಯಾಲಯದ ಏಕೋತ್ತರ ಶತಸ್ಥಲ ಹಸ್ತಪ್ರತಿಯ ಕೊನೆಯಲ್ಲಿ 'ಈ ಏಕೋತ್ತರ ಶತಸ್ಥಲವನ್ನು ಭಂಡಾರಿ ಜಕ್ಕಣಾರ್ಯರು ಸೇರುವೆಯ ಮಡಿದ ದಿನಪ್ರಮಾಣವೆಂತೆಂದೊಡೆ.....' ಎಂದು ಮುಂತಾಗಿ ಹೇಳಿದ್ದು ಬೆಂಬಲಿಸುತ್ತದೆ. ಇದಲ್ಲದೆ ಜಕ್ಕಣಾರ್ಯನು ಸಂಸ್ಕೃತದಲ್ಲಿ 'ಏಕೋತ್ತರ ಶತಸ್ಥಲ' ಹೆಸರಿನ ಕೃತಿಯನ್ನು, ಒಂದು ನೂರಾ ಒಂದು ಸ್ವರವಚನಗಳಿಗೆ ಟೀಕೆ ಬರೆದ 'ಏಕೋತ್ತರ ಶತಸ್ಥಲ ಟೀಕು' ಕೃತಿಯನ್ನು ರಚಿಸಿರುವುದನ್ನು ನೋಡಿದರೆ, ಇವನು ಈ ಸಿದ್ಧಾಂತದ ದೊಡ್ಡ ಅಭ್ಯಾಸಿಯಾಗಿದ್ದನೆಂದು, ಕಾರಣ ಇವನೇ ಪ್ರಸ್ತುತ ಏಕೋತ್ತರ ಶತಸ್ಥಲ ಬರೆದಿರಬೇಕೆಂದು ಭಾವಿಸಿ, ತಾವು ಈ ಕೃತಿಗೆ 'ಭಂಡಾರಿ ಜಕ್ಕಣ್ಣಂಗಳು ಸೇರಿಸಿದ ಏಕೋತ್ತರ ಶತಸ್ಥಲ' ಎಂದು ಹೆಸರಿಡಲು ಧೈರ್ಯ ಮಾಡಿದ್ದೇವೆ."[೭೧] ಈ ಆಧಾರಗಳ ಮೂಲಕ ಎಂ.ಎಂ.ಕಲಬುರ್ಗಿ ಅವರು ಜಕ್ಕಣಾರ್ಯನೇ ಇದರ ಕರ್ತೃ ಎಂದು ಸ್ಪಷ್ಟಪಡಿಸಿದ್ದಾರೆ.

'ಏಕೋತ್ತರ ಶತಸ್ಥಲ' ಈ ಕೃತಿಯನ್ನು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಹಸ್ತಪ್ರತಿ ಭಂಡಾರಕ್ಕೆ (ಕೆ.೨೧೬) ಸಂಬಂಧಿಸಿದ ತಾಳೆಗರಿ ಪ್ರತಿಯಿಂದ ಸಂಪಾದಿಸಲಾಗಿದೆ. ಇದರ ಆಕಾರ ೬-೫ X ೨, ಗರಿ – ೧-೨೨೧ ಈ ಪ್ರತಿಯು ತಕ್ಕಮಟ್ಟಿಗೆ ಪೂರ್ಣಪ್ರಮಾಣದಲ್ಲಿ ದೊರೆತಿದೆ ಅಷ್ಟೇ ಸದೃಢವಾಗಿಯು ಇದೆ ಎಂದಿದ್ದಾರೆ. ಶ್ರೀ ಭೂಸನೂರುಮಠ ಅವರ ಆವೃತ್ತಿಯ ೨೪ ವಚನಗಳು ಇಲ್ಲಿಲ್ಲ. ಹಾಗೆಯೇ ಇದರಲ್ಲಿ ಹೊಸದಾಗಿ ದೊರೆತ ೧೦ ವಚನಗಳು ಭೂಸನೂರು ಮಠದ ಸಂಪಾದನೆಯಲ್ಲಿಲ್ಲ ಎಂದಿದ್ದಾರೆ. ಈ ಕೃತಿಯನ್ನು ಕೂಡ ಏಕೈಕ ಹಸ್ತಪ್ರತಿಯಿಂದ ಸಂಪಾದಿಸಿದ ಪ್ರತಿಯಾಗಿದೆ. ಈ ಒಂದು ಪ್ರತಿಯನ್ನೇ ಬಳಸಿ, ಲಿಪಿಕಾರನ ಮರೆವೆ ಮೊದಲಾದವುಗಳಿಂದ ಸಂಭವಿಸಿರಬಹುದಾದ ಅಕ್ಷರದೋಷಗಳನ್ನು ಮುದ್ರಿತ ಪಠ್ಯ ಮತ್ತು ಪಾಠಾಂತರಗಳ ನೆರವಿನಿಂದ ಸರಿಪಡಿಸಿಕೊಂಡಿದ್ದೇವೆ.

ಇದು ಬಹುಶಃ ಮೂಲಕೃತಿ ಇಲ್ಲವೆ ಮೂಲಕೃತಿಯ ಸಮೀಪದ ಕೃತಿಯೇ ಆಗಿರುವುದರಿಂದ, ಪಾಠ ಸರಿಪಡಿಸುವ ಸಮಸ್ಯೆಗಳು ನಮಗೆ ಅಷ್ಟಾಗಿ ಎದುರಾಗಲಿಲ್ಲವೆಂದು ಹೇಳಬೇಕು" ಎಂದು ಸಂಪಾದಕರೇ ಪ್ರಸ್ತಾವನೆಯಲ್ಲಿ ಹೇಳಿಕೊಂಡಿದ್ದಾರೆ.

ಹೀಗೆ ಏಕೈಕ ಹಸ್ತಪ್ರತಿಯಿಂದ ಸಂಪಾದನೆ ಮಾಡುವಾಗ ಯಾವ ಯಾವ ಕ್ರಮಗಳನ್ನು ಅನುಸರಿಸಲಾಗಿದೆ ಎಂದು ಹೇಳಿದ್ದಾರೆ. ಹಾಗೆಯೇ ಇಂತಹ ಹಸ್ತಪ್ರತಿಗಳು ಸಿಗುವುದು ಅಪರೂಪ. ಹಾಗಾಗಿ ಸಿಕ್ಕ ಅವಕಾಶಗಳನ್ನು ಕಳೆದುಕೊಳ್ಳಬಾರದೆಂದು ಸಂಪಾದಿಸಿರುವುದಾಗಿ ಹೇಳುವಲ್ಲಿ ಅವರಿಗಿದ್ದ ಕೃತಿಗಳ ಬಗೆಗಿನ ಕಾಳಜಿ ವ್ಯಕ್ತವಾಗಿದೆ.

**III ವಚನ ಸಾಹಿತ್ಯ ಸಂಪಾದನೆ ಕೃತಿ**

ಸಂಕಲನ ಕ್ರಿಯೆಯ ನಂತರ ಹೊಸ ಪ್ರಯೋಗಕ್ಕೆ ಒಳಗಾಗಿ ಸಿದ್ಧಿ ಪಡೆಯುವ ಹಂತ ಇದಾಗಿದೆ. "ಸಂಭಾಷಣೆಯ ರೂಪದಲ್ಲಿ ವಚನ–ಸ್ವರವಚನಗಳನ್ನು ಮತ್ತು ಅಲ್ಲಲ್ಲಿ ಸ್ವಯಂರಚಿತ ಗದ್ಯವನ್ನು ಜೋಡಿಸಿ ಹೆಣೆದ ತಾಂತ್ರಿಕ ಕೃತಿಗಳೂ ಎನಿಸುತ್ತವೆ"[೨] ಎಂದು ವೀರಣ್ಣ ರಾಜೂರ ಅವರು ಹೇಳಿರುವುದು ಗಮನಾರ್ಹವಾಗಿದೆ. ಸಂಕಲನಗಳಲ್ಲಿ ಮಧ್ಯ ಮಧ್ಯ ಸಂಕಲನಕಾರ ಬರುತ್ತಿದ್ದರೆ ಸಂಪಾದನೆಗಳಲ್ಲಿ ಸಂಕಲನಕಾರನ ಜೊತೆ ಪಾತ್ರಗಳು ಪ್ರವೇಶಿಸಿ ವಚನಗಳ ಮೂಲಕ ಮಾತಾಡುತ್ತವೆ.

'ಶೂನ್ಯಸಂಪಾದನೆ' ಗೂಳೂರು ಸಿದ್ಧವೀರಣ್ಣೊಡೆಯರು ರಚಿಸಿದ ಪ್ರಭುದೇವರ ಶೂನ್ಯಸಂಪಾದನ ಕೃತಿಯನ್ನು ಎಂ.ಎಂ.ಕಲಬುರ್ಗಿ ಅವರು ವೀರಣ್ಣ ರಾಜೂರ ಅವರೊಡಗೂಡಿ ಸಂಪಾದಿಸಿದ್ದಾರೆ. ಇದು ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯಮಠದಿಂದ ೨೦೧೬ರಲ್ಲಿ ಪ್ರಕಟವಾದ ಸಂಪಾದನ ಕೃತಿಯಾಗಿದೆ. "ಸಂಪಾದನೆ' ಎಂದರೆ ಗಳಿಸಿ ಅಥವಾ ಗಳಿಸುವುದು. ಗಳಿಕೆಯಲ್ಲಿ ಧನ, ಜ್ಞಾನ, ಕೀರ್ತಿ, ಆಸ್ತಿ ಹೀಗೆ ಅನೇಕ ಬಗೆಗಳಿವೆ. ಇಲ್ಲಿನ ಗಳಿಕೆ ಅವಾವೂ ಅಲ್ಲ. ಇದು 'ಪರಬ್ರಹ್ಮವಸ್ತು'ವಿನ ಗಳಿಕೆ, ಮೋಕ್ಷದ ಗಳಿಕೆ, ಶರಣರ ಪರಭಾಷೆಯಲ್ಲಿ ಹೇಳುವುದಾದರೆ ಇದು ಪರಾತ್ಪರ ವಸ್ತುವಿನ ಅಂಶವಾದ ಅಂಗ, 'ಷಟ್‌ಸ್ಥಲ ಮಾರ್ಗದಲ್ಲಿ ನಡೆದು ಮತ್ತೆ ಆ ಪರಾತ್ಪರ ವಸ್ತು ಸ್ವರೂಪವಾದ ಲಿಂಗದೊಡನೆ ಬೆರೆತು ಸಾಮರಸ್ಯ ಸುಖವನ್ನು ಅನುಭವಿಸಿ ಆನಂದಿಸುವುದು. ಇದನ್ನೇ 'ಲಿಂಗಾಂಗ ಸಾಮರಸ್ಯ' ಎಂದು ಕರೆಯಲಾಗುತ್ತದೆ. ಇದೇ ಶೂನ್ಯಸಂಪಾದನೆ"[೩] ಎಂದು ಅರ್ಥೈಸಿದ್ದಾರೆ. ಇದರ ಜೊತೆಗೆ ಶೂನ್ಯಸಂಪಾದನೆಗಳ ಸಂಖ್ಯಾ ನಿರ್ಣಯ ಮತ್ತು ಸ್ವರೂಪ, ಕರ್ತೃವಿಚಾರ, ಕೃತಿವಿಚಾರ, ಶೂನ್ಯಸಂಪಾದನೆಗಳ ರಚನೆಯ ವಿನ್ಯಾಸವನ್ನು ಕುರಿತು ಸುದೀರ್ಘವಾಗಿ ಸಂಪಾದಕರು ಪ್ರಸ್ತಾವನೆಯಲ್ಲಿ ಚರ್ಚಿಸಿರುವುದು ವಿಶೇಷವೆನಿಸುತ್ತದೆ.

ಗೂಳೂರ ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆ ಈಗಾಗಲೇ ದೊರೆತು ಪ್ರಕಟವಾದ ನಾಟಕ ಸಂಪಾದನೆಗಳಲ್ಲಿ ಅತ್ಯಂತ ಜನಪ್ರಿಯವಾದ ಕೃತಿಯಾಗಿದೆ. ಅದಕ್ಕೆ ಕಾರಣ ಇದು ಹೆಚ್ಚು ಅಚ್ಚುಕಟ್ಟನಿಂದ ಕೂಡಿದ್ದು, ಎಲ್ಲಕ್ಕೂ ಮೊದಲೇ ಪ್ರಕಟವಾಗಿ ಪ್ರಚಾರ ಪಡೆದದ್ದಾಗಿದೆ. ಈ ಗೂಳೂರು ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆಯನ್ನು ಎಂ.ಎಂ.ಕಲಬುರ್ಗಿ ಅವರು ಸಂಪಾದನೆ ಮಾಡುವ ಪೂರ್ವದಲ್ಲಿ ಫ.ಗು.ಹಳಕಟ್ಟಿ ಹಾಗೂ ಸಂ.ಶಿ.ಭೂಸನೂರಮಠ ಅವರು ಸಂಪಾದಿಸಿರುವುದನ್ನು ಇಲ್ಲಿ ಚರ್ಚಿಸಿದ್ದಾರೆ. ಫ.ಗು.ಹಳಕಟ್ಟಿ ಅವರು ಇದನ್ನು ಪ್ರಥಮ ಜಾರಿಗೆ ಶೋಧಿಸಿ ೧೯೩೦ರಲ್ಲಿ ತಮ್ಮ ಶಿವಾನುಭವ ೧೨ ಗ್ರಂಥಮಲೆಯ ೨೨ನೆ ಕೃತಿಯಾಗಿ ಪ್ರಕಟಿಸುತ್ತಾರೆ. ಈ ಕೃತಿ ಪರಿಷ್ಕರಣಕ್ಕಾಗಿ ೨ ಹಸ್ತಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಒಂದು ಪ್ರತಿ ರಬಕವಿಯಲ್ಲಿ ದೊರೆತ ಕಾಗದ ಪ್ರತಿ. ಮತ್ತೊಂದು ಕೋಲಾರ ಜಿಲ್ಲೆ ಮೃಗಮಲೆಯಲ್ಲಿ ದೊರೆತ ತಾಡವೋಲೆ ಪ್ರತಿ. ಎರಡೂ ಪ್ರತಿಗಳು ಹೆಚ್ಚು ಶುದ್ಧವಾಗಿದ್ದುವೆಂದು ಹೇಳಿದೆ. ಆದರೆ ಮೂಲಪ್ರತಿ ಹಾಗೂ ಪಾಠಂತರ ಪ್ರತಿಯ ಬಗ್ಗೆ ತಿಳಿಸಿಲ್ಲ. ಹಾಗೆಯೇ ಪಾಠಾಂತರಗಳನ್ನು ಗುರುತಿಸಿಲ್ಲ. ಆದರೆ ಗ್ರಂಥಸಂಪಾದನೆಯ ಪರಿಚಯವಿಲ್ಲದ ಸಂದರ್ಭದಲ್ಲಿ ಫ.ಗು.ಹಳಕಟ್ಟಿ ಅವರು ತಮ್ಮದೇ ಆದ ವೈಧಾನಿಕತೆಯ ಹಿನ್ನೆಲೆಯಲ್ಲಿ ಗುರುತಿಸಿರುವುದು ವಿಶೇಷವೆನಿಸಿದೆ. ಎರಡನೆಯ ಬಾರಿ ೧೯೫೮ರಲ್ಲಿ ಶಾಸ್ತ್ರೀಯವಾಗಿ ಈ ಕೃತಿಯನ್ನು ಸಂಪಾದಿಸಿದವರು ರಾವೂರ ಶ್ರೀ ಸಿದ್ಧಲಿಂಗೇಶ್ವರ ಮಠ ಮತ್ತು ಆದವಾನಿಯ ಕಲ್ಲುಮಠದ ಅಧಿಪತಿಗಳ ಮೂಲಕ ಪ್ರಕಾಶಪಡಿಸಿದವರು ಪ್ರೊ.ಸಂ.ಶಿ. ಭೂಸನೂರಮಠ ಅವರು. ಅವರು ಸಂಪಾದನೆಗಾಗಿ ಧಾರವಾಡ, ಕೆರೂರ, ರಾವೂರ, ಹಾರಕೋಡ, ಗದಗ, ಶಿವಯೋಗ ಮಂದಿರ ಮತ್ತು ಮೈಸೂರುಗಳಲ್ಲಿ ಸಂಗ್ರಹಿಸಿದ ೭ ತಾಡೋಲೆ ಹಸ್ತಪ್ರತಿಗಳಿಂದ ಸಂಪಾದಿಸಿದ್ದಾರೆ. ಇವರು ಶುದ್ಧಪಾಠಗಳನ್ನು ಮೇಲಿರಿಸಿಕೊಂಡು ಉಳಿದ ಭಿನ್ನಪಾಠಗಳನ್ನು ಅಡಿಯಲ್ಲಿ ಸಂಗ್ರಹಿಸಿಟ್ಟಿದ್ದಾರೆ. ಇವರ ಸಂಪಾದನೆಯಲ್ಲಿ ಮೂಲಪ್ರತಿ ಹಾಗೂ ಪಾಠಾಂತರ ಪ್ರತಿಗಳಾವುವು ಎಂಬುದು ಸ್ಪಷ್ಟವಿಲ್ಲ. ಅನುಬಂಧದಲ್ಲಿ ವಚನಗಳ ಅಕಾರಾದಿ, ವಚನಕಾರರ ಅಂಕಿತಗಳ ವರ್ಣಾನುಕ್ರಮ, ಸಂಕ್ಷಿಪ್ತ ಪಾರಿಭಾಷಿಕ–ಪದಕೋಶ ಮತ್ತು ಶಬ್ದಕೋಶವನ್ನು ಕೊಡಲಾಗಿದೆ ಎಂದು ಎಂ.ಎಂ.ಕಲಬುರ್ಗಿ ಅವರು ಪ್ರಸ್ತಾವನೆಯಲ್ಲಿ ಚರ್ಚಿಸಿದ್ದಾರೆ.

ಎಂ.ಎಂ.ಕಲಬುರ್ಗಿ ಅವರು ಈ ಕೃತಿ ಪರಿಷ್ಕರಣಕ್ಕಾಗಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಹಸ್ತಪ್ರತಿ ಭಂಡಾರಕ್ಕೆ ಸೇರಿದ ತಾಡವೋಲೆ ಪ್ರತಿ ಸಂಖ್ಯೆ ಕೆ.೨೪೯ನ್ನು ಮೂಲ ಪ್ರತಿಯಾಗಿ ಬಳಸಿಕೊಳ್ಳಲಾಗಿದೆ. ಇದರ ಸಂಕೇತ 'ಮೂ', ಪ್ರೊ.ಭೂಸನೂರಮಠ ಅವರ ಮುದ್ರಿತ ಕೃತಿಯನ್ನು ಪೂರಕ ಪ್ರತಿಯನ್ನಾಗಿ ಸ್ವೀಕರಿಸಲಾಗಿದೆ. ಇದರ ಸಂಕೇತ 'ಮು' ಎಂದು ಸೂಚಿಸಿದ್ದಾರೆ. ಬೆಂಗಳೂರು ವಿ.ವಿ.ಕೆ. ೨೪೯ನೆಯ ಹಸ್ತಪ್ರತಿ

ಕಟ್ಟಿನಲ್ಲಿ ಎರಡು ಕೃತಿಗಳಿವೆ. ೧. ಎಲ್ಲ ಪುರಾತನರ ಬೆಡಗಿನ ವಚನಗಳು, ೨. ಶೂನ್ಯಸಂಪಾದನೆ. ಇದರಲ್ಲಿ ಒಟ್ಟು ೨೬೬ ಗರಿಗಳಿವೆ. ಶೂನ್ಯಸಂಪಾದನೆ ೧೪೫ನೆಯ ಗರಿಯಿಂದ ಆರಂಭವಾಗಿ ೨೬೬ಕ್ಕೆ ಮುಕ್ತಾಯವಾಗುತ್ತದೆ. ಗರಿಗಳಿಗೆ ಪುಟಸಂಖ್ಯೆ ಒಂದೇ ಕಡೆಗೆ ಹಾಕಲಾಗಿದೆ. ಅದನ್ನು ಎರಡುಪಟ್ಟು ಮಾಡಿದರೆ ಒಟ್ಟು ೨೪೨ ಪುಟಗಳಲ್ಲಿ ಈ ಕೃತಿ ವ್ಯಾಪಿಸಿಕೊಂಡಿದೆ ಎಂದು ವಿದಿತವಾಗುತ್ತದೆ. ಹಸ್ತಪ್ರತಿಯ ಉದ್ದ ೧೩ ೧/೨ ಇಂಚು, ಅಗಲ–೩ ಇಂಚು, ಅಕ್ಷರ–ಸಣ್ಣ, ದುಂಡಗೆ ಪ್ರತಿ ಶುದ್ಧವಾಗಿದೆ, ಸಮಗ್ರವೆನಿಸಿದೆ. ಪ್ರತಿಯೊಂದು ಗರಿಯಲ್ಲಿ ೧೨ ರಿಂದ ೧೫ ರವರೆಗೆ ಸಾಲುಗಳಿವೆ ಎಂದು ಹಸ್ತಪ್ರತಿಯ ವಿವರಗಳನ್ನು ನೀಡಿದ್ದಾರೆ.

'ಶೂನ್ಯ ಸಂಪಾದನೆ' ಕೃತಿ ಸಂಪಾದನೆಯ ಉದ್ದೇಶವನ್ನು ಕುರಿತು ಸಂಪಾದಕರು ಚರ್ಚಿಸಿರುವುದನ್ನು ನೋಡುವುದಾದರೆ ಶೂನ್ಯಸಂಪಾದನೆಯ ಬಗ್ಗೆ ತಿಳಿಯಬೇಕೆಂಬ ಹಂಬಲವಿರುವವರಿಗೆ ಈ ಕೃತಿಗಳ ಕೊರತೆ ಕಂಡುಬರುವುದನ್ನು ಗಮನಿಸಿರುವುದರಿಂದ ಈ ಕೃತಿಗಳ ಕೊರತೆ ಕಂಡುಬರುವುದನ್ನು ಗಮನಿಸಿರುವುದರಿಂದ ಈ ಕೃತಿ ಸಂಪಾದನೆಗೆ ತೊಡಗಿರು ವುದಾಗಿ ಹೇಳಿಕೊಂಡಿದ್ದಾರೆ. "ಗೂಳೂರ ಸಿದ್ಧವೀರಣ್ಣೊಡೆಯರು ಸಂಪಾದಿಸಿದ ಶೂನ್ಯ ಸಂಪಾದನೆಯ ತಾಡವೋಲೆಯ ನಾಲ್ಕು ಪ್ರತಿಗಳು ಮೊದಲು ನಮಗೆ ದೊರೆತವು. ಮುದ್ರಣ ಪ್ರತಿಯನ್ನು ಬರೆದೂ ಆಯಿತು. ಅಷ್ಟರಲ್ಲಿ ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯಸಂಪಾದನೆಯ ತಾಡವೋಲೆಯ ಎರಡು ಪ್ರತಿಗಳು ತಮಗೆ ಸಿಕ್ಕವು. ಈ ಎಲ್ಲ ಪ್ರತಿಗಳ ಸಹಾಯದಿಂದ ಮುದ್ರಣ ಕಾರ್ಯ ನಡೆಯಿತು. ಈ ಅವಧಿಯಲ್ಲಿ ಮೈಸೂರು ಓರಿಯಂಟಲ್ ಲೈಬ್ರರಿಯಿಂದ ಕೆಂಚವೀರಣ್ಣೊಡೆಯರು ಮುಂತಾದವರು ಸಂಪಾದಿಸಿದ ಶೂನ್ಯಸಂಪಾದನೆಯ ಆದ್ಯಕರ್ತರಾದ ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆಯ ತಾಡೋಲೆ ಪ್ರತಿಗಳನ್ನು ದೊರಕಿಸಲಾಯಿತು. ಈಗ ನಾವು ಪ್ರಸಿದ್ಧ ಮಾಡಿದ 'ಪ್ರಭುದೇವರ ಶೂನ್ಯ ಸಂಪಾದನೆ'ಯ ಸಂಸ್ಕರಣ ಸಂದರ್ಭದಲ್ಲಿ ಅವಶ್ಯವೆನಿಸಿದಾಗ ಈ ಎಲ್ಲ ಪ್ರತಿಗಳ ಸಹಾಯವನ್ನು ಪಡೆಯಲಾಗಿದೆ. ಈ ಎಲ್ಲ ಮೂಲಪ್ರತಿಗಳಲ್ಲಿ ಪ್ರಭುದೇವರ ಶೂನ್ಯಸಂಪಾದನೆ ಎಂದೇ ಉಲ್ಲೇಖಿಸಿರುವುದರಿಂದ ಈ ಗ್ರಂಥಕ್ಕೆ 'ಪ್ರಭುದೇವರ ಶೂನ್ಯಸಂಪಾದನೆ' ಎಂದು ಹೆಸರು ಕೊಟ್ಟಿದೆ"[೭೪] ಎಂದು ಸಂಪಾದಕರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಒಟ್ಟಾರೆ ಈ 'ಪ್ರಭುದೇವರ ಶೂನ್ಯಸಂಪಾದನೆ' ವಿಶೇಷ ರೀತಿಯಿಂದ ಮೂಡಿಬಂದಿದೆ ಎನ್ನಬಹುದು.

ಎಂ.ಎಂ.ಕಲಬುರ್ಗಿ ಅವರು ಈ ಕೃತಿ ಸಂಪಾದನೆಯಲ್ಲಿ ಅನುಸರಿಸಿದ ವಿಧಾನಗಳನ್ನು ಈ ಕೆಳಕಂಡಂತೆ ತಿಳಿಸಲಾಗಿದೆ.

* ಗೂಳೂರು ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆ ರಚನೆಗೊಂಡ ಕಾಲಕ್ಕೆ ಮತ್ತು ಅದರ ನಂತರ ಹೆಚ್ಚು ಜನಪ್ರಿಯವಾದ ಕಾರಣ ಹಸ್ತಪ್ರತಿಗಳು ಅಧಿಕ ಸಂಖ್ಯೆಯಲ್ಲಿ ದೊರೆಯುತ್ತವೆ. ಆದರೆ ಆ ಎಲ್ಲವನ್ನು ಇಲ್ಲಿ ಪರಿಷ್ಕರಣೆಗೆ ಬಳಸಿಕೊಂಡಿಲ್ಲ. ಈಚೆಗೆ ದೊರೆತ ಹೆಚ್ಚು ಪ್ರಾಚೀನವೂ ಶುದ್ಧವೂ ಅಧಿಕೃತವೂ ಎನ್ನಿಸಿದ ತಾಳೆಗರಿ ಹಸ್ತಪ್ರತಿವೊಂದನ್ನು ಮಾತ್ರ ಮೂಲವಾಗಿಟ್ಟುಕೊಂಡು ಇಂದು ಪ್ರಚಲಿತವಿರುವ ವಚನಗ್ರಂಥ ಸಂಪಾದನೆಯ ಎಲ್ಲ ತತ್ವಗಳ ಹಿನ್ನೆಲೆಯಲ್ಲಿ ಶಾಸ್ತ್ರೀಯವಾಗಿ ಪರಿಷ್ಕರಿಸಲು ಪ್ರಯತ್ನಿಸಿದ್ದಾರೆ.

* ಈ ಹಿಂದೆ ಪ್ರಕಟವಾದ ಫ.ಗು.ಹಳಕಟ್ಟಿ ಮತ್ತು ಸಂ.ಶಿ.ಭೂಸನೂರಮಠ ಅವರ ಮುದ್ರಿತ ಕೃತಿಗಳನ್ನು ಈ ಪರಿಷ್ಕರಣಕ್ಕೆ ಪೂರಕವಾಗಿ ಬಳಸಿಕೊಂಡಿದ್ದಾರೆ. ಈ ಪರಿಷ್ಕರಣ ಮೂಲಪ್ರತಿಯಲ್ಲಿ ಪಾಠ ಶುದ್ಧವಾಗಿದ್ದರೆ ಅದನ್ನು ಹಾಗೆ ಉಳಿಸಿಕೊಂಡು ಅಶುದ್ಧ ಹಾಗೂ ಸಂದಿಗ್ಧವೆನಿಸಿದ್ದಲ್ಲಿ ಮಾತ್ರ ಮುದ್ರಿತ ಪ್ರತಿಯಲ್ಲಿನ ಶುದ್ಧ ಪಾಠವನ್ನು ಎತ್ತಿಕೊಂಡು ಮೇಲಿರಿಸಿ ಸೂಕ್ತ ಚಿಹ್ನೆಗಳೊಂದಿಗೆ ಮೂಲಪಾಠವನ್ನು ಅಡಿಯಲ್ಲಿ ಕೊಡುವುದು. ಮೂಲದಲ್ಲಿದ್ದ ಶುದ್ಧ ಪಾಠಗಳಿಗೆ ಮುದ್ರಿತಪ್ರತಿಯಲ್ಲಿ ಹಲವು ಭಿನ್ನ ಪಾಠಗಳಿದ್ದರು ಅವನ್ನು ಅಡಿಯಲ್ಲಿ ಸೇರಿಸಿದೇ ಕೈಬಿಡುವುದು, ಮೂಲದಲ್ಲಿ ಪಾಠ ಕಳೆದುಹೋಗಿದ್ದಲ್ಲಿ ಮುದ್ರಿತಪ್ರತಿಯಲ್ಲಿನ ಪಾಠವನ್ನು[ ] ಹಾಕಿ ಸ್ವೀಕರಿಸಿದ್ದಾರೆ.

* ಈ ಪರಿಷ್ಕರಣೆಯಲ್ಲಿ ಮುದ್ರಿತ ಕೃತಿಯಲ್ಲಿ ಗದ್ಯದಂತೆ ಪ್ರಕಟಿಸಿದ ವಚನಗಳನ್ನು ಇಲ್ಲಿ ಲಯಾನುಸಾರವಾಗಿ ಹೊಡೆದು ಪದ್ಯದಂತೆ ಜೋಡಿಸಲಾಗಿದೆ. ಸಂಖ್ಯೆಯನ್ನು ವಚನದ ತಲೆಯ ಮೇಲೆ ನಿರಂತರವಾಗಿ ವಚನದ ಅಂತ್ಯದಲ್ಲಿ ಆಯಾ ಸಂಪಾದನೆಗೆ ಪ್ರತ್ಯೇಕವಾಗಿ ಕೊಡಲಾಗಿದೆ. ಇದರಿಂದ ಒಟ್ಟು ವಚನ ಸಂಖ್ಯೆ ಮತ್ತು ಒಂದನ್ನು ಸಂಪಾದನೆಯಲ್ಲಿರುವ ವಚನ ಸಂಖ್ಯೆಗಳನ್ನು ತಿಳಿಯಲು ಅನುಕೂಲವಾಗುತ್ತದೆ.

* ವಚನಾಂಕಿತಗಳಲ್ಲಿ ತಲದೋರಿದ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲಾಗಿದೆ. ಪ್ರಭುದೇವರ ಅಂಕಿತ ಗೊಗ್ಗೇಶ್ವರ, ಗೊಹೇಶ್ವರ ಎಂದು ಎರಡು ಬಗೆಯಾಗಿ ಬಳಕೆಯಾಗಿದೆ. ಇವುಗಳಲ್ಲಿ ಗೊಹೇಶ್ವರ ಎಂಬುದನ್ನು ಮಾತ್ರ ಇಟ್ಟುಕೊಂಡು ಸಂಪಾದಿಸಲಾಗಿದೆ. ಆಯ್ದಕ್ಕಿ ಲಕ್ಕಮ್ಮ ಮತ್ತು ಆಯ್ದಕ್ಕಿ ಮಾರಯ್ಯಗಳ ವಚನಾಂಕಿತದಲ್ಲಿ ಅಮರೇಶ್ವರ ಮತ್ತು ಅಮಲೇಶ್ವರ ಎಂಬ ಎರಡು ಭಿನ್ನರೂಪಗಳು ಬಳಕೆಯಾಗಿವೆ. ಅವುಗಳಲ್ಲಿ ಅಮರೇಶ್ವರ ಎಂಬುದನ್ನು ಮಾತ್ರ ಉಳಿಸಿಕೊಂಡು ಏಕರೂಪತೆಯನ್ನು ಕಾಯ್ದುಕೊಳ್ಳಲಾಗಿದೆ. ಏಕಾಂತವೀರ ಸೊಡ್ಡಲ ಎಂಬ ಅಂಕಿತವಿರುವ ಎರಡು ವಚನಗಳನ್ನು ಏಕಾಂತರಾಮಿ ತಂದೆಯ ಹೆಸರಿನಡಿಯಲ್ಲಿ ಜೋಡಿಸಲಾಗಿದೆ. ಇದು ಮೂಲತಃ ಸೊಡ್ಡಳ ಬಾಚರಸನ ಅಂಕಿತವಾಗಿದೆ. ಏಕಾಂತವೀರ ಎಂಬ ವಿಶೇಷಣ ಗಮನಿಸಿ ಸಂಪಾದನಕಾರ ಏಕಾಂತರಾಮಯ್ಯನದೆಂದು ಕಲ್ಪಿಸಿದಂತಿದೆ.

ಏಕಾಂತರಾಮಯ್ಯನ ಅಂಕಿತ ಎನ್ನಯ್ಯ ಚನ್ನರಾಮ ಎಂದಿದೆ. ಈಗಾಗಿ ಈ ಎರಡು ವಚನಗಳನ್ನು ಸೊಡ್ಡಳ ಬಾಚರಸನದೆಂದು ಗುರುತಿಸಿ ಅಡಿಯಲ್ಲಿ ಭಿನ್ನಾಭಿಪ್ರಾಯಗಳನ್ನು ಕೊಡಲಾಗಿದೆ. ನುಲಿಯ ಚಂದಯ್ಯನ ಅಂಕಿತ ಚಂದೇಶ್ವರಲಿಂಗ ಎಂದಿದ್ದು, ಅದು ನಾಲ್ಕು ವಚನಗಳಲ್ಲಿ ಸಂಗನಬಸವಣ್ಣ ಪ್ರಿಯ ಚಂದೇಶ್ವರಲಿಂಗ ಎಂದು ಎರಡು ವಚನಗಳಲ್ಲಿ ಚನ್ನಬಸವಣ್ಣ ಪ್ರಿಯ ಚಂದೇಶ್ವರಲಿಂಗ ಎಂದು ಬಂದಿದೆ. ಹೀಗಿರುವುದರಿಂದ ಭಿನ್ನ ವಚನಕಾರರ ಅಂಕಿತಗಳಿರಬಹುದು ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದುದುಂಟು. ಆದರೆ ಇವು ನುಲಿಯ ಚಂದಯ್ಯನ ಅಂಕಿತಗಳೇ ಆಗಿದ್ದು, ಬಸವಣ್ಣ ಮತ್ತು ಚನ್ನಬಸವಣ್ಣನನ್ನು ಉದ್ದೇಶಿಸಿ ಹೇಳುವಾಗ ಈ ವಿಶೇಷಣಗಳನ್ನು ತನ್ನ ಅಂಕಿತದೊಂದಿಗೆ ಸೇರಿಸಿ ಹೇಳಿದ್ದಾನೆ.

* ಹಡಪದ ಅಪ್ಪಣ್ಣನ ಹೆಸರಿನಡಿಯಲ್ಲಿ ಸೇರಿಸಿದ ಎಲ್ಲಾ ವಚನಗಳಿಗೆ ಬಸವಪ್ರಿಯ ಕೂಡಲ ಚೆನ್ನಸಂಗಯ್ಯ, ಬಸವಪ್ರಿಯ ಕೂಡಲಸಂಗಮದೇವ ಎಂಬ ಅಂಕಿತ ಬಳಕೆಯಾಗಿದೆ. ಆದರೆ ಈತನ ನಿಜಾಂಕಿತ ಬಸವಪ್ರಿಯ ಕೂಡಲ ಚನ್ನಬಸವಣ್ಣ ಎಂದಿದೆ. ಬಸವಪ್ರಿಯ ಕೂಡಲ ಸಂಗಮ ದೇವ ಎಂಬುದು ಸಂಗಮೇಶ್ವರ ಅಪ್ಪಣ್ಣನ ಅಂಕಿತವಾಗಿದೆ. ಇಲ್ಲಿನ ಎಲ್ಲ ವಚನಗಳಿಗೂ ಹಡಪದ ಅಪ್ಪಣ್ಣನದೆಂದೇ ಬಳಸಿರುವುದರಿಂದ ಹಾಗೆಯೇ ಇಟ್ಟುಕೊಳ್ಳಲಾಗಿದೆ. ಸಿದ್ಧರಾಮನ ವಚನಗಳಲ್ಲಿ ಮೂರು ಅಂಕಿತಗಳು ಬಳಕೆಯಾಗಿವೆ. ಸಿದ್ಧಮಲ್ಲಿಕಾರ್ಜುನ, ಶ್ರೀ ಮಲ್ಲಿಕಾರ್ಜುನ, ಯೋಗಿನಾಥ ಇವುಗಳನ್ನು ಹಾಗೇ ಉಳಿಸಿ ಕೊಳ್ಳಲಾಗಿದೆ.

* ಅನುಬಂಧದಲ್ಲಿ ವಚನಗಳ ಅಕಾರಾದಿ, ವಚನಕಾರ–ಅಂಕಿತ–ವಚನಸಂಖ್ಯೆ, ಸ್ವರವಚನಗಳ ಅಕಾರಾಧಿ–ಸ್ವರವಚನಕಾರರು–ಅಂಕಿತ–ವಚನಸಂಖ್ಯೆ, ಕಠಿಣ ಪದಕೋಶ ಮತ್ತು ಪಾರಿಭಾಷಿಕ ಪದಕೋಶಗಳನ್ನು ಅಳವಡಿಸಲಾಗಿದೆ.

ಈ ಮೇಲಿನ ವಿಧಾನಗಳನ್ನು ಅನುಸರಿಸುವ ಮೂಲಕ ಶೂನ್ಯಸಂಪಾದನಾ ಕೃತಿ ಸಾಧ್ಯವಾದಷ್ಟರ ಮಟ್ಟಿಗೆ ಶುದ್ಧರೂಪದಲ್ಲಿ ದೊರಕುವಂತೆ ಶ್ರಮಿಸಿದ ಶ್ರೇಯಸ್ಸು ಎಂ.ಎಂ.ಕಲಬುರ್ಗಿ ಮತ್ತು ವೀರಣ್ಣ ರಾಜೂರ ಅವರಿಗೆ ಸಲ್ಲುತ್ತದೆ.

**ಇತರ ಸಂಪಾದನ ಕೃತಿಗಳು**

ಎಂ.ಎಂ.ಕಲಬುರ್ಗಿ ಅವರು ಒಬ್ಬ ಉತ್ತಮ ಸಂಶೋಧಕರಾಗಿದ್ದುಕೊಂಡು ಹೊಸ ಹೊಸದನ್ನು ಶೋಧಿಸುವ ಮತ್ತು ಹೊಸದನ್ನು ಆಯೋಜಿಸುವಲ್ಲಿ ತುಂಬಾ ಆಸಕ್ತಿ ಉಳ್ಳವರಾಗಿದ್ದರು.

ಯಾವುದಾದರೂ ಹೊಸ ವಿಚಾರ ಅವರಿಗೆ ಹೊಳೆದರೆ ಅದರ ಬಗ್ಗೆ ಆಳವಾದ ಚಿಂತನೆ ನಡೆಸಿ ಅದಕ್ಕೊಂದು ರೂಪ ಕೊಡುತ್ತಿದ್ದರು. ವಚನ ಸಾಹಿತ್ಯ ಕುರಿತಂತೆ ವಿಚಾರ ಸಂಕಿರಣಗಳನ್ನು ಹಮ್ಮಿಕೊಂಡರೆ ಈ ವಿಚಾರಸಂಕಿರಣಗಳಲ್ಲಿ ಮಂಡಿಸಿದ ವಿಷಯವನ್ನು ಅಲ್ಲಿಯೇ ಕೈಬಿಡದೆ ಮಂಡಿಸಿದ ಪ್ರಬಂಧಗಳನ್ನು ಪುಸ್ತಕ ರೂಪದಲ್ಲಿ ತರುವಲ್ಲಿ ಆಸಕ್ತಿ ವಹಿಸಿ ಅದರ ಸಂಪಾದನೆಗಳಲ್ಲಿ ತೊಡಗಿದರು. ಅಂತಹ ಸಂಪಾದನೆಗಳು ವಿಶೇಷ ಮಹತ್ವವುಳ್ಳದ್ದಾಗಿವೆ. ಅವುಗಳನ್ನು ಈ ಕೆಳಗಿನಂತೆ ಗಮನಿಸಲಾಗುವುದು.

'ಬಸವಮಾರ್ಗ ೧': ಇದು ಎಂ.ಎಂ.ಕಲಬುರ್ಗಿ ಅವರ ಸಂಪಾದನೆ ಕೃತಿಯಾಗಿದ್ದು ಶ್ರೀ ಬಸವೇಶ್ವರ ಪೀಠದ ಮುಖಾಂತರ 'ಬಸವ ಜಯಂತಿ'ಯನ್ನು ಆಚರಿಸುವ ಮೂಲಕ ಎರಡು ದಿನಗಳ ಕಾಲ ನಡೆದ ವಿಚಾರ ಸಂಕಿರಣಗಳ ಗುಚ್ಛವಾಗಿದೆ. ಇದು ಮಾರ್ಚ್ ೧, ೧೯೮೦ರಲ್ಲಿ ಪ್ರಕಟಗೊಂಡ ಕೃತಿಯಾಗಿದೆ. "ಕನ್ನಡ ಅಧ್ಯಯನ ಪೀಠದಲ್ಲಿ ಅಸ್ತಿತ್ವಕ್ಕೆ ಬಂದ 'ಬಸವೇಶ್ವರ ಪೀಠ'ದ ಮುಖ್ಯ ಉದ್ದೇಶ ಬಸವಣ್ಣನವರ ಲೋಕೋತ್ತರ ಸಂದೇಶಗಳ ಬಗ್ಗೆ ಸ್ಪಷ್ಟತೆಯನ್ನು ಕಲ್ಪಿಸುವುದಾಗಿದೆ. ಹಾಗಾಗಿ ಬಸವ ಪೀಠದ ಉದ್ದೇಶ ಸಾಧನೆಗಾಗಿ ಸಂಶೋಧನೆ, ಸಂಪಾದನೆ, ವಿಮರ್ಶೆ, ಅನುವಾದ ಕಾರ್ಯಗಳಿಗೆ ಅವಕಾಶ ಕಲ್ಪಿಸಿಕೊಡಲಾಗಿದೆ. ಬಸವಣ್ಣನವರನ್ನು ಕುರಿತು ಕನ್ನಡ, ಸಂಸ್ಕೃತ, ತೆಲುಗು ಮತ್ತು ಮರಾಠಿ ಭಾಷೆಗಳಲ್ಲಿ ವಿಪುಲ ಸಾಹಿತ್ಯವಿದೆ; ನಾಡಿನ ಒಳಹೊರಗೆ ಬಸವಣ್ಣನ ಬಗೆಗೆ ಅನೇಕ ವದಂತಿಗಳು ಕೇಳಿಬರುತ್ತದೆ; ಅನೇಕ ಅವಶೇಷಗಳು ಅಜ್ಞಾತವಾಸವನ್ನು ಅನುಭವಿಸುತ್ತಲಿವೆ. ಕಣ್ಣಲ್ಲಿ ಕಣ್ಣಿಟ್ಟು ಇವುಗಳನ್ನು ಕಲೆಹಾಕುವ ಈ ಸಂಕಲನವನ್ನು ರಾಗದ್ವೇಷರಹಿತ ದೃಷ್ಟಿಯಿಂದ ಪರಿಶೀಲಿಸುವ, ತನ್ಮೂಲಕ ಅಧಿಕೃತ ಸಂಗತಿಗಳನ್ನು ಪ್ರಕಟಿಸುವ ಕಾರ್ಯ ಇಲ್ಲಿ ನಡೆಯಬೇಕಾಗಿದೆ. ಆಮೇಲೆ ಅದನ್ನು ಅನೇಕ ಭಾಷೆಗಳ ಮೂಲಕ ದೇಶ-ವಿದೇಶಗಳಲ್ಲಿ ಹರಡಬೇಕಾಗಿದೆ."[೭೫] ಇಲ್ಲಿ ಪ್ರಧಾನ ಸಂಪಾದಕರಾದ ಎಂ.ಎಸ್.ಸುಂಕಾಪುರ ಅವರ 'ಬಸವಪೀಠ'ದ ಮುಖ್ಯ ಉದ್ದೇಶವೇ ಬಸವಣ್ಣನವರ ಲೋಕೋತ್ತರ ಸಂದೇಶವನ್ನು ಪ್ರತಿಪಾದಿಸುವುದು ಹಾಗೂ ಅವುಗಳ ಬಗ್ಗೆ ಸ್ಪಷ್ಟ ಕಲ್ಪನೆಯನ್ನು ನಿರೂಪಿಸುವ ಉದ್ದೇಶವನ್ನು ಹೊಂದಿದೆ ಎಂದಿದ್ದಾರೆ. ಅಜ್ಞಾತವಾಗಿರುವ ಸಂಗತಿಗಳನ್ನು ಕಲೆ ಹಾಕುವುದರ ಜೊತೆಗೆ ದೇಶ-ವಿದೇಶಗಳಲ್ಲಿ ಬಸವಣ್ಣನವರ ಮೌಲ್ಯ ಪ್ರತಿಪಾದನೆಯನ್ನು ಹರಡುವುದಾಗಿದೆ. ಇದಕ್ಕಾಗಿ ಬಸವಪೀಠವು ಹಲವು ಯೋಜನೆಗಳನ್ನು ಹಮ್ಮಿಕೊಳ್ಳುತ್ತದೆ. ಅದರಲ್ಲಿ 'ಬಸವ ಜಯಂತಿ' ಆಚರಣೆಯು ಒಂದಾಗಿದೆ. ಪ್ರತಿವರ್ಷ ನಡೆಯುವ 'ಬಸವ ಜಯಂತಿ'ಯಂದು ವಿದ್ವಾಂಸರಿಂದ ಎರಡು ದಿನಗಳ ಕಾಲ ಬಸವಣ್ಣನವರನ್ನು ಹಾಗೂ ವೀರಶೈವವನ್ನು ಕುರಿತಂತೆ ಮೌಲಿಕವಾದ ಉಪನ್ಯಾಸವನ್ನು ಏರ್ಪಡಿಸಲಾಗುತ್ತದೆ. ೧೯೭೯ರಲ್ಲಿ ಮೊದಲ ಬಾರಿಗೆ ನಡೆದ

ಬಸವಜಯಂತಿಯ ಉಪನ್ಯಾಸಗಳ ಲೇಖನ ಸಂಪುಟವೇ ಈ ಬಸವಮಾರ್ಗ ಸಂಪುಟ-೧ ಆಗಿದೆ.

ಎಂ.ಎಂ.ಕಲಬುರ್ಗಿ ಅವರು ಈ ಕೃತಿಯನ್ನು ಕುರಿತು "ಮುರುಗೋಡು ಶ್ರೀಗಳ ಮಹಿಮೆ, ಬಸವಭಕ್ತರ ತ್ಯಾಗಗಳಲ್ಲಿ ಮೂಡಿಬಂದ ಈ ಪೀಠ ಬಸವ ಬೆಳಕನ್ನು ಕರ್ನಾಟಕದಿಂದ ಭಾರತಕ್ಕೆ, ಭಾರತದಿಂದ ವಿಶ್ವಕ್ಕೆ ವಿಸ್ತರಿಸುವ ಈ ಸಾಧನೆಗಾಗಿ ಸಂಶೋಧನೆ, ಸಂಪಾದನೆ, ಸಮಾಲೋಚನೆ, ಗ್ರಂಥ ರಚನೆ ಮತ್ತು ಭಾಷಾಂತರ ಕಾರ್ಯಗಳನ್ನು ಕೈಗೆತ್ತಿಕೊಳ್ಳಲಾಗಿದೆ. ಕ್ರಿಯಾಕಲಾಪಗಳ ಅಂಗವಾಗಿ ಪ್ರಕಟವಾಗುತ್ತದೆ ಪ್ರಸ್ತುತ ಬಸವ ಮಾರ್ಗ."[೭೬] ಬಸವಣ್ಣನವರ ತತ್ವ ಸಂದೇಶಗಳನ್ನು ಭಾರತಕ್ಕೆ ಅಷ್ಟೇ ಅಲ್ಲದೆ ವಿಶ್ವಕ್ಕೆ ಸಾರುವ ಉದ್ದೇಶವನ್ನು ಹೊಂದಿದೆ. ಹಾಗಾಗಿ ಸಂಶೋಧನೆ, ಸಂಪಾದನೆ, ಸಮಾಲೋಚನೆ, ಗ್ರಂಥರಚನೆ ಅಷ್ಟೇ ಅಲ್ಲದೆ ಭಾಷಾಂತರ ಯೋಜನೆಗಳನ್ನು ಕೈಗೆತ್ತಿಕೊಂಡಿರುವುದಾಗಿ ಸಂಪಾದಕರ ನುಡಿಯಲ್ಲಿ ಹೇಳಿದ್ದಾರೆ. "ವೀರಶೈವರ ಬಗೆಗೆ ಮತ್ತು ವೀರಶೈವ ನಿರ್ಣಯ ಪರಮಾವತಾರವೆನಿಸುವ ಶ್ರೀಬಸವೇಶ್ವರರ ಬಗೆಗೆ ಅಪಾರ ಆಸಕ್ತಿಯಿಂದ ಸಂಶೋಧನೆ ನಡೆಸುತ್ತ ಬಂದ ಮತ್ತು ಬಸವಪೀಠದ ತಾತ್ಪೂರ್ತಿಕ ಪ್ರವಚಕರಾಗಿರುವ ಡಾ.ಎಂ.ಎಂ. ಕಲಬುರ್ಗಿ ಅವರು ಈ ವಿಚಾರ ಸಂಕಿರಣವನ್ನು ನಡೆಸುವ ಲೇಖನಗಳು ಪುಸ್ತಕ ರೂಪದಲ್ಲಿ ತುಂಬಾ ಶ್ರದ್ಧೆಯಿಂದ ದುಡಿದಿದ್ದಾರೆ."[೭೭] ಎಂ.ಎಂ.ಕಲಬುರ್ಗಿ ಅವರು ಈ ವಿಚಾರ ಸಂಕಿರಣವನ್ನು ನಡೆಸುವಲ್ಲಿ ಆಸಕ್ತಿ, ಕಾಳಜಿ ಮತ್ತು ಶ್ರದ್ಧೆಯನ್ನು ಕುರಿತು ಹೇಳಿದ್ದಾರೆ.

ಬಸವ ಪೀಠದಿಂದ ೧೯೭೮ರಲ್ಲಿ ಆರಂಭವಾದ ಬಸವಜಯಂತಿಯ ಆರು ಜನ ವಿದ್ವಾಂಸರು ಮಂಡಿಸಿದ ವಿದ್ವತ್ಪೂರ್ಣ ಪ್ರಬಂಧಗಳ ಸಂಕಲನವಾಗಿದೆ. ಎರಡು ದಿನಗಳ ಕಾಲ ನಡೆದ ಈ ವಿಚಾರಸಂಕಿರಣದಲ್ಲಿ ಮೊದಲನೇ ದಿನದ ವಿಷಯ 'ಸಾಮಾಜಿಕ ಮೌಲ್ಯವಾಗಿ ಗುರು ಲಿಂಗ ಜಂಗಮ' ಎರಡನೆಯ ದಿನದ ವಿಷಯ 'ಕಾವ್ಯಗಳಲ್ಲಿ ಬಸವ ಮೌಲ್ಯ ಪ್ರತಿಪಾದನೆ', 'ಸಾಮಾಜಿಕ ಮೌಲ್ಯವಾಗಿ ಗುರು' ಎಂಬ ವಿಷಯ ಕುರಿತಂತೆ ಡಾ.ಬಿ.ಡಿ.ಹೆಂಡಿ, 'ಸಾಮಾಜಿಕ ಮೌಲ್ಯವಾಗಿ ಲಿಂಗ' ಎಂಬ ವಿಷಯ ಕುರಿತಂತೆ ಶಿವಬಸವ ಸ್ವಾಮಿಗಳು ಹಾಗೆಯೇ 'ಸಾಮಾಜಿಕ ಮೌಲ್ಯವಾಗಿ ಜಂಗಮ' ಎಂಬ ವಿಷಯ ಕುರಿತಂತೆ ಡಾ.ಎ.ಎಲ್. ಶಿವರುದ್ರಪ್ಪನವರು ವಿಚಾರವನ್ನು ಮಂಡಿಸಿದ್ದಾರೆ. ಎರಡನೇ ದಿನದ ವಿಚಾರ ಸಂಕಿರಣದಲ್ಲಿ 'ಬಸವರಾಜದೇವರ ರಗಳೆಯಲ್ಲಿ ಬಸವ ಪ್ರತಿಪಾದನೆ' ಎಂಬ ವಿಷಯ ಕುರಿತಂತೆ ಎಂ.ಎಂ. ಕಲಬುರ್ಗಿ ಅವರು, 'ಬಸವಪುರಾಣದಲ್ಲಿ ಬಸವಮೌಲ್ಯ ಪ್ರತಿಪಾದನೆ' ಕುರಿತಂತೆ ಡಾ.ಎಸ್. ವಿದ್ಯಾಶಂಕರ್ ಅವರು, 'ಸಿಂಗಿರಾಜ ಪುರಾಣದಲ್ಲಿ ಬಸವ ಮೌಲ್ಯ ಪ್ರತಿಪಾದನೆ' ಕುರಿತಂತೆ

ಪ್ರೊ.ಎಸ್.ಎಸ್.ಹಿರೇಮಠ ಅವರು ವಿಚಾರವನ್ನು ಮಂಡಿಸಿರುವರು. ಈ ವೇಳೆ ಗಮನಿಸಿದ ಎರಡು ವಿಚಾರ ಸಂಕಿರಣದಲ್ಲೂ ಬಸವಪೀಠದ ಉದ್ದೇಶವಾದ ಬಸವಮೌಲ್ಯ ಪ್ರತಿಪಾದನೆಯನ್ನೇ ಕೇಂದ್ರವಾಗಿಟ್ಟುಕೊಂಡು ಮಂಡನೆಗೊಂಡ ಪ್ರಬಂಧಗಳಾಗಿವೆ. ಮೊದಲನೇ ಭಾಗದಲ್ಲಿ ವೀರಶೈವ ತತ್ವಗಳಾದ ಗುರು–ಲಿಂಗ–ಜಂಗಮತ್ವದ ಪರಿಕಲ್ಪನೆಯಲ್ಲಿ ರಚನೆಗೊಂಡಿವೆ. ಹಾಗೆಯೇ ವಿಚಾರಸಂಕಿರಣ ಎರಡರಲ್ಲಿ ವಚನಚಳುವಳಿಯ ನಂತರದಲ್ಲಿ ಸೃಷ್ಟಿಯಾದ ಸಾಹಿತ್ಯದಲ್ಲಿ ಅದರಲ್ಲೂ ಬಸವಣ್ಣನನ್ನೇ ಕೇಂದ್ರವನ್ನಾಗಿಟ್ಟುಕೊಂಡು ರಚನೆಗೊಂಡ ಕಾವ್ಯಗಳಲ್ಲಿ ಬಸವಮೌಲ್ಯ ಪ್ರತಿಪಾದನೆ ಕುರಿತಂತೆ ಮಂಡಿತವಾದ ಪ್ರಬಂಧಗಳ ಸಂಕಲನವಾಗಿದೆ.

'ಬಸವ ಮಾರ್ಗ' ಎಂ.ಎಂ.ಕಲಬುರ್ಗಿ ಅವರ ಸಂಪಾದನ ಕೃತಿಯಾದ ಬಸವ ಮಾರ್ಗ ಸಂಪುಟ–೨. ಇದು ಕೂಡ ಶ್ರೀ ಬಸವೇಶ್ವರ ಪೀಠದ ಮುಖಾಂತರ 'ಬಸವಜಯಂತಿ' ಯನ್ನು ಆಚರಿಸುವ ಮೂಲಕ ೧೯೮೦ರಲ್ಲಿ ಎರಡು ದಿನಗಳ ಕಾಲ ನಡೆದ ವಿಚಾರ ಸಂಕಿರಣಗಳ ಸಂಕಲನವಾಗಿದೆ. ಇದು ೧೯೮೧ರಲ್ಲಿ ಎಸ್.ಎಂ.ವೃಷಭೇಂದ್ರಸ್ವಾಮಿ ಅವರ ಪ್ರಧಾನ ಸಂಪಾದಕತ್ವ ಹಾಗೂ ಎಂ.ಎಂ.ಕಲಬುರ್ಗಿ ಇವರ ಸಂಪಾದಕತ್ವದಲ್ಲಿ ಸಂಪಾದನೆಗೊಂಡ ಮೌಲಿಕ ಕೃತಿಯಾಗಿದೆ. ಎರಡು ದಿನಗಳ ಕಾಲ ನಡೆದ ಈ ವಿಚಾರ ಸಂಕಿರಣದಲ್ಲಿ ಆರು ಜನ ವಿದ್ವಾಂಸರು ತಮ್ಮ ವಿಚಾರವನ್ನು ಮಂಡಿಸಿದ್ದಾರೆ. ಮೊದಲ ದಿನದ ವಿಚಾರ ಸಂಕಿರಣದಲ್ಲಿ ಶರಣರನ್ನು ಕುರಿತಂತೆ ವಿಚಾರ ಮಂಡಿಸಿದ್ದಾರೆ. ಅದರಲ್ಲಿ ಮುಖ್ಯವಾಗಿ 'ಕೊಂಡಗುಳಿ ಕೇಶಿರಾಜನ ವಚನಗಳನ್ನು ಕುರಿತಂತೆ' ಎಂ.ಚಿದಾನಂದಮೂರ್ತಿ, 'ಜೇಡರ ದಾಸಿಮಯ್ಯನ ವಚನಗಳನ್ನು ಕುರಿತಂತೆ' ಬಿ.ವಿ.ಎಲ್.ಸ್ವಾಮಿ ಹಾಗೂ 'ಇತರ ವಚನಕಾರರನ್ನು ಕುರಿತಂತೆ' ಶಾಂತರಸ ಅವರು ವಿಚಾರ ಮಂಡನೆಯನ್ನು ಮಾಡಿದ್ದಾರೆ. ಅದೇ ರೀತಿ ಎರಡನೇ ದಿನದ ವಿಚಾರ ಸಂಕಿರಣದಲ್ಲಿ 'ವೇದೋಪದನಿಷತ್ತುಗಳ ಹಿನ್ನಲೆಯಲ್ಲಿ ವೀರಶೈವ ಮುನ್ನಡೆ' ಎಂಬ ವಿಷಯ ಕುರಿತಂತೆ ಶಾಂತರಸ ಅವರು ವಿಚಾರ ಮಂಡನೆಯನ್ನು ಮಾಡಿದ್ದಾರೆ. ಅದೇ ರೀತಿ ಎರಡನೇ ದಿನದ ವಿಚಾರ ಸಂಕಿರಣದಲ್ಲಿ 'ವೇದೋಪನಿಷತ್ತುಗಳ ಹಿನ್ನೆಲೆಯಲ್ಲಿ ವೀರಶೈವ ಮುನ್ನಡೆ' ಎಂಬ ವಿಷಯ ಕುರಿತಂತೆ ರಾಜಶೇಖರಯ್ಯ ಹಿರೇಮಠ, 'ಶಿವಾಗಮಗಳ ಹಿನ್ನೆಲೆಯಲ್ಲಿ ವೀರಶೈವದ ಮುನ್ನಡೆ' ಎಂಬ ವಿಷಯ ಕುರಿತಂತೆ ನಾಗಭೂಷಣ ಶಾಸ್ತ್ರಿ', 'ಇತರ ಶಾಸ್ತ್ರಗಳ ಹಿನ್ನೆಲೆಯಲ್ಲಿ ವೀರಶೈವ ಮುನ್ನಡೆ' ಎಂಬ ವಿಷಯ ಕುರಿತಂತೆ ಎಂ.ಜಿ.ನಂಜುಂಡಾರಾಧ್ಯರು ವಿಚಾರ ಮಂಡನೆ ಮಾಡಿದ್ದಾರೆ. ಹೀಗೆ ಈ ಕೃತಿಯು ಪ್ರಬಂಧ ಮಂಡನೆಯ ವಿಷಯಾಧಾರಿತವಾಗಿ ರೂಪಗೊಂಡ ಸಂಪಾದನ ಕೃತಿಯಾಗಿದೆ. ಬಸವಮಾರ್ಗ–೩ ಕೃತಿಯು ಸಹ ಬಸವ

ಜಯಂತಿಯ ಪ್ರಯುಕ್ತ ಎರಡು ದಿನಗಳ ಕಾಲ ಆಯೋಜಿಸಿದ ವಿಚಾರ ಸಂಕಿರಣಗಳಲ್ಲಿ ಮಂಡಿಸಿದ ಪ್ರಬಂಧಗಳ ಸಂಪಾದಿತ ಕೃತಿಯಾಗಿದೆ.

**ವಚನ ಸಾಹಿತ್ಯದ ಪ್ರಕಟಣೆಯ ಇತಿಹಾಸ**

ಎಂ.ಎಂ.ಕಲಬುರ್ಗಿ ಅವರ ಸಂಪಾದನ ಕೃತಿಯಲ್ಲಿ ಇದು ಒಂದು ಮುಖ್ಯವಾದ ಕೃತಿಯಾಗಿದೆ. ಕಲಬುರ್ಗಿ ಸಂಪಾದಕತ್ವದ ಈ ಸಂಪುಟವು 'ಷಟ್‌ಸ್ಥಲ ವಚನ ಸಂಪುಟ' ಕೃತಿಗೆ ನೂರು ವರ್ಷ ತುಂಬಿದ ಪ್ರಯುಕ್ತ ೧೯೯೦ರಂದು ಗದುಗಿನ ತೋಂಟದಾರ್ಯಮಠದ ವೀರಶೈವ ಅಧ್ಯಯನ ಸಂಸ್ಥೆ 'ಬಸವಣ್ಣನವರ ಷಟ್‌ಸ್ಥಲ ವಚನಗಳು ಗ್ರಂಥಪ್ರಕಾಶನದ ಶತಮಾನೋತ್ಸವ ವಿಚಾರ ಸಂಕಿರಣ' ಕಾರ್ಯಕ್ರಮವನ್ನು ಹಮ್ಮಿಕೊಂಡಿತ್ತು. ಈ ಕಾರ್ಯಕ್ರಮ ಅಂಗವಾಗಿ ಸಂಘಟಿಸಿದ್ದ 'ವಚನಸಾಹಿತ್ಯ ಪ್ರಕಟನೆಯ ಇತಿಹಾಸ' ಹೆಸರಿನ ವಿಚಾರ ಸಂಕಿರಣದಲ್ಲಿ ವಿದ್ವಾಂಸರು ಮಂಡಿಸಿದ ನಾಲ್ಕು ಅಭ್ಯಾಸಪೂರ್ಣ ಪ್ರಬಂಧ ಹಾಗೂ ಅಧ್ಯಕ್ಷೀಯ ಭಾಷಣಗಳ ಗುಚ್ಛವಾಗಿದೆ.

ಮೊದಲಿಗೆ 'ಪ್ರಾರಂಭದ ಪ್ರಯತ್ನಗಳ ಪ್ರಥಮ ಘಟ್ಟ' ಬಿ.ವ್ಹಿ.ಮಲ್ಲಾಪುರ ಅವರ ಪ್ರಬಂಧ. ಈ ಪ್ರಬಂಧವು ವಚನ ಸಾಹಿತ್ಯ ಪ್ರಕಟಣೆಯ ಆರಂಭದ ಪ್ರಯತ್ನ ಹಾಗೂ ಹಳಕಟ್ಟಿ ಅವರು ಕ್ರಿ.ಶ.೧೯೨೩ರಲ್ಲಿ ವಚನಶಾಸ್ತ್ರ ಭಾಗ-೧ ಪ್ರಕಟಿಸುವವರೆಗಿನ ಚಟುವಟಿಕೆಗಳ ಅವಲೋಕನ, ಪಾಶ್ಚಾತ್ಯ ವಿದ್ವಾಂಸರ ಕಣ್ಣಿಗೆ ವಚನ ಸಾಹಿತ್ಯ ಬೀಳಲಿಲ್ಲವೇ ಎಂಬುದನ್ನು ಕುರಿತು ಚರ್ಚೆ ಮಾಡಿದ್ದಾರೆ. 'ವಿಜಾಪುರದ ಶಿವಾನುಭವ ಗ್ರಂಥಮಾಲೆಯ ದ್ವಿತೀಯ ಘಟ್ಟ'- ಬಿ.ಆರ್.ಹಿರೇಮಠದ ಧಾರವಾಡ ಕನ್ನಡ ಅಧ್ಯಯನ ಪೀಠದ ತೃತೀಯ ಘಟ್ಟ'- ಬಿ.ವ್ಹಿ.ಶಿರೂರ, ಗದುಗಿನ ತೋಂಟದಾರ್ಯ ಮಠದ 'ವೀರಶೈವ ಅಧ್ಯಯನ ಸಂಸ್ಥೆಯ ಚತುರ್ಥ ಘಟ್ಟ- ಆರ್.ರಾಚಪ್ಪ, ಅಷ್ಟೇ ಅಲ್ಲದೆ, ಕಲಬುರ್ಗಿ ಅವರ ಅಧ್ಯಕ್ಷೀಯ ಭಾಷಣವನ್ನು ಒಳಗೊಂಡ. ಈ ಕೃತಿಯಲ್ಲಿ ವಚನಸಾಹಿತ್ಯ ಪ್ರಕಟಣಕಾರ್ಯದ ಬಗ್ಗೆ ಹೇಳಿದ್ದಾರೆ. ಮಿಷನರಿಗಳಿಂದ ವಚನ ಸಾಹಿತ್ಯ ಪ್ರಕಟಣೆ ಕಾರ್ಯ ಹಿಂದುಳಿದಿತ್ತು. ಅದರ ಹಿಂದೆ ಇರುವ ನಿಗೂಢತೆಯನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಹಾಗೆಯೇ ಮುಂದುವರಿದು ಎಂ.ಎಂ.ಕಲಬುರ್ಗಿ ಅವರು ಸಾಹಿತ್ಯ ಕೃತಿಗಳ ಸಂಪಾದನೆಗಿಂತ ವಚನ ಸಾಹಿತ್ಯದ ಸಂಪಾದನ ಕೆಲಸ ತುಂಬಾ ಜಟಿಲ ಎಂಬುದನ್ನು ತಿಳಿಸಿದ್ದಾರೆ. ಶರಣರೇ ಬಂದರೂ ಹಸ್ತಪ್ರತಿಗಳಿಂದ ತಮ್ಮ ವಚನಗಳನ್ನು ಪರಿಷ್ಕರಿಸಿಕೊಳ್ಳುವುದು ಸಾಧ್ಯವಿಲ್ಲ ಎನ್ನುವಷ್ಟರ ಮಟ್ಟಿಗೆ ಪಾಠಗಳು ಬೆರೆತುಹೋಗಿವೆ ಎಂದಿದ್ದಾರೆ. ಇದರಿಂದ ಸಂಪಾದನ ಕಾರ್ಯ ಎಷ್ಟು ಕಠೋರ ಎಂಬ ಅಂಶ ತಿಳಿದುಬರುತ್ತದೆ. ವಚನ ಸಾಹಿತ್ಯ ಪ್ರಕಟಣ ಕಾರ್ಯ ಸ್ಥಾವರದಂತೆ ತಡೆದು ನಿಲ್ಲದೆ ಜಂಗಮದಂತೆ ನಡೆದುಬಂದಿದೆ ಎಂದಿದ್ದಾರೆ.

## ವಚನ ಸಾಹಿತ್ಯದ ಪ್ರಾಚೀನ ಆಕರಕೋಶ

ವಚನಸಾಹಿತ್ಯದ ಪ್ರಾಚೀನ ಆಕರಕೋಶ. ಇದೊಂದು ಸಂಶೋಧನ ಕೃತಿಯಾಗಿದೆ. ಈ ಕೃತಿಯನ್ನು ಎಂ.ಎಂ.ಕಲಬುರ್ಗಿ ಅವರು ವಿಜಯಶ್ರೀ ಹಿರೇಮಠ ಅವರೊಡಗೂಡಿ ೧೯೯೧ರಲ್ಲಿ ತೋಂಟದಾರ್ಯ ಸಂಸ್ಥಾನಮಠ ಗದಗದಿಂದ ಪ್ರಕಟವಾಗಿದೆ. ಈ ಕೃತಿಯ ಶೀರ್ಷಿಕೆಯಲ್ಲಿಯೇ ಇದೊಂದು ಆಕರಕೋಶ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಎಂ.ಎಂ.ಕಲಬುರ್ಗಿ ಅವರದು ಹೊಸದನ್ನು ಶೋಧಿಸಬೇಕೆಂಬ ಹಂಬಲ. ಹಾಗಾಗಿ ಹೊಸಬಗೆಯಲ್ಲಿ ವಿಶೇಷ ರೀತಿಯಲ್ಲಿ ಈ ಕೃತಿ ಮೂಡಿಬಂದಿದೆ. ಸಂಗ್ರಹ, ಸಂಕಲನ ಮತ್ತು ಸಂಪಾದನೆ ಎಂಬ ಮೂರು ಬಗೆಯ ಸಂಯೋಜನ ಸಂಪಾದಿತ ಕೃತಿಗಳು ಹೊರಬಂದಿದ್ದವು. ಈ ಬಗೆಯ ಸೃಷ್ಟಿ ಸಾಹಿತ್ಯವನ್ನು ಬಳಸಿಕೊಂಡು ಬೆಳೆದ ಪುನಃ ಸ್ಪಷ್ಟ ಸಾಹಿತ್ಯ ಕೃತಿ ಇದಾಗಿದೆ. ಸಂಯೋಜಕ ಪ್ರತಿಭೆಯ ಫಲವಾದ ಈ ಬಗೆಯ ಸಾಹಿತ್ಯ ಜಗತ್ತಿನ ಬೇರೆ ಭಾಷೆಗಳಲ್ಲಿ ಇಲ್ಲ. ಇದ್ದರೂ ಇಷ್ಟು ಉತ್ಕೃಷ್ಟವಾಗಿಲ್ಲವೆಂದೇ ಹೇಳಬೇಕು ಎಂದು ಎಂ.ಎಂ.ಕಲಬುರ್ಗಿ ಅವರು ಹೇಳಿದ್ದಾರೆ. "ವಚನ ಸಾಹಿತ್ಯ ಬಹುಮಟ್ಟಿಗೆ ಇಡಿಯಾಗಿ ಪ್ರಕಟವಾದ ಇಂದಿನ ಸಂದರ್ಭದಲ್ಲಿ ಯಾವ ಯಾವ ಶರಣರ ವಚನಗಳೂ ಯಾವ ಯಾವ ಪ್ರಾಚೀನ ಆಕರಗಳಲ್ಲಿ ಸಿಗುವುವೆಂಬುದನ್ನು ತೋರಿಸಿಕೊಡುವ ಒಂದು ಸಮಗ್ರಸೂಚಿಯನ್ನು ವಿದ್ವಾಂಸರ ಅನುಕೂಲತೆಗಾಗಿ ಸಿದ್ಧಪಡಿಸುವುದು ಅಪೇಕ್ಷಣೀಯವೇ ಸರಿ. ಇದನ್ನು ಅರ್ಥ ಮಾಡಿಕೊಂಡು 'ವಚನ ಸಾಹಿತ್ಯ ಪ್ರಾಚೀನ ಆಕರಕೋಶ'ವನ್ನು ರೂಪಿಸಲಾಗಿದೆ. ಇಲ್ಲಿ ಪ್ರಾಚೀನ ಆಕರವೆಂದರೆ ಒಂದು ನಿರ್ದಿಷ್ಟ ಕೃತಿನಾಮವನ್ನು ಹೊತ್ತು ಪ್ರತಿ–ಮರುಪ್ರತಿ–ಬಳಿಪ್ರತಿಯೆಂಬಂತೆ ಒಂದು ಪೀಳಿಗೆ ಪರಂಪರೆಯನ್ನು ಸ್ಥಾಪಿಸಿಕೊಂಡ ಕೃತಿ. ಕೊನೆಯ ಪಕ್ಷ ಪೀಳಿಗೆ ನಿರ್ಮಿಸಿಕೊಳ್ಳದಿದ್ದರೂ ಒಂದು 'ನಿರ್ದಿಷ್ಟನಾಮ' ವನ್ನು ಹೊತ್ತ ಕೃತಿ. ಇಂಥವುಗಳನ್ನು ಮಾತ್ರ ಆಧರಿಸಿ ಈ ಕೋಶವನ್ನು ರಚಿಸಲಾಗಿದೆ. ಹೀಗಾಗಿ ಈ ಕೆಳಗಿನ ರೀತಿಯ ಆಕರಗಳನ್ನು ಕೈಬಿಡಲಾಗಿದೆ."[೨೮]

ಶರಣರ ವಚನಗಳು ಯಾವ ಆಕರಕೋಶಗಳಲ್ಲಿ ಸಿಗುವುದೆಂದು ಸುಲಭವಾಗಿ ಗ್ರಹಿಸಲು ಅನುಕೂಲಕರವಾದ ಸೂಚಿಯಾಗಿದೆ.

ವಚನ ಸಾಹಿತ್ಯದ ಪ್ರಾಚೀನ ಆಕರಕೋಶವನ್ನು ಎಂ.ಎಂ.ಕಲಬುರ್ಗಿ ಅವರು ಯುಗಗಳ ಆಧಾರದ ಮೇಲೆ ವಿಶೇಷ ರೀತಿಯಲ್ಲಿ ರೂಪಿಸಿಕೊಟ್ಟಿದ್ದಾರೆ. ಬಸವಯುಗ: ಶಿವಶರಣರು, ಶಿವಯುಗ: ಶಿವಶರಣೆಯರು, ಬಸವೋತ್ತರ ಯುಗ: ಶಿವಶರಣರು, ಅಜ್ಞಾತ ಶಿವಶರಣರು ಎಂದು ವರ್ಗೀಕರಿಸಿಕೊಂಡು ಅಕಾರಾದಿಯಾಗಿ ಜೋಡಿಸುವ ಮೂಲಕ ಸುಲಭವಾಗಿ ಅರ್ಥೈಸಲು ಪ್ರಯತ್ನಿಸಿದ್ದಾರೆ. ಇಲ್ಲಿ ಅಜ್ಞಾತ ಶಿವಶರಣರೆಂದರೆ ಯಾರಿರಬಹುದೆಂದು ಪ್ರಶ್ನೆ

ಉದ್ಭವಿಸುವುದು ಸಹಜ. ಇಲ್ಲಿ ಮುಖ್ಯವಾಗಿ ಅಜ್ಞಾನ ಶಿವಶರಣರೆಂದರೆ ವಚನಗಳು ಸಿಕ್ಕು ಕರ್ತೃಕಾರರು ಯಾರೆಂಬುದು ಗೊತ್ತಾಗದವರೆಂದು ಅರ್ಥ. ಹೀಗೆ ಶಿವಶರಣರು, ಶಿವಶರಣೆಯರು ಹಾಗೂ ಶರಣರು ಎಂದು ವರ್ಗೀಕರಿಸಿಕೊಂಡು ಅಂಕಿತವನ್ನು ಕೂಡ ಜೊತೆಗೆ ನೀಡಿದ್ದಾರೆ.

ಈ ವರ್ಗೀಕರಣದ ಪ್ರಕಾರ ಬಸವಯುಗದಲ್ಲಿನ ವಚನಕಾರರು ೧೨೫ ಜನ, ವಚನಕಾರ್ತಿಯರು ೩೯ ಜನ, ಬಸವೋತ್ತರ ಯುಗದಲ್ಲಿ ವಚನಕಾರರು ೨೯ ಜನ, ಅಜ್ಞಾನ ವಚನಕಾರರು ೫೩ ಜನ. ಹೀಗೆ ಒಟ್ಟು ೨೪೯ ವಚನಕಾರರನ್ನು ಈ ಗ್ರಂಥದಲ್ಲಿ ದಾಖಲಿಸಲಾಗಿದೆ. ಇದರಿಂದ ವಚನಕಾರರ ಪರಿಶ್ರಮದ ಫಲವಾಗಿಯೇ ವಚನ ಸಾಹಿತ್ಯ ಇನ್ನೂ ಜೀವಂತವಾಗಿದೆ ಎನ್ನಬಹುದು.

ಪ್ರಾಚೀನ ವಚನ ಸಂಕಲನಗಳು ಅದರಲ್ಲೂ ಪ್ರಕಟಿತ ಮತ್ತು ಅಪ್ರಕಟಿತ ಕೃತಿಗಳ ಅಂದರೆ ಹಸ್ತಪ್ರತಿಗಳ ಮೂಲಕವೇ ಮಾಹಿತಿ ಸಂಗ್ರಹಿಸಿ ಸಮಗ್ರವಾದಂತಹ ವಚನ ಸಾಹಿತ್ಯದ ಆಕರಕೋಶವನ್ನು ಚಿತ್ರಿಸಿಕೊಟ್ಟಿದ್ದಾರೆ. ಎಷ್ಟೋ ಗೊತ್ತಿಲ್ಲದ ವಚನಕಾರರ ಬಗ್ಗೆ ಹಾಗೂ ಅವರ ಅಂಕಿತಗಳ ಬಗ್ಗೆ ತಿಳಿಸಿದ್ದಾರೆ. ನಿಜಕ್ಕೂ ಇದೊಂದು ವಚನಸಾಹಿತ್ಯಕ್ಕೆ ಅದ್ಭುತವಾದ ಕೊಡುಗೆಯಾಗಿದ್ದು, ವಚನಸಾಹಿತ್ಯವನ್ನು ಅರಿಯುವಲ್ಲಿ ಓದುಗರಿಗೆ ಹೆಚ್ಚು ಉಪಯುಕ್ತವಾಗಿದೆ. ಹಾಗೆಯೇ ಇದರಲ್ಲಿ ಕಲಬುರ್ಗಿ ಅವರ ಸಂಶೋಧನ ತುಡಿತ ಹಾಗೂ ಅವರ ಶ್ರಮ ಇದರಲ್ಲಿ ಅಧಿಕವಾಗಿ ಕಂಡುಬರುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಎಂ.ಎಂ.ಕಲಬುರ್ಗಿ ಅವರು ವಚನ ಸಾಹಿತ್ಯದ ಸಂಗ್ರಹ, ಸಂಕಲನ ಮತ್ತು ಸಂಪಾದನೆಗೆ ಹೊಸದೊಂದು ವೈಧಾನಿಕತೆಯನ್ನು ತಾವೇ ರೂಪಿಸಿಕೊಳ್ಳುವ ಮೂಲಕ ಪರಿಷ್ಕರಣ ಕಾರ್ಯವನ್ನು ಅತ್ಯಂತ ಪರಿಶ್ರಮದಿಂದ ಪೂರೈಸಿದ್ದಾರೆ. ಈ ಮೇಲಿನ ಎಲ್ಲ ಕೃತಿಗಳನ್ನು ಅಚ್ಚುಕಟ್ಟಾಗಿ ಪರಿಷ್ಕರಿಸಿ ಪ್ರಕಟಿಸಿರುವುದನ್ನು ನೋಡಿದರೆ ಎಂ.ಎಂ.ಕಲಬುರ್ಗಿ ಅವರಿಗಿದ್ದ ಗ್ರಂಥಸಂಪಾದನೆಯನ್ನು ಕುರಿತಂತೆ ವಿಶೇಷ ಪಾಂಡಿತ್ಯ ಇರುವುದು ಕಂಡುಬರುತ್ತದೆ. ವಚನ ಸಾಹಿತ್ಯ ಕ್ಷೇತ್ರದಲ್ಲಿ ಅವರ ಸಾಧನೆ ಹಿರಿದಾದದ್ದು ಅಷ್ಟೇ ಮಹತ್ವಪೂರ್ಣ ಉಳ್ಳದ್ದಾಗಿದೆ.

### ೫. ಸ್ವರವಚನ ವಿಚಾರ ಸಂಕಿರಣ

ಎಂ.ಎಂ.ಕಲಬುರ್ಗಿ ಅವರ ಸಂಪಾದನ ಕೃತಿಗಳಲ್ಲಿ ಈ ಕೃತಿಯೂ ಒಂದಾಗಿದೆ. ಈ ಕೃತಿಯು ೪ ಗೋಷ್ಠಿಗಳನ್ನೊಳಗೊಂಡ ವಿಚಾರ ಸಂಕಿರಣ ಸಂಪುಟ ಕೃತಿಯಾಗಿದೆ. ಮುಖ್ಯವಾಗಿ ಇಲ್ಲಿ ಸ್ವರವಚನಗಳನ್ನು ಸಂಗೀತ ಸ್ವರೂಪ, ಛಂದಸ್ವರೂಪ, ಸಾಹಿತ್ಯ ಮತ್ತು ವಸ್ತುಸ್ವರೂಪಗಳಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇವುಗಳ ಮುಖ್ಯ ತತ್ವಗಳನ್ನು ಇಟ್ಟುಕೊಂಡು ಇಲ್ಲಿ ಚರ್ಚಿಸಲಾಗಿದೆ. ಸ್ವರವಚನವು ಹಾಡುಗಬ್ಬ ಪರಂಪರೆಯ ದೇಶಿ ಸಾಹಿತ್ಯ ಪ್ರಕಾರವಾಗಿದೆ. ಸ್ವರವಚನ ಸಾಹಿತ್ಯವನ್ನು

ಹಳಕಟ್ಟಿಯವರೇ ಪ್ರಕಟಿಸಿದ ಮೊದಲಿಗರು. ನಂತರ ಡಾ.ಎಲ್.ಬಸವರಾಜು ಸಂಪಾದಿತ 'ಶಿವದಾಸ ಗೀತಾಂಜಲಿ'ಯನ್ನು ಬೆಳಕಿಗೆ ತರುವ ಮೂಲಕ ಈ ಸಾಹಿತ್ಯದ ಪ್ರಕಟಣೆಯಲ್ಲಿ ಒಂದು ಮೈಲುಗಲ್ಲನ್ನು ಸ್ಥಾಪಿಸಿದ ಕೀರ್ತಿ ಶ್ರೀ ಸುತ್ತೂರು ಮಹಾಸಂಸ್ಥಾನ ಮಠದ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಗೆ ಸಲ್ಲುತ್ತದೆ. ಇಂಥ ಹಲವು ಮೈಲುಗಲ್ಲುಗಳನ್ನು ಸ್ಥಾಪಿಸಿ ಹೆದ್ದಾರಿ ರೂಪಿಸುವ ಉದ್ದೇಶದಿಂದ 'ಸಮಗ್ರ ಸ್ವರವಚನ ಸಾಹಿತ್ಯ ಪ್ರಕಟಣೆ ಯೋಜನೆ'ಯನ್ನು ಕೈಗೆತ್ತಿಕೊಳ್ಳಲಾಗಿದ್ದು, ಇದರ ಅಂಗವಾಗಿ ೧೯೯೫ ನವೆಂಬರ್‌ನಲ್ಲಿ ೫ ಸ್ವರವಚನ ಸಂಪುಟಗಳನ್ನು ಪ್ರಕಟಿಸಲಾಗಿದೆ. ಈ ಸಂಪುಟಗಳೆಂದರೆ:

೧. ಸ್ವರವಚನ ಸಂಪುಟ ೧(ಬಿಡಿ ಸ್ವರವಚನ), ಸಂ.ಎಸ್.ಶಿವಣ್ಣ

೨. ಸ್ವರವಚನ ಸಂಪುಟ ೨(ಬಿಡಿ ಸ್ವರವಚನ), ಸಂ.ಎಸ್.ಶಿವಣ್ಣ

೩. ಸ್ವರವಚನ ಸಂಪುಟ ೩(ಬಿಡಿ ಸ್ವರವಚನ), ಸಂ.ಜಿ.ಜಿ.ಮಂಜುನಾಥನ್

೪. ಸ್ವರವಚನ ಸಂಪುಟ ೪(ಬಿಡಿ ಸ್ವರವಚನ), ಸಂ.ವೈ.ಸಿ.ಭಾನುಮತಿ

೫. ಸ್ವರವಚನ ಸಂಪುಟ ೫(ನೀಲಗ್ರೀವನ ಸ್ವರವಚನ), ಸಂ.ಕೆ.ಆರ್.ಶೇಷಗಿರಿ

ಈ ೫ ಸಂಪುಟಗಳು ಸೇರಿ ೧೨೪೧ ಸ್ವರವಚನಗಳು ಪ್ರಕಟವಾಗುವುದು ಇತಿಹಾಸದಲ್ಲಿ ಒಂದು ದಾಖಲೆಯಾಗಿದೆ. ಈ ೫ ಸಂಪುಟಗಳ ಬಿಡುಗಡೆ ಕಾರ್ಯಕ್ರಮದ ಅಂಗವಾಗಿ ೧೮, ೧೯ ನವೆಂಬರ್ ೧೯೯೫ರಂದು 'ಸ್ವರವಚನ ಸಾಹಿತ್ಯ ವಿಚಾರ ಸಂಕಿರಣ'ವನ್ನು ಹಮ್ಮಿಕೊಳ್ಳಲಾಗಿತ್ತು. ಈ ವಿಚಾರ ಸಂಕಿರಣದಲ್ಲಿ ನಡೆದ ಗೋಷ್ಠಿಗಳನ್ನು ಈ ಕೃತಿಯಲ್ಲಿ ಸಂಗ್ರಹಿಸಿಟ್ಟಿದ್ದಾರೆ. ಹಲವು ವಿದ್ವಾಂಸರ ಲೇಖನಗಳ ಗುಚ್ಛವೇ ಈ ಕೃತಿ.

'ಸ್ವರವಚನಗಳ ಉಗಮ ಸ್ವರೂಪ' ಎಂಬುದು ವೀರಣ್ಣ ರಾಜೂರ ಅವರ ವಿಚಾರ ಮಂಡನೆಯ ವಿಷಯ. ಇವರು ತಮ್ಮ ಪ್ರಬಂಧದಲ್ಲಿ ಪ್ರವಚನಕ್ಕೆ ಇರುವ ನಾನಾರ್ಥಗಳನ್ನು ಅಂದರೆ ಪದ, ಪದನು, ಸ್ವರಪದ, ಬೆಡಗಿನ ಸ್ವರಪದ, ಅನುಭವಪದ, ಗೀತ, ವಚನ ಹೀಗೆ ಹೇಳಿದ್ದಾರೆ. ಬಸವಾದಿ ಶರಣರು ರಚಿಸಿದ ಅನುಭವ ಸಾಹಿತ್ಯಕ್ಕೆ ಒಟ್ಟಾಗಿ ಮೊದಲು ವಚನ ಎಂದು ಕರೆಯುತ್ತಿದ್ದರು. ಎಂ.ಎಂ.ಕಲಬುರ್ಗಿ ಅವರ ಅಭಿಪ್ರಾಯದಂತೆ 'ವಚನ' ಎಂಬುದು ನಿರ್ದಿಷ್ಟ ರೂಪ ಇಲ್ಲವೇ ವಸ್ತುವನ್ನು ನಿರ್ದೇಶಿಸುವುದಿಲ್ಲ. ಅದು ಶುದ್ಧ ಆಚಾರ, ಶುದ್ಧ ವಿಚಾರಗಳಲ್ಲಿ ಅನ್ಯೋನ್ಯತೆಯನ್ನು ಸಾಧಿಸಿದವರ ಅಭಿವ್ಯಕ್ತಿ ಎಂಬುದನ್ನು ನಿರ್ದೇಶಿಸುತ್ತದೆ. ಹೀಗಾಗಿ ಇಂತ ವ್ಯಕ್ತಿಗಳ ಅಭಿವ್ಯಕ್ತಿಗಳಾದ ಮುಕ್ತರೂಪದ ವಚನ, ರಾಗ-ತಾಳ ಸಮನ್ವಿತವಾದ ಹಾಡುಗಳು, ಕಂದ, ತ್ರಿಪದಿ, ಷಟ್ಪದಿ, ಸಾಂಗತ್ಯ, ಕಾಲಜ್ಞಾನ ಎಲ್ಲವನ್ನು 'ವಚನ' ಎಂದು ಕರೆದಿರುವುದು ವೇದ್ಯವಾಗುತ್ತದೆ ಎಂದಿದ್ದಾರೆ.

**ಅಡಿಟಿಪ್ಪಣಿಗಳು**

೧. ಕಲಬುರ್ಗಿ ಎಂ.ಎಂ., ಮಾರ್ಗ, ಸಂಪುಟ ೭, ಪು.೧೮೯

೨. ನರಸಿಂಹಾಚಾರ್ ಡಿ.ಎಲ್., ಕನ್ನಡ ಗ್ರಂಥಸಂಪಾದನೆ, ಪು.

೩. ಕಲಬುರ್ಗಿ ಎಂ.ಎಂ., ಕನ್ನಡ ಗ್ರಂಥಸಂಪಾದನ ಶಾಸ್ತ್ರ, ಪು.ಮುನ್ನುಡಿ

೪. ಹಿರೇಮಠ ಎ.ಬಿ.(ಸಂ), ಕರಿಭರಮಗೌಡರ ಪ್ರೊ.ಎಸ್.ಎಸ್.ಬಸವನಾಳ, ಪು.೧೬

೫. ಚಿದಾನಂದಮೂರ್ತಿ ಎಂ., 'ಗ್ರಂಥಸಂಪಾದನೆ', ಹೊಸತು, ಹೊಸತು, ಪು.೪೧೪

೬. ಕಲಬುರ್ಗಿ ಎಂ.ಎಂ., ಕನ್ನಡ ಗ್ರಂಥಸಂಪಾದನ ಶಾಸ್ತ್ರ, ಪು.೩

೭. ನಾಗಯ್ಯ ಜೆ.ಎಂ., ಸಮಗ್ರ ಸಂಶೋಧಕ ಎಂ.ಎಂ.ಕಲಬುರ್ಗಿ, ಪು.೪೦

೮. ಕಲಬುರ್ಗಿ ಎಂ.ಎಂ., ಐತಿಹಾಸಿಕ, ಪು.೧೪೨

೯. ಅದೇ, ಪು.೧೪೨–೧೪೩

೧೦. ಅದೇ, ಪು.೧೪೩

೧೧. ಕಲಬುರ್ಗಿ ಎಂ.ಎಂ., ಮಾರ್ಗ, ಸಂಪುಟ ೬, ಪು.೨೧

೧೨. ಕಲಬುರ್ಗಿ ಎಂ.ಎಂ., ಮಾರ್ಗ, ಸಂಪುಟ ೧, ಪು.೩೯೭

೧೩. ಅದೇ, ಪು.೩೯೮

೧೪. ಅದೇ, ಪು.೩೯೮

೧೫. ಅದೇ, ಪು.೩೯೯

೧೬. ಅದೇ, ಪು.೩೯೯

೧೭. ಅದೇ, ಪು.೩೯೯

೧೮. ಅದೇ, ಪು.೪೦೦

೧೯. ಅದೇ, ಪು.೪೦೦

೨೦. ಅದೇ, ಪು.೪೦೨

೨೧. ಅದೇ, ಪು.೪೦೩–೪೦೪

೨೨. ಅದೇ, ಪು.೪೦೬

೨೩. ಅದೇ, ಪು.೪೦೭

೨೪. ಕಲಬುರ್ಗಿ ಎಂ.ಎಂ., ಮಾರ್ಗ, ಸಂ.೪, ೫೫೭

೨೫. ಅದೇ, ಪು.೫೬೧-೫೬೨

೨೬. ಅದೇ, ಪು.೫೬೨

೨೭. ಕಲಬುರ್ಗಿ ಎಂ.ಎಂ.(ಸಂ), ವೀರಣ್ಣ ರಾಜೂರ, ಗೂಳೂರು ಸಿದ್ಧಲಿಂಗ ಒಡೆಯರು ರಚಿಸಿದ ಪ್ರಭುದೇವರ ಶೂನ್ಯಸಂಪಾದನೆ, ಪು.೯.

೨೮. ಹಳ್ಳಿಕೇರಿ ಎಫ್.ಟಿ., ರಾಜಮಾರ್ಗ, ಪು.೭೪೭

೨೯. ಸದಾನಂದ ಕನವಳ್ಳಿ, ವೀರಣ್ಣ ರಾಜೂರ(ಸಂ), ಮಹಾಮಾರ್ಗ, ಪು.೬೫

೩೦. ಕಲಬುರ್ಗಿ ಎಂ.ಎಂ., ಐತಿಹಾಸಿಕ, ಪು.೧೪೩

೩೧. ಕಲಬುರ್ಗಿ ಎಂ.ಎಂ., ಬಸವಣ್ಣನವರ ವಚನ ಸಂಪುಟ, ಪು.೧೯

೩೨. ಅದೇ, ಪು.ಪ್ರಸ್ತಾವನೆ

೩೩. ಅದೇ, ಪು.೧೬

೩೪. ಅದೇ, ಪು.೯

೩೫. ಕಲಬುರ್ಗಿ ಎಂ.ಎಂ., ಸಂಕೀರ್ಣ ವಚನ ಸಂಪುಟ ೧, ಪ್ರಸ್ತಾವನೆ, ಪು.೨೧

೩೬. ಅದೇ, ಪು.೨೭

೩೭. ಅದೇ, ಪು.೨೭-೨೮

೩೮. ಸಣ್ಣಯ್ಯ ಬಿ.ಎಸ್., ಪ್ರಾಚೀನ ಕನ್ನಡ ಗ್ರಂಥಸಂಪಾದನೆ, ಪು.೧೮೯

೩೯. ಕಲಬುರ್ಗಿ ಎಂ.ಎಂ., ಮಾರ್ಗ, ಸಂಪುಟ ೮, ಪು.೩೬೨

೪೦. ಕಲಬುರ್ಗಿ ಎಂ.ಎಂ., ಮಾರ್ಗ, ಸಂಪುಟ ೩, ಪು.೧೭೪

೪೧. ಸದಾನಂದ ಕನವಳ್ಳಿ, ವೀರಣ್ಣ ರಾಜೂರ(ಸಂ), ಮಹಾಮಾರ್ಗ, ಪು.೬೫

೪೨. ಕಲಬುರ್ಗಿ ಎಂ.ಎಂ., ಐತಿಹಾಸಿಕ, ಪು.೧೪೫

೪೩. ಕಲಬುರ್ಗಿ ಎಂ.ಎಂ., ಬಸವೋತ್ತರ ವಚನಗಳು, ಪು.೬-೭

೪೪. ಅದೇ, ಪು.೯

೪೫. ಅದೇ, ಪು.೧೯-೨೦

೪೬. ಅದೇ, ಪು.೪೦

೪೭. ಕಲಬುರ್ಗಿ ಎಂ.ಎಂ., ಬಸವಣ್ಣನವರ ಟೀಕಿನ ವಚನಗಳು, ಸಂ.೧, ಮುನ್ನುಡಿ

೪೮. ಅದೇ, ಪ್ರಸ್ತಾವನೆ, ಪು.೫

೪೯. ಅದೇ, ಪ್ರಸ್ತಾವನೆ, ಪು.೬

೫೦. ನಾಗಭೂಷಣ ಸಿ., ವೀರಶೈವ ಸಾಹಿತ್ಯದ ಕೆಲವು ಒಳನೋಟಗಳು, ಪು.೧೮೦

೫೧. ವೀರಣ್ಣದಂಡೆ, ಎಂ.ಎಂ.ಕಲಬುರ್ಗಿ, ಸಂಶೋಧನ ಸಾಹಿತ್ಯ, ಪು.೬೬

೫೨. ಕಲಬುರ್ಗಿ ಎಂ.ಎಂ. ಚನ್ನಬಸವಣ್ಣನವರ ಷಟ್‌ಸ್ಥಲ ವಚನ ಮಹಾಸಂಪುಟ, ಪ್ರಸ್ತಾವನೆ

೫೩. ಅದೇ, ಪು.ಪ್ರಸ್ತಾವನೆ

೫೪. ಅದೇ,

೫೫. ಅದೇ, ಪು.೨೦

೫೬. ಅದೇ, ಪು.೪೬೦

೫೭. ಹಳಕಟ್ಟಿ ಫ.ಗು., ವಚನಶಾಸ್ತ್ರ ಸಾರ, ಭಾಗ ೧, ಪ್ರಸ್ತಾವನೆ, ಪು.೮

೫೮. ಹಳಕಟ್ಟಿ ಫ.ಗು., ಪರಿಷ್ಕರಣೆ: ಕಲಬುರ್ಗಿ ಎಂ.ಎಂ., ವೀರಣ್ಣ ರಾಜೂರ, ವಚನಶಾಸ್ತ್ರ ಸಾರ, ಭಾಗ ೧, ಪ್ರಸ್ತಾವನೆ ಪು.೨೫

೫೯. ಅದೇ, ಪು.೨೫

೬೦. ಅದೇ, ಪು.೨೬

೬೧. ಅದೇ, ಪು.೧೩

೬೨. ಅದೇ, ಪು.೧೫

೬೩. ಅದೇ, ಪು.೩೧

೬೪. ಅದೇ, ಪು.೨೮

೬೫. ಕಲಬುರ್ಗಿ ಎಂ.ಎಂ., ವಚನ ಸಂಕಲನ ಸಂಪುಟ ೪, ಪು.ಪ್ರಸ್ತಾವನೆ

೬೬. ಅದೇ, ಪು.ಪ್ರಸ್ತಾವನೆ

೬೭. ಅದೇ, ಪು.ಪ್ರಸ್ತಾವನೆ

೬೮. ಕಲಬುರ್ಗಿ ಎಂ.ಎಂ.(ಸಂ), ವಚನ ಸಂಕಲನ, ಸಂಪುಟ ೬, ಪ್ರಸ್ತಾವನೆ

೬೯. ಕಲಬುರ್ಗಿ ಎಂ.ಎಂ.(ಸಂ), ಪರಮಾನಂದ ಸುಧೆ, ಪ್ರಸ್ತಾವನೆ

೭೦. ಕಲಬುರ್ಗಿ ಎಂ.ಎಂ.(ಸಂ), ಏಕೋತ್ತರ ಶತಸ್ಥಲ, ಪ್ರಸ್ತಾವನೆ

೭೧. ಅದೇ, ಪು.ಪ್ರಸ್ತಾವನೆ

೭೨. ಸದಾನಂದ ಕನವಳ್ಳಿ, ವೀರಣ್ಣ ರಾಜೂರ, ಮಹಾಮಾರ್ಗ, ಪು.೬೬

೭೩. ಕಲಬುರ್ಗಿ ಎಂ.ಎಂ., ವೀರಣ್ಣ ರಾಜೂರ, ಶೂನ್ಯಸಂಪಾದನೆ, ಪ್ರಸ್ತಾವನೆ

೭೪. ಅದೇ, ಪು.ಪ್ರಸ್ತಾವನೆ

೭೫. ಕಲಬುರ್ಗಿ ಎಂ.ಎಂ., ಬಸವಮಾರ್ಗ ೧, ಪ್ರಸ್ತಾವನೆ

೭೬. ಅದೇ, ಪು.ಪ್ರಸ್ತಾವನೆ

೭೭. ಅದೇ, ಪು.ಮುನ್ನುಡಿ

೭೮. ಕಲಬುರ್ಗಿ ಎಂ.ಎಂ., ವಿಜಯಶ್ರೀ ಹಿರೇಮಠ, ವಚನ ಸಾಹಿತ್ಯದ ಪ್ರಾಚೀನ ಆಕರಕೋಶ, ಪ್ರಸ್ತಾವನೆ

# ಅಧ್ಯಾಯ: ಆರು

# ಎಂ.ಎಂ. ಕಲಬುರ್ಗಿ ವಚನ ಭಾಷಾಂತರ ಯೋಜನೆ

## ಅಧ್ಯಾಯ: ಆರು

# ಎಂ.ಎಂ. ಕಲಬುರ್ಗಿ ವಚನ ಭಾಷಾಂತರ ಯೋಜನೆ

ಇಂಗ್ಲಿಷ್‌ನ Translation ಎಂಬ ಪದಕ್ಕೆ ಸಂವಾದಿಯಾಗಿ ಅನುವಾದ, ಭಾಷಾಂತರ, ತರ್ಜುಮೆ, ಪರಿವರ್ತನೆ ಇತ್ಯಾದಿ ಪದಗಳನ್ನು ಸಮಾನಾರ್ಥಕವಾಗಿ ಬಳಸಲಾಗುತ್ತದೆ. ಅನುವಾದ ಯಾವಾಗ ಹುಟ್ಟಿತು ಎಂದು ಸ್ಪಷ್ಟವಾಗಿ ಹೇಳಲಾಗದು. ಆದರೆ ಭಾಷೆ ಹುಟ್ಟಿದಾಗಲೇ ಅನುವಾದ ಹುಟ್ಟಿರಬಹುದೆಂಬ ಅಭಿಪ್ರಾಯವಿದೆ. "ಒಂದು ಭಾಷೆಯ ಮಾತುಗಳನ್ನು ಇನ್ನೊಂದು ಭಾಷೆಗೆ ಪರಿವರ್ತಿಸುವುದೇ ಭಾಷಾಂತರ"[೧] ಎಂದು ಎಸ್.ಆರ್.ಭಟ್ಟ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಮೋಹನ್ ಕುಂಟಾರ್ ಅವರು "ಅನುವಾದ ಎಂದರೆ ಗ್ರಹಿಕೆಯ ಒಂದು ಕ್ರಮ. ಆ ಗ್ರಹಿಕೆಯನ್ನು ಇನ್ನೊಂದು ಭಾಷೆಯಲ್ಲಿಯೋ, ಮಾಧ್ಯಮದಲ್ಲಿಯೋ ಅಭಿವ್ಯಕ್ತಿಸಿದಾಗ ಅನುವಾದದ ಒಂದು ಪಠ್ಯ ಸಿದ್ಧವಾಗುತ್ತದೆ. ಯಾವಾಗಲೂ ಅನುವಾದ ಅಪರಿಚಿತವಾದ ಭಾಷೆಯಿಂದ ಪರಿಚಿತವಾದ ಭಾಷೆಯ ಓದುಗರನ್ನು ಲಕ್ಷ್ಯದಲ್ಲಿಟ್ಟುಕೊಂಡೇ ನಡೆಯುತ್ತಿರುತ್ತದೆ. ಗೊತ್ತಿರುವ ಭಾಷೆಯೊಂದರಿಂದ ಗೊತ್ತಿಲ್ಲದವರಿಗೆ ಗೊತ್ತಾಗುವ ಭಾಷೆಯಲ್ಲಿ ಹೇಳುವುದು ಅನುವಾದ. ಹಾಗೆ ಗೊತ್ತಿರುವ ಭಾಷೆಯೊಂದರಿಂದ ಅನುವಾದ ಮಾಡುವವರು ಮೊದಲು ಅನುವಾದ ಮಾಡಬೇಕಾದ ವಿಷಯವನ್ನು ಗೊತ್ತು ಮಾಡಿಕೊಳ್ಳಬೇಕು. ಹಾಗೆ ಗೊತ್ತು ಮಾಡಿಕೊಳ್ಳುವುದೆಂದರೆ ತನಗೆ ದಕ್ಕಿದ್ದಷ್ಟನ್ನು ಗ್ರಹಿಸಿಕೊಳ್ಳುವುದು. ಗ್ರಹಿಕೆ ಎಂಬುದು ಎಲ್ಲಾ ಓದುಗರಿಗೂ ಇರಬೇಕಾಗುತ್ತದೆ. ಓದಿದ್ದನ್ನು ತಮ್ಮ ಗ್ರಹಿಕೆಗೆ ಅನುಗುಣವಾಗಿ ಅರ್ಥೈಸಿಕೊಳ್ಳುತ್ತಾರೆ. ಹಾಗೆ ಅರ್ಥೈಸಿಕೊಂಡಿದ್ದನ್ನು ಇನ್ನೊಬ್ಬರಿಗೆ ತಿಳಿಸುವ ಸಲುವಾಗಿ ಹೇಳಿದಾಗ ಭಾಷಾಂತರ ರೂಪುಗೊಳ್ಳುತ್ತದೆ. ಇನ್ನೂ ಸರಳವಾಗಿ ಹೇಳಬೇಕೆಂದರೆ ಗೊತ್ತಿಲ್ಲದೆ ಇರುವ ವಿಷಯವನ್ನು ಗೊತ್ತಾಗುವಂತೆ ಭಾಷೆಗೆ ಬದಲಾಯಿಸುವುದೇ ಅನುವಾದ"[೨] ಎಂದಿದ್ದಾರೆ. ಮೇಲಿನ ಇಬ್ಬರೂ ವಿದ್ವಾಂಸರ ಅಭಿಪ್ರಾಯದ ಮೇರೆಗೆ ಮೂಲಕೃತಿಯಲ್ಲಿ ಯಾವ ವ್ಯತ್ಯಾಸವನ್ನು ಮಾಡದೆ ಅದನ್ನು ಇದ್ದ ಹಾಗೆಯೇ ಉದ್ದಿಷ್ಟ ಭಾಷೆಗೆ ಪರಿವರ್ತಿಸುವುದೇ ಅನುವಾದ ಎನ್ನಬಹುದು. ಅನುವಾದ ತುಂಬಾ ಕಠಿಣವಾದ ಕೆಲಸ. ಬಹಳ ಜಾಗರೂಕತೆಯಿಂದ ಮೂಲಪಠ್ಯಕ್ಕೆ ಎಲ್ಲಿಯೂ

ಚ್ಯುತಿ ಬರದಂತೆ ನೋಡಿಕೊಳ್ಳಬೇಕಾಗುತ್ತದೆ. ಮೂಲಕೃತಿಯಲ್ಲಿನ ಆಶಯವನ್ನು ಓದುಗರಿಗೆ ಸರಳವಾಗಿ ಅರ್ಥವಾಗುವ ರೀತಿಯಲ್ಲಿ ಅನುವಾದಿಸಬೇಕಾಗುತ್ತದೆ. "ಯಾವುದೇ ಭಾಷೆಯಲ್ಲಿ ಸಾಹಿತ್ಯ ಬೆಳೆಯಬೇಕಾದರೆ ಅನುವಾದ ಅಥವಾ ಭಾಷಾಂತರದ ನೆರವು ಅಗತ್ಯ"[೩] ಈ ಹಿನ್ನೆಲೆಯಲ್ಲಿಯೇ 'ವಚನ' ಕೃತಿಯನ್ನು ಸಿದ್ಧಪಡಿಸಿ ವಿವಿಧ ಭಾಷೆಗಳಿಗೆ ಅನುವಾದ ಮಾಡುವ ಮೂಲಕ ವಚನ ಸಾಹಿತ್ಯವನ್ನು ವಿಶ್ವಮಾನ್ಯ ಮಟ್ಟಕ್ಕೆ ಪ್ರಸರಿಸುವ ಉದ್ದೇಶದಿಂದ ಈ ವಚನ ಬಹುಭಾಷಾ ಅನುವಾದ ಯೋಜನೆ ರೂಪಗೊಂಡಿದೆ.

### ೬.೧. ವಚನ ಭಾಷಾಂತರ ಇತಿಹಾಸ

ವಚನ ಸಾಹಿತ್ಯದ ಅನುವಾದಕ್ಕೆ ಸುದೀರ್ಘವಾದ ಇತಿಹಾಸವಿದೆ. ೧೫ನೇ ಶತಮಾನದ ಮೊಗ್ಗೆಯ ಮಾಯಿದೇವರು ಅಲ್ಲಮಪ್ರಭುವಿನ ಷಟ್‌ಸ್ಥಲವಚನಗಳನ್ನು 'ಪ್ರಭುಗೀತಾ' ಹೆಸರಿನಲ್ಲಿ 'ಸಂಸ್ಕೃತ'ಕ್ಕೆ ಅನುವಾದಿಸಿದ್ದಾರೆ. ಇದನ್ನು ಬಿಟ್ಟರೆ 'ಬಸವಣ್ಣನವರ ವಚನಗಳು' ಪಾಲ್ಕುರಿಕೆ ಸೋಮನಾಥನ 'ತೆಲುಗು ಬಸವಪುರಾಣಮು' ಎಂಬುದರಲ್ಲಿ ಆಗಾಗ ಭಾವಾನುರೂಪದಲ್ಲಿ ಕಾಣಿಸಿಕೊಂಡಿವೆ. ಈ ರೀತಿಯಾಗಿ ಅನುವಾದಕಾರ್ಯ ಯಾವ ರೀತಿಯಲ್ಲಿ ಬೆಳವಣಿಗೆ ಹೊಂದಿದೆ ಎಂಬುದನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

ವಚನಗಳನ್ನು ಮೊಟ್ಟಮೊದಲಿಗೆ ಅನುವಾದಿಸಿದ ಕೀರ್ತಿ ಇ.ಪಿ.ರೈಸ್ ಅವರಿಗೆ ಸಲ್ಲುತ್ತದೆ. History of Kanarese literature ಕೃತಿಯಲ್ಲಿ ಬಸವಣ್ಣನ ಮೂರು ವಚನಗಳು, ಅಕ್ಕಮಹಾದೇವಿ, ಉರಿಲಿಂಗಪೆದ್ದಿ ಹಾಗೂ ಸ್ವತಂತ್ರ ಸಿದ್ಧಲಿಂಗೇಶ್ವರ ಇವರ ತಲಾ ಒಂದೊಂದು ವಚನಗಳನ್ನು ೧೯೧೫ರಲ್ಲಿ ಅನುವಾದಿಸಿ ಪ್ರಕಟಿಸಿದ ಮೊದಲ ವಿದೇಶಿಗರಾಗಿದ್ದಾರೆ. ಇವರ ನಂತರದಲ್ಲಿ ವಚನ ಸಾಹಿತ್ಯದ ಶೋಧ, ಪರಿಷ್ಕರಣ, ಪ್ರಕಟಣ ಕಾರ್ಯಗಳಿಗೆ ಹೆಚ್ಚಿನ ಗಮನ ಹರಿಸಿದವರು ಫ.ಗು.ಹಳಕಟ್ಟಿಯವರು. ತಾವು ವಕೀಲವೃತ್ತಿಯಲ್ಲಿದ್ದರೂ ಅದನ್ನು ಪರಿಗಣಿಸದೇ ತಮ್ಮ ಇಡೀ ಬದುಕನ್ನು ವಚನ ಸಾಹಿತ್ಯ, ಸಂಗ್ರಹ, ಪ್ರಕಟಣೆ, ಪ್ರಸರಣಕ್ಕೆ ಮುಡಿಪಾಗಿಟ್ಟರು. ಆದ್ದರಿಂದ ಇವರನ್ನು ವಚನಪಿತಾಮಹ ಎಂದು ಕರೆಯುತ್ತಾರೆ. ಇವರು ಸಂಪಾದಿಸಿದ ವಚನಗಳನ್ನು ಮೊದಲ ಸಲ ಅಚ್ಚು ಹಾಕಿಸಲು ಅವರು ಪಟ್ಟ ಶ್ರಮ ಹೇಳತೀರದು. ಅವರೇ ಹೇಳಿರುವಂತೆ "ಸುಂದರವಾಗಿ ಅಚ್ಚು ಹಾಕಿಸಬೇಕೆಂದು ಮಂಗಳೂರು ಬಾಸೆಲ್ ಮಿಶನ್ ಪ್ರೆಸ್ಸಿಗೆ ಕಳಿಸಿಕೊಟ್ಟಿದ್ದಲ್ಲದೆ ಅವರು ತಿಳಿಸಿದಂತೆ ಈ ಕಾರ್ಯಕ್ಕೋಸ್ಕರ ೫೦೦ ರೂಪಾಯಿಗಳನ್ನು ಸಹ ಮುಂಗಡವಾಗಿ ಅವರಿಗೆ ಕಳುಹಿಸಿಕೊಟ್ಟೆನು. ಆದರೆ ಆಶ್ಚರ್ಯದ ಸಂಗತಿಯೇನೆಂದರೆ ಮಿಶನ್ ಪ್ರೆಸ್ಸಿನವರು ಪರಧರ್ಮದವರ ಗ್ರಂಥಗಳನ್ನು ನಾವು ಅಚ್ಚು ಹಾಕುವುದಿಲ್ಲ ಮತ್ತು ನಿಮ್ಮ ಗ್ರಂಥದಲ್ಲಿ ಪರಮಾತ್ಮನ ಸಂಬಂಧವಾಗಿ ಇರುವ ವಿಚಾರಗಳನ್ನು ಪ್ರಕಾಶಪಡಿಸಲು ನಾವು ಇಷ್ಟಪಡುವುದಿಲ್ಲ.

ಅವು ನಮ್ಮ ಕ್ರಿಶ್ಚಿಯನ್ ಧರ್ಮತತ್ವಗಳನ್ನು ಹೋಲುತ್ತವೆ. ಇಂಥ ಧಾರ್ಮಿಕ ಗ್ರಂಥಗಳನ್ನು ಅಚ್ಚು ಹಾಕುವುದರಿಂದ ನಮ್ಮ ಮಿಶನ್ನಿನ ಉದ್ದೇಶಕ್ಕೆ ಭಂಗ ಬರುತ್ತದೆ ಎಂಬ ಕಾರಣವನ್ನು ತೋರಿಸಿ ನಾನು ಕಳಿಸಿದ ಹಸ್ತಲಿಖಿತ ಗ್ರಂಥವನ್ನು, ೫೦೦ ರೂ. ಮುಂಗಡ ಹಣವನ್ನು ನನಗೆ ತಿರುಗಿ ಕಳುಹಿಸಿದರು."[೪] ಇಂತಹ ಸಂದರ್ಭದಲ್ಲಿ ಎದೆಗುಂದದೇ ೧೯೨೫ರಲ್ಲಿ ಅವರೇ ಸ್ವತಃ ಹಿತಚಿಂತಕ ಮುದ್ರಣಯಂತ್ರ ಸ್ಥಾಪಿಸಿ ಈ ಕಾರ್ಯವನ್ನು ಯಶಸ್ವಿಗೊಳಿಸಿದರು. ಇಷ್ಟಕ್ಕೆ ಬಿಡದೆ ಅವರ ವಚನ ಸಾಹಿತ್ಯದ ಬಗೆಗಿನ ಆಸಕ್ತಿ ಅವರನ್ನು 'ಅನುವಾದ' ಕಾರ್ಯದತ್ತ ಕೊಂಡ್ಯೊಯ್ಯಿತು. ಆ ಸಂದರ್ಭದಲ್ಲಿ ವಿದೇಶಿ ವಿದ್ವಾಂಸರಾದ ಜಿ.ಎಸ್.ಷರಕ್ವಾರ್ ಅವರ ಸಹಾಯದಿಂದ ೧೯೧೫ರಿಂದ ೧೯೧೬ರಲ್ಲಿ Vachanas Attributed to basava ಎಂಬ ಶೀರ್ಷಿಕೆಯಡಿ ೧೪೯ ವಚನಗಳನ್ನು ಅನುವಾದಿಸಿದರು. ಅದನ್ನು ಅಂದಿನ ಪ್ರಮುಖ ಇಂಗ್ಲಿಷ್ ಪತ್ರಿಕೆಯಾದ The Indian Antiquary Vol.LI(೧೯೨೨)ರಲ್ಲಿ ಪ್ರಕಟಿಸಿದರು. ಇದನ್ನು ೨೦೦೩ರಲ್ಲಿ ಡಾ.ಯರವಿನ ತೆಲಿಮಠ ಅವರು ಪುಸ್ತಕ ರೂಪದಲ್ಲಿ ಹೊರತಂದರು. ಹೀಗೆ ಪ್ರಾರಂಭಗೊಂಡ ವಚನ ಅನುವಾದ ಸಾಹಿತ್ಯ ತೀವ್ರವಾಗಿ ಬೆಳವಣಿಗೆಯಾಗತೊಡಗಿತು. ಸಣ್ಣ ಕತೆಗಳ ಜನಕರಾದ ಮಾಸ್ತಿ ವೆಂಕಟೇಶ ಅಯ್ಯಂಗಾರರು 'Sayings of Basavanna' ಎಂಬ ಕೃತಿಯನ್ನು ೧೯೩೪ರಲ್ಲಿ ಗದುಗಿನ ವೀರಶೈವ ತರುಣ ಸಂಘದ ಪ್ರಕಾಶನದಿಂದ ಪ್ರಕಟಿಸಿದರು. ಈ ಕೃತಿಯಲ್ಲಿ ೧೦೧ ವಚನಗಳನ್ನು ಕನ್ನಡದಲ್ಲಿ ಕೊಟ್ಟು ಅವುಗಳನ್ನು ಇಂಗ್ಲಿಷ್ ಭಾಷೆಗೆ ಅನುವಾದಿಸಿದ್ದಾರೆ. ೧೯೮೫ರಲ್ಲಿ ಅದೇ ಹೆಸರಿನಲ್ಲಿ ೧೦೧ ವಚನಗಳ ಜೊತೆಗೆ ೩೩೦ ವಚನಗಳನ್ನು ಅನುವಾದಿಸಿದಲ್ಲದೇ ಶೀರ್ಷಿಕೆಯಡಿಯಲ್ಲಿ ವಚನಗಳನ್ನು ವಿಂಗಡಿಸಿಕೊಟ್ಟಿದ್ದಾರೆ. ಅವರು ಆಯ್ಕೆ ಮಾಡಿಕೊಂಡ ವಚನಗಳನ್ನು ಕುರಿತಂತೆ "They Constitute a record of religious Experience of a Kind not often met within Indian Literature nor very often even in world literature. These meditations of Basavanna are therefore of great importance to all persons interested in the history of religion." ಟಿ.ಎಚ್.ಎಮ್.ಸದಾಶಿವಯ್ಯ ಇವರು ಆಂಧ್ರಪ್ರದೇಶದ ಕರ್ನೂಲಿನಲ್ಲಿ ನ್ಯಾಯಾಧೀಶರಾಗಿದ್ದವರು. ಇವರು ೧೯೩೫ರಲ್ಲಿ ಬಸವೇಶ್ವರನ ವಚನಗಳಲ್ಲಿನ ೨೫ ವಚನಗಳನ್ನು ಆಯ್ದು 'Gleanings into the Sayings of Basaveshwara' ಎಂದು ಪ್ರಕಟಿಸಿರುವುದು ತಿಳಿದುಬರುತ್ತದೆ. ಶಿಕ್ಷಣ ಇಲಾಖೆಯಲ್ಲಿ ಅಧಿಕಾರಿಗಳಾಗಿದ್ದ ಎಸ್.ಕೆ.ಸಂಗನಾಳಮಠರು Thoughts of Basava : A Book meant to revolutionize the world of religion ಎಂಬ ಅನುವಾದ ಕೃತಿಯಲ್ಲಿ ಬಸವಣ್ಣನ ೭೨ ವಚನಗಳನ್ನು ೧೯೪೯ರಲ್ಲಿ ಪ್ರಕಟಿಸಿದ್ದಾರೆ. ಇದಕ್ಕೆ ಮುನ್ನುಡಿಯನ್ನು ಫ.ಗು.ಹಳಕಟ್ಟಿ ಅವರು ಈ ರೀತಿ ಬರೆದಿದ್ದಾರೆ. "The oneness of the almighty power, the impartance

of the Ethical system of lingayats, the hollow nature of the so called caste system, the metaphysical principle of the lingayats are all well Expressed in the 'Thoughts of Basava' and selections made by Mr.N.K.Sanganalmath, His book vividly presents the broad features of lingayatism.''[೬] ಹರ್ಡೇಕರ್ ಮಂಜಪ್ಪ ಅವರು 'ವಚನಕಾರರ ಸಮಾಜರಚನೆ' ಎಂಬ ಕೃತಿಯನ್ನು ಸಂಪಾದಿಸಿಕೊಟ್ಟಿದ್ದಾರೆ. ಇದರಲ್ಲಿ ಆರ್.ಆರ್.ದಿವಾಕರ, ಎಮ್.ಆರ್.ಶ್ರೀನಿವಾಸ ಮೂರ್ತಿ, ಟಿ.ಎಸ್.ವೆಂಕಣ್ಣಯ್ಯ ಮತ್ತು ಮಾಸ್ತಿವೆಂಕಟೇಶ ಅಯ್ಯಂಗಾರರ ೧೨ ಲೇಖನಗಳಿವೆ. ಇದನ್ನು ಎಸ್.ಬಿ.ಬೇಂದಾಡೆ ಅವರು Social structure of the veereshaiva saints ಶೀರ್ಷಿಕೆಯೊಂದಿಗೆ ಅನುವಾದಿಸಿ ಪ್ರಕಟಿಸಿದ್ದಾರೆ. ಎಸ್.ಎಸ್.ಬಸವನಾಳ ಹಾಗೂ ಕೆ.ಆರ್.ಶ್ರೀನಿವಾಸ ಅಯ್ಯಂಗಾರ ಅವರು Musings of Basava- A free Rendering ಎಂಬ ಕೃತಿಯನ್ನು ೧೯೪೦ರಲ್ಲಿ ಬಾಸೆಲ್ ಮಿಷನ್ ಪ್ರೆಸ್ಸಿನಿಂದ ಪ್ರಕಟಿಸಿದರು. ಇದರಲ್ಲಿ ೪೦ ಬಸವಣ್ಣನ ವಚನಗಳು ಮತ್ತು ೬ ಅಕ್ಕಮಹಾದೇವಿಯ ವಚನಗಳಿವೆ. ೩೮ ಪುಟಗಳ ಸುದೀರ್ಘ ಮುನ್ನುಡಿಯಲ್ಲಿ ವಚನಗಳ ಪ್ರಸ್ತುತತೆ, ಅನುಭವ ಸಾಹಿತ್ಯ, ಅದರ ಮಹತ್ವ ಜೊತೆಗೆ ಜಗತ್ತಿನ ಉಳಿದ ಸಾಹಿತ್ಯ ಪ್ರಕಾರಗಳ ಜೊತೆ ಹೋಲಿಕೆ ಇತ್ಯಾದಿಗಳನ್ನು ಕೊಟ್ಟಿದ್ದಾರೆ.

ಸಿ.ಎಸ್.ಬಾಗಿಯವರು Selected Sayings of Basava ಒಟ್ಟು ೨೨೬ ವಚನಗಳನ್ನು ಒಳಗೊಂಡ ಅನುವಾದ ಕೃತಿಯಾಗಿದ್ದು ಇದು ೧೯೫೨ರಲ್ಲಿ ವಚನ ಮಂಟಪ ಬೆಳಗಾವಿಯಿಂದ ಪ್ರಕಟವಾಗಿದೆ. ಮುಕ್ತ ಭಾಷಂತರ ಮಾಡಿದುದ್ದನ್ನು ಮುನ್ನುಡಿಯಲ್ಲಿ ''A Sincere attempt has been mede in these renderings to reproduce of much of the sense and effect of the origionals as was possible at first venture''[೭] ಎಂದು ಹೇಳಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಲ್ಲಿ ಡಾ.ಪಾವಟೆಯವರು ಕುಲಪತಿಯಾಗಿದ್ದ ಸಂದರ್ಭದಲ್ಲಿ ಶೂನ್ಯಸಂಪಾದನೆಯ ಅನುವಾದ ಯೋಜನೆಯು ಅಸ್ತಿತ್ವಕ್ಕೆ ಬಂದಿತು. ಆ ಸಂದರ್ಭದಲ್ಲಿ ಶೂನ್ಯಸಂಪಾದನೆಯ ಅನುವಾದದ ಮಹತ್ವವನ್ನು ಸೂಚಿಸಿದ ಧಾರವಾಡದ ನವಕಲ್ಯಾಣ ಮಠದ ಶ್ರೀಕುಮಾರಸ್ವಾಮೀಜಿಯವರ ನೇತೃತ್ವದಲ್ಲಿ ಈ ಯೋಜನೆ ಅಸ್ತಿತ್ವಕ್ಕೆ ಬಂದಿತು. ಎಸ್.ಸಿ.ನಂದೀಮಠ, ಅರ್ಮ್ಯಾಂಡೊ ಮೆನೆಜೆಸ್ ಮತ್ತು ಆರ್.ಸಿ.ಹಿರೇಮಠ ಅವರ ಸಂಪಾದನೆಯಲ್ಲಿ ಮೊದಲ ಸಂಪುಟ ೧೯೬೫ರಲ್ಲಿ ಪ್ರಕಟವಾಯಿತು. ಎಸ್.ಎಸ್.ಭೂಸನೂರಮಠ ಹಾಗೂ ಅರ್ಮ್ಯಾಂಡೊ ಮೆನೆಜೆಸ್ ಅವರ ಸಂಪಾದಕತ್ವದಲ್ಲಿ ೨ನೇ ಸಂಪುಟ ೧೯೬೮ರಲ್ಲಿ ಪ್ರಕಟಗೊಂಡಿತು. ಎಸ್.ಎಸ್.ಭೂಸನೂರಮಠ ಮತ್ತು ಅರ್ಮ್ಯಾಂಡೊ ಮೆನೆಜೆಸ್ ಅವರ

ಸಂಪಾದಕತ್ವದಲ್ಲಿ ೩ನೇ ಸಂಪುಟ ೧೯೬೯ರಲ್ಲಿ, ೪ನೇ ಸಂಪುಟ ೧೯೭೦ರಲ್ಲಿ ಎಸ್.ಎಸ್. ಭೂಸನೂರಮಠ, ಅರ್ಮ್ಯಾಂಡೊ ಮೆನೆಜಿಸ್ ಹಾಗೂ ಐದನೇ ಸಂಪುಟ ೧೯೭೨ರಲ್ಲಿ ಎಂ.ಎಸ್.ಸುಂಕಾಪುರ ಮತ್ತು ಅರ್ಮ್ಯಾಂಡೊ ಮೆನೆಜಿಸ್ ಅವರಿಂದ ಪ್ರಕಟಗೊಂಡವು. ಈ ಎಲ್ಲಾ ಸಂಪುಟಗಳು ೨೦೦೭ರಲ್ಲಿ ಮತ್ತೆ ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಜೆ.ಎಸ್.ಎಸ್.ಮಹಾವಿದ್ಯಾಪೀಠ, ಮೈಸೂರಿನಿಂದ ಮರು ಪ್ರಕಟಗೊಂಡವು.

ಇದೇ ಶೂನ್ಯಸಂಪಾದನೆಯನ್ನು ಕುರಿತಂತೆ ಅನುವಾದ ಕಾರ್ಯ ಕೈಗೊಂಡವರಲ್ಲಿ ಡಿ.ಎ.ಶಂಕರ್ ಅವರು ಒಬ್ಬರಾಗಿದ್ದಾರೆ. ಇವರು ಶಿವಗಣಪ್ರಸಾದಿ ಮಹಾದೇವಯ್ಯನ Shoonya sampadane Volume Nol-1 ಅನ್ನು ೨೦೦೧ರಲ್ಲಿ, Shoonyasampadane Volume No-2ನ್ನು ಮೈಸೂರಿನ ಸುತ್ತೂರು ಮಠದ ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಪ್ರಕಟ ಮಾಡಿದ್ದಾರೆ. ಮೊದಲ ಸಂಪುಟದಲ್ಲಿ ಪ್ರಭುದೇವ, ಅನಿಮಿತ್ತದೇವ, ಮುಕ್ತಾಯಕ್ಕ, ಸಿದ್ಧರಾಮ, ಬಸವರಾಜದೇವ ಮತ್ತು ಮರುಳಶಂಕರದೇವ ಸಂಪಾದನೆಗಳು ಇವೆ. ಹಾಗೆಯೇ ಎರಡನೇ ಸಂಪುಟದಲ್ಲಿ ಚೆನ್ನಬಸವನ ಸಂಪಾದನೆ, ಮಹಾದೇವಿಯಕ್ಕನ ಸಂಪಾದನೆ, ಪ್ರಭುದೇವರ ನಿರ್ಗಮನ, ಪ್ರಭುದೇವರ ಮರು ಆಗಮನ ಹಾಗೂ ಸಿಂಹಾಸನರೋಹಣಗಳ ಎಲ್ಲ ಅಧ್ಯಾಯಗಳಲ್ಲಿ ಬರುವ ವಚನಗಳನ್ನು ಅನುವಾದಿಸಿದ್ದಾರೆ.

ಡಿ.ಎ.ಶಂಕರ್ ಅವರು 'Forever saints: selected Vachanas of Basavanna, Allama prabhu and Akkamahadavi' ಎಂಬ ಕೃತಿಯನ್ನು ೨೦೦೬ರಲ್ಲಿ ಮೈಸೂರಿನ ಸುತ್ತೂರು ಮಠದ ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಪ್ರಕಟಿಸಿದ್ದಾರೆ. ಇದರಲ್ಲಿ ಬಸವಣ್ಣನ ೧೪೧, ಅಲ್ಲಮಪ್ರಭುವಿನ ೧೧೮, ಹಾಗೆಯೇ ಅಕ್ಕಮಹಾದೇವಿಯ ೭೧ ಹೀಗೆ ಒಟ್ಟು ೩೩೦ ವಚನಗಳನ್ನು ಅನುವಾದಿಸಿದ್ದಾರೆ. ತಮ್ಮ ಅನುವಾದವನ್ನು ಕುರಿತು "one of the chief purposes with which I have selected and translated the vachanas here is to make this rich and very human document of great socioliterary value available primarily to the non-kannada speaking world"[೪] ಎಂದು ಅನುವಾದ ಆಶಯವನ್ನು ವ್ಯಕ್ತಪಡಿಸಿರುವುದನ್ನು ಗಮನಿಸಬಹುದು.

'Veerashaiva Vachanas and Vachanakaras' ಎಂಬ ಕೃತಿಯು ಪಿ.ಶಾಮರಾವ್ ಅವರಿಂದ ಅನುವಾದಿತವಾದ ಕೃತಿಯಾಗಿದೆ. ವೈ.ನಾಗೇಶಶಾಸ್ತ್ರಿಗಳು 'ಬಳ್ಳಾರಿ ಸಾಹಿತ್ಯ ಅಕಾಡೆಮಿ'ಯ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ೧೯೬೬ರಂದು ಬಿಡುಗಡೆಗೊಂಡ ಕೃತಿಯಾಗಿದೆ.

ಇದರಲ್ಲಿ ಅಕ್ಕಮಹಾದೇವಿ ೫೭, ಅಲ್ಲಮಪ್ರಭು ೮೨, ಅಂಬಿಗರ ಚೌಡಯ್ಯ ೫, ಅರಿವಿನ ಮಾರಿತಂದೆ ೧, ಆದಯ್ಯ ೫, ಬಸವಣ್ಣ ೧೬೬, ಬೊಂತಾದೇವಿ ೧, ಬೊಮ್ಮಣ್ಣ ೧, ಚಂದಿಮರಸ ೨, ಚಂದಿಮರೆಪ್ಪ ೧, ಚೆನ್ನಬಸವಣ್ಣ ೩೦, ಜೇಡರ ದಾಸಿಮಯ್ಯ ೨೨, ಕಾಡಸಿದ್ಧೇಶ್ವರ ೨, ಲಕ್ಕಮ್ಮನ ೩, ಮರೆಯ್ಯ ಪುಣ್ಯಸ್ತ್ರೀ ಮಹಾದೇವಿ ೨, ಮೋಳಿಗೆಯ ಮಾರಯ್ಯ ೪, ನಗೆಮಾರಿ ತಂದೆ ೧, ನೀಲಲೋಚನೆ ೨, ನೀಲಾಂಬಿಕೆ ೧, ನುಲಿಯ ಚೆಂದಯ್ಯ ೧, ಪುರದ ನಾಗಣ್ಣ ೧, ಸಕಲೇಶ ಮಾದರಸ ೭, ಸತ್ಯಕ್ಕ ೧, ಸ್ವತಂತ್ರ ಸಿದ್ಧಲಿಂಗೇಶ್ವರನ ೯, ಷಣ್ಮುಖ ಸ್ವಾಮಿಯ ೭, ಸಿದ್ಧರಾಮನ ೨೯, ಶಿವಲೆಂಕ ಮಂಚಣ್ಣ ೨, ತೋಂಟದ ಮಹಲಿಂಗ ಯತಿಗಳ ೧ ಮತ್ತು ತೋಂಟದ ಸಿದ್ಧಲಿಂಗ ಯತಿಗಳ ೫ ಹೀಗೆ ಒಟ್ಟು ೨೯ ವಚನಕಾರರ ೪೬೧ ವಚನಗಳ ಅನುವಾದ ಕಾರ್ಯ ಇಲ್ಲಿ ಕಂಡುಬರುತ್ತದೆ. ಅನುವಾದದ ಜೊತೆಗೆ ಈ ಕೃತಿಯ ಮುನ್ನುಡಿಯಲ್ಲಿ ಈ ವಚನಕಾರರ ಜೀವನಚರಿತ್ರೆಯನ್ನು ನೀಡಿದ್ದಾರೆ.

೧೯೬೮ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯಿಂದ ಪ್ರಕಟವಾದ ಪಿ.ಬಿ.ದೇಸಾಯಿ ಅವರು Basaveshwara and his times ಎಂಬ ಕೃತಿಯಲ್ಲಿ ೩೫ ವಚನಗಳನ್ನು ಅನುವಾದಿಸಿದ್ದಾರೆ.

ಅಮೆರಿಕ ವಾಸಿಯಾದ ಎ.ಕೆ.ರಾಮಾನುಜನ್ ಅವರು ದಕ್ಷಿಣ ಭಾರತೀಯ ಭಾಷೆಗಳ ತಜ್ಞರು. ಇವರ ಪ್ರಸಿದ್ಧ ಅನುವಾದಿತ ಕೃತಿ 'Speeking of Shiva' ಈ ಕೃತಿಯು ಪೆಂಗ್ವಿನ್ ಪ್ರಕಾಶನದ ಮೂಲಕ ಪ್ರಕಟಗೊಂಡಿದೆ. ಇದರಲ್ಲಿ ಬಸವಣ್ಣನ ೪೨, ಜೇಡರ ದಾಸಿಮಯ್ಯನ ೨೮, ಅಕ್ಕಮಹಾದೇವಿಯ ೪೭ ಮತ್ತು ಅಲ್ಲಮಪ್ರಭುವಿನ ೩೮ ಒಟ್ಟು ೧೫೫ ವಚನಗಳನ್ನು ಅನುವಾದಿಸಿದ್ದಾರೆ. ಜೊತೆಗೆ ಪರಿಚಯಾತ್ಮಕ ವಿವರಣೆಯನ್ನು ನೀಡುವುದರ ಜೊತೆಗೆ ವಚನ ಸಾಹಿತ್ಯ ಹಾಗೂ ಷಟ್‌ಸ್ಥಲ ಸಿದ್ಧಾಂತದ ಕುರಿತಂತೆ ಸುದೀರ್ಘವಾಗಿ ಚರ್ಚಿಸಿದ್ದಾರೆ. ಹಾಗೆಯೇ ತಾವು ಅನುವಾದಕ್ಕೆ ಆಯ್ಕೆ ಮಾಡಿಕೊಂಡ ವಚನಗಳನ್ನು ಕುರಿತಂತೆ "Speaking of Siva gives imparatance to the 'Secular' nature of Vacanas, and has gained the acceptance of the western audience and non kannada readers in india. This anthology fits vacana texts to 'modernist literary sensibility' and uses idiom of 'modernist poetry' that was pravalent in the 197 As in the Indian context as a translation Strategy."[೯]

ಅರ್ಮ್ಯಾಂಡೊ ಮೆನೆಜಿಸ್ ಮತ್ತು ಎಸ್.ಎಮ್.ಅಂಗಡಿಯವರು ೧೯೬೭ರಲ್ಲಿ ಅಣ್ಣನ ಬಳಗ ಸಿರಿಗೆರೆಯಿಂದ 'Vacanas of Basavanna: A Selection' ಎಂಬ ಕೃತಿಯನ್ನು

ಹೊರತಂದಿದ್ದಾರೆ. ನಂತರ ಇವರಿಬ್ಬರು ೧೯೭೩ರಲ್ಲಿ Vacanas of Akkamahadavi ಎಂಬ ಕೃತಿಯಲ್ಲಿ ೩೧೫ ವಚನಗಳನ್ನು ಅನುವಾದಿಸಿದ್ದಾರೆ. ಈ ಕೃತಿಯು ಧಾರವಾಡದ ಮನೋಹರ ಅಪ್ಪಾಸಾಹೇಬ ಅಡಕೆ ಅವರು ತಮ್ಮ ತಾಯಿಯ ಸ್ಮರಣಾರ್ಥವಾಗಿ ಪ್ರಕಟಿಸಿರುವ ಕೃತಿಯಾಗಿದೆ. ೧೯೭೮ರಲ್ಲಿ ಇವರಿಬ್ಬರು ಸೇರಿ Vacanas of siddharama ಎಂಬ ಕೃತಿಯನ್ನು ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಿಂದ ಹೊರತಂದರು. ಇದರಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನನ ಅಂಕಿತವಿರುವ ೧೩೭೮ ವಚನಗಳು, ಯೋಗಿನಾಥ ಎಂಬ ಅಂಕಿತವಿರುವ ೩೮೯ ರಚನೆಗಳು ಅನುವಾದಗೊಂಡಿವೆ.

ಬಿ.ಎ.ಪಾಟೀಲ ಅವರು Akka Mahadavi, the Divine cuckoo : English Rendering of Akk's 50 Vacanas ಎಂಬ ಕೃತಿಯನ್ನು ೧೯೭೫ರಲ್ಲಿ ಗುಲ್ಬರ್ಗಾದ ಸಿದ್ಧವಾಗೀಶ ಪ್ರಕಾಶನದಿಂದ ಪ್ರಕಟಿಸಿದ್ದಾರೆ. ಪಿ.ಉಮಾಶಂಕರ್ ಅವರು ೧೬೫ ವಚನಗಳನ್ನು 'A Garland of Pearls of Basavamala' ಎಂಬ ಕೃತಿಯಲ್ಲಿ ಅನುವಾದಿಸಿದ್ದಾರೆ. ಇದು ೧೯೭೮ರಲ್ಲಿ ಮೂರು ಸಾವಿರಮಠ ಹುಬ್ಬಳ್ಳಿಯವರಿಂದ ಪ್ರಕಟಗೊಂಡಿದೆ.

ಡಿ.ಶೇಷಗಿರಿರಾವ್ ಅವರು ಅಕ್ಕನ ಕೆಲವು ವಚನಗಳನ್ನು At the Lards fect ಕೃತಿಯಲ್ಲಿ ಅನುವಾದಿಸಿ ೧೯೮೧ರಲ್ಲಿ ಬೆಂಗಳೂರಿನ ಪ್ರಜಾಪಿತ ಪ್ರಕಾಶನದಿಂದ ಪ್ರಕಟಿಸಿದ್ದಾರೆ. ಸರೋಜಿನಿ ಶಿಂತ್ರಿ ಅವರು Akka Mahadavi ಹೆಸರಿನ ಕೃತಿಯನ್ನು ಅಣ್ಣನ ಬಳಗ ಸಿರಗೆರೆಯಿಂದ ೧೯೮೩ರಲ್ಲಿ ಪ್ರಕಟಿಸಿದ್ದಾರೆ. ಇದು ಅಕ್ಕಮಹಾದೇವಿಯ ಜೀವನಚರಿತ್ರೆ ಒಳಗೊಂಡಂತೆ ಆಶಯ ಮತ್ತು ೭೨ ವಚನಗಳನ್ನು ಅನುವಾದಿಸಿಕೊಟ್ಟಿದ್ದಾರೆ.

ನೆದರ್‌ಲ್ಯಾಂಡ್ Kamil V. Zavlebil ಅವರು ಯುನೆಸ್ಕೋದ ಪ್ರಾಯೋಜಕತ್ವದಲ್ಲಿ 'Lord of the Meeting Rivery : Devotional Poems of Basavanna' ಎಂಬ ಕೃತಿಯನ್ನು ೧೯೮೪ರಲ್ಲಿ ದೆಹಲಿಯ ಮೋತಿಲಾಲ ಬನಾರಸಿದಾಸ್ ಪ್ರಕಾಶನದ ಮೂಲಕ ಪ್ರಕಟಿಸಿದ್ದಾರೆ. ಇದರಲ್ಲಿ ಬಸವಣ್ಣನವರ ೧೨೬ ವಚನಗಳನ್ನು ಅನುವಾದಿಸಿದ್ದಾರೆ. "ತಮಗೆ ಮೂಲ ಪ್ರೇರಣೆ ಎ.ಕೆ.ರಾಮಾನುಜನ್ ಎಂದು ಮುನ್ನುಡಿಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ. A.K.Ramanujan's lovely Volume, Speaking of Shiva, containg unsurpassed translations of the poems of four vacanakaras, was a spurce of Constant joy and inspiration to me. without this book my own transalations of Basava's Vacanas would not have been conceived."[೧೦]

ಸಿ.ಆರ್.ಯರವಿನ ತೆಲಿಮಠ ಅವರ The Caste Eradication vacanas of Sri Basaveshwara ಕೃತಿಯು ೧೯೮೭ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ

ಪೀಠವು ಶ್ರೀ ಬಸವೇಶ್ವರ ಪೀಠದ ಆಶ್ರಯದಲ್ಲಿ ವೀರಶೈವ ಸಾಹಿತ್ಯದ ಅನುವಾದ ಮಾಲಿಕೆಯ ೩ನೆಯ ಪ್ರಕಟವಾಗಿದೆ. ಇದರಲ್ಲಿ ಜಾತಿನಿರ್ಮೂಲನಕ್ಕೆ ಸಂಬಂಧಿಸಿದ ಬಸವಣ್ಣನ ೬೨ ವಚನಗಳಿವೆ. 'Meeffled Voices' ಎಂಬ ಕೃತಿಯಲ್ಲಿ ಸರೋಜಿನಿ ಶಿಂತ್ರಿ, ಸಿ.ಆರ್. ಯರವಿನ ತೆಲಿಮಠ ಮತ್ತು ಜಿ.ಬಿ.ಸಜ್ಜನ ಅವರು ೩೨ ಶರಣರ ೨೧೬ ವಚನಗಳನ್ನು ಅನುವಾದಿಸಿದ್ದಾರೆ. ಇದು ಸಿರಿಗೆರೆಯ ತರಳುಬಾಳು ಬೃಹನ್ಮಠದಿಂದ ೧೯೯೪ರಲ್ಲಿ ಪ್ರಕಟಗೊಂಡ ಕೃತಿಯಾಗಿದೆ. ಇಲ್ಲಿ ಆಯ್ಕೆ ಮಾಡಿಕೊಂಡ ಶರಣರ ಜೀವನ, ಅವರ ಬರವಣಿಗೆ ಬಗ್ಗೆ ವಿವರ ನೀಡುತ್ತ ಅನುವಾದಕಾರ್ಯವನ್ನು ಮಾಡಿದ್ದಾರೆ. ಅಂಬಿಗರ ಚೌಡಯ್ಯ ೪೪, ಅರಿವಿನ ಮಾರಿತಂದೆ ೧೯, ಆಯ್ದಕ್ಕಿ ಲಕ್ಕಮ್ಮ ೧೩, ಬಹುರೂಪಿ ಚೌಡಯ್ಯ ೧, ಬಿಬ್ಬಿ ಬಾಚಯ್ಯ ೧, ಜೇಡರ ದಾಸಿಮಯ್ಯ ೧೨, ಡಕ್ಕೆ ಬೊಮ್ಮಣ್ಣ ೮, ಡೋಹರ ಕಕ್ಕಯ್ಯ ೩, ಏಲೇಶ ಕೇತಯ್ಯ ೧, ಘಟ್ಟಿವಾಳಯ್ಯ ೧೦, ಹಡಪದ ಅಪ್ಪಣ್ಣ ೫, ಹಾವಿನಾಳ ಕಲ್ಲಯ್ಯ ೧, ಕದಿರೆ ರೇವಮ್ಮ ೧, ಕಾಲಕೇತ ಬೊಮ್ಮಯ್ಯ ೧, ಕಾಳವ್ವೆ ೧೨, ಕನ್ನಡ ಕಾಯಕದ ಅಮ್ಮಿದೇವ ೨, ಕರುಳ ಕ್ಯಾತಯ್ಯ ೧, ಕಿನ್ನರಿ ಬ್ರಹ್ಮಯ್ಯ ೨, ಕೋಲ ಶಾಂತಯ್ಯ ೧೧, ಲಿಂಗಮ್ಮ ೧, ಮಡಿವಾಳ ಮಾಚಿದೇವ ೧೧, ಮಾದಾರ ಧೂಳಯ್ಯ ೧೦, ಮಾದಾರ ಚೆನ್ನಯ್ಯ ೧೦, ಮೇದಾರ ಕೇತಯ್ಯ ೨, ಮೆರೆಮಿಂಡ ದೇವ ೧೧, ನುಲಿಯ ಚಂದಯ್ಯ ೧, ಸತ್ತಿಗೆಯ ಮಾರಿತಂದೆ ೧, ಶಿವನಾಗಮಯ್ಯ ೧, ಸೂಜಿಕಾಯಕದ ರಾಮಿತಂದೆ ೨, ಉರಿಲಿಂಗಪೆದ್ದಿ ೧೧, ವೇದಮೂರ್ತಿ ಸಂಗಣ್ಣ ೧, ವೀರಗೊಲ್ಲಾಳ ೨. ಹೀಗೆ ಒಟ್ಟಾರೆಯಾಗಿ ೨೧೬ ವಚನಗಳು ಈ ಕೃತಿಯಲ್ಲಿ ಅನುವಾದಗೊಂಡಿವೆ.

ಸಮಗ್ರ ಜನಪ್ರಿಯ ಆವೃತ್ತಿಯ ವಚನ ಸಂಪುಟದಲ್ಲಿ 'ಶಿವಶರಣೆಯರ ವಚನ ಸಂಪುಟ'ವನ್ನು 'Vacanas of Women Saints' ಹೆಸರಿನಲ್ಲಿ ಸಿ.ಆರ್.ಯರವಿನತೆಲಿಮಠ ಅವರು ೨೦೦೬ರಲ್ಲಿ ಬಸವ ಸಮಿತಿಯ ಮೂಲಕ ಪ್ರಕಟಿಸಿದ್ದಾರೆ. ಇದರಲ್ಲಿ ೩೩ ವಚನಕಾರ್ತಿಯರ ಒಟ್ಟು ೧೧೦೪ ವಚನಗಳನ್ನು ಅನುವಾದಿಸಿದ್ದಾರೆ. ಇದರಲ್ಲಿ ಅಕ್ಕಮಹಾದೇವಿಯ ೩೫೪, ಅಕ್ಕಮ್ಮನ ೧೫೩, ಅಮುಗೆ ರಾಯಮ್ಮ ೧೧೫, ಆಯ್ದಕ್ಕಿ ಲಕ್ಕಮ್ಮ ೨೫, ಕಾಳವ್ವೆ ೧೩, ಮಸಣಮ್ಮ ೧, ಕದಿರಕಾಯಕದ ಕಾಳವ್ವೆ, ಕದಿರ ರಾಮವ್ವೆ ೪, ಕನ್ನಡಿ ಕಾಯಕದ ರೇವಮ್ಮ ೧, ರೇಚವ್ವೆ ೧, ಕಾಲಕಣ್ಣಿಯ ಕಾಮ ೧, ಲಕ್ಷ್ಮಮ್ಮ ೧, ಕೊಟ್ಟಣದ ಸೋಮ ೧, ಗಂಗಾಂಬಿಕೆ ೯, ಗಜೇಶಮಸಣಯ್ಯ ಪುಣ್ಯಸ್ತ್ರೀ ೯, ಕೇತಲದೇವಿ ೨, ಗೊಗ್ಗವ್ವೆ ೬, ವೀರಮ್ಮ ೫, ದುಗ್ಗಳೆ ೨, ನಾಗಲಾಂಬಿಕೆ ೧೫, ನೀಲಮ್ಮ ೧೨, ಗುಡ್ಡವ್ವೆ ೧, ಬಾಚಿಕಾಯಕದ ಬಸವಯ್ಯ ಪುಣ್ಯಸ್ತ್ರೀ ಕಾಳವ್ವೆ ೨, ಬೊಂತಾದೇವಿ ೫, ಮುಕ್ತಾಯಕ್ಕ ೩೭, ಮೋಳಿಗೆ ಮಹಾದೇವಿ ೬೯, ರಾಯಮ್ಮ

೧, ರೇಕಮ್ಮ ೧, ಸತ್ಯಕ್ಕ ೨೯, ಸಿದ್ಧಬುದ್ಧಯ್ಯಗಳ ಪುಣ್ಯಸ್ತ್ರೀ ಕಾಳವ್ವೆ ೧, ಸೂಳೆ ಸಂಕವ್ವೆ ೧, ಹಡಪದ ರಂಗಮ್ಮ ೧೧೩, ಹಾದರ ಕಾಯಕದ ಮಾರಯ್ಯಗಳ ಪುಣ್ಯಸ್ತ್ರೀ ಗಂಗಮ್ಮ ೧ ವಚನಗಳನ್ನು ಅನುವಾದ ಮಾಡಿದ್ದಾರೆ.

ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳಿ ಮೂರುಸಾವಿರ ಮಠ ಹುಬ್ಬಳ್ಳಿ ಇವರಿಂದ ೧೯೮೮ರಲ್ಲಿ ಎಸ್.ಅನಂತನಾರಾಯಣರ Thus sang the veerasaiva mycties ಮಾಲಿಕೆಯಲ್ಲಿ ೫ ಸಂಚಿಕೆಗಳು ಬಂದಿವೆ. ೧೯೮೮ರಲ್ಲಿ ಅಲ್ಲಮಪ್ರಭು ಮತ್ತು ಬಸವಣ್ಣ ೧೯೯೦ರಲ್ಲಿ ಅಕ್ಕಮಹಾದೇವಿ, ಸಿದ್ಧರಾಮ ಮತ್ತು ಚೆನ್ನಬಸವಣ್ಣ ಇವರ ೬೩ ವಚನಗಳು ಅನುವಾದಗೊಂಡಿವೆ. ಹಿರೇಮಲ್ಲೂರು ಈಶ್ವರನ್ ಅವರ 'Speaking of Basava, Lingayat Religion and Culture in South Asia' ಎನ್ನುವ ವಚನಗಳ ಅನುವಾದ ಕೃತಿಯು ೧೯೯೨ರಲ್ಲಿ ಕೊಲರ್ಯಾಡೊದ ವೆಸ್ಟ್‌ವಿವ್ ಪ್ರೆಸ್ಸಿನಿಂದ ಪ್ರಕಟಗೊಂಡಿದೆ. ಇದರಲ್ಲಿ ಬಸವಣ್ಣನ ೯೨, ಅಕ್ಕಮಹಾದೇವಿಯ ೨೧, ಅಲ್ಲಮನ ೫೮, ಸಿದ್ಧರಾಮನ ೨೯, ಚೆನ್ನಬಸವಣ್ಣನ ೪೪ ವಚನಗಳನ್ನು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಈ ಕೃತಿಯ ಉದ್ದೇಶದ ಬಗ್ಗೆ ಸಮರ್ಥಿಸಿಕೊಳ್ಳುತ್ತ "The Primary objective of this Volume is to describe, analyize and interpret the life and work of on of the most illustrious sons of peninsular India South of the Vindhyas, who established an original religious system with its own distinctive Social ideals, institutional infrastrueture"[೧೧] ಎಂದು ಹೇಳಿದ್ದಾರೆ. ಇದರಲ್ಲಿ ೧೨ನೇ ಶತಮಾನದಿಂದ ಇಂದಿನವರೆಗಿನ ಲಿಂಗಾಯತ ಧರ್ಮದ ಆಚಾರ-ವಿಚಾರಗಳನ್ನು ತಿಳಿಸಿದ್ದಾರೆ.

'Vacanas of Davara Dasimayya' ಎಂಬ ಕೃತಿಯನ್ನು ೧೯೯೬ರಲ್ಲಿ ಚಂದ್ರಶೇಖರಯ್ಯನವರು ಮೈಸೂರು ಸುತ್ತೂರು ಮಠದ ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಪ್ರಕಟಿಸಿದ್ದಾರೆ. ಇದರಲ್ಲಿ ದೇವರದಾಸಿಮಯ್ಯನವರ ಪರಿಚಯದೊಂದಿಗೆ ಅವರ ೧೫೬ ವಚನಗಳನ್ನು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. 'Divinity and Deviance, Women in veerashaivism' ಎಂಬ ಕೃತಿಯನ್ನು 'ವಿಜಯ ರಾಮಸ್ವಾಮಿ' ಅವರು ೧೯೯೬ರಲ್ಲಿ ಪ್ರಕಟಿಸಿದ್ದಾರೆ. "ಇದು ಮಹಿಳಾ ವಚನಕಾರ್ತಿಯರ ವಚನಗಳ ಬಗೆಗೆ ಬಂದ ಸಂಶೋಧನಾತ್ಮಕ ಪ್ರಬಂಧದ ಪುಸ್ತಕವಾಗಿದೆ. ಎ.ಕೆ.ರಾಮಾನುಜನ್, ಕೆ.ಈಶ್ವರನ್, ಜೈಲೆಬಿಲ್, ಮೆನೆಜಿಸ್ ಮತ್ತು ಭೂಸನೂರಮಠ ಅವರ ವಚನಗಳ ಅನುವಾದಗಳನ್ನು ಸಂದರ್ಭಕ್ಕನುಸಾರವಾಗಿ ಮತ್ತು ವ್ಯಾಪಕವಾಗಿ ಬಳಸುವುದಲ್ಲದೆ ಶಿವಶರಣೆಯರ ೭೬ ವಚನಗಳನ್ನು ವಿಜಯಾ ರಾಮಸ್ವಾಮಿ ಅವರು ತಾವೇ ಅನುವಾದ ಮಾಡಿದ್ದಾರೆ."[೧೨]

ಜ್ಞಾನಯೋಗಾಶ್ರಮದ ಶ್ರೀ ಸಿದ್ಧೇಶ್ವರಸ್ವಾಮೀಜಿಯವರು 'Basavas Thirst Divine Grace'ನಲ್ಲಿ ೭೫ ವಚನಗಳನ್ನು ಅನುವಾದಿಸಿದ್ದಾರೆ. ಇದನ್ನು ೧೯೯೨ರಲ್ಲಿ ಮೈಸೂರಿನ ಸಂವಹನ ಪ್ರಕಾಶನದಿಂದ ಪ್ರಕಟಿಸಿದ್ದಾರೆ. ಇದೇ ಕೃತಿಯು 'Devotional Sayings of Basaveshwara' ಹೆಸರಿನಲ್ಲಿ ಮೈಸೂರಿನ ಸುತ್ತೂರು ಮಠದ ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ೧೯೯೫ರಲ್ಲಿ ಮರುಮುದ್ರಣಗೊಂಡಿದೆ. ಹಾಗೆಯೇ ಶ್ರೀ ಸಿದ್ಧೇಶ್ವರ ಸ್ವಾಮೀಜಿಯವರು 'ಸಿದ್ಧರಾಮೇಶ್ವರ ವಚನ ಪ್ರವಚನ' ಕನ್ನಡ ಕೃತಿಯನ್ನು ಜಿ.ಟಿ.ಸಜ್ಜನ ಅವರು 'Commentaries on selected vachanas of siddharameshwara' ಎಂದು ಅನುವಾದಿಸಿದ್ದಾರೆ. ಈ ಕೃತಿಯನ್ನು ೧೯೯೮ರಲ್ಲಿ ವಿಜಾಪುರದ ಶ್ರೀ ಸಿದ್ಧೇಶ್ವರ ಸಂಸ್ಥೆಯು ಪ್ರಕಟಿಸಿದೆ. ಹಾಗೆಯೇ ಶ್ರೀ ಸಿದ್ಧೇಶ್ವರ ಸ್ವಾಮೀಜಿಯವರು 'God world and Soul : Reflections of saintly saying' ಎಂಬ ಕೃತಿಯನ್ನು ೨೦೧೧ರಲ್ಲಿ ಜ್ಞಾನಯೋಗಾಶ್ರಮ ವಿಜಾಪುರದಿಂದ ಪ್ರಕಟಿಸಿದ್ದಾರೆ. ಇದರಲ್ಲಿ ಜೇಡರ ದಾಸಿಮಯ್ಯ ೯, ಚೆನ್ನಬಸವಣ್ಣ ೪, ಬಸವಣ್ಣ ೬, ಅಲ್ಲಮಪ್ರಭು ೧೫, ಷಣ್ಮುಖ ಸ್ವಾಮಿ ೧೦, ಆದಯ್ಯ ೩, ಘಟ್ಟಿವಾಳಯ್ಯ ೨, ಅಕ್ಕಮಹಾದೇವಿ ೨, ಕಾಡಸಿದ್ಧೇಶ್ವರ ೧, ಸಿದ್ಧರಾಮ ೮, ಅಂಬಿಗರ ಚೌಡಯ್ಯ ೨, ಸ್ವತಂತ್ರ ಸಿದ್ಧಲಿಂಗೇಶ್ವರ ೭, ಬೊಂತಾದೇವಿ ೧, ಬಿಬ್ಬಿ ಬಾಚಯ್ಯ ೧, ಮಡಿವಾಳ ಮಾಚಿದೇವ ೧, ಸತ್ಯಕ್ಕ ೧, ಚಂದಿಮರಸ ೩, ಸಕಲೇಶ ಮಾದರಸ ೧, ಉರಿಲಿಂಗ ಪೆದ್ದಿ ೨, ತುರುಗಾಹಿ ರಾಮಣ್ಣ ೧, ಗಣದಾಸಿ ವೀರಣ್ಣ ೧, ಮೆರೆಮಿಂಡದೇವ ೧, ತೋಂಟದ ಸಿದ್ಧಲಿಂಗಯ್ಯ ೧. ಹೀಗೆ ಒಟ್ಟು ೮೧ ವಚನಗಳನ್ನು ಕನ್ನಡದ ಮೂಲರೂಪದ ಜೊತೆಗೆ ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ.

ಪ್ರಭುಶಂಕರ ಮತ್ತು ದಕ್ಷಿಣ ಅಮೆರಿಕದ ಮೆನೆಝುವೆಲ್ಲಾದ ರೊವೆನಾ ಹಿಲ್ಲ ಅವರು 'Naming the Nameless' ಎಂಬ ಅನುವಾದ ಕೃತಿಯನ್ನು ಹೊರತಂದಿದ್ದಾರೆ. ಇದು ೨೦೦೧ರಲ್ಲಿ ಮೈಸೂರಿನ ಸುತ್ತೂರು ಮಠದ ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆಯಿಂದ ಪ್ರಕಟಗೊಂಡಿದೆ. "ಇದು ಪ್ರಭುಶಂಕರ ಅವರ 'ಶರಣರ ನೂರೊಂದು ವಚನಗಳು' ಎಂಬ ಕನ್ನಡ ಕೃತಿಯ ಇಂಗ್ಲಿಷ್ ಅವತರಣಿಕೆಯಾಗಿದೆ. ಇದರಲ್ಲಿ ಅಕ್ಕನ ೨೭, ಅಲ್ಲಮಪ್ರಭುವಿನ ೨೭, ಬಸವಣ್ಣನ ೨೬ ಮತ್ತು ಇತರ ವಚನಕಾರರ ೨೧ ವಚನಗಳಿವೆ. Rowena Hill ಅವರು ಇವೇ ವಚನಗಳನ್ನು ಸ್ಪ್ಯಾನಿಷ್‌ನಲ್ಲೂ ಅನುವಾದಿಸಿದ್ದಾರೆ. ಇದು ಹಿಂದಿ, ಬೆಂಗಾಲಿ, ಒರಿಯಾ ಮಲಯಾಳಂ ಮತ್ತು ಪಂಜಾಬಿ ಭಾಷೆಗಳಿಗೆ ಅನುವಾದಿಸಿದ್ದಾರೆ. ಇದು ಹಿಂದಿ, ಬೆಂಗಾಲಿ, ಒರಿಯಾ, ಮಲಯಾಳಂ ಮತ್ತು ಪಂಜಾಬಿ ಭಾಷೆಗಳಿಗೆ ಅನುವಾದಗೊಂಡಿದೆ ಎಂದು ಮುನ್ನುಡಿಯಲ್ಲಿ ಪ್ರಭುಶಂಕರ ಅವರು ತಿಳಿಸುತ್ತಾರೆ. ಹಾಗಾಗಿ ಈ ಕೃತಿ ಹಲವು ಭಾರತೀಯ ಭಾಷೆಗಳಿಗೆ ಅನುವಾದಗೊಂಡಿರುವುದು ವಿಶೇಷ ಎನಿಸುತ್ತದೆ."[೧೩]

ಬೆಲ್ಜಿಯಂ ದೇಶದ Jean Letschert ಅವರು ಮಾತೆ ಮಹಾದೇವಿ ಅವರೊಂದಿಗೆ Gems of Basavashwara ಎಂಬ ಕೃತಿಯನ್ನು ೨೦೦೧ರಲ್ಲಿ ಬೆಂಗಳೂರಿನ ವಿಶ್ವಕಲ್ಯಾಣ ಮಿಷನ್ ಪ್ರಕಟಿಸಿದೆ. ಇದರಲ್ಲಿ ೩೨ ವಚನಗಳು ಅನುವಾದಗೊಂಡಿವೆ.

ಜಿ.ಬಿ.ಸಜ್ಜನ ಅವರು 'ಸಿದ್ಧಯ್ಯ ಪುರಾಣಿಕ' ಅವರ 'ಅಕ್ಕಮಹಾದೇವಿ' ಕನ್ನಡ ಕೃತಿಯನ್ನು ಇಂಗ್ಲಿಷ್ ಭಾಷೆಗೆ ಅನುವಾದ ಮಾಡಿದ್ದಾರೆ. ಜಿ.ಬಿ.ಸಜ್ಜನ ಅವರು ಈ ಕೃತಿಯಲ್ಲಿನ ೩೫ ವಚನಗಳನ್ನು ಹಾಗೂ ಡೋಣೂರ್‌ಮಠ ಅವರು ಬಸವಣ್ಣನ ೩೨ ವಚನಗಳನ್ನು ಜೋಡಿಸಿ Encorenter with Divinity ಕೃತಿಯನ್ನು ೨೦೦೬ರಲ್ಲಿ ಪ್ರಕಟಿಸುತ್ತಾರೆ. "ಜಿ.ಬಿ.ಸಜ್ಜನ ಅವರು ಅನುವಾದದ ಪ್ರಸ್ತುತತೆಯನ್ನು ಕುರಿತು We are aware of the Fact that ours is not a pioneering effort in translation. Statarts have, before us, turned their hand to this Evangelical work of Spreading the sweetness and light availabale in one language to others ಎಂದು ಪ್ರಾಮಾಣಿಕವಾಗಿ ಹೇಳಿದುದನ್ನು ಗಮನಿಸಬಹುದು"[೧೪] (ಪು.೨೭). 'Allama Prabhu: A Study in philosophy with translations of poems' ಎಂಬ ಕೃತಿಯನ್ನು ಬಸರೂರು ಸುಬ್ಬರಾವ್ ಅವರು ೨೦೦೭ರಲ್ಲಿ ಬೆಂಗಳೂರಿನ ಮಂಗೇಶ ಪ್ರಕಾಶನದಡಿ ಪ್ರಕಟಿಸಿದ್ದಾರೆ. ಇದರಲ್ಲಿ ಅಲ್ಲಮನ ೨೨೨, ಬಸವಣ್ಣ ೨೨ ಮತ್ತು ಇತರ ಶರಣರ ೩೬ ವಚನಗಳನ್ನು ಅನುವಾದಿಸಿದ್ದಾರೆ. ಓ.ಎಲ್.ನಾಗಭೂಷಣಸ್ವಾಮಿ ಅವರ ಸಂಪಾದಕತ್ವದ 'The sign: vachanas of 12th Century' ಎಂಬ ಕೃತಿಯು ೨೦೦೭ರಲ್ಲಿ ಕನ್ನಡ ವಿಶ್ವವಿದ್ಯಾಲಯ ಭಾಷಾಂತರ ವಿಭಾಗದಿಂದ 'Classical Kannada texts in translation series'ನಲ್ಲಿ ಪ್ರಕಟಗೊಂಡ ಕೃತಿಯಾಗಿದೆ. ಇದರಲ್ಲಿ ೬೦ ವಚನಕಾರರ ೪೬೮ ವಚನಗಳಿದ್ದು ಓ.ಎಲ್.ನಾಗಭೂಷಣಸ್ವಾಮಿ, ಲಕ್ಷ್ಮೀ ಚಂದ್ರಶೇಖರ್ ಮತ್ತು ವಿಜಯಾ ಗುತ್ತಲ ಅವರು ಅನುವಾದಿಸಿದ್ದಾರೆ. ಆದಯ್ಯ ೨, ಅಕ್ಕಮಹಾದೇವಿ ೭೮, ಅಲ್ಲಮಪ್ರಭು ೧೦೦, ಅಂಬಿಗರ ಚೌಡಯ್ಯನ ೧೫, ಅಮುಗೆ ರಾಯಮ್ಮ ೪, ಅಂಗಸೋಂಕಿನ ಲಿಂಗತಂದೆ–೧, ಅರಿವಿನ ಮಾರಿತಂದೆ ೫, ಆಯ್ದಕ್ಕಿ ಲಕ್ಕಮ್ಮ ೨, ಆಯ್ದಕ್ಕಿ ಮಾರಯ್ಯ ೧, ಬಹುರೂಪಿ ಚೌಡಯ್ಯ ೩, ಬಾಲಬೊಮ್ಮಣ್ಣ ೧, ಬಸವಣ್ಣ ೧೦೩, ಬೀಕಾರಿ ಭೀಮಯ್ಯ ೧, ಬೋಗಣ್ಣ ೧, ಬಿಬ್ಬಿ ಬಾಚಯ್ಯ ೩, ಚಂದಿಮರಸ ೨, ಚನ್ನಬಸವಣ್ಣ ೧೧, ಢಕ್ಕೆಯ ಬೊಮ್ಮಣ್ಣ ೧, ಡೋಹರ ಕಕ್ಕಯ್ಯ ೧, ಗಜೇಶ ಮಸಣಯ್ಯ ೧೦, ಗೊಗ್ಗವ್ವೆ ೧, ಘಟ್ಟಿವಾಳಯ್ಯ ೧, ಹಡಪದ ಅಪ್ಪಣ್ಣ ೧, ಹಡಪದ ಅಪ್ಪಣ್ಣ ಪುಣ್ಯಸ್ತ್ರೀ ೨, ಹಾವಿನಾಳ ಕಲ್ಲಯ್ಯ ೧, ಹೊಡೆಹುಲ್ಲ ಬಂಕಣ್ಣ ೧, ಜೇಡರ ದಾಸಿಮಯ್ಯ ೨೧, ಕದಿರ ರಾಮವ್ವೆ ೨, ಕೀಲಾರದ ಭೀಮಣ್ಣ ೧, ಕೊಟ್ಟಣದ

ಸೋಮವ್ವೆ ೧, ಕೂಗಿನ ಮಾರಯ್ಯ ೧, ಮಾದಾರ ಚೆನ್ನಯ್ಯ ೧, ಮಾದಾರ ಧೂಳಯ್ಯ ೩, ಮಧುವಯ್ಯ ೧, ಮಡಿವಾಳ ಮಾಚಿದೇವ ೨, ಮೈದುನ ರಾಮಯ್ಯ ೧, ಮಾರೇಶ್ವರೊಡೆಯ ೧, ಮೆರೆಮಿಂಡಯ್ಯ ೩, ಮೋಳಿಗೆ ಮಾರಯ್ಯ ೧೦, ಮುಕ್ತಾಯಕ್ಕ ೪, ನಗೆಯ ಮಾರಿತಂದೆ ೧, ನೀಲಮ್ಮ ೩, ನುಲಿಯ ಚಂದಯ್ಯ ೧, ಪ್ರಸಾದಿ ಭೋಗಣ್ಣ ೧, ರಾಯಸದ ಮಂಚಣ್ಣ ೧, ನಗರದ ಬೊಮ್ಮಣ್ಣ ೨, ಸಕಲೇಶ ಮಾದರಸ ೧೦, ಸಂಗಮೇಶ್ವರ ಅಪ್ಪಣ್ಣ ೨, ಸತ್ಯಕ್ಕ ೧, ಶಿವಲೆಂಕ ಮಂಚಣ್ಣ ೧, ಸಿದ್ಧರಾಮ ೧೦, ಸೊಡ್ಡಳ ಬಾಚರಸ ೩, ಸೂಳೆ ಸಂಕವ್ವೆ ೧, ಸುಂಕದ ಬಂಕಣ್ಣ ೧, ತುರುಗಾಹಿ ರಾಮಣ್ಣ ೩, ಉರಿಲಿಂಗದೇವ ೫, ಉರಲಿಂಗ ಪೆದ್ದಿ ೨, ಉರಿಲಿಂಗ ಪೆದ್ದಿಯ ಪುಣ್ಯಸ್ತ್ರೀ ಕಾಳವ್ವೆ ೧, ವಚನ ಭಾಂಡಾರಿ ಶಾಂತರಸ ೩, ವೀರಗೊಲ್ಲಾಳ ೨. ಹೀಗೆ ಒಟ್ಟು ೪೬೮ ವಚನಗಳನ್ನು ಅನುವಾದಿಸಿದ್ದಾರೆ.

ವೆಂಕಟರೆಡ್ಡಿ ದೇಸಾಯಿ ಅವರು 'Three critical Essays and a few vachanas of Basavanna and Akkamahadevi' ಕೃತಿಯನ್ನು ೨೦೦೯ರಲ್ಲಿ ಪ್ರಕಟಿಸಿದರು. ಇದರಲ್ಲಿ ೧೯ ಬಸವಣ್ಣನ ಮತ್ತು ೫ ಅಕ್ಕಮಹಾದೇವಿಯ ವಚನಗಳನ್ನು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ೧೯೮೬ರಂದು ಫ್ರೆಂಚ್‌ನಲ್ಲಿ ಪ್ರಕಟಿಸಿದ 'Parole de Basava' ಕೃತಿಯ ೧೦೧ ವಚನಗಳನ್ನು ಆಚಾರ್ಯ ಅವರು ಮತ್ತೆ ಪರಿಷ್ಕರಿಸಿ ೨೦೦೯ರಲ್ಲಿ ಕನ್ನಡದ ವಚನಗಳೊಂದಿಗೆ ಇಂಗ್ಲಿಷ್ ಭಾಷೆಯಲ್ಲಿ ಅನುವಾದಿಸಿದ್ದಾರೆ.

ಜಿ.ಎಸ್.ಆಮೂರ ಅವರು ೨೦೦೮ರಲ್ಲಿ 'Saints and Poets' ಕೃತಿಯನ್ನು ಕಲ್ಕತ್ತದ ರಾಯ್ಟರ್ಸ್ ವರ್ಕ್‌ಶಾಪ್ ಪ್ರಕಾಶನದಿಂದ ಪ್ರಕಟಿಸಿದ್ದಾರೆ. ಇದರಲ್ಲಿ ೧೫ ಬಸವಣ್ಣನ, ೫ ಅಲ್ಲಮಪ್ರಭುವಿನ, ೧ ಅಕ್ಕಮಹಾದೇವಿಯ ವಚನಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದ್ದಾರೆ.

ಬಸವಸಮಿತಿಯಿಂದ ಹಲವಾರು ಅನುವಾದ ಕೃತಿಗಳು ಹೊರಬಂದಿವೆ. ಅವುಗಳನ್ನು ಈ ಕೆಳಗಿನಂತೆ ನೋಡಲಾಗಿದೆ. ಸುಂದರರಾಜ್ ಥಿಯೋಡೋರ್ ಮತ್ತು ದೇವೇಂದ್ರಕುಮಾರ್ ಹಕಾರಿಯವರು ೧೦೮ ವಚನಗಳನ್ನು 'Thus speak Basava : English Renderings of Basava's vachanas' ಎಂದು ಅನುವಾದ ಮಾಡಿದ್ದಾರೆ. ಬಿ.ವಿರೂಪಾಕ್ಷಪ್ಪನವರು 'Allama prabhu, His life and Message' ಎಂಬ ಇಂಗ್ಲಿಷ್ ಅನುವಾದಿತ ಕೃತಿಯನ್ನು ೨೦೦೩ರಲ್ಲಿ ಬೆಂಗಳೂರಿನ ಬಸವಸಮಿತಿಯಿಂದ ಪ್ರಕಟಿಸಿದ್ದಾರೆ. ಇದರಲ್ಲಿ ಅಲ್ಲಮಪ್ರಭುವಿನ ೧೦೮ ವಚನಗಳ ಜೊತೆಗೆ ಅವರ ಜೀವನವನ್ನು ಚಿತ್ರಿಸಿದ್ದಾರೆ. ಬಸವರಾಜು ಮೂರುಶಿಳ್ಳಿನವರ 'Select vacanas of Basavanna' ಎಂಬ ಕೃತಿಯನ್ನು ೨೦೦೫ರಲ್ಲಿ ಗದುಗಿನ ತೋಂಟದಾರ್ಯ ಮಠದ ಲಿಂಗಾಯತ ಅಧ್ಯಯನ ಸಂಸ್ಥೆಯಿಂದ ಪ್ರಕಟಿಸಿದ್ದಾರೆ. ಇದರಲ್ಲಿ ೧೫೮ ಕನ್ನಡ

ವಚನಗಳ ಜೊತೆಗೆ ಇಂಗ್ಲಿಷ್ ಅನುವಾದ ಮಾಡಿದ್ದಾರೆ. ಬಿ.ವಿರೂಪಾಕ್ಷಪ್ಪನವರು ೨೦೦೫ರಲ್ಲಿ 'Selected vachanas of Basavanna and Basavanna The light of the world' ಬೆಂಗಳೂರಿನ ಬಸವಸಮಿತಿಯಿಂದ ಪ್ರಕಟಿಸಿದ್ದಾರೆ. ಮೊದಲ ಕೃತಿಯಲ್ಲಿ ೧೦೮ ವಚನಗಳ ಅನುವಾದವಿದೆ. ಎರಡನೇ ಕೃತಿಯಲ್ಲಿ ೫೬ ವಚನಗಳನ್ನು ಅನುವಾದಿಸುವುದರ ಜೊತೆಗೆ ಬಸವಣ್ಣನವರ ಜೀವನ ಚರಿತ್ರೆಯನ್ನು ನೀಡಿದ್ದಾರೆ. ಹೆಚ್.ಎಸ್.ಶಿವಪ್ರಕಾಶ ಮತ್ತು ಓ.ಎಲ್. ನಾಗಭೂಷಣ ಸ್ವಾಮಿಯವರ Selected vachanas of Saranas ಎಂಬ ಅನುವಾದಿತ ಕೃತಿ ಯನ್ನು ೨೦೦೫ರಲ್ಲಿ ಬೆಂಗಳೂರಿನ ಬಸವಸಮಿತಿಯಿಂದ ಪ್ರಕಟಿಸಿದ್ದಾರೆ. ವಿಜಯಾ ಸುಬ್ಬರಾವ್ ಅವರ ೧೦೮ Selected Vachanas of Akkamahadevi ಎಂಬ ಕೃತಿಯು ೨೦೦೬ರಲ್ಲಿ ಬಸವ ಸಮಿತಿಯಿಂದ ಪ್ರಕಟಗೊಂಡಿದೆ. "ಅದೇ ವರ್ಷ ಜಿ.ವ್ಹಿ.ಜಯರಾಜಶೇಖರ ಅವರು ಆಯ್ಕೆ ಮಾಡಿದ ಅಕ್ಕಮಹಾದೇವಿಯ ವಚನಗಳನ್ನು ವಿಜಯಾ ಸುಬ್ಬರಾಜ ಅವರು ಇಂಗ್ಲಿಷ್‌ಗೆ Akka mahadavi ಹೆಸರಿನಿಂದ ಅನುವಾದಿಸಿದರು. ಮಕ್ಕಳಿಗಾಗಿ ಪ್ರಕಟಿಸಿದ ಶರಣ ಕಥಾಮಂಜರಿ ಮಾಲಿಕೆಯ ಅಕ್ಕನ ಜೀವನಚರಿತ್ರೆಯ ಜೊತೆಗೆ ೫೨ ವಚನಗಳನ್ನು ಅನುವಾದಿಸಿದ್ದು ವಿಶೇಷವಾಗಿದೆ"[೧೫] ಎಂದು ವಚನಗಳನ್ನು ಅನುವಾದಕ್ಕೆ ಆಯ್ಕೆ ಮಾಡಿದ ಬಗೆಯನ್ನು ಹೇಳಿರುವುದನ್ನು ಗಮನಿಸಬಹುದು. ಶ್ರೀಮತಿ ಉಷಾಪಾಲಾಕ್ಷಪ್ಪ ಅವರು ೧೦೮ Gems of Basaveshwara vacanas ಎಂಬ ಕೃತಿಯನ್ನು ರಚಿಸಿದ್ದಾರೆ. ಇದು ಬೆಂಗಳೂರಿನ ಬಸವ ಸಮಿತಿಯಿಂದ ೨೦೦೭ರಲ್ಲಿ ಪ್ರಕಟಗೊಂಡರೆ ಇದರಲ್ಲಿ "ಪೂರ್ವದೇಶಗಳಲ್ಲಿ ನೆಲೆಸಿದ ಕನ್ನಡಿಗರು, ಹಿಂದಿ ಭಾಷಿಕರು, ತಮಿಳರು ಮತ್ತು ಇಂಗ್ಲಿಷ್ ಬಲ್ಲವರಿಗಾಗಿ ವಚನಗಳನ್ನು ಆಯಾ ಭಾಷೆಗಳಲ್ಲಿ ಲಿಪ್ಯಂತರ (Transliteration)ಗೊಳಿಸಿ ಕೊನೆಯಲ್ಲಿ ಇಂಗ್ಲಿಷ್‌ನಲ್ಲಿ ಅನುವಾದ ನೀಡಿದ್ದಾರೆ."[೧೬]

ಇತ್ತೀಚೆಗೆ ಅಂದರೆ ೨೦೧೦ರಲ್ಲಿ ಪಾಟೀಲ ಶಿವಲಿಂಗಪ್ಪ ಶಿವಮೂರ್ತೆಪ್ಪ ಎಂಬುವವರು ವಚನಗಳ ಇಂಗ್ಲಿಷ್ ಅನುವಾದ: ಒಂದು ಅಧ್ಯಯನ(ಬಸವಣ್ಣನವರ ವಚನಗಳನ್ನು ಅನುಲಕ್ಷಿಸಿ) ಎಂಬ ಪಿಎಚ್.ಡಿ ಮಹಾಪ್ರಬಂಧವು ಬಂದಿದೆ. ಇದು ಇದುವರೆಗೆ ಬಸವಣ್ಣನವರ ವಚನಗಳನ್ನು ಅನುವಾದ ಮಾಡಿದ ಇತಿಹಾಸವನ್ನು ಕುರಿತು ಮಾಡಿದ ಅಧ್ಯಯನವಾಗಿದೆ. ಇದನ್ನು ಗಮನಿಸಿದಾಗ ಸಾಕಷ್ಟು ಅನುವಾದಗಳು ಬಸವಣ್ಣನ ವಚನಗಳನ್ನು ಕುರಿತು ಆಗಿವೆ. ಅತಿ ಹೆಚ್ಚಿನ ವಚನಗಳ ಅನುವಾದ ಕಾರ್ಯ ಇಂಗ್ಲೀಷ್ ಭಾಷೆಯಲ್ಲಿ ಆಗಿದೆ. ಆದರೆ ಪ್ರಸ್ತುತ 'ವಚನ' ಎಂಬ ಕೃತಿಯು ಬಸವಯುಗ-ಬಸವೋತ್ತರ ಯುಗದ ೧೭೯ ಶರಣರ, ೩೧ ಶರಣೆಯರ ಹಾಗೂ ೧೩ ಅಜ್ಞಾತ ಶರಣರ ವಚನಗಳನ್ನು ೨೩ ಭಾಷೆಗಳಿಗೆ ಅನುವಾದ ಮಾಡಿರುವುದು ಒಂದು

ವೈಶಿಷ್ಟ್ಯತೆಯೆನ್ನಬಹುದು. ಈ ಯೋಜನೆಯನ್ನು ರೂಪಿಸಿದವರು, ಅನುಷ್ಠಾನಗೊಳಿಸಿದವರು, ಮೂಲ ಪಠ್ಯದ ಸಂಪಾದಕರಾಗಿ ವಚನಗಳನ್ನು ವಿವಿಧ ಆಶಯದ ಹಿನ್ನೆಲೆಯಲ್ಲಿ ಪಠ್ಯ ಸಿದ್ಧಪಡಿಸಿದವರು ಎಂ.ಎಂ.ಕಲಬುರ್ಗಿ ಅವರೇ ಆಗಿದ್ದಾರೆ. ಅವರ ವಚನ ಸಾಹಿತ್ಯದ ಅನೇಕ ಯೋಜನೆಗಳ ಸಾಲಿನಲ್ಲಿ ವಚನ ಭಾಷಾಂತರ ಯೋಜನೆಯನ್ನು ಗುರುತಿಸುವುದು ಪ್ರಮುಖವಾಗಿದೆ.

ಎಂ.ಎಂ.ಕಲಬುರ್ಗಿ ಅವರು ತಮ್ಮ ಆಸಕ್ತಿ ಕ್ಷೇತ್ರವಾದ ವಚನ ಸಾಹಿತ್ಯದಲ್ಲಿ ಸಂಗ್ರಹ, ಸಂಪಾದನೆ ಮತ್ತು ವಿಶ್ಲೇಷಣೆಗೆ ಮಾತ್ರ ತಮ್ಮ ಕಾರ್ಯವನ್ನು ಸೀಮಿತಗೊಳಿಸದೆ ಹಲವು ಯೋಜನೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಮೂಲಕ ವಚನ ಸಾಹಿತ್ಯ ಪ್ರಸಾರ ಹಾಗೂ ಅಧ್ಯಯನಗಳಿಗೆ ಸಾಕಷ್ಟು ಶ್ರಮಿಸಿದರು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಆರ್.ಸಿ.ಹಿರೇಮಠ ಅವರ ಸಮರ್ಥ ಮಾರ್ಗದರ್ಶನದಲ್ಲಿ 'ಸಮಗ್ರ ವಚನ ವಾಙ್ಮಯ ಸಂಶೋಧನಾ ಸಂಸ್ಕರಣ ಪ್ರಕಟಣ ಯೋಜನೆ'ಯ ಮೂಲಕ ಸಹಾಯಕ ಸಂಶೋಧಕರಾಗಿ ಕೆಲಸವನ್ನು ಪೂರೈಸಿದ್ದುದರಿಂದ ಅಪಾರವಾದ ಅನುಭವದಿಂದಾಗಿ ಮುಂದೆ ಹಲವು ಯೋಜನೆಗಳಲ್ಲಿ ಭಾಗಿಯಾಗಿ ಆ ಯೋಜನೆಗಳು ರೂಪುಗೊಳ್ಳಲು ಸಹಾಯಕರಾದರು. ಅಂತಹ ಯೋಜನೆಗಳಲ್ಲಿ 'ವಚನ ಭಾಷಾಂತರ ಯೋಜನೆ'ಯು ಒಂದಾಗಿದೆ. ಸದಾ ಕ್ರಿಯಾಶೀಲರಾದ ಎಂ.ಎಂ.ಕಲಬುರ್ಗಿ ಅವರು 'ಕಾಯಕವೇ ಕೈಲಾಸ' ಎಂಬ ಬಸವಣ್ಣನ ಆದರ್ಶದಲ್ಲಿ ಬಾಳಿ ಬದುಕಿದಂತವರು. "Plan your work, work your plan" ಇದು ನನಗೆ ತುಂಬಾ ಪ್ರಿಯವಾದ ವಾಕ್ಯ. ಇದರ ಆದರ್ಶದಲ್ಲಿ ನಾನು ನಿರ್ದೇಶಕನಾಗಿ ಅನೇಕ ಕಾರ್ಯಗಳನ್ನು ಯೋಚಿಸುತ್ತ, ಯೋಜನೆಗಳನ್ನು ಕಾರ್ಯಗತಗೊಳಿಸುತ್ತ ಬಂದಿದ್ದೇನೆ. ಇವುಗಳಲ್ಲಿ 'ವಚನ ಭಾಷಾಂತರ ಯೋಜನೆಯೂ ಒಂದು. ಬೆಂಗಳೂರಿನ 'ಬಸವಣ ಸಮಿತಿ'ಯು ಬಸವ ಸಂಸ್ಕೃತಿಯ ಶೋಧ, ಅಧ್ಯಯನ, ಪ್ರಸಾರಕಾರ್ಯಗಳ ಮಹತ್ವಪೂರ್ಣ ಕೇಂದ್ರ. ಈ ಕೇಂದ್ರದ ಕೇಂದ್ರ ವ್ಯಕ್ತಿಯಾಗಿರುವ ಶ್ರೀ ಅರವಿಂದ ಜತ್ತಿಯವರು, ಇವರ ಸಹಸದಸ್ಯರ ಕನಸಿನ ಫಲ ಈ 'ವಚನ ಭಾಷಾಂತರ ಯೋಜನೆ'. ಬೈಬಲ್ ಮೊದಲಾದವುಗಳಂತೆ ವಚನಗಳನ್ನು ಬಹುಭಾಷೆಗಳಿಗೆ ಅನುವಾದಗೊಳಿಸ ಬೇಕಾಗಿದ್ದು, ಕೊನೆಯ ಪಕ್ಷ ಭಾರತ ಸರಕಾರ ಮತ್ತು ಕೇಂದ್ರ ಸಾಹಿತ್ಯ ಅಕಾಡೆಮಿಗಳು ಮನ್ನಿಸಿರುವ ೨೩ ಭಾಷೆಗಳಲ್ಲಿ ಇದು ಅವತಾರಗೊಳ್ಳಬೇಕೆಂಬ ಒತ್ತಾಸೆ ಇವರದ್ದಾಗಿದ್ದಿತು. ಹೀಗಾಗಿ ಕರ್ನಾಟಕ ಸರ್ಕಾರದ ಆರ್ಥಿಕ ನೆರವಿನಿಂದ ಬಸವ ಸಮಿತಿಯಲ್ಲಿ ಅಸ್ತಿತ್ವಕ್ಕೆ ಬಂದಿರುವ ಈ ಯೋಜನೆಗೆ ನಾನು ನಿರ್ದೇಶಕನಾಗಿದ್ದು, ಅನೇಕ ಯೋಜನೆಗಳಂತೆ ಇದನ್ನೂ ಪೂರೈಸಿ ಬರಲು ದೇವರು ನನ್ನನ್ನು ಈ ಭೂಮಿಗೆ ಕಳಿಸಿರುವೆನೆಂಬ ವಿನೀತ ಭಾವ ನನ್ನದಾಗಿದೆ" ಎಂದು ತುಂಬಾ ವಿನಮ್ರತೆಯಿಂದ ಹೇಳಿಕೊಂಡಿರುವುದು ಅವರ ವಚನ ಸಾಹಿತ್ಯದ ಅಧ್ಯಯನ ಪ್ರೀತಿಯನ್ನು ತೋರಿಸುತ್ತದೆ.

## ೬.೨. ವಚನ ಭಾಷಾಂತರ ಯೋಜನೆಯ ಉದ್ದೇಶಗಳು

ಎಂ.ಎಂ.ಕಲಬುರ್ಗಿ ಅವರು ಪ್ರಸರಣದ ಹಿನ್ನೆಲೆಯ ಉದ್ದೇಶಗಳನ್ನು ಇಟ್ಟುಕೊಂಡು ಈ ಯೋಜನೆಯನ್ನು ಕೈಗೊಂಡಿದ್ದಾರೆ. ಆ ಯೋಜನೆಗಳೆಂದರೆ,

೧. ಸುಮಾರು ಒಂಬತ್ತು ಶತಮಾನಗಳನ್ನು ಕಳೆದರೂ ಶರಣಸಂಸ್ಕೃತಿ ಪೂರ್ಣ ಪ್ರಮಾಣದಲ್ಲಿ ಬೆಳವಣಿಗೆಯಾಗದಿರುವುದನ್ನು ಗಮನಿಸಿ ವಾಸ್ತವವನ್ನು ಪರಿವರ್ತಿಸಬೇಕಾದರೆ ವಚನಗಳು ಅನೇಕ ಭಾಷೆಗಳಿಗೆ ಅನುವಾದಗೊಳ್ಳಬೇಕೆಂಬ ಸದುದ್ದೇಶ.

೨. ಜಗತ್ತಿನಲ್ಲಿ ಬೈಬಲ್, ಭಾರತದಲ್ಲಿ ಭಗವದ್ಗೀತೆ, ಕರ್ನಾಟಕದಲ್ಲಿ ವಚನ ಇವು ಬಹುಜನರನ್ನು ಪ್ರಭಾವಿಸಿದ ಸಾಹಿತ್ಯವೆನಿಸಿವೆ. ಹೀಗಿದ್ದೂ ವಚನಗಳು ಬೈಬಲ್, ಭಗವದ್ಗೀತೆಗಳಂತೆ ಅನುವಾದದ ಮೂಲಕ ಬಹುಜನರನ್ನು ತಲುಪಲಿಲ್ಲ. ಆದುದರಿಂದ ಈ ಸಾಹಿತ್ಯವನ್ನು ದೊಡ್ಡ ಪ್ರಮಾಣದಲ್ಲಿ ಅನುವಾದಿಸುವುದು ಈ ಯೋಜನೆಯ ಉದ್ದೇಶವಾಗಿದೆ.

೩. ಎಂ.ಎಂ.ಕಲಬುರ್ಗಿ ಅವರ ಪ್ರಧಾನ ಸಂಪಾದಕತ್ವದಲ್ಲಿ ಕರ್ನಾಟಕ ಸರ್ಕಾರ ಪ್ರಕಟಿಸಿರುವ 'ಸಮಗ್ರ ವಚನ ಸಂಪುಟ'ಗಳ ಮೂಲಕ ಎಲ್ಲ ಶರಣರ ಎಲ್ಲ ವಚನಗಳು ಬೆಳಕಿಗೆ ಬಂದಿದ್ದು, ಇವುಗಳಿಂದ ೨೫೦೦ ವಚನಗಳನ್ನು ಆಯ್ದು, ಅವುಗಳನ್ನು ಬೇರೆ-ಬೇರೆ ಭಾಷೆಗಳಿಗೆ ಅನುವಾದಿಸುವುದು ಈ ಯೋಜನೆಯ ಉದ್ದೇಶವಾಗಿದೆ.

೪. ೨೫೦೦ ವಚನಗಳನ್ನು ಆಯ್ದುಕೊಂಡು 'ವಚನ' ಎಂಬ ಶೀರ್ಷಿಕೆಯಡಿ ಕೃತಿ ಸಂಪಾದನೆಯನ್ನು ಮಾಡಿದ್ದಾರೆ. ಇದರಲ್ಲಿ ೧೭೯ ಶರಣರು(ಬಸವಯುಗ ಮತ್ತು ಬಸವೋತ್ತರ ಯುಗ), ೩೧ ಶರಣೆಯರು, ೧೩ ಅಜ್ಞಾತ ಶರಣರ ವಚನಗಳು, ತತ್ವ ಆದರ್ಶಗಳು ವಿಶ್ವಮಾನ್ಯತೆಯನ್ನು ಪಡೆಯಬೇಕೆಂಬುದು ಈ ಯೋಜನೆಯ ಪ್ರಮುಖ ಉದ್ದೇಶಗಳಲ್ಲಿ ಒಂದಾಗಿದೆ.

ಹೀಗೆ ಹಲವಾರು ಉದ್ದೇಶಗಳನ್ನು ಇಟ್ಟುಕೊಂಡು ಈ ಯೋಜನೆಯನ್ನು ಕೈಗೊಳ್ಳುವ ಮೂಲಕ ವಚನ ಸಾಹಿತ್ಯವನ್ನು ವಿಶ್ವಮಟ್ಟಕ್ಕೆ ಕೊಂಡೊಯ್ಯುವ ಒಂದು ಪ್ರಯತ್ನವನ್ನು ಮಾಡಿದ್ದಾರೆ.

## ೬.೩. ಯೋಜನೆಯ ಮಾನದಂಡಗಳು

ಎಂ.ಎಂ.ಕಲಬುರ್ಗಿ ಅವರು ಈ ಯೋಜನೆಯನ್ನು ಹಾಕಿಕೊಳ್ಳುವಾಗ ಹಲವು ಮಾನದಂಡಗಳನ್ನು ಹಾಕಿಕೊಂಡಿದ್ದಾರೆ. ಅವುಗಳೆಂದರೆ ಅನುವಾದ ಕಾರ್ಯಕ್ಕೆ ಆಯ್ಕೆ

ಮಾಡಿಕೊಳ್ಳುವ ವಚನಗಳು ವಿಶ್ವಮಾನ್ಯ ತತ್ವಗಳನ್ನೊಳಗೊಂಡಿರಬೇಕು. ಗುರು, ಲಿಂಗ, ಜಂಗಮ, ಕಾಯಕ, ದಾಸೋಹಗಳಂತ ಲಿಂಗಾಯತದ ಮುಖ್ಯ ತತ್ವಗಳನ್ನೊಳಗೊಂಡ ವಚನಗಳಿಗೂ ಇಲ್ಲಿ ಅವಕಾಶವಿರಬೇಕು. ಸಾಮಾನ್ಯವಾಗಿ ಎಲ್ಲ ವಚನಗಳು ಸಾಹಿತ್ಯಿಕವಾಗಿರಬೇಕು. ಎಲ್ಲ ಶರಣರ ವಚನಗಳಿಗೂ ಪ್ರಾತಿನಿಧ್ಯ ಸಿಗಬೇಕು. ಇವು ಅನುವಾದಕ್ಕೆ ಬಹುಮಟ್ಟಿಗೆ ಸುಲಭವಾಗಿರಬೇಕು. ಇವೇ ಮೊದಲಾದ ಮಾನದಂಡಗಳ ಆದರ್ಶದಲ್ಲಿ ಈ ವಚನಗಳನ್ನು ಆಯ್ದುಕೊಳ್ಳಲಾಗಿದೆ ಎಂದಿದ್ದಾರೆ. "ಧರ್ಮಗ್ರಂಥದ ದೃಷ್ಟಿಯಿಂದ ಕ್ರೈಸ್ತರದು ಬೈಬಲ್, ಇಸ್ಲಾಂ ಧರ್ಮೀಯರದು ಕುರಾನ್, ವೈದಿಕರದು ವೇದ, ಇದೇ ರೀತಿ ಲಿಂಗಾಯತರದು ವಚನ. ಹೀಗಾಗಿ ಈ ಕೃತಿಯನ್ನು ನಾವು 'ವಚನ'ವೆಂದು ಕರೆದಿದ್ದೇವೆ"[೧೮] ಎಂದು ಅನುವಾದಕ್ಕೆ ಸಿದ್ಧಪಡಿಸಿದ ಕನ್ನಡ ವಚನ ಪಠ್ಯವನ್ನು ಕುರಿತು ಹೇಳಿದ್ದಾರೆ.

### ೬.೪. ವಚನ ಭಾಷಾಂತರ ಯೋಜನೆಯ ಮೂರ್ತ ತಯಾರಿಕೆ

#### ೬.೪.೧. ಮೂಲ ವಚನ ಪಠ್ಯ ಸಿದ್ಧತೆ

ಭಾರತದ ಮತ್ತು ವಿದೇಶಿ ಬಹುಭಾಷಾ ಅನುವಾದ ಯೋಜನೆಗಾಗಿ ಶಿವಶರಣರ ಲೋಕೋತ್ತರ ಸಂದೇಶಗಳನ್ನು ಸಾರುವ ೨೫೦೦ ವಚನಗಳನ್ನು ವಚನ ಪಠ್ಯವನ್ನಾಗಿ ರೂಪಿಸಿದ ಕೃತಿ ಇದಾಗಿದೆ. ಈ ಕೃತಿಗೆ ೨೫ ಪುಟಗಳ ಪ್ರಸ್ತಾವನೆಯನ್ನು ಬರೆದಿರುವ ಕಲಬುರ್ಗಿ ಅವರ ವಚನವೆನ್ನುವುದು ವೇದ, ಬೈಬಲ್, ಖುರಾನ್‌ಗಳಂತೆ ಪವಿತ್ರ ಸಾಹಿತ್ಯವಾಗಿದೆ. ಹೀಗಾಗಿ ವಚನಗಳಿಗೆ ಶಾಸ್ತ್ರ ಚೌಕಟ್ಟನ್ನು ಕೊಟ್ಟು ಧಾರ್ಮಿಕ ಗ್ರಂಥದ ಮರ್ಯಾದೆಯನ್ನು ಮುಂದಿನವರು ತಂದುಕೊಟ್ಟರು. ಅಂದರೆ ಹಳೆಯ ವಚನಗಳನ್ನು ಬಳಸಿಕೊಂಡರೂ ಅವುಗಳಿಗೆ ಹೊಸ ಸಂಕಲನ ಮತ್ತು ಶಾಸ್ತ್ರಗಳನ್ನು ರಚಿಸುತ್ತ ಬರುವುದರ ಮೂಲಕ ಫ.ಗು.ಹಳಕಟ್ಟಿಯಂತಹ ವಿದ್ವಾಂಸರು 'ವಚನ ಶಾಸ್ತ್ರಕಾರ' ಎಂಬ ವಿಶಿಷ್ಟ ಕೃತಿಯನ್ನು ರಚಿಸಿದರು. ಹೀಗಾಗಿ ಈ ವಚನಶಾಸ್ತ್ರಸಾರ ಜಗತ್ತಿನ ಬೇರೆ ಬೇರೆ ಧಾರ್ಮಿಕ ಪಂಥಗಳ ಸಿದ್ಧಾಂತಗಳಿಗೆ; ಸಾರಗಳಿಗೆ ಕಡಿಮೆಯಲ್ಲ ಎಂಬುದನ್ನು ನಿರೂಪಿಸುವುದರ ಕಡೆಗೆ ಎಂ.ಎಂ.ಕಲಬುರ್ಗಿ ಅವರ ಗಮನ ಸೆಳೆದಿದೆ. ಹೀಗಾಗಿ ಸಮಗ್ರ ವಚನ ಸಾಹಿತ್ಯ ಸಂಪುಟಗಳ ಯೋಜನೆಯನ್ನು ಪೂರೈಸಿದ ಎಂ.ಎಂ.ಕಲಬುರ್ಗಿ ಅವರು ಕನ್ನಡೇತರ ಮತ್ತು ಭಾರತೀಯೇತರ ಭಾಷೆಗಳಿಗೆ ವಚನಗಳನ್ನು ಪ್ರಸರಿಸುವ, ಪರಿಚಯಿಸುವ ದೃಷ್ಟಿಯಿಂದ ವಚನ ಭಾಷಾಂತರ ಯೋಜನೆಯನ್ನು ರೂಪಿಸಿಕೊಟ್ಟರು. ಈ ಯೋಜನೆಯ ಅನುಷ್ಠಾನದಲ್ಲಿ ಅಥವಾ ವಚನ ಪಠ್ಯವನ್ನು ರೂಪಿಸುವ ಸಂದರ್ಭದಲ್ಲಿ ಎದುರಾದ ಸಮಸ್ಯೆಗಳನ್ನು ಪ್ರಸ್ತಾವನೆಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ. "ಎಲ್ಲ ಶರಣರ ಎಲ್ಲ

ವಚನಗಳನ್ನು ಅನುವಾದಿಸುವುದು ಸುಲಭವೂ ಅಲ್ಲ, ಸೂಕ್ತವೂ ಅಲ್ಲ. ೧೨ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಸೃಷ್ಟಿಯಾಗುತ್ತ ಬಂದ ಒಟ್ಟು ೨೧ ಸಾವಿರ ವಚನ ನಿಧಿಯಿಂದ ವಿಶ್ವಮಾನ್ಯ ವಚನಗಳನ್ನು ಅನುವಾದಕ್ಕೆ ಆಯ್ದುಕೊಳ್ಳುವುದೇ ಸರಿಯಾದ ಕ್ರಮವಾಗಿದೆ. ಹೀಗಾಗಿ ಈ ಕೆಲಸಕ್ಕೆ ಒಂದಿಷ್ಟು ಲಿಂಗಾಯತ ಸಿದ್ಧಾಂತಮುಖಿ ವಚನಗಳೊಂದಿಗೆ ಬಹುಸಂಖ್ಯೆ ಲೋಕನೀತಿಮುಖಿ, ಸಮಾಜಮುಖಿ, ಸಮೃದ್ಧ ಸಮಾಜಮುಖಿ ವಚನಗಳನ್ನು ಆಯ್ದುಕೊಳ್ಳಬೇಕೆಂಬ, ಇವೆಲ್ಲ ಬಹುಮಟ್ಟಿಗೆ ಸಾಹಿತ್ಯಮುಖಿ ಆಗಬೇಕೆಂಬ ಮಾನದಂಡವನ್ನು ನಾವು ಇಟ್ಟುಕೊಂಡಿದ್ದೇವೆ. ಈ ಧೋರಣೆಗೆ ಅನುಗುಣವಾಗಿ ಆಯ್ಕೆಗೆ ತೊಡಗುವಲ್ಲಿ ೩೦೦೦ ವಚನಗಳು ನಮ್ಮ ಕೈಗೆ ಬಂದವು. ಇವುಗಳಲ್ಲಿ ಸಾಹಿತ್ಯ ದೃಷ್ಟಿಯಿಂದ ಸುಂದರವಾಗಿದ್ದರೂ ವಿಷಯ ದೃಷ್ಟಿಯಿಂದ ಅಸ್ಪಷ್ಟ ಮತ್ತು ಅನುವಾದ ದೃಷ್ಟಿಯಿಂದ ಜಟಿಲವೆನಿಸಿದವುಗಳನ್ನು ಕೈಬಿಡುವಲ್ಲಿ ಬಹಳಷ್ಟು ವಚನಗಳ ಜೊತೆಗೆ ಕೆಲವು ವಚನಕಾರರು ಹೊರಗುಳಿಯಬೇಕಾಯಿತು. ಇದಲ್ಲದೆ, ಉತ್ತರದ ಜೊತೆಗಿದ್ದರೆ ಮಾತ್ರ ಸರಿಯಾದ ಅರ್ಥ ಕೊಡುವ ಪ್ರಶ್ನೆ ರೂಪದ 'ಸಿಡಿಲೊಡನೆ ಕಾದುವಾತಂಗೆ ಕೊಡೆಯೇನಕಯ್ಯಾ?' ಎಂಬಂಥ ಸುಂದರ ವಚನಗಳನ್ನೂ ನಾವು ಕೈಬಿಡಬೇಕಾಯಿತು. ಇಂಥ ನಿಷ್ಠುರ ಮಾನದಂಡ ಕಾರಣವಾಗಿ ೧೨೯ ಜನ ಶರಣರ, ಹೀಗೆ ಒಟ್ಟು ೧೭೩ ಜನರ ೨೫೦೦ ವಚನಗಳು ಇಲ್ಲಿ ಸಂಗ್ರಹ ಗೊಂಡಿವೆ."[೧೯]

ಮೂಲಪಠ್ಯವನ್ನು ಸಿದ್ಧಪಡಿಸುವಾಗ ಪಾಠನಿರ್ಣಯ ಮತ್ತು ಅರ್ಥನಿರ್ಣಯಗಳೆಂಬ ಎರಡು ಸಮಸ್ಯೆಗಳನ್ನು ಬಿಡಿಸಿಕೊಳ್ಳುವುದು ತುಂಬಾ ಮುಖ್ಯವಾದ ಕಾರ್ಯ. ಕಳೆದ ೧೦೦ ವರ್ಷಗಳ ಅವಧಿಯಲ್ಲಿ ವಚನಗಳು ಕೈಯಿಂದ ಕೈಗೆ ಸಾಗಿಬರುವಲ್ಲಿ ಅನೇಕ ರೂಪಾಂತರಗಳು ಉಂಟಾಗಿರುವ ಸಾಧ್ಯತೆಗಳಿವೆ. ಇಂತಹ ಪಾಠದೋಷಗಳನ್ನು 'ಸಮಗ್ರ ವಚನ ಸಂಪುಟ' ಸಿದ್ಧಗೊಳಿಸುವಲ್ಲಿ ಅಲ್ಲಿ ಕಂಡುಬರುವ ಸ್ಖಾಲಿತ್ಯದೋಷಗಳನ್ನು ನಿವಾರಿಸಿ ೧೫ ಸಂಪುಟಗಳನ್ನು ಹೊರತಂದಿದ್ದಾರೆ. ಈ ರೀತಿ ಪಾಠಪರಿಷ್ಕರಣೆ ಮಾಡಿದ್ದರೂ 'ವಚನ' ಕೃತಿ ಸಿದ್ಧಪಡಿಸುವಲ್ಲಿ ವಚನಗಳನ್ನು ಆಯ್ಕೆ ಮಾಡಿಕೊಳ್ಳುವ ಸಂದರ್ಭದಲ್ಲಿ ಹಲವು ದೋಷಗಳು ಇರುವುದನ್ನು ಎಂ.ಎಂ.ಕಲಬುರ್ಗಿ ಅವರು ಗುರುತಿಸಿ, ಸರಿ ಮಾಡಲು ಪ್ರಯತ್ನಿಸಿದ್ದಾರೆ. ಆ ಸಂದರ್ಭದಲ್ಲಿ ಎದುರಾದ ಸಮಸ್ಯೆಗಳನ್ನು ಪಾಠದೋಷಗಳು ಹಾಗೂ ಅರ್ಥದೋಷಗಳು ಎಂದು ವಿಭಾಗಿಸಿ ಕೊಂಡಿದ್ದಾರೆ.

ಪಾಠನಿರ್ಣಯ: ಪಾಠದೋಷಗಳನ್ನು ಸರಿಪಡಿಸಿರುವುದನ್ನು ಕೆಲವು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸಿದ್ದಾರೆ.

ಉದಾ: ಅರಿ(ವ)ನರಿತವ ಕೆಡಿಸಿತ್ತು ಬಡತನವೆಂಬ ರಾಹು,

ಉಳ್ಳವನ ಉಳುವೆಯ ಕೆಡಿಸಿತ್ತು ಮೋಹವೆಂಬ ರಾಹು,

ಕಾಬವನ(ಕಾಣ್ಕೆ)ಯ ಕೆಡಿಸಿತ್ತು ಕಾಮವೆಂಬ ಕತ್ತಲೆ,

ಎನ್ನ ಮನದ ಭಯಕ್ಕಂಜಿ ನಿಮ್ಮ ಮೊರೆಹೊಕ್ಕೆ

ಕೂಡಲಸಂಗಮದೇವಾ."[೨೦]

ಈ ಮೇಲಿನ ವಚನದಲ್ಲಿ ಕಾಬವನ ಕಾಣಿಕೆಯ ಕೆಡಿಸಿತ್ತು>ಕಾಣ್ಕೆಯ ಎಂದು ಪಾಠ ಪರಿಷ್ಕರಣ ಮಾಡಿರುವುದನ್ನು ಗಮನಿಸಬಹುದು.

ಇದೇ ರೀತಿ ಕೆಲವು ಉದಾಹರಣೆಗಳನ್ನು ನೋಡುವುದಾದರೆ. ಉದಾ:

* "ಚರಿಸುವ ಚರನಿಗೆ ಚರ್ಚೆಯೇ ಭೂಷಣ > ಚರ್ಯೆಯೇ.

* ಅಯ್ಯಾ ಕರುಣ ಕಂಬನಿಯ ದೆಸೆಗೆಟ್ಟು ವಾರುಧಿಯೊಳಗೆ > ಅಯ್ಯಾಕರುಣಿ.

* ಕರುಣ ಕಾನನದೊಳಗಾನು ಹೊಲಬುಗೆಟ್ಟನಯ್ಯಾ > ಕರಣ(ಪಂಚೇಂದ್ರಿಯ).

* ಗಂಡುಡಿಗೆಯನುಟ್ಟೆನೆಂಬ ಮಾತಿನ ಬಿರಿದ ನುಂಗಿದೆನು > ನೆಗಹಿದೆನು.

* ಆ ಕಾಯುವ ನಾಯಿ ತಿಂದಡೇನು, ನೀರು ಕುಡಿದಡೇನು > ನೀರುಗೂಡಿದಡೇನು.

* ಎದ್ದಿದ್ದರೆ ಚಕೋರನೆಂಬರು > ಚೋರನೆಂಬರು.

* ಹರಿವ ನದಿಗೆ ತನ್ಮಯವೆಲ್ಲ ಅಡಿ > ತನ್ನ ಮೈಯೆಲ್ಲ ಅಡಿ.

* ರಸಬದ್ದ(ಯೋಗ)ದಂತಿರಬೇಕು > ಲೋಹದಂತಿರಬೇಕು.

* ಕರ್ಕಸದ ವಿದಿ, ರಕ್ಕಸದ ಹೊಳಲು > ವೀಧಿ (=ಬೀದಿ)"[೨೧]

ಈ ರೀತಿಯಾಗಿ ಹಲವು ಪಾಠದೋಷಗಳನ್ನು ತಿದ್ದುವ ಮೂಲಕ ಶುದ್ಧಪಠ್ಯ ಸಿದ್ಧ ಪಡಿಸಿದ್ದಾರೆ.

ಅರ್ಥನಿರ್ಣಯ: ಪಾಠದೋಷ ನಿವಾರಣೆ ಮಾಡಿದ ಬಳಿಕ ಅರ್ಥದೋಷ ನಿವಾರಣೆ ಮಾಡಲು ತೊಡಗಿಕೊಂಡಿದ್ದರು. ಶುದ್ಧಪಾಠದ ಜೊತೆಗೆ ಸರಿಯಾದ ಅರ್ಥ ತಿಳಿದುಕೊಳ್ಳುವುದು ಅಷ್ಟೇ ಮಹತ್ವವಾದ ಅಂಶವಾಗಿದೆ. "ಸರಿಯಾದ ಅರ್ಥ, ಸಿದ್ಧಾಂತ, ಲೌಕಿಕ ಮತ್ತು ಧಾರ್ಮಿಕ ಆಚರಣೆ, ಪುರಾಣ ಕತೆ, ದೇಶಿ ಶಬ್ದಾರ್ಥ, ಸರಿಯಾದ ಅನ್ವಯ, ವಚನಕಾರನ ಆಶಯಗಳತ್ತ

ಗಮನ ಕೊಡಬೇಕಾಗುತ್ತದೆ. ಈ ಸಂದರ್ಭದಲ್ಲಿ ಸ್ವಲ್ಪ ತಪ್ಪಿದರೆ ಇಡೀ ಅರ್ಥವೇ ಹಾಳಾಗುತ್ತದೆ."[೨೨] ಎಂಬ ಜಾಗೃತಿಯ ಹಿನ್ನೆಲೆಯಲ್ಲಿ ಅರ್ಥಕ್ಕೆ ಚ್ಯುತಿ ಬಾರದಂತೆ ಪರಿಷ್ಕರಣ ಕಾರ್ಯದಲ್ಲಿ ತೊಡಗಿಕೊಂಡಿರುವುದನ್ನು ಉದಾಹರಣೆ ಸಹಿತ ವಿವರಿಸಿದ್ದಾರೆ.

ಹರಿವ ಹಾವಿಗಂಜೆ=ಚಲಿಸುವ ಹಾವಿಗೆ ಅಂಜಲಾರೆನು ಎಂದು ಇದರ ಅರ್ಥವಲ್ಲ. ಕಚ್ಚುವ ಹಾವಿಗೆ ಅಂಜಲಾರೆನು ಎಂದು ಇದರ ಅರ್ಥ. ಹಳ್ಳಿಗಳಲ್ಲಿ 'ಕೈಗೆ ಹಾವು ಹರಿಯಲಿ' (=ಕಚ್ಚಲಿ) ಎಂಬ ಬೈಗುಳ ಈಗಲೂ ಬಳಕೆಯಲ್ಲಿದೆ. 'ಬಡ ಹಾರುವನೇಸು ಭಕ್ತನಾದರೂ ನೇಣಿನ ಹಂಗು ಬಿಡ' ಇದನ್ನು ಬಡವ(Poor)ನಾದ ಬ್ರಾಹ್ಮಣನು ಎಂದು ಅನುವಾದಿಸಿದರೆ ಬಡಪಾಯಿ(Pitialale)ಯಾದ ಬ್ರಾಹ್ಮಣನು ಎಂದು ಅನುವಾದಿಸಬೇಕು. ಇದಲ್ಲದೆ, ಗಿಣ್ಣಿಲು=ಗಿಂಡಿ, ಕೊಟ್ಟಣ=ಧಾನ್ಯ ಕುಟ್ಟುವಿಕೆ, ಕಲ್ಲಿ=ಬಲೆ, ಕಾಣಿಕೆಯಾಚೆ=ಪಿತ್ರಾರ್ಜಿತ ಆಸ್ತಿ. ಇಂಥ ದೇಶಿ ಶಬ್ದಗಳ ಪರಿಚಯ ಅನುವಾದಕನಿಗೆ ಅಗತ್ಯವಾಗಿರಬೇಕಾಗುತ್ತದೆ. ಅಷ್ಟೇ ಅಲ್ಲದೆ ಕೂರ್ಮನ ಶಿಶುವಿನ ಸ್ನೇಹ=ಮರಿ ಆಮೆಯು ತಾಯಿ ಆಮೆಯನ್ನು ನೆನೆದರೆ ಸಾಕು. ಅದರ ಹೊಟ್ಟೆ ತುಂಬುವುದೆಂಬ ಜಾನಪದ ನಂಬಿಕೆ ಇತ್ಯಾದಿಗಳು ಗೊತ್ತಿರಬೇಕಾಗುತ್ತದೆ ಎಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ.

"ವಚನಗಳಲ್ಲಿ ಲಿಂಗಾಯತ ಸಿದ್ಧಾಂತದ ಪ್ರವೇಶವು ತೀರ ಸಹಜವಾಗಿ ಕಂಡುಬರುತ್ತದೆ. ದೈವಿಪ್ರಜ್ಞೆಯು ವ್ಯಕ್ತಿಯೊಳಗೆ ಸುಪ್ತವಾಗಿದ್ದು, ಅದು ಸೂಕ್ತ ಕಾಲದಲ್ಲಿ ಪ್ರಕಟಗೊಳ್ಳುತ್ತದೆ."[೨೩] ಇಂತಹ ಸೂಕ್ಷ್ಮ ಜ್ಞಾನದ ಅರಿವು ಅನುವಾದಕನಿಗೆ ಇರಬೇಕು ಎಂಬ ಅಂಶವನ್ನು ಎಂ.ಎಂ. ಕಲಬುರ್ಗಿ ಅವರು ವ್ಯಕ್ತಪಡಿಸುವುದನ್ನು ನಾವು ಗಮನಿಸಬಹುದು. ಈ ವಿಚಾರವನ್ನು ಕೆಳಗಿನ ಉದಾಹರಣೆ ಮೂಲಕ ಸ್ಪಷ್ಟಪಡಿಸಲು ಪ್ರಯತ್ನಿಸಿದ್ದಾರೆ. 'ಕೂಡಲಸಂಗಮದೇವ ಕನ್ಯೆಯ ಸ್ನೇಹದಂತಿದ್ದಿತ್ತು' ಎಂಬ ವಾಕ್ಯ ಪ್ರತಿಪಾದಿಸುತ್ತದೆ. ಇಲ್ಲಿ(ದೈವತ್ವವು ಪಿಂಡದೊಳಗೆ) ಕನ್ಯೆಯ ಗೆಳೆತನ(ಸ್ನೇಹ)ದಂತೆ ಇದ್ದಿತ್ತು ಎಂಬುದಕ್ಕೆ ಬದಲು, ಎಳೆಯ ಕನ್ಯೆಯೊಳಗೆ ಗುಪ್ತವಾಗಿರುವ ಕಾಮ(ಸ್ನೇಹ)ದಂತೆ ಇದ್ದಿತ್ತು ಎಂಬ ಅರ್ಥವನ್ನು ಪರಿಭಾವಿಸಬೇಕು. ಇದಲ್ಲದೇ ವಚನಗಳಲ್ಲಿ ಆಗಾಗ ಲಿಂಗಾಯತ ಪಾರಿಭಾಷಿಕ ಪದಗಳು ಕಾಣಿಸಿಕೊಂಡಿವೆ. ಉದಾ: ಏಕಭಾಜನ ಅಂದರೆ ನಾವು ನನ್ನೊಳಗಿನ ದೈವದೊಂದಿಗೆ ಊಟ ಮಾಡುವುದು. ಅಂದರೆ ದೈವೀಭಾವದಿಂದ ಊಟ ಮಾಡುವುದೆಂದು ಇದರ ಅರ್ಥ. ಇಂಥ ತಾತ್ವಿಕ ಅರ್ಥ ಗೊತ್ತಿಲ್ಲದಿದ್ದರೆ ಅನುವಾದ ವಿಫಲಗೊಳ್ಳುವ ಸಾಧ್ಯತೆ ಇದೆ ಎಂದು ಎಂ.ಎಂ.ಕಲಬುರ್ಗಿ ಅವರು ಉದಾಹರಣೆ ಸಹಿತ ಮನವರಿಕೆ ಮಾಡಿಕೊಟ್ಟಿದ್ದಾರೆ. ಅನುವಾದಕನಾದವನು ವಚನ ಸಾಹಿತ್ಯ ಅನುವಾದ ಮಾಡ ಬೇಕಾದರೆ ಲಿಂಗಾಯತ ಪರಿಭಾಷಾ ತಿಳುವಳಿಕೆ ಇದ್ದರೆ ಅನುವಾದ ಸುಗಮವಾಗಿ ಸಾಗಲು ಸಾಧ್ಯ ಎಂಬ ಅಂಶ ಇಲ್ಲಿ ವ್ಯಕ್ತವಾಗಿದೆ.

* ಸಾಹಿತ್ಯದಲ್ಲಿ ಸಮಕಾಲೀನ ಆಚರಣೆಗಳ ಹಾಗೂ ಧಾರ್ಮಿಕ ಆಚರಣೆಗಳ ಪರಿಚಯ ಅನುವಾದಕನಿಗಿರಬೇಕು. ಆಗ ಅನುವಾದಕ ಸರಿಯಾದ ಅರ್ಥಕ್ಕನುಗುಣವಾಗಿ ಭಾಷಾಂತರಿಸಲು ಸಾಧ್ಯ ಎಂದು ಉದಾಹರಣೆ ಸಮೇತವಾಗಿ ವಿವರಿಸಿದ್ದಾರೆ. ಲೆಂಖ: ಇವನು ಒಡೆಯನಿಗಾಗಿ, ರಾಜನಿಗಾಗಿ ಪ್ರಾಣಾರ್ಪಣೆ ಮಾಡಿಕೊಳ್ಳುವುದಕ್ಕೆ ಬದ್ಧನಾದವನು. ಈ ಆಚರಣೆಯ ಅರ್ಥ ಗೊತ್ತಿಲ್ಲದಿದ್ದರೆ 'ಲೆಂಕ ಕಂಡಾ, ಪ್ರಾಣದಾಸೆ ಮತ್ತೇಕಯ್ಯಾ' ಎಂಬುದನ್ನು ಸರಿಯಾಗಿ ಭಾಷಾಂತರಿಸಲು ಸಾಧ್ಯವಾಗುವುದಿಲ್ಲ. ಅಂದಿನ ಕಾಲದಲ್ಲಿ ದೇವಾಲಯದಲ್ಲಿ ಶಿವಲಿಂಗದ ಎದುರು ಕಣ್ಣು ಪಿಳುಕಿಸದೆ ಕುಳಿತುಕೊಳ್ಳುತ್ತಿದ್ದ ಶಿವಭಕ್ತರನ್ನು 'ದೃಷ್ಟಿವಾರಿ' ಎನ್ನುತ್ತಿದ್ದರು. 'ಹೊತ್ತಾರೆ ಎದ್ದು ಶಿವಲಿಂಗದೇವನ ದೃಷ್ಟಿವಾರಿ ನೋಡದವನ ಸಂಸಾರವೇನವನ?' ಎಂಬುದನ್ನು ಸರಿಯಾಗಿ ಭಾಷಾಂತರಿಸಲು ಧಾರ್ಮಿಕ ಆಚರಣೆಗಳ ಪರಿಚಯ ಅಗತ್ಯವಾಗಿರಬೇಕೆಂದು ತಿಳಿಸಿದ್ದಾರೆ. ಈ ರೀತಿಯ ಸೂಕ್ಷ್ಮಜ್ಞಾನದ ಅರಿವು ಅನುವಾದಕರಿಗಿದ್ದರೆ ಅನುವಾದ ಕಾರ್ಯ ತುಂಬಾ ಸುಲಭವಾಗುತ್ತದೆ. ಹಾಗೆಯೇ ಸ್ಪಷ್ಟತೆಯಿಂದ ಕೂಡಿರುತ್ತದೆ ಎಂಬ ಅಂಶ ಇಲ್ಲಿ ಎದ್ದು ಕಾಣುತ್ತದೆ.

* ಅನುವಾದಕನಿಗೆ ವಚನಗಳಲ್ಲಿ ಕಂಡುಬರುವ ಐತಿಹಾಸಿಕ ಘಟನೆಗಳು ಹಾಗೂ ಪೌರಾಣಿಕ ಘಟನೆಗಳ ತಿಳುವಳಿಕೆ ಇರಬೇಕೆಂದು ಹೇಳಿದ್ದಾರೆ. ಅದಕ್ಕೆ ಉದಾಹರಣೆಗಳನ್ನು ನೀಡಿದ್ದಾರೆ. ಐತಿಹಾಸಿಕ ಘಟನೆಗಳಿಗೆ ಉದಾ– 'ಆಡಿನ ಹಕ್ಕಿ ಲಿಂಗವೆ?', ಪೌರಾಣಿಕ ಘಟನೆಗಳಿಗೆ ಉದಾ– ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹೆವೆಂದು' ಇತ್ಯಾದಿ. ಇವುಗಳ ತಿಳುವಳಿಕೆ ಅನುವಾದಕನಿಗೆ ಇದ್ದಾಗ ಮಾತ್ರ ಅನುವಾದ ಕಾರ್ಯ ಅರ್ಥಬದ್ಧವಾಗಿ ಸಮರ್ಪಕವಾಗಿ ನೆರವೇರಲು ಸಾಧ್ಯ ಎಂದಿದ್ದಾರೆ.

* ವಚನಗಳ ರಚನೆಯ ಸಂದರ್ಭ ಕೂಡ ಮುಖ್ಯವಾದದ್ದು. ಕೆಲವು ಸಂದರ್ಭಕ್ಕೆ ತಕ್ಕಂತೆ ರಚನೆಯಾಗಿರುತ್ತದೆ. ಆ ಸಂದರ್ಭಗಳ ಸ್ಪಷ್ಟತೆಯ ಅರಿವನ್ನು ಗ್ರಹಿಸುವ ಸಾಮರ್ಥ್ಯ ಅನುವಾದಕನಿಗೆ ಇದ್ದಾಗ ಅನುವಾದ ಸುಗಮವಾಗಿ ಸಾಗುತ್ತದೆ. ಅದಕ್ಕೆ ಎಂ.ಎಂ.ಕಲಬುರ್ಗಿ ಅವರು ಉದಾಹರಣೆಯನ್ನು ನೀಡುವ ಮೂಲಕ ಸ್ಪಷ್ಟಪಡಿಸಿದ್ದಾರೆ.

"ಉದಾ: ಅಲ್ಲಮನ ಎತ್ತಣ ಮಾಮರ, ಎತ್ತಣ ಕೋಗಿಲೆ, ಎತ್ತಣಿಂದೆತ್ತ ಸಂಬಂಧವಯ್ಯಾ?" ಎಂಬ ವಾಕ್ಯವನ್ನು ಸಾಮಾನ್ಯವಾಗಿ ಪ್ರಶ್ನಾರ್ಥಕವಾಗಿ ಪರಿಭಾವಿಸುತ್ತಾರೆ. ಆದರೆ ಗುಹೆಯಲ್ಲಿಯ ಅಸ್ಥಿಪಂಜರ ರೂಪದ ಅನಿಮಿಷನ ಹಸ್ತದಿಂದ ಲಿಂಗ ಎತ್ತಿಕೊಳ್ಳುತ್ತಲೇ ಅಲ್ಲಮನಲ್ಲಿ ಜ್ಞಾನ ಸಂಚಾರವಾಗುತ್ತದೆ. ಈ ಸಂದರ್ಭದಲ್ಲಿ ಚಕಿತನಾಗಿ ಅವನು ನುಡಿದ ಈ ವಾಕ್ಯವನ್ನು 'ಎತ್ತಣ ಮಾಮರ, ಎತ್ತಣ ಕೋಗಿಲೆ, ಎತ್ತಣಿಂದೆತ್ತ ಸಂಬಂಧವಯ್ಯಾ!' ಎಂದು ಆಶ್ಚರ್ಯನಿಷ್ಠ ಅರ್ಥದಲ್ಲಿ ಅನುವಾದಿಸಬೇಕು"[೨೪] ಎಂದಿದ್ದಾರೆ.

* ವಚನದಲ್ಲಿ 'ಮಾತಿನ ಲಯ'ದ ವಾಕ್ಯವನ್ನು 'ವಾಚನ ಲಯ'ದಿಂದ ಗ್ರಹಿಸಿದರೆ ಅರ್ಥ ವ್ಯತ್ಯಾಸವಾಗುತ್ತದೆ. ಇದನ್ನು ಅನುವಾದಕನಾದವನು ಗಮನದಲ್ಲಿಟ್ಟುಕೊಳ್ಳಬೇಕಾದ ಅಂಶ. "ಉದಾ: 'ನಿಮ್ಮ ಶರಣರಿಗಲ್ಲದೆ ಕಡಬಡ್ಡಿಯ ಕೊಡಲಾಗದು' ಎಂಬ ವಾಕ್ಯವನ್ನು ವಾಚನ ಲಯದಿಂದ ಗ್ರಹಿಸಿದರೆ(ಹಣವನ್ನು) ನಿಮ್ಮ ಶರಣರಿಗೆ ಮಾತ್ರ ಕಡಬಡ್ಡಿ ಕೊಡಬೇಕು, ಬೇರೆಯವರಿಗೆ ಕಡಬಡ್ಡಿ ಕೊಡಲಾಗದು ಎಂಬ ತಪ್ಪು ಅರ್ಥ ಹೊರಡುತ್ತದೆ. ಆದರೆ ಇದನ್ನು ನಿಮ್ಮ ಶರಣರಿಗಲ್ಲದೆ, ಕಡಬಡ್ಡಿಯ ಕೊಡಲಾಗದು ಎಂದು ಮಧ್ಯದಲ್ಲಿ ತಡೆದು ಮಾತಿನ ಲಯದಲ್ಲಿ ಉಚ್ಚರಿಸಿದರೆ, (ಹಣವನ್ನು) ನಿಮ್ಮ ಶರಣರಿಗೆ ಕೊಡಬಹುದಲ್ಲದೆ, ಕಡಬಡ್ಡಿಗಾಗಿ ಬಳಸಬಾರದು ಎಂಬ ನಿಜ ಅರ್ಥ ಹೊರಡುತ್ತದೆ. ಇದೇ ರೀತಿ 'ಹೊಲತಿ ಲಿಂಗವ ಪೂಜಿಸಲಾಗದು' ಎಂದು ವಾಚನ ಲಯದಿಂದ ಓದಿದರೆ ರಜಸ್ವಲೆ ಲಿಂಗವನ್ನು ಪೂಜಿಸಬಾರದು ಎಂಬ ತಪ್ಪು ಅರ್ಥ ವ್ಯಕ್ತವಾಗುತ್ತದೆ. ಇದನ್ನೇ ಮಾತಿನ ಲಯದಿಂದ 'ಹೊಲತಿ ಲಿಂಗವ ಪೂಜಿಸಲಾಗದು?' ಎಂದು ಪ್ರಶ್ನಾರ್ಥಕವಾಗಿಸಿದರೆ, ರಜಸ್ವಲೆ ಲಿಂಗವನ್ನು ಪೂಜಿಸಬಹುದು ಎಂಬ ನಿಜ ಅರ್ಥ ಮೂಡಿಬರುತ್ತದೆ."[೨೫] ಇಲ್ಲಿ ಮುಖ್ಯವಾಗಿ ಅನುವಾದಕ ಗಮನಿಸಬೇಕಾದ ಮುಖ್ಯ ಅಂಶ ಗ್ರಹಿಕೆಯಿಂದ ವಿವಿಧ ಅರ್ಥ ಒದಗಿಬರುತ್ತದೆ. ವಾಚನಾಲಯದಿಂದ ಉಚ್ಚರಿಸಿದರೆ ಇಡೀ ಅರ್ಥವೇ ತಿರುಗು ಮುರುಗಾಗುವ ಸಾಧ್ಯತೆ ಇದೆ. ಹಾಗಾಗಿ ಇಲ್ಲಿ ಅನುವಾದಕನಾದವನು 'ಮಾತಿನ ಲಯ'ವನ್ನು ಗ್ರಹಿಸುವ ಸಾಮರ್ಥ್ಯದಿಂದ ಉತ್ತಮ ಅರ್ಥ ಪ್ರಾಪ್ತಿಯಾಗುವುದು ಎಂದು ಎಂ.ಎಂ.ಕಲಬುರ್ಗಿ ಅವರು ತಿಳಿಸಿದ್ದಾರೆ.

* ಆಡುಮಾತಿನ ಲಯ, ಅವಧಾರಣೆ, ಪುನರುಕ್ತಿ, ಕಾಕುನುಡಿ ಇತ್ಯಾದಿಗಳು ವಚನರಚನೆಗೆ ಅಭಿವ್ಯಕ್ತಿಯ ಜೀವಂತಿಕೆಯನ್ನು ನೀಡುತ್ತವೆ ಎಂದು ಉದಾಹರಣೆ ಸಮೇತ ಎಂ.ಎಂ.ಕಲಬುರ್ಗಿ ಅವರು ತಿಳಿಸಿದ್ದಾರೆ.

"ಏನಿ ಬಂದಿರಿ? ಹದುಳ ವಿದ್ದಿರೆ? 'ತಾರೌ ಅಗ್ಗವಣಿಯ ನೀಡೌ ಪತ್ತೆಯ, ಲಿಂಗಕ್ಕೆ ಬೋನವ ಹಿಡಿಯೌ' ಇತ್ಯಾದಿಗಳಲ್ಲಿಯ ಆಡುಮಾತಿನ ರೀತಿ ತುಂಬಾ ಮನೋಜ್ಞವಾಗಿದೆ. ಇಂಥ ರಚನೆಗಳನ್ನು ಮೂಲ ಲಯದಂತೆಯೇ ಅನುವಾದಿಸುವುದರತ್ತ ನಾವು ಗಮನ ಹರಿಸಿದ್ದೇವೆ"[೨೬] ಎಂದಿದ್ದಾರೆ.

* ವಚನಗಳಲ್ಲಿ ವಾಕ್ಯರಚನೆ ತುಂಭಾ ಸಂಕೀರ್ಣತೆಯಿಂದ ಕೂಡಿರುತ್ತವೆ. ಹಾಗಿರುವಾಗ ವಚನದ ವಾಕ್ಯರಚನೆಗಿಂತ ವಚನಕಾರನ ಆಶಯಕ್ಕೆ ಅನುಗುಣವಾಗಿ ಅರ್ಥೈಸಬೇಕಾಗುತ್ತದೆ. ಹಾಗೆಯೇ ಅನುವಾದಿಸಬೇಕಾಗುತ್ತದೆ ಎಂದು ಅದಕ್ಕೆ ಉದಾಹರಣೆ ಸಮೇತ ವಿವರಿಸಿದ್ದಾರೆ.

"ಉದಾ: ಹಸ್ತ ಕಡಗ ಕೈಗಧಿಕ್ ನೋಡಾ

ಕೊಡಲಹುದು, ಕೊಳಲಾಗದು.....

ಕೊಡಲಾಗದು, ಕೊಳಲಾಗದು ಎಂಬ ಹಸ್ತ ಕಡಗಲೇ ಕೈಗೆ ಭೂಷಣ ಇತ್ಯಾದಿಯಾಗಿ ಅರ್ಥ ಮಾಡಿಕೊಂಡು, ಅನುವಾದಿಸುವುದು ಸೂಕ್ತ"[೨೭] ಎಂದಿದ್ದಾರೆ.

ಹೀಗೆ ಅನುವಾದ ಸಂದರ್ಭದಲ್ಲಿ ಎದುರಾದ ಹಲವು ಸಮಸ್ಯೆಗಳನ್ನು ಗುರುತಿಸಿ, ಅನುವಾದಕನ ಗಮನದಲ್ಲಿರಬೇಕಾದ ಅಂಶಗಳು ಯಾವುವು ಎಂಬುದನ್ನು ಸ್ಪಷ್ಟಪಡಿಸುವ ಮೂಲಕ ಅನುವಾದ ಕಾರ್ಯವನ್ನು ಪೂರೈಸಿರುವುದರ ಬಗ್ಗೆ ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**೬.೪.೨. ವಚನ ಭಾಷಾಂತರ**

ಅನುವಾದ ಕಾರ್ಯ ತುಂಬಾ ಕಠಿಣವಾದ ಕೆಲಸವೆಂದೇ ಹೇಳಬಹುದು. ಜನಪ್ರಿಯವಾದ ವಚನ ಸಾಹಿತ್ಯವನ್ನು ೨೩ ಭಾಷೆಗಳಿಗೆ ಅನುವಾದ ಕಾರ್ಯ ಕೈಗೊಂಡ ನಿರ್ದೇಶಕರಾದ ಎಂ.ಎಂ.ಕಲಬುರ್ಗಿ ಅವರ ಶ್ರಮ ಅಗಾಧವಾದದ್ದು.

"ಕನ್ನಡ ಭಾಷೆಯ ಈ ಶುದ್ಧ ವಚನಗಳನ್ನು ಇನ್ನೊಂದು ಭಾಷೆಗೆ ಅನುವಾದಿಸುವ ಸಂದರ್ಭದಲ್ಲಿ ಬೇರೊಂದು ಬಗೆಯ ಅಗ್ನಿಪರೀಕ್ಷೆ ಎದುರಾಗುತ್ತದೆ. ಇದು ನಿಜವಾಗಿಯೂ ಒಂದು ಸಂಸ್ಕೃತಿಯನ್ನು ಇನ್ನೊಂದು ಸಂಸ್ಕೃತಿಗೆ ಅನುವಾದಿಸುವುದೆಂದೇ ಅರ್ಥ. ಇಷ್ಟೇ ಏಕೆ? ಕಥೆ, ಕಾದಂಬರಿಗಳಂತಹ ಲೌಕಿಕ ಕೃತಿಗಳ ಅನುವಾದಕ್ಕಿಂತ ಧಾರ್ಮಿಕ ಅದರಲ್ಲಿಯೂ ಅನುಭಾವಿಕ ವಚನಗಳನ್ನು ಅನುವಾದಿಸುವುದು ತುಂಬಾ ಕಷ್ಟ. ಇಲ್ಲಿ ದ್ರಾವಿಡ ಕುಟುಂಬದ ಅಂದರೆ ಕನ್ನಡದ ಸೋದರ ಭಾಷೆಗಳಾದ ತೆಲುಗು, ತಮಿಳು ಇತ್ಯಾದಿ ಭಾಷೆಗಳಿಗೆ ಅನುವಾದಿಸುವುದು ಒಂದಿಷ್ಟು ಸುಲಭ. ಆದರೆ ಆರ್ಯ ಕುಟುಂಬದ ಮರಾಠಿ, ಬೆಂಗಾಲಿ ಇತ್ಯಾದಿ ಭಾಷೆಗಳಿಗೆ ಅನುವಾದಿಸುವುದು ಅಷ್ಟು ಸುಲಭವಲ್ಲ. ಇದಕ್ಕಿಂತ ಭಾರತೀಯ ಸಂಸ್ಕೃತಿಯ ವಚನಗಳನ್ನು ಭಾರತೀಯೇತರ ಸಂಸ್ಕೃತಿಯ ಇಂಗ್ಲಿಷ್ ಭಾಷೆಗೆ ಅನುವಾದಿಸುವುದು, ಅದರಲ್ಲಿಯೂ ಉರ್ದು ಭಾಷೆಗೆ ಅನುವಾದಿಸುವುದು ಮತ್ತೂ ಸುಲಭವಲ್ಲ"[೨೮] ಎಂದು, ಅನುವಾದ ಎಂಬುದು ಕಬ್ಬಿಣದ ಕಡಲೆ ಎಂಬ ಹಿನ್ನೆಲೆಯಲ್ಲಿ ಹೇಳಿದ್ದಾರೆ. ಅನುವಾದಕ್ಕಾಗಿ ಶುದ್ಧಪಾಠ ತಯಾರಿಸುವುದು ಒಂದು ರೀತಿಯ ಕಷ್ಟ ಅದೇ ರೀತಿ ಕೃತಿಯ ಶುದ್ಧಪಾಠದ ನಂತರ ಬೇರೊಂದು ಭಾಷೆಗೆ ಅನುವಾದಿಸುವುದು ಇನ್ನೂ ಕಷ್ಟಕರ. ಇಂತಹ ಕಷ್ಟಕರವಾದ ಕೆಲಸವನ್ನು ಎಂ.ಎಂ.ಕಲಬುರ್ಗಿ ಅವರು ವಹಿಸಿಕೊಂಡು, ಅದಕ್ಕೆ ಮೂಲ ಪಠ್ಯವನ್ನು ಅವರೇ ಸಿದ್ಧಗೊಳಿಸುವ ಮೂಲಕ, ಅನುವಾದ ಮಾಡುವ ಮೂಲಕ ಯಶಸ್ವಿ ಪಥದತ್ತ ಸಾಗಿದ ಕೀರ್ತಿಗೆ ಪಾತ್ರರಾಗಿದ್ದಾರೆ.

### ೬.೪.೩. ವಚನ ಭಾಷಾಂತರ ಕಮ್ಮಟಗಳ ಏರ್ಪಾಡು

ಅನುವಾದಕ್ಕಾಗಿ ಮೂಲಪಠ್ಯ ಸಿದ್ಧಗೊಂಡ ಮೇಲೆ ವಚನ ಅನುವಾದ ಯೋಜನೆಯ ರೂಪರೇಷೆಗಳನ್ನು ಕುರಿತಂತೆ ಹಾಗೂ ಅನುವಾದಕರನ್ನು ಆಯ್ಕೆ ಮಾಡುವ ಕುರಿತಂತೆ ಹಾಗೆಯೇ ಅನುವಾದದ ಸಂದರ್ಭದಲ್ಲಿ ಎದುರಾಗುವ ತೊಡಕುಗಳನ್ನು ಕುರಿತಂತೆ ಚರ್ಚಿಸಲು ಎಂ.ಎಂ.ಕಲಬುರ್ಗಿ ಅವರು ಕಮ್ಮಟಗಳನ್ನು ಆಯೋಜಿಸಿದರು. "ಪ್ರತಿಯೊಂದು ಭಾಷೆಗೆ ಒಬ್ಬ ಪ್ರಧಾನ ಸಂಪಾದಕರು, ಅವರ ನಿರ್ದೇಶನದಲ್ಲಿ ಆರೆಂಟು ಜನ ಅನುವಾದಕರಿರಬೇಕೆಂದು ನಿರ್ಣಯಿಸಿದರು. ಈಗ 'ಸಂಪರ್ಕ ಪಠ್ಯ'ಗಳಾದ ಇಂಗ್ಲಿಷ್, ಹಿಂದಿ ಭಾಷೆಯ ಪ್ರಧಾನ ಸಂಪಾದಕರೊಂದಿಗೆ ಬೆಂಗಳೂರು, ಮೈಸೂರು, ವಿಜಾಪುರ, ಧಾರವಾಡಗಳಲ್ಲಿ ಭಾಷಾಂತರ ಕಮ್ಮಟ ಯೋಜಿಸಿ, ಮೊದಲು ಇವೆರಡು ಭಾಷಾ ಕೃತಿಗಳ ಅನುವಾದ ಸರಿಯಾಗುವಂತೆ ನೋಡಿಕೊಂಡೆವು. ಈ ಎರಡು ಭಾಷೆಗಳ ಕೃತಿಗಳನ್ನು ಆಧರಿಸಿ, ಮಿಕ್ಕ ಭಾಷೆಗಳ ಅನುವಾದ ಕಾರ್ಯ ಜರುಗಬೇಕೆಂದು ತೀರ್ಮಾನಿಸಿದೆವು. ಈ ಮಿಕ್ಕ ಭಾಷೆಗಳ ಪ್ರಧಾನಸಂಪಾದಕರು ಮತ್ತು ಅನುವಾದಕರು ತಮಗೆ ಭಾಷಾಂತರ ಕಾರ್ಯದಲ್ಲಿ ಎದುರಾದ ಸಮಸ್ಯೆಗಳ ಪಟ್ಟಿ ಸಿದ್ಧ ಮಾಡಿಕೊಂಡು ಬಂದು, ನಾವು ಹಮ್ಮಿಕೊಂಡಿದ್ದ ಬೇರೆ ಬೇರೆ ಕಮ್ಮಟಗಳಲ್ಲಿ ಭಾಗವಹಿಸಿದರು. ಕೇರಳದ ತಿರುವನಂತರಪುರದಲ್ಲಿ ಮಲಯಾಳಂ ಭಾಷೆಯ, ಕಲ್ಕತ್ತದ ಶಾಂತಿನಿಕೇತನದಲ್ಲಿ ಅಸ್ಸಾಮಿ, ಸಂತಾಲಿ, ಒರಿಯಾ, ಮೈಥಿಲಿ ಭಾಷೆಗಳ, ಗುಜರಾತ್‌ನ ಸಾಬರಮತಿಯಲ್ಲಿ ಸಿಂಧಿ, ಗುಜರಾತಿ ಭಾಷೆಯ, ಗೋವೆಯಲ್ಲಿ ಕೊಂಕಣಿ ಭಾಷೆಯ, ಮಂಗಳೂರಿನಲ್ಲಿ ತುಳು ಭಾಷೆಯ ಕಮ್ಮಟಗಳನ್ನು ಜರುಗಿಸಿದೆವು. ಈಗ ಆಯಾ ಭಾಷೆಗಳ ಅನುವಾದಕರು ನಮ್ಮೊಂದಿಗೆ ಮುಖಾಮುಖಿ ಚರ್ಚಿಸಿ, ಅನೇಕ ಸಮಸ್ಯೆಗಳನ್ನು ಅದರಲ್ಲಿಯೂ ಕಾಯಕ, ದಾಸೋಹ, ಜಂಗಮ ಇತ್ಯಾದಿ ಲಿಂಗಾಯತನಿಷ್ಠ ಪರಿಭಾಷೆಗಳ ಅರ್ಥವನ್ನು ಸ್ಪಷ್ಟಪಡಿಸಿಕೊಂಡರು. ಸಾಲದುದಕ್ಕೆ 'ಕೂಡಲಸಂಗಮ ದೇವಾ ಸೆರಗೊಡ್ಡಿ ಬೇಡುವೆನು' ಎಂಬಂತಹ ವಾಗ್ರೂಢಿಗಳನ್ನು ಸ್ಪಷ್ಟಪಡಿಸಿ ಕೊಂಡರು. ಆಡು ಮಾತಿನ ಲಯ, ಅವಧಾರಣೆ, ಪುನರುಕ್ತಿ, ಕಾಕು ಇತ್ಯಾದಿಗಳು ವಚನಗಳಿಗೆ ಅಭಿವ್ಯಕ್ತಿಯ ಜೀವಂತಿಕೆಯನ್ನು ನೀಡಿವೆ. ಉದಾ: "ಏನಿ ಬಂದಿರಿ? ಹದುಳವಿದ್ದಿರೆ? "ತಾರೌ ಅಗ್ಗವಣಿಯ, ನೀಡೌ ಪತ್ರೆಯ, ಲಿಂಗಕ್ಕೆ ಬೋನವ ಹಿಡಿಯೌ" ಇತ್ಯಾದಿಗಳಲ್ಲಿಯ ಆಡುಮಾತಿನ ರೀತಿ ತುಂಬಾ ಮನೋಜ್ಞವಾಗಿದೆ. ಇಂತಹ ರಚನೆಗಳನ್ನು ಮೂಲ ಲಯದಂತೆಯೇ ಅರ್ಥ ಪೂರ್ಣವಾಗಿ ಅನುವಾದಿಸಲು ನಾವು ವಿದ್ವಾಂಸರ ಗಮನ ಸೆಳೆದಿದ್ದೇವೆ. ಲಿಂಗಾಯತ ಪರಿಭಾಷೆ ಪದಗಳಾದ ಜಂಗಮ, ಕಾಯಕ, ದಾಸೋಹ ಇತ್ಯಾದಿಗಳನ್ನು, ವಚನಗಳ ಮುದ್ರಿಕೆ ಯನ್ನು, ವಚನೋಕ್ತ ಸಂಸ್ಕೃತ ಉದ್ಧರಣೆಗಳನ್ನು ಅನುವಾದಿಸದೇ ಮೂಲ ರೂಪದಲ್ಲಿ

'ಉಳಿಸಿಕೊಳ್ಳಲು ತಿಳಿಸಿದ್ದೇವೆ. ಹೀಗೆ ದಕ್ಷಿಣೋತ್ತರ ಭಾಷೆಗಳ ಅನುವಾದ ಯೋಜನೆಯಲ್ಲಿ ನಾವು ಶಕ್ತಿಮೀರಿ ಶ್ರಮಿಸಿದ್ದೇವೆ. ಈ ಕಮ್ಮಟಗಳಲ್ಲಿ ಬಸವ ಸಮಿತಿಯ ಅಧ್ಯಕ್ಷರಾದ ಅರವಿಂದ ಜತ್ತಿ, ಈ ಯೋಜನೆಯ ನಿರ್ದೇಶಕರಾದ ಡಾ.ಎಂ.ಎಂ.ಕಲಬುರ್ಗಿ, ಕಾರ್ಯನಿರ್ವಾಹಕರಾದ ಶ್ರೀ ಅಗ್ರಹಾರ ಕೃಷ್ಣಮೂರ್ತಿ, ಹಿಂದಿ ಭಾಷಾ ವಿದ್ವಾಂಸರಾದ ಡಾ.ಪ್ರಭಾಶಂಕರ ಪ್ರೇಮಿ ಭಾಗವಹಿಸಿ, ಈ ಅನುವಾದದ ಯಶಸ್ಸಿಗೆ ನೆರವಾಗಿದ್ದಾರೆ. ಹೀಗಿದ್ದೂ, ನಮ್ಮ ಅನವಧಾನ, ಅನ್ಯಥಾಜ್ಞಾನ, ಅಜ್ಞಾನದಿಂದಾಗಿ ಉಳಿದಿರಬಹುದಾದ ದೋಷಗಳನ್ನು ಮುಂದಿನ ಆವೃತ್ತಿಯಲ್ಲಿ ನಿವಾರಿಸಿಕೊಳ್ಳುತ್ತೇವೆ"[೨೮] ಎಂದು ಎಂ.ಎಂ.ಕಲಬುರ್ಗಿ ಯೋಜನೆಯ ರೂಪರೇಷೆಯ ಕಮ್ಮಟಗಳನ್ನು ಕುರಿತು ಹೇಳಿದ್ದಾರೆ.

ಹೀಗೆ ಕಮ್ಮಟಗಳನ್ನು ಆಯೋಜಿಸುವ ಮೂಲಕ ಅನುವಾದದ ಸಂದರ್ಭದಲ್ಲಿ ಎದುರಾದ ತೊಡಕುಗಳನ್ನು ಬಗೆಹರಿಸಿಕೊಳ್ಳಲು ಹಾಗೂ ಸುಲಭವಾಗಿಸಿಕೊಂಡು ಅನುವಾದ ಕಾರ್ಯವನ್ನು ಯಶಸ್ವಿಗೊಳಿಸುವಲ್ಲಿ ಎಂ.ಎಂ.ಕಲಬುರ್ಗಿ ಅವರ ಶ್ರಮ ಅಗಾಧವಾದದ್ದಾಗಿದೆ. ಜೊತೆಗೆ ಎಷ್ಟೇ ಎಚ್ಚರಿಕೆಯಿಂದ ಕೆಲಸ ನಿರ್ವಹಿಸಿದರೂ ಉಳಿದಿರುವ ದೋಷಗಳನ್ನು ಗುರುತಿಸಿ, ಕಣ್ತಪ್ಪಿನಿಂದ ಉಳಿದಂತಹ ದೋಷಗಳನ್ನು ಮುಂದಿನ ಆವೃತ್ತಿಯಲ್ಲಿ ನಿವಾರಿಸಿಕೊಳ್ಳುವುದಾಗಿ ಹೇಳಿರುವ ಎಂ.ಎಂ.ಕಲಬುರ್ಗಿ ಅವರ ವಿನಮ್ರತೆಯನ್ನು ಅರಿಯಬಹುದಾಗಿದೆ.

**೬.೪.೪. ಅನುವಾದಕರ ಆಯ್ಕೆ**

ಅನುವಾದ ಕಾರ್ಯಕ್ಕಾಗಿ ವಿವಿಧ ಭಾಷೆಯ ತಜ್ಞರನ್ನು ಹುಡುಕಲು ಸಾಕಷ್ಟು ಕಷ್ಟಗಳನ್ನು ಎದುರಿಸಿದವರು ಎಂ.ಎಂ.ಕಲಬುರ್ಗಿ ಅವರು. ಈ ಕೃತಿಯು ಅನುವಾದಗೊಂಡ ಭಾಷೆ ಹಾಗೂ ಅನುವಾದಕರ ಪಟ್ಟಿಯನ್ನು ಈ ಕೆಳಗೆ ನೀಡಲಾಗಿದೆ.

| ಕೃತಿ | ಭಾಷೆ | ಅನುವಾದಕರು |
|---|---|---|
| ೧. ವಚನ | ಕನ್ನಡ | ಎಂ.ಎಂ.ಕಲಬುರ್ಗಿ |
| ೨. Vachana | ಇಂಗ್ಲಿಷ್ | O.L. Nagabushan Swamy |
| ೩. Vachana | ಹಿಂದಿ | Prabhashankar Premi |
| ೪. Vachana | Marathi | Shankar M.Patil & Smt. Savitha Nadakatti |
| ೫. Vachanam | Telugu | Chandrasekhar Reddy |
| ೬. Vachana | Tamil | N. Das |
| ೭. Vachana | Bengali | Meera Chakravarthi |

| | | |
|---|---|---|
| ೮. Vachana | Panjabi | Lovleen Jolli |
| ೯. Vachana | Sanskrit | H.V. Nagaraja rao |
| ೧೦. Vachana | Urdu | Mahir Mansoor |
| ೧೧. Vachana | Sindhi | Vasdev Hohi |
| ೧೨. Vachana | Gujarati | Sharita Vijjaliwala |
| ೧೩. Vachana | Assami | Pankaji Thakur |
| ೧೪. Vachana | Konkani | Damodar Mauzo |
| ೧೫. Vachana | Mythili | Udaya Narayan Singh |
| ೧೬. Vachana | Kashmiri | Udaya Narayan singh |
| ೧೭. Vachana | Odia | Pravasini Mahakud |
| ೧೮. Vachana | Santhali | Rupchand Hansda |
| ೧೯. Vachana | Rajasthani | Chandra Prakash Deval |
| ೨೦. Vachana | Malayalam | M. Rama |
| ೨೧. Vachana | Tulu | B.A. Vivek Rai |
| ೨೨. Vachana | Bojpuri | Balendu Shekar Tiwari |
| ೨೩. Vachana | Kodava | M.P.Rekha |

**೬.೪.೫. ಕೃತಿಯ ಪ್ರಕಟಣ ಹಂತ**

ಅನುವಾದ ಕಾರ್ಯವನ್ನು ಎರಡು ಘಟ್ಟಗಳಲ್ಲಿ ಹಂಚಿಕೊಳ್ಳಲಾಗಿದೆ. ಮೊದಲ ಘಟ್ಟವು ಶ್ರೀ ಎಂ.ಪ್ರಸನ್ನಕುಮಾರ್ ಅವರ ಸಂಚಾಲಕತ್ವದಲ್ಲಿ ಚಾಲನೆಗೊಂಡಿತು. ಈ ಘಟ್ಟದಲ್ಲಿ ಮೂಲಪಠ್ಯವಾದ ಕನ್ನಡ ಭಾಷೆಯನ್ನು ಒಳಗೊಂಡಂತೆ ಇಂಗ್ಲಿಷ್, ಹಿಂದಿ, ತಮಿಳು, ತೆಲುಗು, ಮರಾಠಿ, ಬೆಂಗಾಲಿ, ಪಂಜಾಬಿ, ಸಂಸ್ಕೃತ, ಉರ್ದು ಭಾಷೆಗಳ ಅನುವಾದ ಕಾರ್ಯ ಜರುಗಿತು. ಮೊದಲ ಘಟ್ಟದ ಅನುವಾದ ಕಾರ್ಯ ಅತ್ಯಂತ ಸುಲಭವಾಗಿ ಜರುಗಿತು. ಅದಕ್ಕೆ ಕಾರಣ ಕನ್ನಡ ಭಾಷೆಯು ಗೊತ್ತಿದ್ದ ವಿದ್ವಾಂಸರು ನಮಗೆ ಲಭಿಸಿದ್ದರಿಂದ ಎಂದು ಎಂ.ಎಂ.ಕಲಬುರ್ಗಿ ಅವರು ಹೇಳಿದ್ದಾರೆ. ಯಾವುದೇ ಅನುವಾದ ಕಾರ್ಯ ಕೈಗೊಳ್ಳಬೇಕಾದರೆ ಅನುವಾದಕನಿಗೆ

ಮೂಲಪಠ್ಯದ ಭಾಷೆ ಹಾಗೂ ಅನುವಾದ ಮಾಡಬೇಕಾದ ಭಾಷೆಯ ಜ್ಞಾನ ಇರಬೇಕಾಗುತ್ತದೆ. ಈ ರೀತಿ ದ್ವಿಭಾಷಾ ಪ್ರಾವೀಣ್ಯತೆ ಇದ್ದರೆ ಅನುವಾದ ಕಾರ್ಯ ಜಟಿಲವೆನಿಸುವುದಿಲ್ಲ. ಈ ಮೊದಲ ಘಟ್ಟದ ಅನುವಾದ ಸಂದರ್ಭದಲ್ಲಿ ಕನ್ನಡ ಮೂಲಪಠ್ಯವನ್ನು ಒಳಗೊಂಡಂತೆ ಉಳಿದ ೯ ಭಾಷೆಗಳ ಅನುವಾದಕರು ದ್ವಿಭಾಷಾ ಜ್ಞಾನಿಗಳಾಗಿದ್ದರಿಂದ ಅನುವಾದಕಾರ್ಯ ಸುಲಭವಾಗಿ ನಡೆಯಲು ಸಾಧ್ಯವಾಗಿದೆ ಎಂದಿದ್ದಾರೆ. ಮೊದಲ ಹಂತದ ಅನುವಾದ ಕಾರ್ಯ ಪೂರ್ಣಗೊಳ್ಳುತ್ತಿದ್ದಂತೆ ಆ ಕೃತಿಗಳ ಬಿಡುಗಡೆಗೆ ಸಿದ್ಧತೆಗೊಂಡವು. "ಮೊದಲ ಹಂತದ ೧೦ ಭಾಷೆಗಳ ಅನುವಾದ ಕೃತಿಗಳನ್ನು ೧೪ ಫೆಬ್ರವರಿ ೨೦೧೩ರಂದು ಸನ್ಮಾನ್ಯ ರಾಜ್ಯಪಾಲ ಅವರ ಅಧ್ಯಕ್ಷತೆಯಲ್ಲಿ, ಸನ್ಮಾನ್ಯ ಉಪರಾಷ್ಟ್ರಪತಿಗಳಾದ ಶ್ರೀ ಹಮೀದ್ ಅನ್ಸಾರಿಯವರು ಬೆಂಗಳೂರಿನಲ್ಲಿ ಲೋಕಾರ್ಪಣೆ ಮಾಡಿದರು. ಪಂಜಾಬಿ ಭಾಷೆಯ ಅನುವಾದ ಚಂಡೀಗಡದಲ್ಲಿ ಸನ್ಮಾನ್ಯ ರಾಜ್ಯಪಾಲರಾದ ಶ್ರೀ ಶಿವರಾಜ ಪಾಟೀಲ ಅವರು, ಹಿಂದಿ ಆವೃತ್ತಿಯನ್ನು ದಕ್ಷಿಣ ಆಫ್ರಿಕಾದ ಜೋಹಾನ್ಸ್‌ಬರ್ಗ್‌ದಲ್ಲಿ ವಿದೇಶಾಂಗ ರಾಜ್ಯಮಂತ್ರಿ ಶ್ರೀಮತಿ ಪ್ರಣೀತಕೌರ್ ಅವರು ಲೋಕಾರ್ಪಣೆ ಮಾಡಿದರು. ಇಂಗ್ಲಿಷ್ ಆವೃತ್ತಿ ಉತ್ತರ ಅಮೆರಿಕೆಯ ಕ್ಯಾಲಿಫೋರ್ನಿಯಾದಲ್ಲಿ ಬಿಡುಗಡೆಗೊಂಡಿತು."[೩೦] ಈ ರೀತಿಯಾಗಿ ಮೊದಲಘಟ್ಟದ ೧೦ ಭಾಷೆಯಲ್ಲಿ ಕೃತಿಗಳು ಲೋಕಾರ್ಪಣೆಗೊಂಡವು.

ಎರಡನೇ ಘಟ್ಟದಲ್ಲಿ ದಕ್ಷಿಣದ ಮಲಯಾಳಂ, ಕೊಂಕಣಿ, ತುಳು, ಕೊಡವ ಈ ನಾಲ್ಕು ಭಾಷೆಗಳ ಪ್ರಧಾನ ಸಂಪಾದಕರು ಉಭಯಭಾಷಾ ತಜ್ಞರಾಗಿದ್ದರು. ಆದ್ದರಿಂದ ಈ ೪ ಭಾಷೆಗಳ ಅನುವಾದ ಕಾರ್ಯ ಸುಲಭವಾಗಿ ಜರುಗಿತು. ಆದರೆ ಉಳಿದ ೯ ಭಾಷೆಗಳ ಅನುವಾದ ಕಷ್ಟಕರವಾಗಿತ್ತು ಎಂಬುದನ್ನು ಎಂ.ಎಂ.ಕಲಬುರ್ಗಿ ಅವರ ಮಾತುಗಳು ತಿಳಿಸುತ್ತವೆ. "ಉತ್ತರದ ಗುಜರಾತಿ, ರಾಜಸ್ಥಾನಿ, ಸಿಂಧಿ, ಕಾಶ್ಮೀರಿ, ಅಸಾಮಿ, ಮೈಥಿಲಿ, ಸಂತಾಲಿ, ಒರಿಯಾ, ಬೋಜ್‌ಪುರಿ ಈ ೯ ಭಾಷೆಗಳ ವಿದ್ವಾಂಸರನ್ನು ಹುಡುಕುವುದು ನಮಗೆ ದೊಡ್ಡ ಸಮಸ್ಯೆಯಾಗಿದ್ದಿತು. ಸುದೈವದಿಂದ ಕೇಂದ್ರಸಾಹಿತ್ಯ ಅಕಾಡೆಮಿಯ ನಿವೃತ್ತ ಕಾರ್ಯದರ್ಶಿಗಳೂ, ಕನ್ನಡಿಗರೂ ಆಗಿರುವ ಶ್ರೀ ಅಗ್ರಹಾರ ಕೃಷ್ಣಮೂರ್ತಿಯವರು ಕಾರ್ಯನಿರ್ವಹಕರಾಗಿ ಲಭಿಸಿದರು. ಇವರು ಮೇಲೆ ಹೇಳಿದ ೯ ಭಾಷೆಗಳ ವಿದ್ವಾಂಸರನ್ನು ಶೋಧಿಸಿ, ಅವರಿಗೆ ಅನುವಾದ ಕಾರ್ಯ ಒಪ್ಪಿಸುವ ಮೂಲಕ, ನಮ್ಮ ಕಾರ್ಯ ಒಂದಿಷ್ಟು ಹಗುರ ಮಾಡಿದರೆಂದೇ ಹೇಳಬೇಕು. ಹೀಗೆ ಎರಡನೇ ಹಂತ ಮುಗಿಯುತ್ತ ಬಂದಿದೆ"[೩೧] ಎಂದಿದ್ದಾರೆ. ಈ ಎರಡನೇ ಹಂತದ ೧೩ ಭಾಷೆಗಳ ಅನುವಾದ ಕೃತಿಗಳು ೨೦೧೬ರಂದು ಬಿಡುಗಡೆಗೊಂಡಿವೆ.

## ೬.೫. ವಚನ ಭಾಷಾಂತರ ವೈಶಿಷ್ಟ್ಯತೆ

ವಚನಗಳ ಸಂಯೋಜನೆಯ ದೃಷ್ಟಿಯಿಂದ ಈ ಕೃತಿ ಸಂಪಾದನೆ ಗ್ರಂಥಸಂಪಾದನ ಶಾಸ್ತ್ರಕ್ಕೆ ಆಧುನಿಕ ವಿಧಾನವೊಂದನ್ನು ರೂಪಿಸಿಕೊಟ್ಟ ಶ್ರೇಯಸ್ಸು ಎಂ.ಎಂ.ಕಲಬುರ್ಗಿ ಅವರಿಗೆ ಸಲ್ಲಬೇಕು. ಏಕೆಂದರೆ ಭಾಷಾಂತರಗೊಳ್ಳಬೇಕಾದ ವಚನಗಳನ್ನು ಮೂಲಪಾಠವನ್ನಾಗಿ ಸಂಪಾದಿಸುವ ವಿಧಾನ ಅತ್ಯಂತ ಜವಾಬ್ದಾರಿಯುತ ಕೆಲಸವೆನಿಸುತ್ತದೆ. ಕನ್ನಡ, ಕನ್ನಡ ಶರಣರು ಪರಿಚಯವಿಲ್ಲದ ಜನಸಮುದಾಯಕ್ಕೆ ಇವರ ಸಿದ್ಧಾಂತಗಳನ್ನು ಮುಟ್ಟಿಸುವ ಬಹುದೊಡ್ಡ ಹೊಣೆಗಾರಿಕೆ ಇಂಥ ಪಠ್ಯ ನಿರ್ಮಾಣದಲ್ಲಿರುತ್ತದೆ. ಹೀಗಾಗಿ ಹಿಂದಿನ ಗ್ರಂಥಸಂಪಾದನೆಯ ಮಾದರಿಯನ್ನೇ ಅದರಲ್ಲೂ ಧಾರ್ಮಿಕವಾಗಿ, ಇಲ್ಲವೇ ಸಾಮಾಜಿಕವಾಗಿ, ಇಲ್ಲವೇ ವ್ಯಕ್ತಿತ್ವ ವಿಕಸನದ ನೆಲೆಯಲ್ಲಿ ವಚನಗಳನ್ನು ಸಂಪಾದಿಸಿ ಭಾಷಾಂತರಿಸಿದರೆ ಆ ಸಾಹಿತ್ಯದ ಒಂದು ಮುಖವನ್ನು ಮಾತ್ರ ಪರಿಚಯಿಸ ದಂತಾಗುತ್ತದೆ. ಹೀಗಾಗಿ ಈ ವಚನಗಳ ಸಂಯೋಜನೆ ಒಂದು ತೊಡಕಾಗಿ ಕಾಡಿದ್ದಂತೂ ಸತ್ಯ. ಆ ತೊಡಕನ್ನು ಬಿಡಿಸಿಕೊಳ್ಳುವ ರೀತಿಯೇ ಎಂ.ಎಂ.ಕಲಬುರ್ಗಿ ಅವರ ಗ್ರಂಥಸಂಪಾದನೆಯ ಹೊಸ ವಿಧಾನವೊಂದನ್ನು ಇಲ್ಲಿ ಆಶ್ರಯಿಸಿದರೆನ್ನಬಹುದು. ಈ ಹಿಂದೆ ಬಹುಜನ ವಿದ್ವಾಂಸರು ವಚನಗಳನ್ನು ಸಿದ್ಧಾಂತಮುಖಿ, ಲೋಕನೀತಿಮುಖಿ, ಸಮಸಮಾಜಮುಖಿ, ಸಮೃದ್ಧ ಸಮಾಜಮುಖಿ ಎಂಬ ತಾತ್ವಿಕ ವರ್ಗೀಕರಣದಲ್ಲಿ ವಚನಗಳನ್ನು ಸಂಪಾದಿಸಿದರೂ ಪ್ರಾಚೀನ ಷಟ್‌ಸ್ಥಲ ಕಟ್ಟುಗಳಂತೆ ಈ ಮಾದರಿಯೂ ಪ್ರಶ್ನಾರ್ಹವೆನಿಸುತ್ತದೆ. ಹೀಗಿದ್ದೂ ತಾತ್ವಿಕ ದೃಷ್ಟಿಯಿಂದ ವಚನಗಳನ್ನು ಸಂಪಾದಿಸಿಕೊಟ್ಟರೆ ಒಂದೇ ತತ್ವದ ಹಲವು ವಚನಕಾರರ ವಚನಗಳು ಓದುಗರಿಗೆ ಬೇಸರ ಹುಟ್ಟಬಹುದು. ಅದೇ ರೀತಿ ಮೂಲ ವಚನಪಠ್ಯ ಸಂಯೋಜನೆಯ ಸಮಸ್ಯೆಗಳನ್ನು ಮತ್ತು ರೂಪಗೊಂಡ ಪಠ್ಯದ ಉಪಯೋಗದ ಆಶಯವನ್ನು ಕಲುಬುರ್ಗಿ ಅವರು ಹೀಗೆ ಪ್ರಸ್ತಾಪಿಸುತ್ತಾರೆ.

"ಪುನರುಕ್ತವಾಗಂತೆ ತಾತ್ವಿಕ ವರ್ಗೀಕರಣದ ಸಂಕಲನ ರೂಪಿಸಿದರೆ, ಅಂತಹ ಪಠ್ಯಕ್ಕೆ ೩೦೦ರಷ್ಟು ವಚನಗಳು ಸಾಕೆನಿಸುತ್ತದೆ. ಆದ್ದರಿಂದ ಆಯ್ದುಕೊಂಡ ೨೫೦೦ ವಚನಗಳ ತಾತ್ವಿಕ ವರ್ಗೀಕರಣವನ್ನು ಕೈಬಿಡುವುದು ನಮಗೆ ಅನಿವಾರ್ಯವಾಯಿತು. ಇನ್ನು ಎಲ್ಲಾ ೨೫೦೦ ವಚನಗಳನ್ನು ಅಕಾರಾದಿಯಾಗಿ ಹೊಂದಿಸಲು ಹೊರಟರೆ, ಮುಖ್ಯ ವಚನಕಾರರ ಅರ್ಥಪೂರ್ಣ ವಚನಗಳು ಎಲ್ಲೆಲ್ಲಿಯೋ ಸೇರಿ ಒಟ್ಟು ಕೃತಿ ಮಹತ್ವ ಕಳೆದುಕೊಳ್ಳಬಹುದೆನಿಸಿತು. ಹೀಗಾಗಿ ಈ ವಿಚಾರವನ್ನು ಕೈಬಿಟ್ಟು ಪ್ರತಿಯೊಬ್ಬ ವಚನಕಾರರ ರಚನೆಗಳನ್ನು ಅಕಾರಾದಿಯಾಗಿ ಜೋಡಿಸುವ ಉಪಕ್ರಮವನ್ನು ಇಲ್ಲಿ ಪಾಲಿಸಿದ್ದೇವೆ. ವಚನಕಾರರ ಅನುಕ್ರಮಕ್ಕಾಗಿ ಸರಕಾರದ ಆವೃತ್ತಿಗಳನ್ನು ಮಾದರಿಯಾಗಿ ಇಟ್ಟುಕೊಂಡಿದ್ದೇವೆ. ಎಲ್ಲ ವಚನಗಳು ಬೆಳಕಿಗೆ ಬಂದ

ಇಂದಿನ ಸಂದರ್ಭದಲ್ಲಿ ಲೋಕಮಾನ್ಯ ವಚನಗಳನ್ನು ಆಯ್ದು ಸಂಕಲನವೊಂದನ್ನು ಸಿದ್ಧಪಡಿಸ ಬೇಕೆಂಬುದೇ ನಮ್ಮ ಮುಖ್ಯ ಆಶಯವಾಗಿದೆ. ಹೀಗಾಗಿ ಇದನ್ನು 'ಮೂಲಪಠ್ಯ'ವೆಂದು ಪರಿಗಣಿಸಿ, ಮೊದಲು ಹಿಂದಿ, ಇಂಗ್ಲಿಷ್‌ಗಳೆಂಬ ಸಂಪರ್ಕ ಭಾಷೆಗಳಿಗೆ ಅನುವಾದಿಸಿ 'ಸಂಪರ್ಕ ಪಠ್ಯ'ಗಳನ್ನು ಸಿದ್ಧಪಡಿಸಬೇಕೆಂದು, ಬಳಿಕ ಅವುಗಳನ್ನಾಧರಿಸಿ ಮಿಕ್ಕ ರಾಷ್ಟ್ರೀಯ, ಅಂತಾರಾಷ್ಟ್ರೀಯ ಭಾಷೆಗಳ ಅನುವಾದ ಕಾರ್ಯದ ಮೂಲಕ 'ಬಹುಭಾಷಾಪಠ್ಯ'ಗಳನ್ನು ರೂಪಿಸುವ ಕೆಲಸ ಮುಂದುವರಿಯ ಬೇಕೆಂದು, ಇನ್ನೂ ಬೇಕಿದ್ದರೆ ಈ ಮೂಲಪಠ್ಯದಿಂದ ವಿದ್ವಾಂಸರು ಬೇರೆ ಬೇರೆ ತಾತ್ವಿಕ ಪಠ್ಯಗಳನ್ನು ರೂಪಿಸಬಹುದೆಂದೂ ನಾವು ಆಶಿಸುತ್ತೇವೆ."[೩೨] ಹೀಗೆ ಪ್ರಕಟಿತ ವಚನಗಳನ್ನೇ ಸಂಯೋಜಿಸುವ ನೆಲೆಯಲ್ಲಿ ವಚನಗಳ ಆಶಯ, ಓದುವ ಜನವರ್ಗ ಹಾಗೂ ಗ್ರಂಥವಿನ್ಯಾಸ ದೃಷ್ಟಿಯಿಂದ ವಿನೂತನ ವೈಧಾನಿಕತೆಯೊಂದನ್ನು ರೂಪಿಸಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ.

'ವಚನ ಚಳುವಳಿಯ ಸಂದರ್ಭ' ಎಂಬ ಶೀರ್ಷಿಕೆಯ ಅಡಿ ೧೨ನೇ ಶತಮಾನ ಶಿವಶರಣರ ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಆಶಯಗಳನ್ನು ವಿನೂತನವಾಗಿ ಚರ್ಚಿಸಿದ್ದಾರೆ. ಆ ಕಾಲಕ್ಕೆ ಕರ್ನಾಟಕವೆಂಬುದು ಕೇವಲ ಈಗಿರುವ ಕರ್ನಾಟಕವಲ್ಲ. ನೆರೆಯ ಆಂಧ್ರ ಮತ್ತು ಮಹಾರಾಷ್ಟ್ರವನ್ನೊಳಗೊಂಡಂತೆ ಅಖಂಡ ರಾಜಕೀಯ ಘಟಕವಾದ ಪ್ರದೇಶವಾಗಿತ್ತು. ಇಂಥ ವಿಸ್ತಾರವಾದ ಬಹುಪ್ರದೇಶವನ್ನು ಕಲ್ಯಾಣ ಚಾಲುಕ್ಯರು ಆಳ್ವಿಕೆ ನಡೆಸುತ್ತಿದ್ದ ಸಂದರ್ಭದಲ್ಲಿ ಚಕ್ರವರ್ತಿ ಮಂಡಲೇಶ್ವರ, ಸಾಮಂತ ಹೀಗೆ ಆಡಳಿತದ ವಿಭಾಗಗಳು ಇದರಿಂದುಂಟಾದ ರಾಜಕೀಯ ಕ್ಷೇತ್ರದ ಕಲುಷಿತ ವಾತಾವರಣದಿಂದಾಗಿ ಪ್ರಜಾಧರ್ಮ ಸೊರಗಿಹೋಗಿತ್ತು. ಅಂಥ ಸಂದರ್ಭದಲ್ಲಿ ವಚನ ಚಳುವಳಿಯ ಅವಿಷ್ಕಾರವಾಯಿತು. ಈ ಚಳುವಳಿ ರಾಜಸತ್ತೆಯನ್ನು ಪ್ರಶ್ನಿಸುವ ಕಾಯಕಜೀವಿಗಳ ಸಮಾಜವೊಂದನ್ನು ನಿರ್ಮಿಸುವ ಬಹುದೊಡ್ಡ ಆಂದೋಲನವನ್ನು ಹುಟ್ಟುಹಾಕಿತು. ಹೀಗಾಗಿ ಜನರಲ್ಲಿ ಅಥವಾ ಸಮಾಜದಲ್ಲಿ ರಾಜತ್ವದ ಸ್ಪಷ್ಟವಾದ ತಿಳುವಳಿಕೆ ಮಾಡಲು ಸಹಾಯಕವಾಯಿತು.

ಇನ್ನು ಧಾರ್ಮಿಕವಾಗಿ ವಚನ ಚಳುವಳಿಯ ಅನನ್ಯತೆಯನ್ನು ಕುರಿತು ಸಂಪಾದಕರಾದ ಕಲುಬುರ್ಗಿ ಅವರು ಚರ್ಚಿಸುತ್ತಾರೆ. ಅವರ ಪ್ರಕಾರ ಯಾವುದೇ ದೇಶದ ಧರ್ಮ ಎರಡು ರೀತಿಯಲ್ಲಿರುತ್ತವೆ. ಒಂದು ದೇಶಿಧರ್ಮ, ಇನ್ನೊಂದು ಮಾರ್ಗಧರ್ಮ. ಹೀಗಾಗಿ ಹನ್ನೆರಡನೇ ಶತಮಾನ ಕಾಲಘಟ್ಟದ ದೇಶಿಧರ್ಮದಲ್ಲಿ ನಾಥ ಶೈವ, ಕಾಪಾಲಿಕ, ಕಾಳಾಮುಖ, ಪಾಶುಪತ, ಶುದ್ಧಶೈವ ಇತ್ಯಾದಿ ಪಂಥಗಳು ಅಸ್ತಿತ್ವದಲ್ಲಿದ್ದವು. ಇವು ಗುರುಸಂಪ್ರದಾಯವಾದ ಯೋಗಪ್ರಧಾನ ಪಂಥವಾಗಿದ್ದವು. ಇಂಥ ಗುರುಸಂಪ್ರದಾಯವಾದ ದೇಶಿಪಂಥಗಳನ್ನು ಬಿಟ್ಟರೆ ಆಚಾರ್ಯ ಸಂಪ್ರದಾಯದ ಮಾರ್ಗ ಧರ್ಮದಲ್ಲಿ ವೈದಿಕ, ಆಗಮಿಕ ಎಂಬ ಬ್ರಾಹ್ಮಣ ಶಾಖೆಗಳು ಬೆಳೆದು

ನಿಂತವು. ಈ ಶಾಖೆಗಳೇ ಮುಂದುವರಿದು ಶಂಕರಶೈವ, ರಾಮಾನುಜರ ಶ್ರೀ ವೈಷ್ಣವ ಇತ್ಯಾದಿ ಇತ್ಯಾದಿಯಾಗಿ ಬೆಳೆದವು. ಆಗಮಿಕ ಶೈವದಲ್ಲಿ ಕಾಳಾಮುಖ, ಮಹಾವ್ರತ, ಸಿದ್ಧಾಂತಶೈವ ಎಂಬ ಶಾಖೆಗಳು ಹುಟ್ಟಿಕೊಂಡವು. ಹೀಗೆ ದೇಶಿ ಪಂಥಗಳ ಜೊತೆಗೆ ವೈದಿಕ ಮತ್ತು ಆಗಮಿಕ ಮಾರ್ಗಪಂಥಗಳು ಬೆಳೆದು ಧಾರ್ಮಿಕ ವಾತಾವರಣ ಕಲುಷಿತಗೊಂಡಿತ್ತು. ವಿಶೇಷವಾಗಿ ವೃತ್ತಿನೆಲೆಯಿಂದ ಜಾತಿನೆಲೆಗೆ ಬಂದು ನಿಂತಿದ್ದ ಸಾಮಾಜಿಕರು ಜಾತಿನೆಲೆಯಿಂದ ಧರ್ಮದ ನೆಲೆಗೆ ಬರಲು ಆಸಕ್ತರಾದರು. ಇದರಿಂದ ಮಂತ್ರದೀಕ್ಷೆ, ಮತಾಂತರದೀಕ್ಷೆ ಪ್ರಕ್ರಿಯೆಗಳು ನಡೆದುಹೋದವು. ಒಂದೇ ಕುಟುಂಬದಲ್ಲಿ ಬೇರೆ ಬೇರೆ ಧರ್ಮಕ್ಕೆ ಒಕ್ಕಲಾಗುವ ಉಪಕ್ರಮಗಳು ನಡೆದವು. ಇನ್ನು ಸಾರ್ವತ್ರಿಕವಾಗಿ ದೇವಾಲಯ ಮತ್ತು ಮಠಮಾನ್ಯಗಳ ವ್ಯವಸ್ಥೆ ಹದಗೆಟ್ಟು ಹೋಗಿ ಬಸವಣ್ಣನವರ ಕಾಲಕ್ಕೆ ಇವೆರಡು ಶೋಷಣೆಯ ನಡೆಗಳಾಗಿದ್ದವು. ಈ ಪರಿಸರದಲ್ಲಿ ದಾನವ್ಯವಸ್ಥೆ ತಲೆಯೆತ್ತಿ ನಿಂತು ಉಳ್ಳವರ ವಲಯದಲ್ಲಿ ದೇವರ ಅಸ್ತಿತ್ವವನ್ನು ಕಾಣುವ ಆಡಂಬರ ಭಕ್ತಿ ನೆಲೆಯೂರಿತ್ತು. ಈ ಎಲ್ಲಾ ಸಂಗತಿಗಳನ್ನು ಗಮನಿಸಿದ ಶರಣರು ದಾನಕ್ಕೆ ಪರ್ಯಾಯವಾಗಿ ದಾಸೋಹತತ್ವವನ್ನು ದೇವಾಲಯಕ್ಕೆ ಪರ್ಯಾಯವಾಗಿ ದೇಹವನ್ನೇ ದೇವಾಲಯ ಮಾಡಿಕೊಳ್ಳುವ ಹೊಸ ಸಿದ್ಧಾಂತವನ್ನು ಚಲಾವಣೆಗೆ ತಂದರು.

ಶೈಕ್ಷಣಿಕವಾಗಿ ಕೇವಲ ಮೇಲ್ವರ್ಗದ ಜನಾಂಗ ಶಿಕ್ಷಣವನ್ನು ಅದರಲ್ಲೂ ಪುರುಷರು ಮಾತ್ರ ಶಿಕ್ಷಣವನ್ನು ಪಡೆಯುವ ವ್ಯವಸ್ಥೆ ಜಾರಿಯಲ್ಲಿತ್ತು. ಇದೆಲ್ಲವನ್ನು ಖಂಡಿಸಿದ ಶರಣರು ಹೊಸ ಸಮಾಜ ನಿರ್ಮಾಣಕ್ಕೆ ತಮ್ಮ ವಚನಗಳ ಮೂಲಕ ಮುಂದಾದರು. ವೃತ್ತಿ ಕೆಟ್ಟು ಜಾತಿಯಾದದ್ದು ಶರಣರ ಆಂದೋಲನಕ್ಕೆ ಪ್ರಮುಖ ಕಾರಣ. ವೃತ್ತಿಯನ್ನು ಜಾತಿಯಿಂದ ಬೇರ್ಪಡಿಸಿ ವೃತ್ತಿಸಮಾನತೆಯನ್ನು ಆ ಮೂಲಕ ಆರ್ಥಿಕ ಸಮಾನತೆಯನ್ನು ತರಲು ಹೆಣಗಿದವರು. ಅಂದರೆ ವರ್ಗ, ವರ್ಣವ್ಯವಸ್ಥೆ ಸಮಾಜದಲ್ಲಿ ಪ್ರತಿಷ್ಠಿತ ಮತ್ತು ಅಪ್ರತಿಷ್ಠಿತ ವರ್ಗಗಳನ್ನು ನಿರ್ಣಯಿಸುವ ಸಾಧನವಾಗಿತ್ತು. ಈ ಸಾಧನವನ್ನು ತೊಡೆದುಹಾಕಿ ವರ್ಗರಹಿತ, ವರ್ಣರಹಿತ ಹಾಗೂ ಲಿಂಗರಹಿತ ಸಮಾಜವನ್ನು ನಿರ್ಮಿಸುವ ಉದ್ದೇಶ ಶರಣದರದ್ದಾಗಿತ್ತು ಎಂಬುದನ್ನು ಈ ಕೃತಿಯ ಪ್ರಸ್ತಾವನೆಯಲ್ಲಿ ಸಂಪಾದಕರು ಸುದೀರ್ಘವಾಗಿ ಚರ್ಚಿಸುತ್ತಾರೆ.

ಈ ಯೋಜನೆಯ ಮೂಲಕ ವಚನ ಸಾಹಿತ್ಯವನ್ನು ಪ್ರಕಾರವೆಂದು ಪರಿಗಣಿಸಬಾರದು. ಅದೊಂದು ಪರಂಪರೆ ಎಂಬುದಾಗಿ ತಿಳಿಸುವ ಕಲಬುರ್ಗಿ ಅವರು ಸಾಹಿತ್ಯಪ್ರಕಾರಕ್ಕೆ ಕಾಲಮಿತಿಯಿರುತ್ತದೆ, ಸಾಂಸ್ಕೃತಿಕ ಪರಂಪರೆ ಕಾಲಾತೀತವಾಗಿರುತ್ತದೆ. "ಪ್ರಕಾರದ ಹಿಂದೆ ಒಂದು ನಿರ್ದಿಷ್ಟ ಧೋರಣೆಯಿದ್ದು, ಪೂರ್ಣಗೊಳ್ಳುತ್ತಲೆ ಅದು ಸ್ಥಗಿತವಾಗುತ್ತದೆ. ಪರಂಪರೆ ಮಾತ್ರ ಎಲ್ಲಾ ಕಾಲ, ಎಲ್ಲಾ ಧೋರಣೆಗಳಿಗೆ ಮೈ ಒಡ್ಡಿಕೊಳ್ಳುತ್ತ ಚಲಿಸುವ ಲಕ್ಷಣ ಹೊಂದಿರುತ್ತದೆ. ವಚನ ಕೇವಲ ಪ್ರಕಾರವಾಗಿ ಉಳಿಯದೆ ಚಲನಶೀಲ ಪರಂಪರೆಯಾಗಿ ಬೆಳೆಯಲು ಕಾರಣ

ಶರಣರು. "ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂಬ ಮುಕ್ತಧೋರಣೆಯವರಾಗಿರುವುದು. ಈ ಕಾರಣವಾಗಿ, ಸ್ಥಾವರಪ್ರಜ್ಞೆಯ ಕನ್ನಡದ ಬೇರೆ ಸಾಹಿತ್ಯ ಪ್ರಕಾರಗಳು ಅಂದಂದೇ ಸ್ಥಗಿತವಾದರೂ ಜಂಗಮಪ್ರಜ್ಞೆಯ ವಚನ ಪ್ರಕಾರ ಮಾತ್ರ ಮುಂದಿನ ವರ್ಷಗಳಲ್ಲಿ ತೋಂಟದ ಸಿದ್ಧಲಿಂಗ, ಸ್ವತಂತ್ರ ಸಿದ್ಧಲಿಂಗ, ಷಣ್ಮುಖ ಶಿವಯೋಗಿ ಮೊದಲಾದವರಿಂದ ಮುನ್ನಡೆದು ಈಗಲೂ ಸೃಷ್ಟಿಯಾಗುತ್ತಲಿದೆ."[೩೩]

ಭಾಷಾಂತರ ಯೋಜನೆಯ ಅಡಿಯಲ್ಲಿ ಸಂಪಾದನೆಗೊಂಡ ಕೃತಿಯಾದ್ದರಿಂದ ಅನುಬಂಧದಲ್ಲಿ ಶರಣರ ಪರಿಚಯಕೋಶವನ್ನು ಕೊಡಲಾಗಿದೆ. ವಚನಕಾರರ ವಚನಾಂಕಿತವನ್ನು ಅಕಾರಾದಿಯಾಗಿ ಮತ್ತು ವಚನಾಂಕಿತದ ವಚನಕಾರರನ್ನು ಅಕಾರಾದಿಯಾಗಿ ನೀಡಲಾಗಿದೆ. ಇದರಿಂದ ಅಭ್ಯಾಸ ಮಾಡುವವರಿಗೆ ವಚನಕಾರ ಮುಖ್ಯವೆನಿಸಿದರೆ ವಚನಕಾರರ ವಚನಾಂಕಿತ ಪಟ್ಟಿಯನ್ನು ನೋಡಿಕೊಳ್ಳಬಹುದು. ಹಾಗೆಯೇ ಇಲ್ಲಿ ಸಂಪಾದಿಸಿದ ವಚನಗಳ ಅಕಾರಾದಿಯನ್ನು, ವಚನಸಂಖ್ಯೆಯನ್ನು, ವಚನಕಾರರ ಹೆಸರನ್ನು ಮತ್ತು ಅಂಕಿತವನ್ನು ನೀಡಲಾಗಿದೆ. ವಿಶೇಷವಾಗಿ ಅನ್ಯಭಾಷಿಕರಿಗೆ ಕನ್ನಡ ಭಾಷೆಯ ಅಥವಾ ವಚನಭಾಷೆಯ ಅರ್ಥ ತಿಳಿಯಬೇಕಾಗುತ್ತದೆ. ಹೀಗಾಗಿ ಕೊನೆಯಲ್ಲಿ ಅರ್ಥಕೋಶವನ್ನು ನೀಡಲಾಗಿದೆ. ಒಂದೊಂದು ಧರ್ಮದ ಆಚರಣೆ ವಿಶಿಷ್ಟವಾಗಿರುತ್ತದೆ. ಅವುಗಳನ್ನು ಕ್ರಿಯಾಸಾಮಗ್ರಿ, ಇಲ್ಲವೇ ಜ್ಞಾನಸಾಮಗ್ರಿ ಎಂದು ಕರೆಯಲಾಗುತ್ತದೆ. ಅದೇ ರೀತಿ ಆ ಆಚರಣೆಗಳನ್ನು ಅವರದೇ ಆದ ಪರಿಭಾಷೆಗಳಲ್ಲಿ ಟಂಕಿಸಿರುತ್ತಾರೆ. ಹೀಗಾಗಿ ಸಂಪಾದಕರು ವಚನ ಪರಿಭಾಷಾಕೋಶವನ್ನು ನೀಡಿದ್ದಾರೆ. ಇದರ ಜೊತೆಗೆ ವಚನಗಳಲ್ಲಿ ಉಲ್ಲೇಖಿತವಾದ ವ್ಯಕ್ತಿನಾಮ, ಸ್ಥಳನಾಮ ಕುರಿತು ನಾಮಕೋಶವನ್ನು ನೀಡಲಾಗಿದೆ. ಈ ಯೋಜನೆಯನ್ನು ಕುರಿತಂತೆ ವೀರಣ್ಣ ರಾಜೂರ ಅವರು "ಸಮಗ್ರ ವಚನ ಸಂಪುಟಗಳಿಂದಾಯ್ದು ೧೭೩ ಶರಣರ ೨೫೦೦ ವಚನಗಳನ್ನೊಳಗೊಂಡ 'ವಚನ' ಎಂಬ ಹೆಸರಿನಲ್ಲಿ ಪ್ರಕಟವಾಗಿರುವ ಈ ಸಂಪುಟವನ್ನು ಡಾ.ಎಂ.ಎಂ.ಕಲಬುರ್ಗಿ ಅವರು ತುಂಬಾ ಜಾಣ್ಮೆ ಮತ್ತು ತಾಳ್ಮೆಯಿಂದ ಸಿದ್ಧಪಡಿಸಿದ್ದಾರೆ. ಇದಕ್ಕೆ ಅವರು ಬರೆದ 'ಮಾಣಿಕ್ಯ ದೀಪ್ತಿ' ಎಂಬ ೩೬ ಪುಟದ ಪ್ರಸ್ತಾವನೆ ವಚನ ಚಳುವಳಿಯ ಸಂದರ್ಭ ಶರಣರು ಸ್ಥಾಪಿಸಿದ ಲಿಂಗಾಯತಧರ್ಮದ ಚತುರ್ಮುಖಿ ಸಿದ್ಧಾಂತ, ವಚನ ಸಾಹಿತ್ಯದ ಸ್ವರೂಪ – ಪರಂಪರೆ ಒಟ್ಟಾಗಿ ಶರಣಧರ್ಮದ ಅನನ್ಯತೆಯನ್ನು ತುಂಬಾ ಪ್ರಭಾವಶಾಲಿಯಾಗಿ ಪ್ರತಿಬಿಂಬಿಸುತ್ತದೆ. ಇದಕ್ಕೆ ಜೋಡಿಸಿದ ೭೩ ಪುಟದ ಅನುಬಂಧ, ಶರಣರ ಪರಿಚಯ ಕೋಶ, ವಚನಕಾರರು–ವಚನಾಂಕಿತ; ವಚನಗಳ ಅಕಾರಾದಿ, ಅರ್ಥಕೋಶ, ಪರಿಭಾಷಾಕೋಶ, ನಾಮಕೋಶಗಳನ್ನು ಒಳಗೊಂಡು ಅಭ್ಯಾಸಿಗರಿಗೆ ಅತ್ಯುಪಯುಕ್ತ ಮಾಹಿತಿಯನ್ನು ಒದಗಿಸುತ್ತದೆ"[೩೪] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಎಂ.ಎಂ.ಕಲಬುರ್ಗಿ ಅವರ ವಚನ ಭಾಷಾಂತರ ಯೋಜನೆ ಅವರ ಜೀವಿತಾವಧಿಯ ಮಹತ್ವದ ಕಾರ್ಯ ಎಂದರೆ ತಪ್ಪಾಗಲಾರದು. ಅನುಭಾವದಿಂದಲೇ ರಚನೆಗೊಂಡ ಈ ವಚನ ಸಾಹಿತ್ಯ ಕನ್ನಡಿಗರಿಗಷ್ಟೇ ಅಲ್ಲದೇ ಕನ್ನಡೇತರರಿಗೂ ತಿಳಿಸುವ ಉತ್ಕಟವಾದ ಬಯಕೆಯ ಫಲಶ್ರುತಿಯೇ ಈ ವಚನ ಭಾಷಾಂತರ ಯೋಜನೆ. ಇಲ್ಲಿ ಎಂ.ಎಂ.ಕಲಬುರ್ಗಿ ಅವರು ಸರ್ವ ಜನರಿಗೂ, ಸರ್ವ ಕಾಲಕ್ಕೂ ಉಪಯುಕ್ತವಾಗುವ ಅತಿ ಸುಲಭವಾದ ವಚನಗಳ ಮೂಲಕ ವಿಶಾಲವಾದ ಅರ್ಥವನ್ನು ಹೊಂದಿರುವ ವಚನಗಳನ್ನು ಆಯ್ಕೆ ಮಾಡಿಕೊಂಡಿರುವುದು ವಿಶೇಷವೆನಿಸಿದೆ. ಈ ಯೋಜನೆಗೆ ರೂಪರೇಷೆಗಳನ್ನು ಹಾಕಿಕೊಳ್ಳುವ ಮೂಲಕ ಬೇರೆ ಬೇರೆ ಭಾಷೆಯ ಅನುವಾದಕರನ್ನು ಗುರುತಿಸಿ ಅನುವಾದದ ಕಾರ್ಯವನ್ನು ಯಶಸ್ವಿಗೊಳಿಸಿದ್ದಾರೆ. ಅನುವಾದ ಕಾರ್ಯಕ್ಕೆ ಮೂಲಪಠ್ಯ ಸಿದ್ಧಗೊಳಿಸುವಲ್ಲಿ ಒಟ್ಟಾರೆಯಾಗಿ ಆ ಕೃತಿ ಸಿದ್ಧಗೊಂಡು ಹೊರಬರುವಲ್ಲಿ ಎಂ.ಎಂ.ಕಲಬುರ್ಗಿ ಅವರ ಪಟ್ಟ ಪರಿಶ್ರಮ, ಅವರ ಪ್ರತಿಭೆ ಹಾಗೂ ಅನುವಾದದ ಯೋಜನೆ ಬಗೆಗಿನ ಕಾಳಜಿ ಅಗಾಧವಾದದ್ದಾಗಿದೆ.

**ಅಡಿಟಿಪ್ಪಣಿಗಳು**

೧. ಎಸ್.ಆರ್.ಭಟ್, ಭಾಷಾಂತರ ಒಂದು ಕಲಾತ್ಮಕ ಅಭಿವ್ಯಕ್ತಿ, ೧೯೮೯, ಪು.೩.

೨. ಪ್ರೊ. ಮೋಹನ್ ಕುಂಟಾರ್, ಅನುವಾದ ಸಾಹಿತ್ಯ, ೨೦೧೫, ಪು.೨೬.

೩. ಅದೇ, ಪು.೧.

೪. ಪಾಟೀಲ ಶಿವಲಿಂಗಪ್ಪ, ಶಿವಮೂರ್ತಪ್ಪ, ವಚನಗಳ ಇಂಗ್ಲಿಷ್ ಅನುವಾದ: ಒಂದು ಅಧ್ಯಯನ, ೨೦೧೦, ಪು.೧೧.

೫. ಅದೇ, ಪು.೧೨.

೬. ಅದೇ, ಪು.೧೩.

೭. ಅದೇ, ಪು.೧೫.

೮. ಅದೇ, ಪು.೨೬.

೯. ಅದೇ, ಪು.೧೯.

೧೦. ಅದೇ, ಪು.೨೧.

೧೧. ಅದೇ, ಪು.೨೨.

೧೨. ಅದೇ, ಪು.೨೩–೨೪.

೧೩. ಅದೇ, ಪು.೨೪.

೧೪. ಅದೇ, ಪು.೨೭.

೧೫. ಅದೇ, ಪು.೨೭.

೧೬. ಅದೇ, ಪು.೨೮.

೧೭. ಬಸವಪಥ, ೨೦೧೪, ಪು.೭೯.

೧೮. ಅದೇ, ೨೦೧೪, ಪು.೭೯.

೧೯. ಎಂ.ಎಂ.ಕಲಬುರ್ಗಿ(ಸಂ), ವಚನ, ೨೦೧೨, ಪು.Xi

೨೦. ಅದೇ, ಪು.೭.

೨೧. ಅದೇ, (ಪ್ರಸ್ತಾವನೆ), ಪು.XXXii.

೨೨. ಅದೇ, ಪು.XXXii.

೨೩. ಬಸವಪಥ, ೨೦೧೪, ಪು.೮೦.

೨೪. ಅದೇ, ಪು.೮೦.

೨೫. ಅದೇ, ಪು.೮೦.

೨೬. ಎಂ.ಎಂ.ಕಲಬುರ್ಗಿ, ವಚನ, ಪು.XXXiV.

೨೭. ಅದೇ, ಪು.XXXiV.

೨೮. ಬಸವಪಥ, ಪು.೮೦.

೨೯. ಅದೇ, ಪು.೮೧.

೩೦. ಅದೇ, ಪು.೮೧.

೩೧. ಅದೇ, ಪು.೮೨.

೩೨. ಎಂ.ಎಂ.ಕಲಬುರ್ಗಿ, ವಚನ, ಪು.೧೨.

೩೩. ಅದೇ, ಪು.೨೯.

೩೪. ಶಾಮಸುಂದರ ಬಿದರಕುಂದಿ(ಸಂ), ಕಲಬುರ್ಗಿ ನೆನಪು, ೨೦೧೬, ಪು.೧೧೩.

## ಅಧ್ಯಾಯ: ಏಳು

# ಕೆಟ್ಟಿತ್ತು ಕಲ್ಯಾಣ: ವಚನಗಳನ್ನಾಧರಿಸಿ ರಚನೆಯಾದ ಸೃಜನಶೀಲ ಪಠ್ಯ

## ಅಧ್ಯಾಯ: ಏಳು

# ಕೆಟ್ಟಿತ್ತು ಕಲ್ಯಾಣ: ವಚನಗಳನ್ನಾಧರಿಸಿ ರಚನೆಯಾದ ಸೃಜನಶೀಲ ಪಠ್ಯ

ಎಂ.ಎಂ.ಕಲಬುರ್ಗಿ ಅವರು ಪ್ರಸಿದ್ಧ ಸಂಶೋಧಕರು. ಇವರು ಸೃಜನಶೀಲ ಸಾಹಿತ್ಯ ಹಾಗೂ ಸೃಜನೇತರ ಸಾಹಿತ್ಯ ಎರಡೂ ಕ್ಷೇತ್ರಗಳಲ್ಲೂ ತಮ್ಮನ್ನು ತೊಡಗಿಸಿಕೊಂಡವರು. ಸೃಜನೇತರ ಸಾಹಿತ್ಯದಲ್ಲಿ ಮಾಡಿದಷ್ಟು ಕೆಲಸವನ್ನು ಸೃಜನಶೀಲ ಸಾಹಿತ್ಯದಲ್ಲಿ ಮಾಡಿಲ್ಲ. ಸೃಜನಶೀಲ ಸಾಹಿತ್ಯದಲ್ಲಿ ಮಾಡಿದ ಕಾರ್ಯ ಅಲ್ಪವಾಗಿದ್ದರೂ ಅದರ ಮಹತ್ವ ಅಗಾಧವಾದದ್ದು. ಎಂ.ಎಂ.ಕಲಬುರ್ಗಿ ಅವರು ಸಾಕಷ್ಟು ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸಿದ್ದರೂ ಕೂಡ ಅವರ ಆಸಕ್ತಿ ಕ್ಷೇತ್ರ ವಚನ ಸಾಹಿತ್ಯವಾಗಿತ್ತು. ಆದ್ದರಿಂದ ವಚನ ಸಂಗ್ರಹ, ಸಂಕಲನ, ಸಂಪಾದನೆ ಮತ್ತು ವಿಶ್ಲೇಷಣೆಯ ಕಾರ್ಯವನ್ನು ಮಾಡಿದ್ದಾರೆ. ಇದರ ಪ್ರಭಾವವೋ ವಚನಗಳ ಅಧ್ಯಯನದ ಹಿನ್ನೆಲೆಯಲ್ಲಿ ಎಂಬಂತೆ 'ಕೆಟ್ಟಿತ್ತು ಕಲ್ಯಾಣ' ನಾಟಕವನ್ನು ರಚಿಸಿದ್ದಾರೆ. ಹೀಗಾಗಿ ಈ ನಾಟಕ ವಚನ ವ್ಯಾಖ್ಯಾನದ ರಂಗ ಪ್ರದರ್ಶನವಾಗಿದೆಯೇ ಹೊರತು ಯಶಸ್ವಿ ನಾಟಕವಾಗಿ ಮೂಡಿ ಬಂದಿಲ್ಲವೆಂದು ಹೇಳಬಹುದು.

'ಕೆಟ್ಟಿತ್ತು ಕಲ್ಯಾಣ' ನಾಟಕವು ೧೨ನೇ ಶತಮಾನದಲ್ಲಿ ಕನ್ನಡ ನಾಡು ಕಂಡಂತಹ ಚಾರಿತ್ರಿಕ ವ್ಯಕ್ತಿ ಕ್ರಾಂತಿಕಾರಿ ಬಸವಣ್ಣನನ್ನು ಕುರಿತದ್ದಾಗಿದೆ. ಹೀಗಾಗಲೇ ಬಸವಣ್ಣನವರನ್ನು ಕುರಿತಂತೆ ಎಚ್.ಎಸ್.ಶಿವಪ್ರಕಾಶರ 'ಮಹಾಚೈತ್ರ', ಗಿರೀಶ್ ಕಾರ್ನಾಡರ 'ತಲೆದಂಡ', ಚಂದ್ರಶೇಖರ ಕಂಬಾರರ 'ಶಿವರಾತ್ರಿ', ಲಂಕೇಶರ 'ಸಂಕ್ರಾಂತಿ' ನಾಟಕಗಳು ಬಂದಿವೆ. ೧೯೭೩ರಲ್ಲಿ ಪ್ರಕಟವಾದ ಪಿ.ಲಂಕೇಶ್ ಅವರ 'ಸಂಕ್ರಾಂತಿ' ನಾಟಕ ೫ ದೃಶ್ಯಗಳಿಂದ ಕೂಡಿದೆ. ಇದರಲ್ಲಿ ಉಷಾ ಮತ್ತು ರುದ್ರರ ಪ್ರೇಮಪ್ರಕರಣದ ಸುತ್ತಲು ಈ ನಾಟಕ ಬೆಸೆದುಕೊಂಡಿದೆ. ಅವರಲ್ಲಿ ಉಷಾ ಶರಣ ರುದ್ರನನ್ನು ನಾನು ಪ್ರೀತಿಸಿಲ್ಲ ಎನ್ನುವ ಮೂಲಕ ರುದ್ರನಿಗೆ ಶಿಕ್ಷೆ ವಿಧಿಸುವ ಕುರಿತಂತೆ ಬಸವಣ್ಣ ಮತ್ತು ಬಿಜ್ಜಳನ ಚರ್ಚೆಯೊಂದಿಗೆ ಈ ನಾಟಕ ಕೊನೆಗೊಳ್ಳುತ್ತದೆ. ಹಾಗೆಯೇ

ಎಚ್.ಎಸ್.ಶಿವಪ್ರಕಾಶರ 'ಮಹಾಚೈತ್ರ' ನಾಟಕವು ೧೯೮೦ರಲ್ಲಿ ಪ್ರಕಟಗೊಂಡಿದೆ. ಇದು ೧೪ ದೃಶ್ಯಗಳಿಂದ ಕೂಡಿದೆ. ಬಸವಣ್ಣನ ವಚನ ಚಳುವಳಿಯನ್ನು ಕೇಂದ್ರವಾಗಿಟ್ಟುಕೊಂಡು ರಚನೆಯಾದ ನಾಟಕವಾದರೂ ಬಸವಣ್ಣನ ಸ್ಪಷ್ಟ ಚಿತ್ರಣ ಇಲ್ಲಿ ಕಂಡುಬರುವುದಿಲ್ಲ. 'ಮಹಾಚೈತ್ರ' ನಾಟಕ ಬಸವಣ್ಣನ ನೇತೃತ್ವದಲ್ಲಿ ನಡೆದ ಕಲ್ಯಾಣ ಚಳುವಳಿಯು ಹಿಡಿದ ದಾರಿಯನ್ನು ಪಡೆದ ಸೋಲು-ಗೆಲುವುಗಳನ್ನು ಭಿತ್ತಿಯನ್ನಾಗಿಸಿಕೊಂಡ ನಾಟಕ. ಬಸವಣ್ಣ ಈ ನಾಟಕದಲ್ಲಿ ಕಾಣಿಸಿ ಕೊಳ್ಳುವುದಿಲ್ಲವಾದರೂ ಅವನ ವೃತ್ತಾಂತ ನಾಟಕದ ಉದ್ದಕ್ಕೂ ಹರಡಿಕೊಂಡಿದೆ. ಬಸವಣ್ಣನ ಆಶಯಗಳು ಬಿಜ್ಜಳನ ಕ್ರೌರ್ಯದಿಂದ ನುಚ್ಚುನೂರಾಗುತ್ತವೆ. ಅವನ ಚಳುವಳಿಯಲ್ಲಿ ಸೇರಿದ್ದ ಶರಣರಲ್ಲಿ ಕೆಲವರು ತಮ್ಮದೇ ಆದ ದಾರಿಯನ್ನು ಹಿಡಿಯುತ್ತಾರೆ. ಮತ್ತೆ ಕೆಲವರು ಬಸವಣ್ಣನ ಮುನ್ನೋಟವನ್ನು ಹಿಡಿದು ಅದನ್ನು ಪೂರೈಸಲು ಸಿದ್ಧರಾಗುತ್ತಾರೆ[೧] ಎಂದು ಮುನ್ನುಡಿಯಲ್ಲಿ ಕಿ.ರಂ.ನಾಗರಾಜ ಅವರು ಹೇಳಿದ್ದಾರೆ. ಈ ನಾಟಕವು ಬಸವಣ್ಣ ಕಲ್ಯಾಣ ಬಿಟ್ಟು ಹೋದ ನಂತರದ ಚಿತ್ರಣದಿಂದ ಹಿಡಿದು ಬಿಜ್ಜಳನ ಕೊಲೆಯಲ್ಲಿ ಅದರಲ್ಲೂ ಬಸವಣ್ಣನೇ ಕೊಲೆಗಾರ ಎಂದು ಬಿಜ್ಜಳ ತಪ್ಪು ತಿಳಿದುಕೊಳ್ಳುವ ಮೂಲಕ ಈ ನಾಟಕ ಕೊನೆಗೊಳ್ಳುತ್ತದೆ. ಆದರೆ ಗಿರೀಶ್ ಕಾರ್ನಾಡರ 'ತಲೆದಂಡ' ನಾಟಕವು ಒಂದು ರೀತಿಯಲ್ಲಿ ಇದಕ್ಕಿಂತ ಭಿನ್ನವಾಗಿದೆ ಎನ್ನಬಹುದು. ಈ ನಾಟಕವು ೧೯೯೦ರಲ್ಲಿ ಪ್ರಕಟಗೊಂಡಿದೆ. ಇದು ೧೬ ದೃಶ್ಯಗಳಿಂದ ಕೂಡಿದ ದೀರ್ಘರೂಪದ ನಾಟಕವಾಗಿದೆ. ಇದು ಕೂಡ ವಚನ ಚಳುವಳಿಯ ಹಿನ್ನೆಲೆಯಲ್ಲಿ ರಚನೆಯಾದ ನಾಟಕವಾಗಿದೆ. ಇದರಲ್ಲಿ ಹರಳಯ್ಯನ ಮಗ ಶೀಲ ಮತ್ತು ಮಧುವರಸನ ಮಗಳು ಕಲಾವತಿಯ ಪ್ರೇಮ ಪ್ರಕರಣ ಕುರಿತು ರಚನೆಗೊಂಡ ಈ ನಾಟಕ ಬಿಜ್ಜಳನ ಕೊಲೆಯ ವಿಚಾರ ಬಸವಣ್ಣನಿಗೆ ತಿಳಿದದ್ದು, ನಂತರ ಕುತಂತ್ರ ಸೋಮಿದೇವ ರಾಜನೆಂದು ಮರೆಯುವುದರ ಮೂಲಕ ಶರಣರ ನಾಶ ಹಾಗೂ ಅವರ ಗ್ರಂಥವನ್ನು ಸುಟ್ಟು ಹಾಕಲು ಮುಂದಾಗುವ ದೃಶ್ಯದಲ್ಲಿ ನಾಟಕ ಕೊನೆಗೊಳ್ಳುತ್ತದೆ. ಇವೆಲ್ಲ ನಾಟಕಗಳ ರಚನೆ ನಂತರ ಇತ್ತೀಚೆಗೆ ಅಂದರೆ ೨೦೧೧ರಲ್ಲಿ ಚಂದ್ರಶೇಖರ ಕಂಬಾರರ 'ಶಿವರಾತ್ರಿ' ನಾಟಕ ಇನ್ನೂ ಭಿನ್ನವಾಗಿ ಮೂಡಿಬಂದಿದೆ. ಇದು ಕೇವಲ ೬ ದೃಶ್ಯಗಳಿಂದ ಕೂಡಿದೆ. ನಾಟಕದ ವಸ್ತುವನ್ನು ಕುರಿತಂತೆ ಹಾಗೂ ನಾಟಕದ ವ್ಯಾಪ್ತಿ ಕುರಿತು ಮುನ್ನುಡಿಯಲ್ಲಿ ಸಿ.ಎನ್.ರಾಮಚಂದ್ರನ್ ಅವರು ಹೇಳಿದ ಮಾತನ್ನು ಇಲ್ಲಿ ಗಮನಿಸಬಹುದು. "ಈ ನಾಟಕದ ಕಾಲಾವಧಿ ಕೇವಲ ಒಂದು ರಾತ್ರಿ ಹರಳಯ್ಯ, ಮಧುವರಸರನ್ನು ಎಳೆಹೊಟೆಗೆ ಕಟ್ಟಿ ನಂತರ ಅವರನ್ನು ಶೂಲಕ್ಕೇರಿಸಿದ ಮಾರನೆಯ ದಿನದ ರಾತ್ರಿ; ರಾಜಭಟರು ಶರಣರಿಗೆ ಬೀದಿ ಬೀದಿಗಳಲ್ಲಿ ಬೇಟೆಯಾಡುತ್ತಿರುವ ರಾತ್ರಿ. ಎಲ್ಲೆಡೆ ಭೀತಿಯ ಕತ್ತಲೆ ಅಮಾವಾಸ್ಯೆಯ ಕತ್ತಲೆಯನ್ನು ಇನ್ನಷ್ಟು ದಟ್ಟಗೊಳಿಸಿರುವ ರಾತ್ರಿ"[೨] ಎಂದು

ನಾಟಕದ ರೂಪರೇಷೆಯನ್ನು ಕುರಿತು ಮಾತನಾಡಿದ್ದಾರೆ. ಕಂಬಾರರ ಈ ನಾಟಕ ೬ ದೃಶ್ಯಗಳಿಂದ ಕೂಡಿದ್ದು ಕೇವಲ ಒಂದು ರಾತ್ರಿಯಲ್ಲಿ ನಡೆಯುವ ವಿವಿಧ ಸನ್ನಿವೇಶಗಳ ಮೂಲಕ ವಚನ ಚಳುವಳಿಯ ಹಿನ್ನೆಲೆಯಲ್ಲಿಯೇ ನಾಟಕ ರಚನೆ ಮಾಡಿರುವುದು ವಿಶೇಷ. ಈ ನಾಟಕ ಮುಖ್ಯವಾಗಿ ಹರಳಯ್ಯ ಮತ್ತು ಮಧುವರಸರಿಗೆ ಎಳೆಹೊಟೆ ಶಿಕ್ಷೆ ವಿಧಿಸುತ್ತಿರುವುದರಿಂದ ಹಿಡಿದು ಬಿಜ್ಜಳನ ಕೊಲೆಯವರೆಗೆ ರೂಪಗೊಂಡಿದೆ.

ಈ ಮೇಲೆ ಗಮನಿಸಿದ ಎಲ್ಲಾ ನಾಟಕಗಳಿಗಿಂತ ಪ್ರಸ್ತುತ ಈ 'ಕೆಟ್ಟಿತ್ತು ಕಲ್ಯಾಣ' ನಾಟಕವು ವಿಶೇಷವಾಗಿ ಹಾಗೂ ಭಿನ್ನ ರೀತಿಯಲ್ಲಿ ಮೂಡಿಬಂದಿದೆ. ೧೯೯೫ರಲ್ಲಿ ರಚನೆಗೊಂಡ ಕೆಟ್ಟಿತ್ತು ಕಲ್ಯಾಣ ನಾಟಕ ೪೦ ದೃಶ್ಯಗಳಿಂದ ಕೂಡಿದೆ. ಈ ನಾಟಕ ಅಗ್ರಹಾರ, ಮಠ, ದೇವಾಲಯ ಮತ್ತು ಅರಮನೆಯ ಸಂಸ್ಕೃತಿಗಳಲ್ಲಿ ಬಸವಣ್ಣನವರ ಜೀವನವು ಸಾಗಿಬಂದಿದ್ದನ್ನು ಹಾಗೆಯೇ ಆ ಪರಿಸರದಲ್ಲಿ ರೂಢಿಗತವಾಗಿದ್ದ ಹಲವು ಮೌಢ್ಯಗಳೊಂದಿಗೆ ಅವರು ಹೇಗೆ ಹೋರಾಡುತ್ತ ಬಂದರೆಂಬುದನ್ನು ಒಟ್ಟಾರೆ ಅವರ ಜೀವನ ವೃತ್ತಾಂತವನ್ನು ಈ ನಾಟಕದಲ್ಲಿ ಬಿಚ್ಚಿಡುವ ಪ್ರಯತ್ನವನ್ನು ಎಂ.ಎಂ.ಕಲಬುರ್ಗಿ ಅವರು ಮಾಡಿದ್ದಾರೆ. ಹಾಗೆಯೇ ನಾಟಕದ ಅರಿಕೆಯಲ್ಲಿ 'ಬಸವಣ್ಣನವರ ಆತ್ಮ ತತ್ವಜ್ಞಾನವನ್ನು ಬಿಡದೆ, ಸಮಾಜ ತತ್ವಜ್ಞಾನವನ್ನು ಆಧರಿಸಿ ಬರೆದ ನಾಟಕವಿದು. ಅವರ ಸಮಗ್ರ ವ್ಯಕ್ತಿತ್ವಕ್ಕೆ ಬಿಡಿಸಿದ ದೃಶ್ಯರೂಪದ ವ್ಯಾಖ್ಯಾನವಿದು"[೩] ಎಂದಿದ್ದಾರೆ. ಎಂ.ಎಂ.ಕಲಬುರ್ಗಿ ಅವರು ಹೇಳಿದ 'ದೃಶ್ಯರೂಪದ ವ್ಯಾಖ್ಯಾನ' ಎಂಬುದಕ್ಕೆ ಕರೀಗೌಡ ಬೀಚನಹಳ್ಳಿ ಅವರು "ವ್ಯಾಖ್ಯಾನವು ವಿಮರ್ಶೆಯ ಅರ್ಥಾತ್ ಸಂಶೋಧನೆಯ ಒಂದು ಮಾದರಿಯ ಬರವಣಿಗೆ"[೪] ಎಂದು ಅರ್ಥೈಸಿದ್ದಾರೆ. ವಚನ ಸಾಹಿತ್ಯ ಸಂಶೋಧನೆಯಲ್ಲಿ ಅತಿ ಹೆಚ್ಚು ಆಸಕ್ತಿ ಹೊಂದಿದ್ದ ಎಂ.ಎಂ.ಕಲಬುರ್ಗಿ ಅವರ ಬರವಣಿಗೆ ಸಂಶೋಧನಾತ್ಮಕವಾದದ್ದು. ಸೃಜನಶೀಲ ಸಾಹಿತ್ಯದಿಂದ ಕೂಡಿದ ನಾಟಕವಾದರೂ ಕೂಡ ಈ ನಾಟಕದ ಪ್ರತಿದೃಶ್ಯಗಳಲ್ಲೂ ಸಂಶೋಧನೆಯ ಕವಲುಗಳು ಎದ್ದು ಕಾಣುತ್ತವೆ. "ಸೃಜನಶೀಲ ಮತ್ತು ಸಾಹಿತಿಗಳನ್ನು ಪ್ರೀತಿಸುವ ಎಂ.ಎಂ.ಕಲಬುರ್ಗಿ ಸ್ವತಃ ಕ್ರಮಿಸಿದ ದಾರಿ ಸಂಶೋಧನೆ ಮತ್ತು ವಿಮರ್ಶೆಯ ಕ್ಷೇತ್ರದ್ದು. ಅನೇಕ ವರ್ಷಗಳಿಂದ ಅಲ್ಲಿ ಕೃಷಿ ಮಾಡಿ ನೆಲೆಯೂರಿರುವ ಅವರಿಗೆ ಈಗಲೂ ಸೃಜನಶೀಲ ಲೇಖನ ಪ್ರಿಯವೆನಿಸಿದರೂ ಅವರ ವಿವರಣಾತ್ಮಕ, ವಿಶ್ಲೇಷಣಾತ್ಮಕ, ಸಂಶೋಧನೆಯ ದಿಕ್ಕಿಗೆ ಹೊರಳುವುದು ಸಹ ಅನ್ನುವುದು ಅವರ ಕೆಟ್ಟಿತ್ತು ಕಲ್ಯಾಣ ವಿಶದಪಡಿಸುತ್ತದೆ"[೫] ಎಂಬ ಸಿದ್ಧಲಿಂಗ ಪಟ್ಟಣಶೆಟ್ಟಿ ಅವರ ಮಾತಿನಲ್ಲಿ ಎಂ.ಎಂ.ಕಲಬುರ್ಗಿ ಅವರ ಮನಸ್ಥಿತಿ ಸಂಶೋಧನೆ ಕಡೆಗೆ ಹೆಚ್ಚು ವಾಲಿರುವುದು ತಿಳಿದುಬರುತ್ತದೆ.

ಈ ನಾಟಕವು ಚರ್ಚೆ ಮತ್ತು ಜಿಜ್ಞಾಸೆಯನ್ನು ಒಳಗೊಂಡ ರಂಗದ ಮೂಲಕ ಆರಂಭವಾಗುತ್ತದೆ. ಬಸವಣ್ಣನಲ್ಲಿ ಎದುರುಗೊಳ್ಳುವುದೇ ಪ್ರಶ್ನೆ ಮತ್ತು ನಿರಾಕರಣೆಗಳ ಮೂಲಕ. ಇಲ್ಲಿನ ಪ್ರಶ್ನೆ ಮತ್ತು ನಿರಾಕರಣೆಗಳು ಸ್ಥಾವರ ಮೌಲ್ಯವನ್ನು ಕುರಿತದ್ದಾಗಿದೆ. ಇಡೀ ನಾಟಕದ ಉದ್ದಕ್ಕೂ ಈ ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ ಎಂಬ ಘೋಷಣೆ ಹಿಮ್ಮೇಳ ಗಾಯನದಂತೆ ಪುನರಾವರ್ತಿತಗೊಳ್ಳುತ್ತಾ ಹೋಗುತ್ತದೆ. "ಈ ಜಂಗಮ ಎಂಬ ಪರಿಕಲ್ಪನೆಯ ನಿರಂತರ ಚಲನಶೀಲತೆಯನ್ನು, ಕ್ರಿಯಾಶೀಲತೆಯನ್ನು ಒಳಗೊಂಡಿರುವಂತಹದ್ದು."[೬] ಜಂಗಮ ಅಂದರೆ ಸಮಾಜ, ಸ್ಥಾವರಕ್ಕೆ ಅಳಿವಿದೆ ಜಂಗಮಕ್ಕೆ ಅಳಿವಿಲ್ಲ. ಅದು ಸದಾ ಜೀವಂತಿಕೆಯುಳ್ಳದ್ದಾಗಿರುತ್ತದೆ ಎಂಬ ಅಂಶ ಇಲ್ಲಿ ವ್ಯಕ್ತವಾಗಿದೆ.

'ಕೆಟ್ಟಿತ್ತು ಕಲ್ಯಾಣ' ಎನ್ನುವುದು ಭೂತ ಮತ್ತು ವರ್ತಮಾನಗಳ ಎರಡೂ ನೆಲೆಯಲ್ಲಿಯೂ ಚರ್ಚಿಸಲು ಇಲ್ಲಿ ಅವಕಾಶವಿದೆ. ಅಂದರೆ ಸಂಪ್ರದಾಯ ಆಸ್ತಿಕವಾದಿಗಳಿಂದ ಕಲ್ಯಾಣ ಕೆಟ್ಟಿದೆ ಎಂದೂ ಮತ್ತು ಮಾನವತಾವಾದಿ ಬಸವಣ್ಣನಿಂದ ಕಲ್ಯಾಣ ಕೆಡುವ ಸಾಧ್ಯತೆ ಇದೆ ಎಂಬ ಹಾರವರ ಉದ್ಘೋಷ ಒಂದು ರೀತಿಯ ವೈರುಧ್ಯವಾಗಿದೆ. ತುಂಬಾ ವೈಚಾರಿಕ ನೆಲೆಗಟ್ಟಿನಲ್ಲಿ ನಿಲ್ಲುವ ಬಸವಣ್ಣ ಬ್ರಾಹ್ಮಣ್ಯವನ್ನು ತೊರೆದರೂ ಆತನ ಮೂಲ ಸಂವೇದನೆಗಳು ಹೆಚ್ಚು ಬದಲಾಗಿಲ್ಲ. ಹಾಗೆಯೇ ಹೊಸ ಶರಣರ ಸಮಾಜವನ್ನು ಕಟ್ಟಹೊರಟ ಬಸವಣ್ಣನಿಗೆ ಈ ಹೊಸ ಮತ ಮುಂದೊಮ್ಮೆ ಅದೂ ಸಹ ಒಂದು ಜಾತಿಯಾಗುವ ಸಾಧ್ಯತೆ ಇದೆ ಎಂಬ ಅಪಾಯವನ್ನು ಅರಿತವನಾಗಿದ್ದ ಎಂಬುದನ್ನು ಹೇಳುವ ಮೂಲಕ ಬಸವಣ್ಣನ ಚಿಂತನೆಗಳು ಸಮಕಾಲೀನ ದಿನದ ಬೆಳವಣಿಗೆಗಳಿಗೂ ಅನ್ವಯವಾಗುವಂತೆ ಚಿತ್ರಿಸಿದ್ದಾರೆ.

ಈ 'ಕೆಟ್ಟಿತ್ತು ಕಲ್ಯಾಣ" ನಾಟಕವನ್ನು ನಾವು ವಿವಿಧ ನೆಲೆಗಳಲ್ಲಿ ಗಮನಿಸಬಹುದು.

### ೭.೧. ಕಾಯಕ ಮತ್ತು ದಾಸೋಹಸಂಬಂಧಿ ಚಿಂತನೆ

೧೨ನೇ ಶತಮಾನದಲ್ಲಿನ ವಚನಕಾರರು ಕಾಯಕ ಮತ್ತು ದಾಸೋಹಗಳಿಗೆ ವಿಶೇಷವಾದ ಮಹತ್ವವನ್ನು ನೀಡಿದರು. ಅದರ ಮೂಲಕ ಸಮಾಜದಲ್ಲಿನ ಅಸಮಾನತೆಯನ್ನು ಹೋಗಲಾಡಿಸಲು ಶ್ರಮಿಸಿದರು. ಪ್ರತಿಯೊಬ್ಬ ವ್ಯಕ್ತಿಯೂ ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕು. ಕಾಯಕದಲ್ಲಿ ಮೇಲು-ಕೀಳೆಂಬುದಿಲ್ಲ. ಪ್ರತಿಯೊಂದು ಕಾಯಕ್ಕೂ ಸಮಾನವಾದ ಸ್ಥಾನಮಾನವಿತ್ತು. ಕಾಯಕದಲ್ಲಿ ಆಸೆ ಆಮಿಷಗಳಿರಬಾರದು. ಇಲ್ಲಿ ಗಳಿಕೆಗೆ ಅವಕಾಶವಿಲ್ಲ. ಯಾವುದೇ ವ್ಯಕ್ತಿ ತಾನು ಕಾಯಕ ಮಾಡಿದ್ದರಿಂದ ಬಂದ ಪ್ರತಿಫಲಗಳನ್ನು ತನಗೆ ಅಗತ್ಯವಾದಷ್ಟು ಬಳಸಿಕೊಂಡು ಉಳಿದದ್ದನ್ನು ಇತರರಿಗೆ ಹಂಚುವುದೇ ದಾಸೋಹ ಎನಿಸುತ್ತದೆ. ಇಲ್ಲಿ ತನ್ನದು ಎಂಬುದು ಯಾವುದೂ

ಇಲ್ಲ. ಎಲ್ಲಾ ಶಿವನದ್ದು. ಅವನು ನೀಡಿದ್ದನ್ನು ಪರರೊಂದಿಗೆ ಹಂಚಿ ತಿನ್ನುವುದೇ ದಾಸೋಹ. ಕಾಯಕದಿಂದ ಬಂದದ್ದನ್ನು ತಾನೊಬ್ಬನೇ ಬಳಸಿಕೊಳ್ಳದೇ ಪ್ರತಿಯೊಬ್ಬರು ಸದ್ಬಳಕೆ ಮಾಡಿಕೊಳ್ಳುವುದು ಎಂಬ ವಿಶಾಲ ಅರ್ಥವನ್ನು ದಾಸೋಹತತ್ವ ಹೊಂದಿದೆ. ಇಲ್ಲಿ ದಾಸೋಹ ಮಾಡುವುದು ಜಂಗಮರಿಗೆ. ಜಂಗಮ ಅಂದರೆ ಸಮಾಜ. ಇಲ್ಲಿ ಕಾಯಕ ಮತ್ತು ದಾಸೋಹ ಎರಡೂ ಒಂದಕ್ಕೊಂದು ಪೂರಕವಾದವುಗಳು. ಒಂದು ಉತ್ಪಾದನೆಯ ಮೂಲವಾದರೆ, ಮತ್ತೊಂದು ವಿತರಣೆಯ ಮೂಲದ್ದು. ಕಾಯಕವು ಸತ್ಯಶುದ್ಧವಾಗಿರಬೇಕು ಮತ್ತು ದಾಸೋಹ ಮನೋಭಾವದಿಂದ ಕೂಡಿರಬೇಕೆಂಬ ಸಂದೇಶವನ್ನು ಶರಣ ಸಮಾಜವು ನೀಡಿತ್ತು. ಈ ಅಂಶವು 'ಕೆಟ್ಟಿತ್ತು ಕಲ್ಯಾಣ' ನಾಟಕದಲ್ಲಿ ಮೂಡಿಬಂದ ಬಗೆಯನ್ನು ಇಲ್ಲಿ ಗಮನಿಸಬಹುದಾಗಿದೆ.

ಕೂಡಲಸಂಗಮದಿಂದ ತೆರಳಿದ ಬಸವಣ್ಣ ಕಲ್ಯಾಣಕ್ಕೆ ತೆರಳಿ ಅಲ್ಲಿ ತನ್ನ ಸೋದರಮಾವ ಬಲದೇವನ ಮನೆಗೆ ತೆರಳುತ್ತಾನೆ. ಅಲ್ಲಿ ಬಲದೇವನು ಬಿಜ್ಜಳನ ಆಸ್ಥಾನದಲ್ಲಿ ಮಹಾಗಣಕಾಧಿಕಾರಿಯಾಗಿ ಕೆಲಸಕ್ಕೆ ಸೇರುವ ಸಂದರ್ಭದಲ್ಲಿ ಬಸವಣ್ಣನಿಗೆ ಕಾಯಕದ ಬಗೆಗಿನ ನಿಷ್ಠೆಯನ್ನು ಎಂ.ಎಂ.ಕಲಬುರ್ಗಿ ಅವರು ಈ ನಾಟಕದಲ್ಲಿ ವಿಶೇಷವಾಗಿ ಕಟ್ಟಿಕೊಟ್ಟಿದ್ದಾರೆ. ಕೆಲಸಕ್ಕೆ ಸೇರಲು ಬಂದ ಬಸವಣ್ಣನಿಗೆ ಬಿಜ್ಜಳ ನಿನ್ನ ಅರ್ಹತೆಗಳೇನು? ಎಂಬ ಪ್ರಶ್ನೆಗೆ

"ಬಸವಣ್ಣ: ಪ್ರಾಮಾಣಿಕತೆ, ಪರಿಶ್ರಮ.
ಬಿಜ್ಜಳ: ಹಾಂ! ಆಸಕ್ತಿ?
ಬಸವಣ್ಣ: ಕಾರ್ಯ ಯೋಜಿಸೋದು, ಯೋಜನೆ ಕಾರ್ಯಗತಗೊಳಿಸೋದು.
ಬಿಜ್ಜಳ: ಭಲೇ, ಸೋಮವಾರದಿಂದ ಕೆಲಸಕ್ಕೆ ಬಂದುಬಿಡು.
ಬಸವಣ್ಣ: ಪ್ರಭೂ, ಕೆಲಸಗಾರನಿಗೆ ಮುಖ್ಯವಾದುದು ದಿವಸವಲ್ಲ, ಕೆಲಸ"[೫]

ಈ ಮೇಲಿನ ದೃಶ್ಯದಲ್ಲಿ ಬಸವಣ್ಣನ ಕಾಯಕದ ಬಗೆಗಿನ ಪ್ರಾಮಾಣಿಕತೆ, ಪರಿಶ್ರಮ ಮತ್ತು ಸಮಯ ಪರಿಪಾಲನೆ ಇಲ್ಲಿ ಮುಖ್ಯವಾಗಿ ಗೋಚರವಾಗುತ್ತದೆ. ಒಬ್ಬ ಕೆಲಸಗಾರನಿಗೆ ಇರಬೇಕಾದ ಅರ್ಹತೆಗಳನ್ನು ಹೇಳುವುದಷ್ಟೇ ಅಲ್ಲದೇ, ಅದಕ್ಕೆ ತಕ್ಕಂತೆ ನಡೆದುಕೊಳ್ಳುವ ಬಸವಣ್ಣನ ವ್ಯಕ್ತಿತ್ವ ಹಲವರಿಗೆ ಮಾದರಿಯಾಗಿ ಕಂಡುಬರುತ್ತದೆ. ಇಲ್ಲಿ ಕೆಲಸಕ್ಕೆ ಮಹತ್ವ ಕೊಡಬೇಕೆ ಹೊರತು ವಾರದ ದಿನಗಳಿಗೆ ಅಲ್ಲ ಎಂಬಲ್ಲಿ ಸಾಂಪ್ರದಾಯಿಕತೆಯನ್ನು ಮುರಿದು ಶ್ರಮ ಜೀವನಕ್ಕೆ ಹೆಚ್ಚಿನ ಮಹತ್ವ ನೀಡಿದ್ದಾರೆ. ಪ್ರಸ್ತುತ ದಿನಮಾನಗಳಲ್ಲಿ ಕೆಲಸಕ್ಕೆ ಹೋಗುವ ಮೊದಲು ಸಂಬಳದ ಬಗ್ಗೆ ಸಮಯದ ಬಗ್ಗೆ ವಿಚಾರಿಸುವವ ಬಸವಣ್ಣ ಪ್ರತಿಫಲಾಪೇಕ್ಷೆಗಳಿಲ್ಲದೇ ಸಮಯದ ಮಿತಿಯ ಕಡೆಗೂ ಗಮನ ಕೊಡದೆ ಕೆಲಸದಲ್ಲಿ ನಿರತರಾಗುವ ಕುರಿತು ತಿಳಿಸಿದ್ದಾರೆ. ಇಲ್ಲಿ ಮುಖ್ಯವಾಗಿ 'ನುಡಿದಂತೆ ನಡೆಯುವ' ಬಸವಣ್ಣನ ತತ್ವವನ್ನು ತಿಳಿಸುವುದು ಎಂ.ಎಂ. ಕಲಬುರ್ಗಿ ಅವರ ಉದ್ದೇಶವಾಗಿದೆ.

ಬಸವಣ್ಣ ಈ ಕಾಯಕ ನಿಷ್ಠೆಗೆ ಪ್ರತೀಕವೆಂಬಂತೆ ಗಣಕಶಾಲೆಗೆ 'ಕಾಯಕವೇ ಕೈಲಾಸ' ಎಂಬ ನಾಮಫಲಕವನ್ನು ಹಾಕುತ್ತಾನೆ ಅಷ್ಟೇ ಅಲ್ಲದೇ 'ಸರಿಯಾದ ಸಮಯಕ್ಕೆ ಸರಿಯಾದ ಕೆಲಸ ಮಾಡು' ಎಂಬ ಹೊಸ ನೆಲೆಯಿಂದ ಗಣಕಶಾಲೆಯ ಕೆಲಸದ ವೇಗ ಮತ್ತು ಗುಣಮಟ್ಟವನ್ನು ಹೆಚ್ಚಿಸುತ್ತಾನೆ. ಇದನ್ನು ಕಂಡ ಬಿಜ್ಜಳನಿಗೆ ಹಾಗೂ ಅಲ್ಲಿನ ಜನತೆಗೆ ಸಂತೋಷ ಉಂಟುಮಾಡುತ್ತದೆ. ಆದರೆ ಅಲ್ಲಿನ ಉಳಿದ ಅಧಿಕಾರಿ ವರ್ಗದವರಿಗೆ ಬಸವಣ್ಣನ ಕಾಯಕ ಸಿಟ್ಟಿಗೆಡೆ ಮಾಡಿಕೊಡುತ್ತದೆ. ಬಸವಣ್ಣನ ಕೆಲಸದ ವೇಗ ಮತ್ತು ಪ್ರಾಮಾಣಿಕತೆ ಮುಂದೊಂದು ದಿನ ನಿಮ್ಮ ಕೆಲಸಕ್ಕೆ ಧಕ್ಕೆ ಬರಬಹುದೆಂಬ ಮನಸ್ಥಿತಿ ಹಾಗೂ ನಮಗಿಂತ ಬಿಜ್ಜಳ ಮಹಾರಾಜನಿಗೆ ಹತ್ತಿರವಾಗುವ ಮೂಲಕ ಮೇಲ್ಮಟ್ಟಕ್ಕೆ ಬೆಳೆಯುವನೆಂಬ ಸಂಕುಚಿತ ಮನಸ್ಥಿತಿಯು ಕಾರಣವಾಗುತ್ತದೆ. ಬಸವಣ್ಣನ ಮನಸ್ಥಿತಿಯನ್ನು ಕಂಡು ಜನರು ತಮ್ಮ ತಮ್ಮಲ್ಲಿಯೇ ಮಾತನಾಡಿಕೊಳ್ಳುವ ಬಗೆಯನ್ನು ಈ ಕೆಳಗಿನ ದೃಶ್ಯಗಳಲ್ಲಿ ಎಂ.ಎಂ.ಕಲಬುರ್ಗಿ ಅವರು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ.

"ಸೇವಕ ನಿನ್ನೆ ಹೇಳಿದರು 'ಹಣವನ್ನು ನೀರಿನ ಹಂಗ ಗಳಿಸಿ, ತೀರ್ಥದ ಹಂಗ ಬಳಸ್ರಿ.' ರಾಜ್ಯವಿಸ್ತಾರ ಯಾಕ ಬೇಕು? ಯುದ್ಧ ಅನವಶ್ಯ. ಎಲ್ಲರೂ ದುಡಿದರ, ದಯೆಯಿಂದ ನಡೆದರ ರಾಜ್ಯಾಡಳಿತವೂ ಬ್ಯಾಡ, ಅಂತ.

ಸೇವಕ ೨: ಹೇಳೋದೇನು ಬಂತು? ಹೇಳಿದಾಂಗ ಬಾಳತಾರ. ಶಕ್ತಿ ಇರುವಷ್ಟು ದುಡೀತಾರ, ಅವಶ್ಯವಿರುವಷ್ಟು ಸಂಬಳ ಪಡೀತಾರ, ಇದು ಕೆಲಸ-ಸಂಬಳಗಳ ಬಗ್ಗೆ ಇವರು ಇಟಗೊಂಡ ನೀತಿ."[೮]

ದುಡಿಮೆಯ ಹಣದ ಮಹತ್ವವನ್ನು ಹೇಳುತ್ತಾರೆ. ಪ್ರತಿಯೊಬ್ಬರು ದುಡಿಯುತ್ತಾ ದಯೆಯಿಂದ ನಡೆದರೆ ಯಾವ ರಾಜ್ಯದ ಆಡಳಿತವೂ ಬೇಡ. ಬಸವಣ್ಣನ ಕಾಯಕನಿಷ್ಠೆಯ ಬಗ್ಗೆ ಅಲ್ಲಿನ ಸೇವಕರು ಮೆಚ್ಚುಗೆಯ ಮಾತುಗಳನ್ನಾಡಿರೋದು ಕಂಡುಬರುತ್ತದೆ. ಬಸವಣ್ಣ ಹೇಳಿದಂತೆ ನಡೆಯುವ ಆದರ್ಶ ವ್ಯಕ್ತಿಯಾಗಿ ಇಲ್ಲಿ ಕಂಡುಬರುತ್ತಾನೆ. ಶ್ರಮಸಂಸ್ಕೃತಿ ಇಲ್ಲಿ ಅಭಿವ್ಯಕ್ತಗೊಂಡಿದೆ. ಶಕ್ತಿ ಇರುವಷ್ಟು ದುಡಿದು ಅಗತ್ಯಕ್ಕೆ ತಕ್ಕಷ್ಟು ಸಂಬಳ ಪಡೆಯುವ ಬಸವಣ್ಣನ ನಿಷ್ಠೆ, ಪ್ರಾಮಾಣಿಕತೆ ಬಗ್ಗೆ ಸೇವಕರು ಮೆಚ್ಚುಗೆಯ ಮಾತುಗಳನ್ನು ಆಡಿರುವುದು ಕಂಡುಬರುತ್ತದೆ. ಅಷ್ಟೇ ಅಲ್ಲದೇ ಬಸವಣ್ಣ ಕೆಲವೊಮ್ಮೆ ಗಣಕಶಾಲೆಯ ಸೇವಕ ಬರದಿದ್ದ ಸಂದರ್ಭದಲ್ಲಿ ಬಸವಣ್ಣ ಗಣಕ ಶಾಲೆಯ ಅಧಿಕಾರಿ ಎಂಬ ಅಹಂಭಾವ ತಾಳದೇ ತಾನೇ ಸ್ವತಃ ಆ ಗಣಕಶಾಲೆಯ ಬಾಗಿಲನ್ನು ತೆಗೆದು ಕಸವನ್ನು ಗುಡಿಸಿ, ಸ್ವಚ್ಛಗೊಳಿಸುವುದನ್ನು ಕಂಡ ಸೇವಕರು ತಮ್ಮ ತಮ್ಮಲ್ಲಿಯೇ ಮಾತನಾಡುತ್ತಾ ನಾವೆಲ್ಲಾ ಬಸವಣ್ಣನಿಂದ ದೊಡ್ಡ ಪಾಠಗಳನ್ನು ಕಲಿತೆವು ಎನ್ನುತ್ತಾ ಬಸವಣ್ಣನ ಬಗೆಗೆ ಗೌರವವನ್ನು ವ್ಯಕ್ತಪಡಿಸುತ್ತಾರೆ. ಈ ಮೇಲಿನ ಅಂಶವನ್ನು

ಗಮನಿಸಿದಾಗ ಬಸವಣ್ಣನ ಕಾಯಕನಿಷ್ಠೆ ಇತರರಿಗೆ ಆದರ್ಶಪ್ರಾಯವಾಗುವ ನೆಲೆಯಲ್ಲಿ ಕಟ್ಟಿಕಟ್ಟಿದ್ದಾರೆ.

ಬಸವಣ್ಣ ಭಂಡಾರದ ಅಧಿಕಾರವನ್ನು ವಹಿಸಿಕೊಂಡು ಇಲ್ಲಿಯೂ ಪ್ರಾಮಾಣಿಕವಾಗಿ ಕಾರ್ಯ ನಿರ್ವಹಿಸುವುದಾಗಿ ಬಿಜ್ಜಳನಿಗೆ ಹೇಳುತ್ತಾನೆ. ಭಂಡಾರದ ಜವಾಬ್ದಾರಿಯನ್ನು ಹೊತ್ತ ಬಸವಣ್ಣ ದೀನದಲಿತರ ಪರವಾಗಿ ಧ್ವನಿಯಾಗಿ ನಿಲ್ಲುತ್ತಾನೆ. ಇಷ್ಟಲಿಂಗವನ್ನು ಎಲ್ಲರೂ ಧರಿಸುವ ಮೂಲಕ ಸಾಮಾಜಿಕ ಸಮಾನತೆಯನ್ನು ತರಲು ಪ್ರಯತ್ನಿಸುತ್ತಾನೆ. ಇದು ನಮ್ಮ ಬಡತನ ನೀಗಿಸುವುದೇ ಎಂಬ ಪ್ರಜೆಯ ಪ್ರಶ್ನೆಗೆ ಬಸವಣ್ಣ ಮತ್ತು ಪ್ರಜೆಯ ಸಂಭಾಷಣೆ ಈ ಕೆಳಗಿನಂತಿದೆ.

"ಬಸವಣ್ಣ: 'ದುಡಿಮೆಯೊಂದೇ ಇದಕ್ಕೆ ಅನಿವಾರ್ಯ ದಾರಿ'

ಪ್ರಜೆ ೧: ಸ್ವಾಮೀ, ದುಡಿಯಲು ಹೊಲ ಹೋಗಲಿ, ಉಪಕರಣಗಳು ನಮ್ಮಲ್ಲಿ ಇಲ್ಲ"[೯]

ಈ ಮೇಲಿನ ಸಂಭಾಷಣೆಯನ್ನು ಗಮನಿಸಿದಾಗ ಪ್ರಪಂಚದಲ್ಲಿ ಬಡತನಕ್ಕೆ ಮುಖ್ಯ ಕಾರಣ ದುಡಿಮೆ ಇಲ್ಲದೇ ಇರೋದು. ಪ್ರತಿಯೊಬ್ಬರು ದುಡಿದರೆ, ಅದರಲ್ಲೂ ಸಾಮೂಹಿಕವಾಗಿ ದುಡಿದರೆ ಬಡತನವೆಂಬ ಪದವನ್ನೇ ಮರೆಯಬಹುದೆಂಬ ತತ್ವ ಬಸವಣ್ಣನದ್ದಾಗಿದೆ. ದುಡಿಮೆಗೆ ಅಗತ್ಯವಾಗಿ ಬೇಕಾಗಿರೋದು ಹೊಲ, ಹಾಗೆಯೇ ಆ ಹೊಲವನ್ನು ಉಳುಮೆ ಮಾಡಲು ಬೇಕಾಗಿರೋದು, ಅಗತ್ಯವಾದ ಉಪಕರಣಗಳು. ಅವುಗಳೇ ಇಲ್ಲ ಎಂಬ ಪ್ರಜೆಯ ಮಾತಿಗೆ ಬಸವಣ್ಣ ರಾಜ್ಯಭಂಡಾರದಿಂದ ಅವುಗಳನ್ನು ಭರಿಸುವುದಾಗಿ ಹೇಳುತ್ತಾನೆ. ಇದರ ಮೂಲಕ ಪ್ರಜೆಗಳ ಬಡತನವನ್ನು ನೀಗಿಸಲು ಪ್ರಯತ್ನಿಸುತ್ತಾನೆ. "ರಾಜ್ಯದ ಭಂಡಾರ ರಾಜನದಲ್ಲ, ಪ್ರಜೆಗಳಾದ ನಿಮ್ಮದು."[೧೦] ದೀನದಲಿತರ ಧ್ವನಿಯಾಗಿ ನಿಲ್ಲುತ್ತಾನೆ. ಅವರಿಗೆ ಅಗತ್ಯವಾದ ಭೂಮಿ, ನಿವೇಶನ, ಉಪಕರಣಗಳನ್ನು ಬಟ್ಟೆ ಬರೆಗಳನ್ನು ಮತ್ತು ಹಣವನ್ನು ಹಂಚುತ್ತಾನೆ. ರಾಜ್ಯದಲ್ಲಿ ಬಡತನವನ್ನು, ಮೇಲು-ಕೀಳು ಎಂಬ ಭಾವವನ್ನು ತೊಲಗಿಸಿ ಸಮಾನತೆಯನ್ನು ತರಲು ಪ್ರಯತ್ನಿಸುವ ಬಸವಣ್ಣನ ನಿಲುವನ್ನು ಎಂ.ಎಂ.ಕಲಬುರ್ಗಿ ಅವರು ಎತ್ತಿ ಹಿಡಿಯುವ ಪ್ರಯತ್ನ ಮಾಡಿದ್ದಾರೆ.

ಮುಂದೆ ಬಸವಣ್ಣ ಜಂಗಮರನ್ನು ಉದ್ದೇಶಿಸಿ "ನೀವು ದೇವರು ಭಾವಶುದ್ಧಿ ಉಳ್ಳ ನಿಮ್ಮ ಕಾಯ ಕೈಲಾಸ ನಿಮ್ಮ ಕಾಯಕವೂ ಕೈಲಾಸ"[೧೧] ಎಂದು ಹೇಳುತ್ತಾನೆ. ಕಾಯಕದ ಪರಿಕಲ್ಪನೆಯನ್ನು ಬಿಚ್ಚಿಡುತ್ತಾನೆ. ಬಸವಣ್ಣ "ಮೈ ಅಷ್ಟನ್ನೇ ಅಲ್ಲ, ಮನಸ್ಸನ್ನು ದುಡಿಸೋದು ತಾವು ಬದುಕಲು ಅಲ್ಲ, ಸಮಾಜ ಬದುಕಲು ದುಡಿಯೋದು ಕಾಯಕ".[೧೨]

ಇಲ್ಲಿ ಬಸವಣ್ಣ ಮೈಮನಸ್ಸು ಎರಡನ್ನು ದುಡಿಸಬೇಕು. ಅದು ಕೇವಲ ತಾವು ಬದುಕಲಿಕ್ಕೆ ಅಲ್ಲ, ಇಡೀ ಸಮಾಜವನ್ನು ಬದುಕಿಸಲು ದುಡಿಯೋದು ಕಾಯಕ ಎಂಬ ಪರಿಕಲ್ಪನೆಯನ್ನು ನೀಡಿದ್ದಾರೆ. ವೃತ್ತಿ ಆಧಾರಿತವಾದ ಕಾಯಕಗಳನ್ನು ಕುರಿತು ಚರ್ಚೆ ಕೂಡ ಈ ನಾಟಕದಲ್ಲಿ ಕಂಡುಬರುತ್ತದೆ. ಉದಾಹರಣೆ ಈ ಕೆಳಗಿನಂತಿದೆ.

"ಜಂಗಮ ೧: ನಮ್ಮಲ್ಲಿ ಬಹಳ ಜನ ಕುಂಬಾರ, ಕಂಬಾರ, ಮಡಿವಾಳ, ಸಮಗಾರ, ಡೋಹರ, ನಾವಿಂದ ಕೆಲಸ ಮಾಡ್ತಾರ. ನಮ್ಮದು ಕೀಳು ಕೆಲಸ ಅಂತ ಹೇಳ್ತಾರ.

ಬಸವಣ್ಣ: ವ್ಯಕ್ತಿ ವ್ಯಕ್ತಿಗಳಲ್ಲಿ ಮೇಲು-ಕೀಳು ಇಲ್ಲ. ಹಾಗೇ ವೃತ್ತಿ ವೃತ್ತಿಗಳಲ್ಲಿಯೂ ಮೇಲು-ಕೀಳುಗಳಿಲ್ಲ. ಶ್ರದ್ಧೆಯಿಂದ ಮಾಡಿದ ಸಮ್ಮಗಾರಿಕೆ, ಶ್ರದ್ಧೆಯಿಲ್ಲದೆ ಮಾಡಿದ ಪೂಜೆಗಿಂತ ಶ್ರೇಷ್ಠ. ಹೀಗಾಗಿ ಅವರವರ ಮನೆತನದ ವೃತ್ತಿ ಅಥವಾ ಅವರಿಗೆ ಇಷ್ಟವಾದ ವೃತ್ತಿಗಳನ್ನು ಕಾಯಕಗಳನ್ನಾಗಿ ಪರಿವರ್ತಿಸಿಕೊಂಡವರೆಲ್ಲರೂ ಭೂಮಿಯ ಮೇಲಿನ ದೇವರು."[೧೦]

ಇಲ್ಲಿ ಕಾಯಕ ಸಿದ್ಧಾಂತದ ಮೂಲಕ ಸಾಮಾಜಿಕ ಸಮಾನತೆಯನ್ನು ತರಲು ಬಸವಣ್ಣ ಪ್ರಯತ್ನಿಸಿದರು. ವೃತ್ತಿ ಮೂಲವಾದ ಜಾತಿಯನ್ನು ಅಲ್ಲಗಳೆಯುವ ಎಲ್ಲ ಕೆಲಸಗಳು ಸಮಾನವಾದವುಗಳು ಎಂದು ಭಾವಿಸುವುದರ ಮೂಲಕ ಕಾಯಕದ ಮಟ್ಟಕ್ಕೇರಿಸಿ ಪ್ರಚಾರ ಪಡಿಸಿದುದು ಮಹತ್ವದ ಸಂಗತಿಯಾಗಿದೆ. ಕಾಯಕದಲ್ಲಿ ಮೇಲು-ಕೀಳೆಂಬ ಭಾವ ಇಲ್ಲ. ಶ್ರದ್ಧೆಯಿಂದ ಮಾಡುವುದೇ ಕಾಯಕ. ದೇವರ ಪರಿಕಲ್ಪನೆಯನ್ನು ಕಾಯಕದ ಮೂಲಕ ಚಿತ್ರಿಸಿದ್ದಾರೆ. ಬಸವಣ್ಣ ದಾಸೋಹ ಪರಿಕಲ್ಪನೆಯನ್ನು ವಿಶಾಲ ದೃಷ್ಟಿಕೋನದಲ್ಲಿ ಚಿತ್ರಿಸಿಕೊಟ್ಟಿದ್ದಾನೆ. ದಾನ ಮತ್ತು ದಾಸೋಹ ಎರಡೂ ಕೂಡ ಮೇಲ್ನೋಟಕ್ಕೆ ಒಂದೇ ರೀತಿಯಾಗಿ ಕಂಡುಬಂದರೂ ವಿಭಿನ್ನ ಅರ್ಥವನ್ನು ಒಳಗೊಂಡಿರುವುದನ್ನು ಅರ್ಥೈಸಿದ್ದಾರೆ. 'ದಾನ' ಎಂದರೆ ನಮ್ಮ ಒಡೆತನದ ವಸ್ತುವನ್ನು ಇನ್ನೊಬ್ಬರ ಒಡೆತನಕ್ಕೆ ಕೊಡುವುದು. 'ದಾಸೋಹ' ಎಂದರೆ ಇಲ್ಲಿ ನಮ್ಮ ನಿಮ್ಮ ಒಡೆತನದಲ್ಲಿ ಇಲ್ಲದ್ದು. ಅಂದರೆ ದೇವರ ಒಡೆತನದ್ದು ಎಂದು ಭಾವಿಸಿ ಇನ್ನೊಬ್ಬರಿಗೆ ವಿನಿಯೋಗಿಸುವುದು. ಇಲ್ಲಿ ಸಂಗ್ರಹಕ್ಕೆ ಅವಕಾಶ ಇಲ್ಲ. ದಾಸೋಹ ಮಾಡುವ ಮೂಲಕ ನಾವೆಲ್ಲ ಸುಖವಾಗಿ ಬಾಳಬಹುದು, ಭಂಡಾರವೂ ಬೆಳೆಯುತ್ತದೆ ಎಂಬ ಅಂಶ ಇಲ್ಲಿ ವ್ಯಕ್ತವಾಗಿದೆ. ಇಲ್ಲಿ ಬಸವಣ್ಣ ಕಾಯಕ ಮತ್ತು ದಾಸೋಹ ಪರಿಕಲ್ಪನೆಗಳಿಂದ ಸಾಮಾಜಿಕ ಸಮಾನತೆಯನ್ನು ತರುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರು ಎಂಬುದನ್ನು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿಯಾಗಿದೆ. ಬಸವಣ್ಣನ ತತ್ವಗಳನ್ನು ಅಳವಡಿಸಿಕೊಂಡ ಎಂ.ಎಂ.ಕಲಬುರ್ಗಿ ಅವರು ಕಾಯಕ ಮತ್ತು ದಾಸೋಹದ ಮೂಲಕ ಸಮಾನತೆ ಸಾಧ್ಯ ಎಂಬುದನ್ನು ತಿಳಿಸಲು ಪ್ರಯತ್ನಿಸಿದ್ದಾರೆ.

## ೭.೨. ಲಿಂಗಸಂಬಂಧಿ ಚಿಂತನೆ

ಸಮಾಜದಲ್ಲಿ ವರ್ಗ ಮತ್ತು ಜಾತಿಯಂತೆ ಲಿಂಗದಲ್ಲಿಯೂ ವ್ಯತ್ಯಾಸ ಕಂಡುಬರುತ್ತಿತ್ತು. ಪುರುಷರು ಮೇಲು, ಸ್ತ್ರೀಯರು ಕೀಳು ಎಂಬ ಮನೋಭಾವ ಬೆಳೆದುಬಂದಿತ್ತು. ಆದರೆ ಬಸವಣ್ಣ ಪ್ರಕೃತಿದತ್ತವಾದಂತಹ ಸ್ತ್ರೀಪುರುಷರಲ್ಲಿ ಯಾವುದೇ ರೀತಿಯ ಭೇದ ಭಾವ ಇಲ್ಲ, ಎಲ್ಲರೂ ಸಮಾನರು ಎಂಬ ಸತ್ಯವನ್ನು ಪ್ರತಿಪಾದಿಸಿದನು. ಈ ನಾಟಕ ಪ್ರಾರಂಭವಾಗುವುದೇ ಬಸವಣ್ಣ ತನ್ನ ಜನಿವಾರವನ್ನು ಧಿಕ್ಕರಿಸುವ ಮೂಲಕ. ಆ ಸಂದರ್ಭದಲ್ಲಿ ಚಿಕ್ಕವನಾಗಿದ್ದುಕೊಂಡೆ ವೈದಿಕ ಧರ್ಮಕ್ಕೆ ವಿರೋಧವಾಗಿ ಸಮಾನತೆಯ ಬಗ್ಗೆ ಪ್ರಶ್ನಿಸುತ್ತಾನೆ. ಬ್ರಾಹ್ಮಣರಿಗಿದ್ದ ಸ್ಥಾನಮಾನ ಶೂದ್ರರಿಗೆ ಏಕೆ ಇಲ್ಲ? ಗಂಡಸರಿಗಿದ್ದ ಸ್ಥಾನಮಾನ ಸ್ತ್ರೀಯರಿಗೆ ಏಕೆ ಇಲ್ಲ? ಎಂಬ ಪ್ರಶ್ನೆಯನ್ನು ಎತ್ತುವ ಮೂಲಕ ಸಮಾನತೆಯನ್ನು ತರುವಲ್ಲಿ ಬಸವಣ್ಣ ಸಮಾಜಕ್ಕೆ ಎದುರಾಗುತ್ತಾನೆ. ಈ ಸಂದರ್ಭದಲ್ಲಿ ಮಾದಲಾಂಬಿಕೆ "ನೀನು ಹೋದರೆ ನಿನ್ನ ಹೆಂಡತಿ ಗಂಗಾಂಬಿಕೆಯ ಗತಿ?" ಎಂಬ ಪ್ರಶ್ನೆಗೆ "ಇದು ಸಮಸ್ಯೆಯೇ ಅಲ್ಲ, ಅವಳು ಇನ್ನೂ ಸಣ್ಣವಳು ಇನ್ನೂ ಕೆಲವು ದಿನ ತವರು ಮನೆಯಲ್ಲಿಯೇ ಇರಲಿ" ಎನ್ನುತ್ತಾನೆ ಬಸವಣ್ಣ. ಈ ಮಾತುಗಳಲ್ಲಿ ಒಬ್ಬ ಹೆಣ್ಣಾಗಿ ಮಾದಲಾಂಬಿಕೆ ಗಂಗಾಂಬಿಕೆಯ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡಷ್ಟು ಒಬ್ಬ ಗಂಡಾಗಿ ಬಸವಣ್ಣ ಅರ್ಥ ಮಾಡಿಕೊಳ್ಳುವುದಿಲ್ಲ. ಬಸವಣ್ಣನ ಮಾತಿನಲ್ಲಿ ಉದಾಸೀನತೆಯೂ ಅಡಗಿದೆ. ಹಾಗೆಯೇ ಅವಳು ಇಲ್ಲಿ ಚಿಕ್ಕವಳು ತವರುಮನೆಯಲ್ಲಿಯೇ ಇರಲಿ ಎಂಬ ಧ್ವನಿಯಲ್ಲಿ ಹೆಂಡತಿಯ ಬಗೆಗಿನ ಕಾಳಜಿಯೂ ತೋರುತ್ತದೆ. ತನಗೆ ಇಲ್ಲಿ ಅಸ್ತಿತ್ವ ಇಲ್ಲ. ಅಂತಹ ಸಂದರ್ಭದಲ್ಲಿ ಹೆಂಡತಿಯನ್ನು ಕರೆದೊಯ್ದರೆ ಎನ್ನುವಲ್ಲಿ ಬಸವಣ್ಣನಿಗಿರುವ ಹೆಂಡತಿಯ ಬಗೆಗಿನ ಕಾಳಜಿಯನ್ನು ಲೇಖಕರು ಈ ನಾಟಕದಲ್ಲಿ ಚಿತ್ರಿಸಿದ್ದಾರೆ.

ಬಸವಣ್ಣ ಈ ನಾಟಕದಲ್ಲಿ ಒಂದೆಡೆ ಅನಾದಿಕಾಲದಿಂದ ಬೆಳೆದು ಬಂದ ಅನಿಷ್ಟ ಪದ್ಧತಿಯನ್ನು ತೊಡೆದುಹಾಕುವ ಮೂಲಕ ಮಹಿಳೆಯರಿಗೆ ಸಮಾಜದಲ್ಲಿ ಸಮಾನತೆಯನ್ನು ಕಲ್ಪಿಸಿಕೊಡಲು ಪ್ರಯತ್ನಿಸುತ್ತಾನೆ. ಮಾರಸಿಂಗ ದಂಡನಾಯಕರು ಯುದ್ಧದಲ್ಲಿ ವೀರಸ್ವರ್ಗ ಸೇರಿದ ಸಂದರ್ಭದಲ್ಲಿ ಅವರ ವೇಳೆವಾಳಿಯಾದ ಶಂಕರಪ್ಪಯ್ಯ ರುಂಡ ಕತ್ತರಿಸಿಕೊಂಡರೆ, ಮತ್ತೊಂದೆಡೆ ಅವನ ಹೆಂಡತಿ ಸತಿಸಹಗಮನ ಪದ್ಧತಿಯ ಮೊರೆ ಹೋಗುತ್ತಾಳೆ. ಇದನ್ನು ಕರೀಗೌಡ ಬೀಚನಹಳ್ಳಿ ಅವರು "ಮಧ್ಯಕಾಲೀನ ಕರ್ನಾಟಕದಲ್ಲಿದ್ದ 'ವೇಳೆವಾಳಿ', 'ಸಹಗಮನ ಪದ್ಧತಿ' ಮುಂತಾದ ಆಚರಣೆಗಳನ್ನು ಸಂಶೋಧಕರಾದ ಎಂ.ಎಂ.ಕಲಬುರ್ಗಿ ಅವರು ಇಲ್ಲಿ ಬಳಸಿಕೊಂಡಿದ್ದಾರೆ"[೧೧] ಎಂದು ಹೇಳಿದ್ದಾರೆ.

ಇಲ್ಲಿ ವೇಳೆವಾಳಿ ಮತ್ತು ಸತಿಸಹಗಮನ ಪದ್ಧತಿಗಳು ಇವೆರಡೂ ಮಧ್ಯಕಾಲೀನ ಕರ್ನಾಟಕದಲ್ಲಿ ಇದ್ದಂತವು. ಇಂತಹ ಆಚರಣೆಗಳನ್ನು ಬಸವಣ್ಣ ತೊಡೆದುಹಾಕುವ ಮೂಲಕ ಜನರಿಗೆ ಈ ಅನಿಷ್ಟ ಆಚರಣೆಗಳಿಂದ ಮುಕ್ತಿ ದೊರಕಿಸಿ, ಅವರಿಗೂ ಬದುಕಲು ಅವಕಾಶವನ್ನು ಕಲ್ಪಿಸಿಕೊಡುತ್ತಾನೆ. ಇಷ್ಟೇ ಅಲ್ಲದೇ ಗಂಡ ಸತ್ತರೇ, ಹೆಂಡತಿ ಸತಿ ಹೋಗುವುದನ್ನು ನಿಷೇಧಿಸಿದ ಬಸವಣ್ಣ, ಹೆಂಡತಿ ಸತ್ತರೆ ಗಂಡ ಮರುಮದುವೆ ಆಗುವುದು ಹಿಂದಿನಿಂದಲೂ ಬೆಳೆದುಬಂದ ಸಂಪ್ರದಾಯವಾಗಿತ್ತು. ಆದರೆ ಗಂಡ ಸತ್ತರೇ ಹೆಂಡತಿ ಮಾತ್ರ ಇಷ್ಟವಿಲ್ಲದಿದ್ದರೂ ಬಲವಂತದಿಂದ ಚಿತೆ ಏರಬೇಕಾಗಿತ್ತು. ಅದನ್ನು ವಿರೋಧಿಸುವ ಮೂಲಕ ಬಸವಣ್ಣ ಗಂಡ ಸತ್ತರೆ ಹೆಂಡತಿ ಚಿತೆ ಏರುವ ಬದಲಿಗೆ ಮರುಮದುವೆ ಆಗಲು ಅವಕಾಶವನ್ನು ಒದಗಿಸುವ ಮೂಲಕ ವಿಧವಾ ಸ್ತ್ರಿಯರಿಗೆ ಹೊಸ ಬಾಳನ್ನು ಪುನರಾರಂಭಿಸಿ ಎಲ್ಲರಂತೆ ಜೀವಿಸಲು ಅವಕಾಶವನ್ನು ಕಲ್ಪಿಸಿ ಕೊಡುತ್ತಾನೆ.

ದೇವಸ್ಥಾನಗಳಿಗೆ ಅಸ್ಪೃಶ್ಯರಂತೆ ಸ್ತ್ರೀಯರಿಗೂ ಪ್ರವೇಶಕ್ಕೆ ಅವಕಾಶವಿರಲಿಲ್ಲ. ಬಸವಣ್ಣ ಇಷ್ಟಲಿಂಗ ಪರಿಕಲ್ಪನೆಯನ್ನು ತರುವ ಮೂಲಕ ಸ್ತ್ರೀ ಪುರುಷರಿಬ್ಬರೂ ಇಷ್ಟಲಿಂಗವನ್ನು ಧರಿಸಬಹುದು ಎಂಬ ಧಾರ್ಮಿಕ ಸ್ವಾತಂತ್ರ್ಯಕ್ಕೆ ಸ್ವೀಕಾರವನ್ನು ಹಾಕಿದನು. ಲಿಂಗಭೇದವನ್ನು ಅಲ್ಲಗಳೆದು, ಧಾರ್ಮಿಕ ಸ್ವಾತಂತ್ರ್ಯ ನೀಡಿ ಅನುಭವ ಮಂಟಪದಲ್ಲಿ ಸರ್ವರಿಗೂ ಪಾಲ್ಗೊಳ್ಳಲು ಅವಕಾಶ ಕೊಟ್ಟರು. ಜೊತೆಗೆ ಅಲ್ಲಿ ನಡೆಯುವ ವಿಚಾರಪೂರ್ಣ ಚರ್ಚೆಯಲ್ಲಿಯೂ ಭಾಗವಹಿಸಲು ಮುಕ್ತ ಅವಕಾಶ ದೊರೆಯಿತು. ಹಾಗೆಯೇ ತಮ್ಮ ಭಾವನೆಗಳನ್ನು ವಚನಗಳ ಮೂಲಕ ಅಭಿವ್ಯಕ್ತಿಸುವ ಸ್ವಾತಂತ್ರ್ಯ ಒದಗಿಬಂತು. ಇದರಿಂದ ಸುಮಾರು ವಚನಕಾರ್ತಿಯರು ಸಾಹಿತ್ಯ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಸಾಧ್ಯವಾಯಿತು.

ಒಮ್ಮೆ ಅನುಭವ ಮಂಟಪದ ಚರ್ಚೆಯಲ್ಲಿ ಸೇರಿದ ಸಂದರ್ಭದಲ್ಲಿ ನಾಗಲಾಂಬಿಕೆ ಮತ್ತು ಬಸವಣ್ಣನ ನಡುವೆ ಒಂದು ಸಂವಾದದಲ್ಲಿ 'ಮಹಿಳೆಯರು ನಮ್ಮೊಂದಿಗೆ ಇನ್ನೂ ತೀವ್ರ ಹೆಜ್ಜೆ ಹಾಕಬೇಕಾಗ್ಯಾದ' ಎಂಬ ನಾಗಲಾಂಬಿಕೆಯ ಮಾತಿಗೆ "ಬಸವಣ್ಣ: ಇದು ಸ್ವಲ್ಪ ನಿಧಾನವಾಗೋದು ಸಹಜ. 'ಸತಿಭಕ್ತಿಯಾದರೆ ಹೊಲೆಗಂಜಲಾಗದು' ಎಂಬ ನಮ್ಮ ತತ್ವ ಕಾರಣವಾಗಿ, ಸ್ತ್ರೀಯರಿಗೂ ತಾನು 'ಅಸ್ಪೃಶ್ಯಳಲ್ಲ' ಎಂಬ ವಿಶ್ವಾಸ ಬೆಳೀತಾ ನಡೆದದೆ. ಅನುಭವ ಮಂಟಪದ ಸಂಪರ್ಕ ಈ ಆತ್ಮವಿಶ್ವಾಸವನ್ನು ಇನ್ನೂ ಬೆಳೆಸುತ್ತಾ ಇದೆ."[೧೫]

ಅನುಭವ ಮಂಟಪದಲ್ಲಿ ಭಾಗಿಯಾಗುವುದರಿಂದ ಹೆಣ್ಣು ಕೂಡ ತಾನು ಅಸ್ಪೃಶ್ಯಳೆಂಬ ಭಾವದಿಂದ ನಿಧಾನಗತಿಯಲ್ಲಿ ಬಿಡುಗಡೆಯಾಗುತ್ತಿರುವುದನ್ನು ಗಮನಿಸಿದ ಬಸವಣ್ಣ ಆಕೆಗೂ

ತಾನೂ ಅಸ್ಪೃಶ್ಯಳಲ್ಲ ಎಂಬ ಆತ್ಮಸ್ಥೈರ್ಯ ಉಂಟಾಗಿರುವುದನ್ನು ಚರ್ಚಿಸುತ್ತಾನೆ. ಬಸವಣ್ಣನ ನಿಲುವು ಸಮಾಜದಲ್ಲಿ ಸ್ತ್ರೀ–ಪುರುಷರಿಬ್ಬರೂ ಸಮಾನರೆಂಬ ಭಾವ ಎಂ.ಎಂ.ಕಲಬುರ್ಗಿ ಅವರಲ್ಲೂ ಇರುವುದನ್ನು ಈ ನಾಟಕ ಧ್ವನಿಸುತ್ತದೆ.

ಅನಾದಿಕಾಲದಿಂದಲೂ ಸ್ತ್ರೀಯನ್ನು ಗಂಡಿನ ಅಡಿಯಾಳಾಗಿ ಕಾಣುತ್ತಿದ್ದರು. ಹೆಣ್ಣನ್ನು ಕೇವಲ ಅಡುಗೆಮನೆಗೆ ಸೀಮಿತ ಎಂದು ಆಕೆ ಮಾಡುವ ಎಲ್ಲಾ ಕೆಲಸಗಳನ್ನು ಕೀಳಾಗಿ ಕಾಣುತ್ತಿದ್ದರು. ಆದರೆ ವಚನಯುಗದಲ್ಲಿ ಸ್ತ್ರೀಯರನ್ನು ಸಮಾನತೆಯಿಂದ ಕಾಣುವ ಮೂಲಕ ಆಕೆಯ ವೃತ್ತಿಗಳನ್ನು ಗೌರವಭಾವದಿಂದ, ಸಮಾನ ದೃಷ್ಟಿಯಿಂದ ಕಾಣತೊಡಗಿದರು. ತಮ್ಮ ಸ್ವತಂತ್ರ ವಿಚಾರಶೀಲತೆಯಲ್ಲಿ ತೊಡಗಿದ ಸ್ತ್ರೀಯರು ತಮ್ಮ ಗಂಡಂದಿರಿಗೂ ಬುದ್ಧಿ ಹೇಳುವ ಮೂಲಕ ಅವರ ಬದುಕನ್ನು ತಿದ್ದಲು ಮುಂದಾದರು. ಉದಾ: ಆಯ್ದಕ್ಕಿ ಲಕ್ಕಮ್ಮ ಈಸಕ್ಕಿಯಾಸೆ ನಮಗೇಕೆ....., ಇಷ್ಟೆಲ್ಲಾ ಸಂಗತಿಗಳನ್ನು ಗಮನಿಸಿದಾಗ ವಚನಯುಗದಿಂದ ಸ್ತ್ರೀಯರ ಸ್ಥಾನಮಾನದಲ್ಲಿ ತೀವ್ರ ಬದಲಾವಣೆಯಾದದ್ದನ್ನು ಅದಕ್ಕೆ ಮುಖ್ಯಸೂತ್ರಧಾರಿ ಬಸವಣ್ಣ ಎಂಬುದನ್ನು ಎಂ.ಎಂ.ಕಲಬುರ್ಗಿ ಅವರು ಎತ್ತಿ ಹಿಡಿಯಲು ಪ್ರಯತ್ನಿಸಿದ್ದಾರೆ.

ಈ ನಾಟಕದಲ್ಲಿ ಕಂಡುಬರುವ ಕೆಲವು ಸ್ತ್ರೀಪಾತ್ರಗಳಿಗೆ, ಎತ್ತರದ ಧ್ವನಿ ಕಂಡುಬಂದರೆ, ಇನ್ನು ಕೆಲವು ಪಾತ್ರಗಳಿಗೆ ಸೌಮ್ಯಧ್ವನಿ, ಮೌನಧ್ವನಿ ಕಂಡುಬರುವುದನ್ನು ನಾವು ಗಮನಿಸಬಹುದು. ಬಸವಣ್ಣನ ತಂಗಿ ನಾಗಲಾಂಬಿಕೆಗೆ ಮತ್ತು ಬಸವಣ್ಣನ ವೈಚಾರಿಕ ಪತ್ನಿಗೆ ಎತ್ತರದ ಧ್ವನಿ ಇದೆ. ಆದರೆ ಗಂಗಾಂಬಿಕೆಯಲ್ಲಿ ಮೌನದ ಪ್ರತಿಭಟನಾತ್ಮಕ ಧ್ವನಿ ಇರುವುದನ್ನು ನಾವು ಇಲ್ಲಿ ಗುರುತಿಸಬಹುದು.

"ಬಸವಣ್ಣ: ಏನು ಮಾಡೋದು? ಇದಕ್ಕೆ ನಾನೇ ಉದಾಹರಣೆಯಾಗುತ್ತಿದ್ದೆ. ಆದರೆ ಬಾಲ್ಯದಲ್ಲಿಯೇ ನನ್ನ ಮದುವೆ ಅನಿರೀಕ್ಷಿತವಾಗಿ ಜರುಗಿ ಹೋಯಿತು.

ಗಂಗಾಂಬಿಕೆ: ನೀವು ನಮ್ಮ ಚಳುವಳಿಯ ನೇತಾರರು ಜನ ನಿಮ್ಮಿಂದ ಇಂತಹ ಆದರ್ಶ ಆಪೇಕ್ಷಿಸ್ತಾರ. ಎರಡನೆಯ ಮದುವೆ ತಪ್ಪು. ಆದರೆ ದೊಡ್ಡ ಆದರ್ಶಕ್ಕಾಗಿ ನೀವು ಈ ಸಣ್ಣ ತಪ್ಪು ಮಾಡಿದರೆ ದೋಷವಲ್ಲ. ಅಂತ ನನ್ನ ಅಭಿಪ್ರಾಯ"[೧೬] ಎಂಬ ಮಾತನ್ನು ಗಮನಿಸಿದರೆ ಇಲ್ಲಿ ಗಂಗಾಂಬಿಕೆ ಉದಾರ ಮನಸ್ಕಳಾಗಿ ಕಂಡುಬರುತ್ತಾಳೆ. ತನ್ನ ಗಂಡ ಆದರ್ಶ ವ್ಯಕ್ತಿಯಾಗಬೇಕೆಂಬ ಕನಸು ಎಲ್ಲಾ ಹೆಂಡತಿಯರಲ್ಲೂ ಕಂಡುಬರುತ್ತದೆ. ಆದರೆ ತನ್ನ ಸ್ಥಾನವನ್ನು ಇನ್ನೊಬ್ಬರೊಡನೆ ಹಂಚಿಕೊಳ್ಳುವ ಮನೋಭಾವ ಹೊಂದಿರುವ ಗಂಗಾಂಬಿಕೆಯವರ ಆದರ್ಶ ಮಹಿಳೆಯೆಂದರೆ ತಪ್ಪಾಗಲಾರದು. ಇಲ್ಲಿ ಗಂಗಾಂಬಿಕೆ ವರ್ಣಭೇದ ನಿರಾಕರಣೆಗಾಗಿ

ತನ್ನ ಬಾಳನ್ನು ನೀಲಾಂಬಿಕೆಯೊಡನೆ ಹಂಚಿಕೊಳ್ಳಲು ಮುಂದಾಗಿ ಬಸವಣ್ಣನ ಆದರ್ಶಕ್ಕೆ ಸಾತು ಕೊಡುವವಳಾಗಿ ಕಂಡುಬಂದರೆ, ಬಸವಣ್ಣನ ವೈಚಾರಿಕ ಪತ್ನಿಯೆಂದು ಕರೆಸಿಕೊಳ್ಳುವ ನೀಲಾಂಬಿಕೆ ಬಸವಣ್ಣ ಕೂಡಲಸಂಗಮಕ್ಕೆ ಕರೆದಾಗ ಅವನ ಮಾತಿಗೆ ಬೆಲೆ ಕೊಡದೆ ಅದನ್ನು ವಿರೋಧಿಸುತ್ತಾಳೆ. "ಅಲ್ಲಿ ಇರುವ ಸಂಗಯ್ಯ ಇಲ್ಲಿ ಇರುವನು ಕಾಣ" ಎಂದು ಹೇಳುವ ಮೂಲಕ ತನ್ನ ವಿರೋಧವನ್ನು ಸೂಚಿಸಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಚಿತ್ರಿಸಿದ್ದಾರೆ.

'ಇಷ್ಟಲಿಂಗ' ಪರಿಕಲ್ಪನೆ ತಂದ ಬಸವಣ್ಣ ಸಂಗಯ್ಯನನ್ನು ಕಾಣಲು ಕೂಡಲಸಂಗಮಕ್ಕೆ ಹೋಗುವುದು ಒಂದು ವಿಪರ್ಯಾಸದ ಸಂಗತಿ ಎನ್ನಬಹುದು. ನೀಲಾಂಬಿಕೆ ವೈಚಾರಿಕ ಪತ್ನಿ ಆದುದರಿಂದಲೇ ತನ್ನ ಗಂಡನಾದ ಬಸವಣ್ಣನಿಗೆ ಸಂಗಯ್ಯನನ್ನು ಕಾಣಲು ಅಲ್ಲಿಗೇ ಹೋಗಬೇಕಾಗಿಲ್ಲ. ಎಲ್ಲಾ ಕಡೆಗೂ ಇರುವವನು ಒಬ್ಬನೇ ಸಂಗಯ್ಯ ಎನ್ನುವಲ್ಲಿ ಪ್ರತಿಭಟನಾತ್ಮಕ ಧ್ವನಿ ನೀಲಾಂಬಿಕೆಯಲ್ಲಿ ಕಂಡುಬರುತ್ತದೆ. ಈ ರೀತಿಯಾಗಿ ನಾಟಕದಲ್ಲಿ ಮಹಿಳೆಯರ ಪಾತ್ರ ಚಿತ್ರಣವನ್ನು ವಿಭಿನ್ನ ನೆಲೆಯಲ್ಲಿ ಎಂ.ಎಂ.ಕಲಬುರ್ಗಿ ಅವರು ಕಟ್ಟಿಕೊಟ್ಟಿದ್ದಾರೆ.

### ೭.೩. ವರ್ಗಸಂಘರ್ಷ ಚಿಂತನೆ

೧೨ನೇ ಶತಮಾನದಲ್ಲಿ ಸಾಮಾಜಿಕ ಸ್ಥಿರವಿನ್ಯಾಸ ತಾಂಡವವಾಡುತ್ತಲಿತ್ತು. ಮೇಲು-ಕೀಳು, ಸ್ಪೃಶ್ಯ-ಅಸ್ಪೃಶ್ಯ ಎಂಬ ತಾರತಮ್ಯ ಪ್ರಬಲವಾಗಿತ್ತು. ಪರಂಪರೆಯಿಂದ ರೂಢಿಗತವಾಗಿ ಬಂದಿದ್ದ ಜಾತಿಪದ್ಧತಿ ನಿರ್ಮೂಲನೆಗಾಗಿ ಬಸವಣ್ಣ ಶ್ರಮಿಸಿದರು. ಇಷ್ಟಲಿಂಗ ಪರಿಕಲ್ಪನೆಯ ಮೂಲಕ ಸಮಾಜದಲ್ಲಿ ಮೇಲೂ-ಕೀಳು ಎಂಬ ಭೇದ-ಭಾವವಿಲ್ಲದೆ ಸರ್ವರೂ ಸಮಾನರು ಎಂಬ ಅಂಶವನ್ನು ಸಾರಿದರು. ಪ್ರಸ್ತುತ ಈ ನಾಟಕದಲ್ಲಿ ಬ್ರಾಹ್ಮಣ, ಕ್ಷತ್ರಿಯ ಮತ್ತು ಶೂದ್ರ ವರ್ಗದವರ ವರ್ಗಸಂಘರ್ಷ, ನಾಟಕದ ಉದ್ದಕ್ಕೂ ಕಂಡುಬರುತ್ತದೆ. ಬಸವಣ್ಣ ಜನಿವಾರವನ್ನು ಧಿಕ್ಕರಿಸಿದ ಸಂದರ್ಭದಲ್ಲಿ ಬಸವಣ್ಣನ ತಂದೆಯ ಮನಸ್ಥಿತಿ ಸರಿಯಿರದ ಕಾರಣ ಸೌಜನ್ಯದಿಂದ ಮಾತಾಡಿ ಬಹಿಷ್ಕಾರದ ಮಾತು ಬೇಡ ಎನ್ನುತ್ತಾನೆ. ಆ ಸಂದರ್ಭದಲ್ಲಿ

"ಪುರೋಹಿತ ೧: (ಸಿಟ್ಟು, ತಾತ್ಸಾರದಿಂದ) ಸೌಜನ್ಯದ ಬುದ್ಧಿವಾದ ನಿಮ್ಮಿಂದ ಕಾಣಬೇಕಿಲ್ಲ. ಮಹಾಮಂತ್ರಿ ಅನ್ನೋ ದರ್ಪ ಇಲ್ಲಿ ಪ್ರಯೋಗಿಸಬ್ಯಾಡ್ರಿ, ಇದು ಕ್ಷತ್ರಿಯರ ಕಲ್ಯಾಣ ಅಲ್ಲ, ಬ್ರಾಹ್ಮಣರ ಬಾಗೇವಾಡಿ.

ಬಲದೇವ: ನಾಲಗಿ ಬಿಗಿ ಹಿಡಿದು ಮಾತಾಡ್ರಿ, 'ಬ್ರಾಹ್ಮಣರ ಬಾಯಾಗ ಶೂದ್ರ ನಾಲಗಿ!"[೧೭]

ಬಾಯಲ್ಲಿ ಕ್ಷತ್ರಿಯರನ್ನು ಹೀಯಾಳಿಸುವುದು ಕಂಡುಬಂದರೆ, ಬಲದೇವನ ಬಾಯಲ್ಲಿ ಶೂದ್ರರನ್ನು ಕೀಳಾಗಿ ಕಾಣುವುದಷ್ಟೇ ಅಲ್ಲ ಕೀಳಾಗಿ ಮಾತಾಡುವುದು ಶೂದ್ರರಷ್ಟೇ ಎಂಬ ಭಾವ ಕೂಡ ಅಭಿವ್ಯಕ್ತಗೊಂಡಿದೆ. ಬ್ರಾಹ್ಮಣರ ಬಾಯಲ್ಲಿ ಸೌಜನ್ಯರಹಿತವಾದ ಮಾತುಗಳು ಬರುವುದೇ ಇಲ್ಲವೇನೋ ಎಂಬ ಭಾವ ಬಲದೇವನದಾಗಿತ್ತೆಂಬುದು ತಿಳಿಯುತ್ತದೆ.

ನಾಟಕದಲ್ಲಿ ಜನಿವಾರ ಮತ್ತು ಶಿವದಾರದ ಚರ್ಚೆ ಕೂಡ ಬರುತ್ತದೆ. ಈ ಚರ್ಚೆ ಈಶಾನ್ಯಗುರು ಮತ್ತು ಬಸವಣ್ಣನ ನಡುವೆ ನಡೆಯುವಂತದ್ದಾಗಿದೆ. ವರ್ಣಭೇದವನ್ನು ಅಳಿಸಿ ಹಾಕಬೇಕಾದರೆ, ಶಿವದಾರದಿಂದ ಮಾತ್ರ ಸಾಧ್ಯ ಎಂದು ಬಸವಣ್ಣ ಈಶಾನ್ಯ ಗುರುವಿಗೆ ಹೇಳುತ್ತಾನೆ. "ಜನಿವಾರ ಧರಿಸುತ್ತಲೇ ವ್ಯಕ್ತಿ ಬ್ರಾಹ್ಮಣ ಆಗತನ, ಅವತ್ತಿನಿಂದಲೇ ಸಮಾಜವನ್ನು ಕ್ಷತ್ರಿಯ, ವೈಶ್ಯ, ಶೂದ್ರ ಅಂತ ವರ್ಗೀಕರಿಸಿ ಬಾಳಲು ಸುರು ಮಾಡತಾನ. ಇದಕ್ಕೆ ವಿರುದ್ಧ ಅನ್ನೊ ಹಾಂಗ ಈ ಲಿಂಗ, ವೈದಿಕರು ಸೃಷ್ಟಿಸಿರುವ ವರ್ಣಭೇದ ಅಳಿಸಿ ಹಾಕ್ತದ. ಅಂದರ 'ಜನಿವಾರ ಸಮಾಜವನ್ನು ಒಡೆದರ, ಶಿವದಾರ ಒಂದಗೂಡಿಸ್ತದ' ಅವರನ್ನು ಭಕ್ತರೆಂದು ಮನ್ನಿಸ್ತದ, ಮಿಕ್ಕವರನ್ನು ಭವಿಗಳೆಂದು ಗುರುತಿಸ್ತದ".[೧೮] ವೀರಶೈವ ಧರ್ಮದ ಶಿವದಾರದ ಮಹತ್ವವನ್ನು ಎಂ.ಎಂ.ಕಲಬುರ್ಗಿ ಅವರು ಇಲ್ಲಿ ಎತ್ತಿಹಿಡಿದಿದ್ದಾರೆ. ಜನಿವಾರ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದು ೪ ವರ್ಗಗಳನ್ನಾಗಿ ಮಾಡಿದರೆ, ಈ ಶಿವದಾರ ಭಕ್ತ-ಭವಿ ಎಂಬ ೨ ವರ್ಗಗಳನ್ನಾಗಿ ಮಾಡಿದೆಯಲ್ಲ ಎಂಬ ಈಶಾನ್ಯ ಗುರುಗಳ ಪ್ರಶ್ನೆಗೆ ಬಸವಣ್ಣ ಜನಿವಾರ ಜನರನ್ನು ನೋಡಿ ವರ್ಗೀಕರಿಸಿದರೆ, ಶಿವದಾರ ಗುಣ ನೋಡಿ ವರ್ಗೀಕರಿಸುತ್ತದೆ ಎಂಬ ಅಂಶವನ್ನು ಹೇಳುತ್ತಾನೆ. ಇಲ್ಲಿ ವ್ಯಕ್ತಿಗಿಂತ ಗುಣ ಮುಖ್ಯ. ಅದನ್ನು ನಾವು ಶಿವದಾರದಲ್ಲಿ ಕಾಣಬಹುದಾಗಿದೆ ಎಂದು ಹೇಳುವಲ್ಲಿ ವೀರಶೈವಧರ್ಮದ ಮಹತ್ವವನ್ನು ಎಂ.ಎಂ.ಕಲಬುರ್ಗಿ ಅವರು ತಿಳಿಸಲು ಪ್ರಯತ್ನಿಸಿದ್ದಾರೆ.

ಬಸವಣ್ಣ ಸಮಾಜದಲ್ಲಿ ವರ್ಗಸಂಘರ್ಷವನ್ನು ತೊಡೆದುಹಾಕಿ ಸಮಾನತೆಯನ್ನು ತರುವಲ್ಲಿ ಸತತವಾಗಿ ಪರಿಶ್ರಮಿಸಿರುವುದನ್ನು ಈ ನಾಟಕದುದ್ದಕ್ಕೂ ನಾವು ಗಮನಿಸಬಹುದಾಗಿದೆ. ಸಮಾಜ ಅತ್ಯಂತ ಕೀಳಾಗಿ ಕಾಣುವ ಹೊಲೆಯರು ಕೂಡ ನಮ್ಮಂತೆ ಮನುಷ್ಯರು, ಅವರನ್ನು ಸಮಾನತೆ ಯಿಂದ ಕಾಣಬೇಕೆಂಬ ತತ್ವವನ್ನು ಸಾರುತ್ತಾನೆ. ಸಾಮಾನ್ಯವಾಗಿ ಹೊಲಗೇರಿಗಳು ಊರಿನ ಹೊರಗಿರುವುದನ್ನು ಗಮನಿಸಿದ್ದೇವೆ. ಹೊಲಗೇರಿಯನ್ನು ಪ್ರವೇಶಿಸ ಹೊರಟ ಬಸವಣ್ಣನಿಗೆ ಮೊದಲು ಕಂಡುಬರುವುದೇ ಅಲ್ಲಿನ ಬಾವಿ. ಅದು ಎಲುಬಿನ ಹಂದರದಿಂದ ಕೂಡಿದ್ದು. ಹೊಲೆಯರದ್ದೆ ಎಂಬ ಗುರುತಿಗಾಗಿ ಹಾಕಲಾದ ಎಲುಬಿನ ಹಾರವನ್ನು ತೆಗೆಸಿ ಹೊಲಗೇರಿ

ಪ್ರವೇಶಿಸುತ್ತಾನೆ. ಹೊಲೆಯರು ಊರನ್ನು ಪ್ರವೇಶಿಸಬೇಕೆಂದರೆ ಶಬ್ದವನ್ನು ಮಾಡುತ್ತಾ ಬೆನ್ನಿಗೆ ಮುಳ್ಳುರೆಂಬೆಯನ್ನು ಕಟ್ಟಿಕೊಂಡು ಪ್ರವೇಶಿಸಬೇಕಾಗಿತ್ತು. ಅದನ್ನು ಕಂಡು

"ಬಸವಣ್ಣ: (ಸಮೂಹವನ್ನು ಕುರಿತು) ನೀವು ಮನುಷ್ಯರು ಅನ್ನೋದನ್ನು ಜನರೂ ಮರತಾರ, ನೀವೂ ಮರತೀರಿ. ಬಿಚ್ಚಿರಿ ಇದನ್ನು(ಬಿಚ್ಚಲಾಗುತ್ತದೆ). ಅಷ್ಟರಲ್ಲಿ

"ಹೊಲೆಯರ ಬಾವಿಯಲೊಂದು ಎಲುಬಿಟ್ಟಿದ್ದರೆ
ಹೊಲೆ ಹೊಲೆ ಎಂಬುದೇ ಲೋಕವೆಲ್ಲ,
ಹಲುವೆಲುವಿದ್ದ ಬಾಯಿಯಿಂದ ಒಲವರವ ನುಡಿದರೆ
ಹೊಲೆಯರ ಬಾವಿಗಿಂದ ಕರಕಟ್ಟ ಕಾಣಾ ರಾಮಾನಾಥಾ"[೧೯]

ಎಂಬ ವಚನ ಕೇಳಿಸುತ್ತದೆ.

ಬಸವಣ್ಣ: ಮಹಾಶರಣ ಜೇಡರ ದಾಸಿಮಯ್ಯನವರು ವಚನ! ಯಾರ ಧ್ವನಿ?

ವೃದ್ಧ: ಸಂಬೋಳಿ ನಾಗಮಯ್ಯನ ಧ್ವನಿ. ಇದೇ ಅವನ ಮನೆ. ಅಷ್ಟರಲ್ಲಿ ನಾಗಮಯ್ಯ ಹೊರಬರುತ್ತಾನೆ.

ಬಸವಣ್ಣ: ಶರಣಾರ್ಥಿ(ಪಾದ ಮುಟ್ಟಿ ನಮಸ್ಕರಿಸುತ್ತಾನೆ)"[೨೦]

"ಬಸವಣ್ಣ: ನೆಲವೊಂದೇ ಹೊಲಗೇರಿ–ಶಿವಾಲಯಕ್ಕೆ ಜಲವೊಂದೇ ಶೌಚ–ಆಚಮನಕ್ಕೆ, ಕುಲವೊಂದೇ ತನ್ನ ತಾನರಿದವಂಗೆ... ಇದು ನನ್ನ ನಿಲುವು. ಹುಟ್ಟುತ್ತ ಯಾವನೂ ಹೊಲೆಯ ಅಲ್ಲ, ಯಾವನೂ ಹಾರವ ಅಲ್ಲ. ಹೀಗಿದ್ದೂ ಮನುಷ್ಯರಲ್ಲಿ ಈ ಭೇದ ಕಲ್ಪನೆ ಹುಟ್ಟಿಸಿದವನೇ ಹೊಲೆಯ."[೨೧]

ಇಲ್ಲಿ ಮುಖ್ಯವಾಗಿ ಬಸವಣ್ಣ ಪುರೋಹಿತಶಾಹಿ ವ್ಯವಸ್ಥೆಯನ್ನು ಕುರಿತು ಚರ್ಚಿಸಿದ್ದಾರೆ. ನಾವೆಲ್ಲ ಜೀವಿಸುವ ಭೂಮಿಯು ಒಂದೇ. ನಾವು ಉಪಯೋಗಿಸುವ ನೀರು ಒಂದೇ. ನಾವೆಲ್ಲರು ಒಬ್ಬ ದೇವರ ಸೃಷ್ಟಿ. ಜನನದ ಆಧಾರದ ಮೇಲೆ ಸಾಮಾಜಿಕ ಶ್ರೇಣಿವ್ಯವಸ್ಥೆ ಇರಬಾರದು. ಮನುಷ್ಯರಲ್ಲಿ ಯಾರು ಭೇದವನ್ನು ಹುಟ್ಟಿಸುವರೋ ಅವರೇ ನಿಜವಾದ ಹೊಲೆಯರು ಎಂಬ ಅಭಿಪ್ರಾಯ ಬಸವಣ್ಣನದ್ದಾಗಿತ್ತು. ಬಸವಣ್ಣ ವರ್ಣಬೇಧ ನಿರಾಕರಣೆಗಾಗಿ ಅಂತರ್ಜಾತಿ ವಿವಾಹದ ಆದರ್ಶಕ್ಕಾಗಿ ಕ್ಷತ್ರಿಯಳಾದ ನೀಲಲೋಚನೆಯನ್ನು ಮದುವೆಯಾಗುವ ಪ್ರಸಂಗ ಬರುತ್ತದೆ. ತನ್ನ ಗಂಡ ಆದರ್ಶ ವ್ಯಕ್ತಿಯಾಗಲಿ ಎಂಬ ಉದ್ದೇಶಕ್ಕಾಗಿ ಬಸವಣ್ಣನ ಮರುಮದುವೆಗೆ ಗಂಗಾಂಬಿಕೆಯು ಅಭಿಮತವನ್ನು ಸೂಚಿಸುತ್ತಾಳೆ. ಮಾಚಿದೇವ ವರ್ಣಭೇದ ರೋಗ ಇದ್ದಂತೆ. ಅದರ ನಿರಾಕರಣೆಗೆ ರಕ್ತಸಂಬಂಧವೇ ಒಳ್ಳೇ ಔಷಧ ಎಂದು ಬಸವಣ್ಣನಿಗೆ

ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹಿಸುವನಾಗಿ ಕಂಡುಬರುತ್ತಾನೆ. ನೀಲಲೋಚನೆ ಸೌಮ್ಯದಿಂದಲೇ ಬಸವಣ್ಣವನ್ನು ಮದುವೆಯಾಗಲು ಮುಂದೆ ಬರುವವಳಾಗಿ ಕಂಡುಬರುತ್ತಾಳೆ. ಈ ಮದುವೆಗೆ ಬಿಜ್ಜಳನಿಗೆ ತನ್ನ ತಂಗಿ ಭಂಡಾರದ ಅಧಿಕಾರಿಯಾದ ಬಸವಣ್ಣನನ್ನು ಮದುವೆ ಆಗಿರೋದರಿಂದ ಮನದಲ್ಲಿ ಅಸಮಾಧಾನ ಮಾತುಗಳನ್ನು ಆಡಿದ್ದರೂ ವಿರೋಧ ವ್ಯಕ್ತಪಡಿಸಲಿಲ್ಲ. ಇದಕ್ಕೆ ಕಾರಣ ಬ್ರಾಹ್ಮಣ ಬಸವಣ್ಣ ಆಗಿರುವುದೇ ಇರಬಹುದು ಅಥವಾ ಬಿಜ್ಜಳನಿಗೆ ಆಪ್ತ ಎಂಬ ಕಾರಣಕ್ಕೆ ಇರಬಹುದು. ಆದರೂ ಈ ಮದುವೆ ಕ್ರಾಂತಿಯ ಮಟ್ಟಕ್ಕೆ ಏರಲಿಲ್ಲ. ಆದರೆ ಮೇಲುಸ್ತರದ ಬ್ರಾಹ್ಮಣ ಮಧುವಯ್ಯನ ಮಗಳು ನೀಲಾವತಿಗೂ ಶೂದ್ರನಾದ ಹರಳಯ್ಯನ ಮಗ ಶೀಲವಂತರ ಪ್ರೇಮವಿವಾಹ ಹಿರಿಯರ ಅದರಲ್ಲೂ ಬಸವಣ್ಣನ ಮುಂದಾಳತ್ವದಲ್ಲಿ ನಡೆಯಿತು. ಇದು ವಚನ ಚಳುವಳಿಯಲ್ಲಿಯೇ ದೊಡ್ಡ ಕ್ರಾಂತಿಯನ್ನು ಉಂಟುಮಾಡಿತು. ಅಂತರ್ಜಾತಿ ವಿವಾಹ ಕಲ್ಯಾಣ ಕ್ರಾಂತಿ ಉಂಟಾಗಲು ಕಾರಣವಾದರೆ, ಅಲ್ಲಮಪ್ರಭುವನ್ನು ಶೂನ್ಯಪೀಠಾಧಿಕಾರಿಯನ್ನಾಗಿ ಮಾಡಿದ್ದು ಇನ್ನೊಂದು ಕಾರಣವಾಗುತ್ತದೆ. ಎಂ.ಎಂ.ಕಲಬುರ್ಗಿ ಅವರು ಬಸವಣ್ಣನವರ ವಚನಗಳ ಮೂಲಕ ವರ್ಣಭೇದವನ್ನು ನಿರಾಕರಿಸುವ ಹಿನ್ನೆಲೆಯಲ್ಲಿ ನಾಟಕದ ಸನ್ನಿವೇಶವನ್ನು ಚಿತ್ರಿಸಲು ಪ್ರಯತ್ನಿಸಿದ್ದಾರೆ.

"ಲಕುಲೀಶ ಪಂಡಿತ: ವರ್ಣಭೇದ ಪರಿಪಾಲನೆ ನಿಮ್ಮ ಕರ್ತವ್ಯ. ಮೊನ್ನೆ ಬ್ರಾಹ್ಮಣ–ಶೂದ್ರ ಮದುವೆ ಜರುಗಿಸಿ ಅದನ್ನು ಮುರಿದು ಹಾಕಿದ ಶಿವಧರ್ಮ ಪೀಠವೇರುವುದು ನಮ್ಮ ಹಕ್ಕು. ನಿನ್ನೆ ಒಬ್ಬ ಶೂದ್ರನನ್ನು ಅದರ ಮ್ಯಾಲ ಕುಳ್ಳಿರಿಸಿ ಬಿಟ್ಟ. ಇವೆರಡೂ ನಿಮ್ಮ ನಮ್ಮ ಸಂಪ್ರದಾಯಗಳಿಗೆ ದೊಡ್ಡ ಅವಹೇಳನಗಳು.

ಕೇಶವಭಟ್ಟ: ಮದುವೆ ಬಿಡಿ, ಅಪವಾದಾತ್ಮಕವೆಂಬಂಥ ಈ ಘಟನೆ ಉಪೇಕ್ಷಿಸಿ, ನಮ್ಮ ವರ್ಣವ್ಯವಸ್ಥೆ ಯಥಾಪ್ರಕಾರ ಮುಂದುವರೀತದ. ಅಲ್ಲಮನ ಘಟನೆ ಹೀಂಗಲ್ಲ. ಧರ್ಮಪೀಠದ ಮೇಲೆ ಒಬ್ಬ ಶೂದ್ರನನ್ನ ಕುಳ್ಳಿರಿಸುವುದೆಂದರ ಸಾಕ್ಷಾತ್ ಶಿವನೇ ನಿಮಗೆ ದಯಪಾಲಿಸಿದ ಜಗದ್ಗುರು ಅಧಿಕಾರವನ್ನು ಶಾಶ್ವತವಾಗಿ ಕಸಿದುಕೊಂಡಂತೆ. ಇದು ಬಹಳ ದೊಡ್ಡ ಅನ್ಯಾಯ."[೨೨]

ಕಲ್ಯಾಣದಲ್ಲಿ ಕ್ರಾಂತಿ ಉಂಟಾಗಲು ಅಂತರ್ಜಾತಿ ವಿವಾಹ ಹಾಗೂ ಅಲ್ಲಮನನ್ನು ಶೂನ್ಯಪೀಠಾಧ್ಯಕ್ಷನನ್ನಾಗಿ ಮಾಡಿದ್ದು, ಅವರಲ್ಲೂ ಅಧಿಕಾರದ ಆಮಿಷೆಯಿಂದ ಬಳಲುತ್ತಿದ್ದ ಪುರೋಹಿತಶಾಹಿ ವರ್ಗದವರಿಗೆ ಶೂದ್ರನಾದ ಅಲ್ಲಮಪ್ರಭುವನ್ನು ಶೂನ್ಯಪೀಠಾಧ್ಯಕ್ಷನನ್ನಾಗಿ ಮಾಡಿದ್ದನ್ನು ಸಹಿಸದಾದರು. ಬಿಜ್ಜಳನಲ್ಲಿ ದೂರು ನೀಡುವ ಮೂಲಕ ಬಸವಣ್ಣ ಮತ್ತು ಬಿಜ್ಜಳನಲ್ಲಿ ಒಡಕು ತರುವ ಮೂಲಕ ಕಲ್ಯಾಣದಲ್ಲಿ ದೊಡ್ಡ ಕ್ರಾಂತಿಯನ್ನೇ ಉಂಟುಮಾಡಿದರು.

ಬಸವಣ್ಣನ ನಿಲುವು ಸಮಾಜದಲ್ಲಿ ಸಮಾನತೆ ತರುವುದಾಗಿತ್ತು ಎಂಬುದು ನಾಟಕದ ಪ್ರತಿ ಸನ್ನಿವೇಶಗಳ ಮೂಲಕ ಎಂ.ಎಂ.ಕಲಬುರ್ಗಿ ಅವರು ನಿರೂಪಿಸಲು ಪ್ರಯತ್ನಿಸಿದ್ದಾರೆ.

## ೭.೪. ಸಾಮಾಜಿಕ ಸಂಬಂಧಿ ಚಿಂತನೆ

೧೨ನೇ ಶತಮಾನದಲ್ಲಿ ಬಸವಣ್ಣ ಏಕತಾ ಸಮಾಜವನ್ನು ಸೃಷ್ಟಿಸಲು ಪ್ರಯತ್ನಿಸಿದ ವ್ಯಕ್ತಿ. ಈ ನಾಟಕದುದ್ದಕ್ಕೂ ಬಸವಣ್ಣನವರ ಜೀವನ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಹೋರಾಟವಾಗಿದೆ. ೧೨ನೇ ಶತಮಾನದಲ್ಲಿನ ಜಾತಿವ್ಯವಸ್ಥೆ, ಶೋಷಣೆ ಮಿತಿಮೀರಿದ ಸಂದರ್ಭದಲ್ಲಿ ಮೇಲ್ವರ್ಗದ ಬ್ರಾಹ್ಮಣ ಸಮಾಜದಲ್ಲಿ ಹುಟ್ಟಿದ ಬಸವಣ್ಣ ಶೋಷಣೆ ವಿರುದ್ಧ ಬಂಡಾಯವೆದ್ದ ಕಾಲಘಟ್ಟವಾಗಿದೆ. ಸಮಾಜದಲ್ಲಿ ಸಮಾನತೆ ತರಲು ತಾವು ಜಾರಿಗೆ ತಂದ ಹೊಸ ಅಂಶಗಳನ್ನು ಅವರೇ ಸ್ವತಃ ಖುದ್ದಾಗಿ ಮಾಡಿತೋರಿಸಿದ ಆದರ್ಶ ವ್ಯಕ್ತಿಯಾಗಿ ಬಸವಣ್ಣ ಕಂಡುಬರುತ್ತಾರೆ. ಇಂತಹ ಬಸವಣ್ಣನ ಚರಿತ್ರೆಯನ್ನು ಹಲವಾರು ನಾಟಕಕಾರರು ತಮ್ಮದೇ ಆದ ಶೈಲಿಯಲ್ಲಿ ಹಿಡಿದಿಡುವ ಪ್ರಯತ್ನ ಮಾಡಿದ್ದಾರೆ. ಆದರೆ ಎಂ.ಎಂ.ಕಲಬುರ್ಗಿ ಅವರು ವಿಶೇಷವಾಗಿ ಚಿತ್ರಿಸಿರುವುದನ್ನು 'ಕೆಟ್ಟಿತ್ತು ಕಲ್ಯಾಣ' ನಾಟಕದಲ್ಲಿ ಗಮನಿಸಬಹುದಾಗಿದೆ. ವರ್ಗಸಂಘರ್ಷ, ಜಾತೀಯತೆ, ಸ್ತ್ರೀ ಶೋಷಣೆ, ಮೂಢನಂಬಿಕೆ ವಿರುದ್ಧ ರಾಜಪ್ರಭುತ್ವದಲ್ಲಿ ಇದ್ದುಕೊಂಡು ಹೋರಾಡುವ ಮೂಲಕ ವೈಧಿಕ ಶಾಹಿ ಹಾಗೂ ರಾಜಪ್ರಭುತ್ವವನ್ನೇ ಎದುರು ಹಾಕಿಕೊಂಡರು. ಈ ಮೇಲಿನ ಎಲ್ಲಾ ಅಂಶಗಳು ನಾಟಕದಲ್ಲಿ ಮೂಡಿರುವ ಬಗೆಯನ್ನು ಕೆಳಗೆ ಚರ್ಚಿಸಲಾಗುತ್ತದೆ. ಈ ನಾಟಕದ ಪ್ರಾರಂಭದಲ್ಲಿಯೇ ಬಸವಣ್ಣ ಜನಿವಾರವನ್ನು ಧಿಕ್ಕರಿಸುವ ಮೂಲಕ ಪುರೋಹಿತ ಸಮಾಜಕ್ಕೆ ಎದುರಾಗುವ ದೃಶ್ಯ ಕಂಡುಬರುತ್ತದೆ. ಅವರಿಗೂ ಸಮಾಜದಲ್ಲಿನ ಸಮಾನತೆ ಕುರಿತಂತೆ ಪ್ರಶ್ನಿಸುತ್ತಾನೆ. "ಬ್ರಾಹ್ಮಣರಿಗಿದ್ದ ಸ್ಥಾನಮಾನ ಶೂದ್ರರಿಗೆ ಏಕೆ ಇಲ್ಲ? ಗಂಡಸರಿಗಿದ್ದ ಸ್ಥಾನಮಾನ ಮಹಿಳೆಯರಿಗೆ ಏಕೆ ಇಲ್ಲ?" ಎಂಬ ಪ್ರಶ್ನೆಯನ್ನು ಪುರೋಹಿತಶಾಹಿ ವರ್ಗಕ್ಕೆ ಹಾಕುವ ಮೂಲಕ ಸಮಾಜಕ್ಕೆ ಎದುರಾಗುತ್ತಾನೆ.

"ಬಸವಣ್ಣ: ನಿಮ್ಮ ಸಮಾಜವೇ ಬ್ಯಾಡ ಅಂತ ನಾನೇ ಹೇಳತಿರುವಾಗ, ನೀವು ಬಹಿಷ್ಕಾರ ಹಾಕೋದು ಎಲ್ಲಿ ಬಂತು? ನಿಮ್ಮ ನೀರ ಬ್ಯಾಡ, ಬೆಂಕಿ ಬ್ಯಾಡ, ಜನಿವಾರವೂ ಬ್ಯಾಡ, ಹಿಡೀರಿ(ಬಿಡಿಸಿಕೊಂಡು ಕೈಯಿಂದ ಜನಿವಾರವನ್ನು ಮುದ್ದಿಮಾಡಿ, ಪುರೋಹಿತರ ಕೈಗೆ ಕೊಡಲು ಕೈಚಾಚುತ್ತಾನೆ)."[೨೩]

ಪುರೋಹಿತಶಾಹಿ ವರ್ಗದ ಕಟ್ಟಳೆಗಳಿಗೆ ಒಳಗಾಗದ ಬಸವಣ್ಣ ಆ ಸಮಾಜವನ್ನೇ ಧಿಕ್ಕರಿಸುತ್ತಾನೆ. ಈ ನಾಟಕದಲ್ಲಿ ಒಂದೆಡೆ ವಿಪ್ರರು ಮಳೆಗಾಗಿ ಹರಕೆಯ ಕುರಿಯನ್ನು ಬಲಿ

ಕೊಡುವ ಸಂದರ್ಭದಲ್ಲಿ ತಪ್ಪಿಸಿಕೊಂಡು ಬಸವಣ್ಣನ ಬಳಿ ಅಂಜಿಬಂದ ಕುರಿಮರಿ ಅರಚಿದ್ದನ್ನು ನೋಡಿ "ಅಯ್ಯೋ ನಿರ್ದಯವೇ, ದಯವಿಲ್ಲದ ಧರ್ಮವೇ" ಎಂದು ಹೇಳುತ್ತಾನೆ. ಆಗ ಬಸವಣ್ಣನಲ್ಲಿ ಹುಟ್ಟಿದ ವಚನವನ್ನು ನೋಡುವುದಾದರೆ,

"ದಯವಿಲ್ಲದ ಧರ್ಮವದಾವುದಯ್ಯಾ?
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿ
ದಯವೇ ಧರ್ಮದ ಮೂಲವಯ್ಯ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ"[೧೪]

ಪ್ರತಿಯೊಂದು ಧರ್ಮಗಳು ಪ್ರತಿಪಾದಿಸುವುದು ದಯೆ. ದಯೆಯೇ ಧರ್ಮದ ಮೂಲ. ಸಮಷ್ಟಿ ಹಿತವನ್ನು ಸಾಧಿಸಬೇಕಾದರೆ ದಯೆ ಇರಲೇಬೇಕು. ದಯೆ ಇಲ್ಲದಿರುವಲ್ಲಿ ದ್ವೇಷದಿಂದ ಸರ್ವನಾಶವಾಗುತ್ತದೆ. ಈ ವಚನದಲ್ಲಿ ಸಕಲ ಪ್ರಾಣಿಗಳಲ್ಲಿ ದಯೆ ತೋರುವುದೇ ನಿಜವಾದ ಧರ್ಮ ಎಂಬ ತತ್ವವನ್ನು ಸಮಾಜಕ್ಕೆ ಸಾರಿದ್ದಾನೆ.

ಒಬ್ಬ ದನಗಾಹಿ ಬಸವಣ್ಣನಲ್ಲಿಗೆ ಓಡಿಬಂದು ಆಕಳನ್ನು ವೈರಿಗಳು ಸೆರೆಹಿಡಿದುಕೊಂಡು ಹೋಗಿದ್ದಾರೆ ಎಂಬ ಸುದ್ದಿ ತಿಳಿದ ತಕ್ಷಣವೇ ಬಸವಣ್ಣ ಕೊಟ್ಟಿಗೆಗೆ ಹೋಗಿ ಕರುಗಳನ್ನು ನೋಡಿ ಈ ಕರುಗಳನ್ನು ಕೊಟ್ಟುಬರ್ರಿ, ಇವುಗಳ ತಾಯಿ ಮರುಗಬಾರದು ಪಾಪ ಎಂಬ ಬಸವಣ್ಣನ ಮಾತಿನಲ್ಲಿ ಜೀವದಯೆ ಎದ್ದುಕಾಣುತ್ತದೆ. ಅಂದರೆ ಮಾನವಜೀವನದ ಸಂಬಂಧಗಳು ಪ್ರಾಣಿ ಜೀವನದ ಸಂಬಂಧಗಳು ಕಳಚದೆ ನಿರಂತರವಾಗಿರಲಿ ಎಂಬ ಸಂದೇಶವನ್ನು ನೀಡುತ್ತಾರೆ.

"ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂ ಭೋ, ನಿಮ್ಮ ಧರ್ಮ
ಬೊಬ್ಬಿಡದಿರಿ ಬೋ ನಿಮ್ಮ ಧರ್ಮ
ಅಲ್ಲಿ ಉಂಬರೆ ಸಂಗ, ಇಲ್ಲಿ ಉಂಬರೆ ಸಂಗ
ಕೂಡಲಸಂಗಮದೇವ ಏಕೋಭವ"[೧೫]

ಈ ವಚನ ಮುಖ್ಯವಾಗಿ ಆಕಳ ಕರುವನ್ನು ಕುರಿತದ್ದಾದರೂ ಕರುವಿನ ಬಗೆಗಿನ ಬಸವಣ್ಣನ ಕಾಳಜಿ ಎದ್ದು ತೋರುತ್ತದೆ. ತಾಯಿ ಹಸು ಹಾಗೂ ಕರುವಿಗೆ ಅನಾಥಪ್ರಜ್ಞೆ ಕಾಡದಿರಲಿ ಎಂಬ ತಾಯ್ತತನದ ಸಾಮಾಜಿಕ ಕಾಳಜಿ ಕೂಡ ಇಲ್ಲಿ ವ್ಯಕ್ತವಾಗಿದೆ. ಹಸುವಿನ ಹಾಲನ್ನು ನಾವು ಉಂಡರೇನಂತೆ, ಅವರು ಉಂಡರೇನಂತೆ ಎಲ್ಲರಿಗೂ ಸೇರಬೇಕಾದದ್ದು. ಎಲ್ಲರೂ ಸಮಾನರು ಯಾವುದು ಯಾರಿಗೂ ಸೀಮಿತವಲ್ಲ ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಒಂದು ಆಕಳಿಗಾಗಿ ಯುದ್ಧ ಜರುಗಿಸಿ ಸಾವಿರಾರು ಜನ ರಕ್ತದ ಮಡುವಿನಲ್ಲಿ ಮಡಿಯುವುದರಿಂದ ಎಷ್ಟೋ ಕುಟುಂಬಗಳು ಅನಾಥವಾಗುತ್ತದೆ ಎಂಬ ಮನೋಭಾವ ಬಸವಣ್ಣನಲ್ಲಿತ್ತು ಎಂಬುದನ್ನು

ಎಂ.ಎಂ.ಕಲಬುರ್ಗಿ ಅವರು ಚರ್ಚಿಸಿದ್ದಾರೆ. ತಂದೆ ತಾಯಿಯನ್ನು ಕಳೆದುಕೊಂಡು ತಬ್ಬಲಿಗಳಾದ ಬಸವಣ್ಣ ನಾಗಲಾಂಬಿಕೆ ತನ್ನ ಆಸ್ತಿಪಾಸ್ತಿಗಳನ್ನೆಲ್ಲಾ ಬಡಜನರಿಗೆ ಹಂಚಿ ಬರುತ್ತಾರೆ. ಆ ಸಂದರ್ಭದಲ್ಲಿ ಮಾತಿನ ನಡುವೆ ನಾಗಲಾಂಬಿಕೆ ತಾಯಿಯಿಲ್ಲದ ಮಕ್ಕಳಿಗೆ ಸಮಾಜವೇ ತಂದೆ–ತಾಯಿಯಾಗಬೇಕು. ಆದರೆ ಈ ಸಮಾಜ ನಿನಗ ಹರಿಯೂ ನೀರಿಗಿ ದಾರಿ ಬಿಡುತಿಲ್ಲವಲ್ಲ ಎಂಬಲ್ಲಿ ಕೂಡ ಸಮಾಜದ ಬಗ್ಗೆ ಚರ್ಚಿಸುತ್ತಾಳೆ. ಬಸವಣ್ಣ ಮುಂದುವರಿದು "ಇವರು ನನ್ನನ್ನು ಕೊಲ್ಲಬಹುದು, ನನ್ನ ವಿಚಾರ ಕೊಲ್ಲಲಾರರು" ಎನ್ನುತ್ತಾರೆ.[೨೬]

ಜನಿವಾರ ಧಿಕ್ಕರಿಸಿ ಕಲ್ಯಾಣದಲ್ಲಿ ಈಶಾನ್ಯಗುರುವಿನ ಹತ್ತಿರ ಬಂದ ಬಸವಣ್ಣ ಮಠಗಳ ವ್ಯವಸ್ಥೆ ಬಗ್ಗೆ ಚರ್ಚಿಸುತ್ತಾನೆ. "ಬಸವಣ್ಣ: ಸಾರ್ವಜನಿಕ ಆಸ್ತಿ ಆಗಿರುವ ಮಠಗಳು ಈಗಾಗಲೇ ಒಂದೇ ಜಾತಿಯವರ ಆಸ್ತಿ ಆಗಿದ್ದು, ಇನ್ನು ಮುಂದೆ ಒಂದೇ ಮನೆತನದವರ ಸ್ವಂತ ಆಸ್ತಿಯಾಗೂ ಭಯ ಅದ.

ಈಶಾನ್ಯ ಗುರು: ಹೌದು ಬಸವಣ್ಣಾ, ಇತ್ತೀಚೆಗೆ ಶಿಷ್ಯವರ್ಗದ ಮಠಸಂಪ್ರದಾಯದ ಜೊತೆಗೆ ಪುತ್ರವರ್ಗದ ಮಠಸಂಪ್ರದಾಯ ಅಂಕುರಿಸುತ್ತಿದೆ.

ಬಸವಣ್ಣ: ಮಠಗಳನ್ನಷ್ಟೇ ಅಲ್ಲ, ಈ ಮಠಗಳು ರೂಪಿಸುವ ಸಾಮಾಜಿಕ ತಾರತಮ್ಯವನ್ನೂ ತಪ್ಪಿಸಬೇಕಾಗ್ಯಾದ. ಇದು ಅಪಾಯದ ರೀತಿಯಲ್ಲಿ ಬೆಳೀತಾ ಇದೆ. ಇದನ್ನು ಶುದ್ಧೀಕರಿಸಬೇಕು.

ಈಶಾನ್ಯಗುರು: ಹೌದು ನೀನು ಹೇಳೊ ಹಾಂಗ ಈ ಸಮಾಜ ಶುದ್ಧೀಕರಿಸೋದು ಇಂದು ಅಗತ್ಯ ನಡೆಯಬೇಕಾಗ್ಯಾದ. ಅದು ನಿನ್ನಂಥವನಿಂದ ಮಾತ್ರ ಸಾಧ್ಯ. ನಿನ್ನದು ನಮ್ಮೆಲ್ಲರಂತೆ ಗುರುವಿನ ಮೂಲಕ ಜ್ಞಾನಿಯಾದ ದೇವವಲ್ಲ. ನಿನಗೆ ಯಾವ ಗುರುವೂ ಇಲ್ಲ. ಬುದ್ಧನಂತೆ ಸ್ವಯಂಜ್ಞಾನಿ ನೀನು. ನಿನ್ನ ಅರಿವೇ ನಿನಗೆ ಗುರು. ಆ ಅರಿವು ವ್ಯಕ್ತಿಯ ಉದ್ಧಾರಕಕ್ಷ್ಟೇ ಅಲ್ಲ, ಸಮಾಜದ ಉದ್ಧಾರಕ್ಕೂ ಉಪಯೋಗವಾಗಬೇಕಂತ ಇತ್ತೀಚೆಗೆ ನೀನು ಹಂಬಲಿಸುತ್ತಲಿರುವೆ. ಅದನ್ನು ನಾನು ಗಮನಿಸ್ತೇನಿ.

ಬಸವಣ್ಣ: ಹೌದು ಗುರುಗಳೇ, ಆತ್ಮಜ್ಞಾನದ ಸಾಮಾಜಿಕರಣವೇ ಅನುಭಾವ. ಪ್ರತಿಯೊಬ್ಬರೂ ಇಂಥ ಅನುಭಾವಿ ಆಗಬೇಕು. ಮನುಷ್ಯ ದೇವಗುರುವಾಗುವುದು ಮುಖ್ಯವಲ್ಲ. ಮುಂದುವರಿದ ಸಮಾಜವಾಗುವುದು ಮುಖ್ಯ. ಈವರೆಗೆ ನನಗೆ ಆತ್ಮಶುದ್ಧಿ ಮುಖ್ಯ ಅನಿಸಿತ್ತು. ಈಗ ಸಮಾಜಶುದ್ಧಿಯೂ ಅಷ್ಟೇ ಮುಖ್ಯ ಅನಸ್ಯಾದ. ವ್ಯಕ್ತಿ ಸುಧಾರಿಸದೆ ಸಮಾಜ ಸುಧಾರಿಸೋದಿಲ್ಲ ಅನ್ನೋದು ಎಷ್ಟು ಸತ್ಯವೋ, ಸಮಾಜ ಸುಧಾರಿಸದೆ, ವ್ಯಕ್ತಿಯೂ ಸುಧಾರಿಸೋದಿಲ್ಲ ಅನ್ನೋದು ಅಷ್ಟೇ ಸತ್ಯ. ಹೀಗಾಗಿ ಇಂದಿನ ಈ ಸಮಾಜವ್ಯವಸ್ಥೆ ಮುರಿದು ಕಟ್ಟೋವರೆಗೆ ದುಃಖ, ನೋವುಗಳಿಂದ ಜನರಿಗೆ ಬಿಡುಗಡೆ ಇಲ್ಲ.

ಈಶಾನ್ಯಗುರು: ಆದರೆ ಸಮಾಜದ ಕ್ರೂರ ವ್ಯವಸ್ಥೆ ಬದಲಿಸಲು ಕೈ ಹಾಕಿದರೆ, ಅಪಾಯ ಪರಂಪರೆಗಳೇ ಎದುರಾಗುತ್ತವೆ. ಆದುದರಿಂದಲೇ ವೈದಿಕ ತತ್ವಜ್ಞಾನಿಗಳು ಸಮಾಜ ಕಲ್ಯಾಣಕ್ಕೆ ಕೈಹಾಕದೆ, ವ್ಯಕ್ತಿ ಕಲ್ಯಾಣ ಮಾತ್ರ ಬೋಧಿಸಿದರು; ಅಮೂರ್ತವಾದ ಮಾನವ ಕಲ್ಯಾಣ ಮಾತ್ರ ಘೋಷಿಸಿದರು.

ಬಸವಣ್ಣ: ನನ್ನ ದಾರಿ ಅದಲ್ಲ; ಈಗ ರಾಜರಿಂದ ಪ್ರಜೆಗಳ, ಪುರೋಹಿತರಿಂದ ಭಕ್ತರ, ಪುರುಷರಿಂದ ಸ್ತ್ರೀಯರ ಶೋಷಣೆ ನಡೆದಿದೆ. ಇದರಿಂದ ಸಮಾಜದಾಗ ಶೋಷಣೆ ಮಾಡುವ, ಶೋಷಣೆ ಮಾಡಿಸಿಕೊಳ್ಳುವ ಎರಡು ಭಿನ್ನ ಪ್ರವಾಹಗಳು ನಿರ್ಮಾಣ ಆಗ್ಯಾವ...

ಈಶಾನ್ಯಗುರು: (ನಡುವೆಯೇ ಬಾಯಿಹಾಕಿ) ಈ ಎರಡೂ ಪ್ರವಾಹ ಒಂದಾಗಬೇಕಂತ ನಿನ್ನ ವಿಚಾರವೇ?

ಬಸವಣ್ಣ: ಹೌದು. ಎರಡೂ ಪ್ರವಾಹಗಳು ಒಂದಾಗ್ಬೇಕು. (ಬೆರಳು ಮಾಡಿ ತೋರಿಸುತ್ತ) ಈ ಕೃಷ್ಣೆ–ಮಲಪ್ರಭೆಯರು ಸೇರಿ ಕೂಡಲಸಂಗಮವಾದಾಂಗ ಎರಡಾಗಿರುವ ಸಮಾಜ ಒಂದಾಗ್ಬೇಕು. ಒಂದಾಗಿ ಹರೀಬೇಕು ಅಂತ ಈವರೆಗೆ ಹೇಳ್ತಿದ್ದ. ನನಗೆ ಈಗ ಸಮಾಜ ವ್ಯವಸ್ಥೆಯೂ ಸಣ್ಣ, ದೊಡ್ಡ ಮಡುವುಗಳಾಗಿರಬಾರದು. ಏಕನದಿಯಾಗಿ ಸಮಪಾತಳಿಯಲ್ಲಿ ಪ್ರವಹಿಸಬೇಕು ಅನಸ್ತವ. ವರ್ಣ, ವರ್ಗ, ಲಿಂಗಭೇದಗಳೆಂಬ ಭೇದ ಸಂಸ್ಕೃತಿ ನೀಗಿ–ಅಭೇದ ಸಂಸ್ಕೃತಿ ಅಸ್ತಿತ್ವಕ್ಕೆ ಬರಬೇಕೆಂದು ಮನಸ್ಸು ಹಂಬಲಿಸ್ತದ. ವ್ಯಕ್ತಿ ದೇವರಾಗಬೇಕು; ಮುಂದುವರಿದು ಸಮಾಜವಾಗಬೇಕು. ಸೋಹಂ ಪ್ರಜ್ಞೆಯದು ಅಪೂರ್ಣ ವ್ಯಕ್ತಿತ್ವ, ದಾಸೋಹ ಪ್ರಜ್ಞೆಯದು ಪೂರ್ಣ ವ್ಯಕ್ತಿತ್ವ".[೨೭]

ಜನಿವಾರ ನಿರಾಕರಿಸಿ ಬ್ರಾಹ್ಮಣತ್ವವನ್ನು ತೊರೆದು ಬಂದ ಬಸವಣ್ಣ ಮಠಗಳನ್ನು ನಿರಾಕರಿಸುವ ಚಿತ್ರಣ ಈ ನಾಟಕದಲ್ಲಿ ಮೂಡಿಬಂದಿದೆ. ಅಲ್ಲಿ ಕೂಡ ಮಠದ ಅಧಿಕಾರಿ ಪಶುಪತಿಯಿಂದ ಊರನ್ನು ಬಿಡಬೇಕೆಂಬ ಆಜ್ಞೆಗೆ ಗುರಿಯಾದರು. ದೇವಾಲಯದ ಪುರೋಹಿತರು ಮಠದ ಆಚಾರ್ಯರು ಇವೆರಡು ಪ್ರತಿಗಾಮಿ ಶಕ್ತಿಗಳು, ಆಚಾರ್ಯರ ಮಠಗಳು ನಿಮ್ಮನ್ನು ನಿರಾಕರಿಸಿದರೆ ನೀವು ಮಠಗಳನ್ನು ನಿರಾಕರಿಸಿ, ಹಾಗೆಯೇ ನಿಮ್ಮ ಮನೆಗಳನ್ನೇ ಮಠಗಳೆಂದು ಭಾವಿಸಿಕೊಳ್ಳಿ, ಪುರೋಹಿತರು ದೇವಾಲಯಕ್ಕೆ ನಿಮ್ಮನ್ನು ನಿರಾಕರಿಸಿದರೆ, ನೀವು ದೇವಾಲಯವನ್ನೇ ನಿರಾಕರಿಸಿ, ನಿಮ್ಮ ದೇಹವನ್ನೇ ದೇವಾಲಯವನ್ನಾಗಿ ಮಾಡಿಕೊಳ್ಳಿ ಎಂಬ ತತ್ವವನ್ನು ಸಾರುವ ಬಗೆಯನ್ನು ಎಂ.ಎಂ.ಕಲಬುರ್ಗಿ ಅವರು ಚಿತ್ರಿಸಿದ್ದಾರೆ.

ಬಿಜ್ಜಳನ ಆಸ್ಥಾನದಲ್ಲಿದ್ದುಕೊಂಡು ಬಸವಣ್ಣ ಸಾಕಷ್ಟು ಸಾಮಾಜಿಕ ಕಾರ್ಯಗಳಲ್ಲಿ ತೊಡಗುತ್ತಾನೆ. ವೇಳೆವಾಳಿ, ಮಾಸ್ತಿ ಮರಣಗಳನ್ನು ನಿಷೇಧಿಸುವುದರ ಜೊತೆಗೆ ಗಂಡಿನಂತೆ

ಹೆಣ್ಣು ಕೂಡ ಗಂಡಸತ್ತರೆ ಮರುಮದುವೆ ಆಗುವ ಅವಕಾಶವನ್ನು ಕಲ್ಪಿಸಿಕೊಡುತ್ತಾನೆ. ವೇಶ್ಯೆಯರಿಗೂ ಮನಸ್ಸಿದೆ ಎಂದು ಅರಿತು ಅವರಿಗೆ ಸಂದರ್ಭ ಆ ದಾರಿಗೆ ತಳ್ಳಿದೆ ಎಂದು ಅವರಿಗೂ ಮದುವೆ ಮಾಡುವ ಮೂಲಕ ಒಂದು ನೆಲೆಯನ್ನು ರೂಪಿಸಿಕೊಡುತ್ತಾನೆ. ಹೊಲೆಯರು ಊರನ್ನು ಪ್ರವೇಶಿಸುವಾಗ ಬೆನ್ನಿಗೆ ಮುಳ್ಳುರಂಬೆ ಕಟ್ಟಿಕೊಂಡು ಶಬ್ದ ಮಾಡುತ್ತಾ ಬರುವುದನ್ನು ನಿಷೇಧಿಸುತ್ತಾನೆ. ಹೊಲೆಯರು ಬೇರೆ ನಾವು ಬೇರೆ ಅಲ್ಲ ಎಲ್ಲರೂ ಮನುಷ್ಯರು ಎಂದು ಅವರ ಕೇರಿಗೆ ಹೋಗಿ ನಾಗಮಯ್ಯನ ಮನೆಯಲ್ಲಿ ಊಟ ಮಾಡಿ ಬರುತ್ತಾನೆ. ಇದನ್ನು ವಿಪ್ರರು ಸಹಿಸದಾಗಿದ್ದಾರೆ. ಇದರ ಜೊತೆಗೆ ಅಲ್ಲಮಪ್ರಭುವನ್ನು ಅನುಭವ ಮಂಟಪದ ಅಧ್ಯಕ್ಷನನ್ನಾಗಿ ಮಾಡಿರುವುದು ಕೂಡ ಅಧಿಕಾರವರ್ಗಕ್ಕೆ ಸಹಿಸದಾಗುತ್ತದೆ. ವರ್ಣಭೇದ ನಿವಾರಣೆಗಾಗಿ ಅಂತರ್ಜಾತಿ ವಿವಾಹವನ್ನು ಮಾಡಿಸುತ್ತಾನೆ. ಬ್ರಾಹ್ಮಣನಾದ ಮಧುವರಸನ ಮಗಳಿಗೂ ಮತ್ತು ಶೂದ್ರನಾದ ಹರಳಯ್ಯನ ಮಗನಿಗೂ ಮಾಡಿಸಿದ ಈ ಮದುವೆ ಕಲ್ಯಾಣದಲ್ಲಿಯೇ ಒಂದು ದೊಡ್ಡ ಕ್ರಾಂತಿ ಉಂಟಾಗುವಂತೆ ಮಾಡುತ್ತದೆ. ಇದೆಲ್ಲವನ್ನು ಸಹಿಸದ ಕುತಂತ್ರಿಗಳು ಬಿಜ್ಜಳನಲ್ಲಿಗೆ ಹೋಗಿ ದೂರನ್ನು ನೀಡುತ್ತಾರೆ. ಆ ಸಂದರ್ಭದಲ್ಲಿ ಬಿಜ್ಜಳ ಬಸವಣ್ಣನನ್ನು ಸಭೆಗೆ ಕರೆಯುತ್ತಾನೆ. ಆ ಸಭೆಯಲ್ಲಿ ಮಾತಿನ ಚಕಮಕಿ ನಡುವೆ

"ಬಿಜ್ಜಳ: ಬಸವಣ್ಣಾ, ಕೊನೆಯ ಎಚ್ಚರಿಕೆ ನೀಡತೀನಿ, ಇನ್ನೊಮ್ಮೆ ವಿಚಾರಿಸು. ನಿನ್ನ ಧಾರ್ಮಿಕ ಸುಧಾರಣೆಗೆ ನನ್ನ ಸಮ್ಮತಿ ಇದೆ. ಆದರೆ 'ಆರ್ಥಿಕ ಸಮಾನತೆ', 'ಸಾಮಾಜಿಕ ಸಮಾನತೆ' ಈ ಎರಡೂ ಹುಚ್ಚು ವಿಚಾರಗಳನ್ನು ಕೈಬಿಡು.

ಬಸವಣ್ಣ: ಪ್ರಭು, ಸತ್ಯವನ್ನು ಕೈಬಿಡುವುದು ನನ್ನಿಂದ ಸಾಧ್ಯವಿಲ್ಲ".[೨೮]

ಬಸವಣ್ಣನು ತನ್ನ ಕಾಲಮಾನದಲ್ಲಿ ಏಣಿಶ್ರೇಣಿ ವ್ಯವಸ್ಥೆಯನ್ನು ಮೌಢ್ಯಗಳನ್ನು ತೊಲಗಿಸಿ ಸಮಾನತೆ ತರಲು ಅಂದಿನ ಕಾಲದಲ್ಲಿ ಶ್ರಮಿಸಿದ. ಪ್ರಸ್ತುತ ದಿನಮಾನಗಳಲ್ಲೂ ಆ ವ್ಯವಸ್ಥೆ ಹಾಗೆಯೇ ಇದೆ. ಅದನ್ನು ತೊಲಗಿಸುವ ಹಿನ್ನೆಲೆಯಲ್ಲಿ ಈ ನಾಟಕ ರಚನೆಗೊಂಡಿದೆ. ಇಲ್ಲಿ ಬಸವಣ್ಣನ ಧ್ವನಿ ಸತ್ಯಪರ ಧ್ವನಿಯಾಗಿ ಕಂಡುಬಂದರೆ, ಬಿಜ್ಜಳನ ಧ್ವನಿ ಅಧಿಕಾರಪರ ಧ್ವನಿಯಾಗಿ ಎದ್ದು ತೋರುವುದನ್ನು ಗಮನಿಸಬಹುದು.

### ೭.೫. ಧಾರ್ಮಿಕ ಸಂಬಂಧಿ ಚಿಂತನೆ

ಪ್ರಾಚೀನ ಕಾಲದಿಂದಲೂ ಧಾರ್ಮಿಕವಾಗಿ ಹಲವಾರು ಕಟ್ಟುಪಾಡುಗಳಿರುವುದನ್ನು ಎಲ್ಲರೂ ಗಮನಿಸಿರುವ ಸಂಗತಿಯಾಗಿದೆ. ಧಾರ್ಮಿಕ ಸ್ವಾತಂತ್ರ್ಯ ಎಂಬುದು ಕೆಲವರಿಗೆ ಮಾತ್ರ ಸೀಮಿತ ಎಂಬ ಪರಿಕಲ್ಪನೆ ಜಾರಿಯಲ್ಲಿತ್ತು. ಮೇಲ್ವರ್ಗದವರಿಗೆ ಹಾಗೂ ಪುರುಷವರ್ಗದವರಿಗೆ

ಮಾತ್ರ ಧಾರ್ಮಿಕ ಸಭೆ-ಸಮಾರಂಭಗಳಲ್ಲಿ ಭಾಗವಹಿಸುವ ಸ್ವಾತಂತ್ರ್ಯ ಇತ್ತು. ಆದರೆ ೧೨ನೇ ಶತಮಾನದಲ್ಲಿ ಬಸವಣ್ಣ ಸಮಾಜದಲ್ಲಿನ ಪ್ರತಿಯೊಬ್ಬರೂ ಕೂಡ ಸಮಾನರು. ಯಾರೂ ಮೇಲು ಅಲ್ಲ, ಯಾರೂ ಕೀಳಲ್ಲ. ಸಮಾನತೆ ಸಿಗದಿದ್ದ ಸ್ಥಳದಲ್ಲಿ ಅಂತಹ ಆಚರಣೆಗಳನ್ನೆ ಅವರು ತೊರೆಯುವಂತೆ ಮಾಡಿದರು. ಅದರಲ್ಲಿ ಬಸವಣ್ಣ ಧಾರ್ಮಿಕ ಸುಧಾರಣೆ ತರುವಲ್ಲಿ ಸಾಕಷ್ಟು ಶ್ರಮಿಸಿದ ಕ್ರಾಂತಿಕಾರಿ. ಇಂತಹ ಬಸವಣ್ಣನ ಧಾರ್ಮಿಕ ಸುಧಾರಣೆಯನ್ನು ಎಂ.ಎಂ.ಕಲಬುರ್ಗಿ ಅವರು 'ಕೆಟ್ಟಿತ್ತು ಕಲ್ಯಾಣ' ನಾಟಕದಲ್ಲಿ ಚಿತ್ರಿಸಿದ್ದಾರೆ.

ಬಸವಣ್ಣ ಚಿಕ್ಕಂದಿನಲ್ಲಿ ತನ್ನ ಬ್ರಾಹ್ಮಣತ್ವದಲ್ಲಿನ ಧಾರ್ಮಿಕ ಪದ್ಧತಿಯನ್ನೇ ಧಿಕ್ಕರಿಸಿದ ವ್ಯಕ್ತಿಯಾಗಿದ್ದಾರೆ. ಜನಿವಾರವನ್ನು ಧಿಕ್ಕರಿಸುವ ಸಂದರ್ಭದಲ್ಲಿ

"ಮಾದರಸ: (ಸಂತಯಿಸುತ್ತ) ಬಸವಾ, ಪುರೋಹಿತ ಕೂಡ ವಾದಿಸಬಾರದು. ಇವರು ನಮಗಿಂತ ದೊಡ್ಡವರು. ವೇದಾಗಮ ವಿದ್ವಾಂಸರು, ಧರ್ಮಶಾಸ್ತ್ರದ ದಾರ್‍ಯಾಗ ಸಮಾಜ ಮುನ್ನಡೆ ಸವ್ರು.

ಬಸವಣ್ಣ: ಅಪ್ಪಾ, ಇವರು ಸಮಾಜವನ್ನು ಮುನ್ನಡೆಸವ್ರಲ್ಲ, ಹಿನ್ನೆಡೆಸವ್ರು, ಇವರು ದೊಡ್ಡವರಿರಬಹುದು. ಸತ್ಯ ಇವರಿಗಿಂತ ದೊಡ್ಡದು. ಇವರ ಧರ್ಮಶಾಸ್ತ್ರಕ್ಕಿಂತ ದೊಡ್ಡದು. ಆ ಸತ್ಯಕ್ಕಾಗಿ ನನ್ನ ಆತ್ಮ ಹಂಬಲಿಸತಾ ಇದೆ. ಕಂಡೂ ಕಂಡೂ ಸತ್ಯ ಕೈಬಿಡಲಾರೆ. ನನ್ನ ಕೈ ಬಿಡ್ರಿ"[೨೯](ಒಂದು ಕೈ ಬಿಡಿಸಿಕೊಳ್ಳುತ್ತಾನೆ). ಧರ್ಮಶಾಸ್ತ್ರದ ಕಟ್ಟಳೆಗೆ ಒಳಗಾಗದೇ ತನ್ನ ತಂದೆ-ತಾಯಿಯರನ್ನು ತೊರೆದು ಹೋಗುವ ದೃಶ್ಯವನ್ನು ಕಲಬುರ್ಗಿ ಅವರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಎಂ.ಎಂ.ಕಲಬುರ್ಗಿ ಅವರು ಕೂಡ ಸತ್ಯಕ್ಕಾಗಿ ಹಂಬಲಿಸುವವರು. ಸಂಶೋಧನೆ ಎಂದರೆ ಸತ್ಯದ ಹುಡುಕಾಟ ಎಂದವರು. ಅಗ್ರಹಾರದಿಂದ ಬೇಸತ್ತು ನಾಥಕೇಂದ್ರ ಕಪ್ಪಡಿ ಸಂಗಮಕ್ಕೆ ಬಂದರೂ ಇಲ್ಲಿ ಕೂಡ ಧಾರ್ಮಿಕ ದೇವಾಲಯ ಕಟ್ಟಳೆಗಳು ಸುತ್ತಿಕೊಂಡಿರುವುದನ್ನು ಬಸವಣ್ಣ ವಿರೋಧಿಸುತ್ತಾನೆ. 'ಧರ್ಮ ಅಂದರ ದೇವಾಲಯ, ದೇವಾಲಯ ಅಂದರ ಧರ್ಮ' ಅಂತ ಬೋಧಿಸುವುದನ್ನು ಬಸವಣ್ಣ ವಿರೋಧಿಸುತ್ತಾನೆ.

"ಬಸವಣ್ಣ : ಅಲ್ಲ, ಈ ಶ್ರೀಮಂತ ಶಿವಾಲಯಗಳೂ ಆಚರಣೆಗಳೂ ನಮ್ಮನ್ನು ಉದ್ಧರಿಸಲಾರವು. ಇಲ್ಲಿ ದಾನ-ದಕ್ಷಿಣೆಯ ಮೂಲಕ ಮೇಲು ವರ್ಣದವರನ್ನು ಮೇಲು ವರ್ಗದವರು ಪೋಷಿಸುವುದು ನಿರಂತರ ನಡೆದದ. ಬಡವರು ಶ್ರೀಮಂತರಲ್ಲಿ ಸಾಲ ಮಾಡಿ, ಭಕ್ತಿ ಸಲ್ಲಿಸುವ ಸ್ಥಿತಿ ನಿರ್ಮಾಣ ಆಗ್ಯಾದ.

ನಂದಿಕೇಶ : ಹೌದು, ಜಗದ್ಗುರುಗಳಿಗೆ ಕಾಣಿಕೆ ಅಂತ ಮಾಡಿಸಿಕೊಟ್ಟ ಪಲ್ಲಕ್ಕಿಯ ಸಾಲದಾಗ ಕುಂಬಾರ ಚಿಕ್ಕಣ್ಣ ಇನ್ನೂ ಬಳಲ್ತಿದಾನ".[೩೦]

ಈ ಮೇಲಿನ ವ್ಯಾಖ್ಯಾದಲ್ಲಿ ಗಮನಿಸಿದ ಅಂಶವು ಪ್ರಸ್ತುತ ಸಮಾಜದಲ್ಲಿ ಪ್ರಚಲಿತದಲ್ಲಿದೆ. ದಾನ ದಕ್ಷಿಣೆ ಪಡೆಯುವ ಮೂಲಕ ದೇವಸ್ಥಾನದ ಅಧಿಕಾರ ವರ್ಗ ಶ್ರೀಮಂತವಾಗುವುದು ಒಂದು ವರ್ಗವಾದರೆ, ಇನ್ನೊಂದು ಆ ದೇವಸ್ಥಾನಗಳಿಗೆ ಕಾಣಿಕೆ ಸಲ್ಲಿಸುವುದು ಇನ್ನೊಂದು ವರ್ಗ. ಆ ಕಾಣಿಕೆಯನ್ನು ಸಾಲಸೋಲ ಮಾಡಿಯಾದರೂ ಸಲ್ಲಿಸುವ ಮನೋಭಾವ ಸಾಮಾನ್ಯ ಜನತೆಯದು. ಸಾಲ ತೀರಿಸಲಾಗದೇ ಸಾಕಷ್ಟು ಸಂಕಷ್ಟಕ್ಕೂ ಒಳಗಾಗಿದ್ದಾರೆ. ಇದಕ್ಕೆ ಉದಾಹರಣೆ ಯೆಂಬಂತೆ ನಂದಿಕೇಶ ಹೇಳಿದಂತೆ ಪಲ್ಲಕ್ಕಿಗಾಗಿ ಕುಂಬಾರ ಚಿಕ್ಕಣ್ಣ ಮಾಡಿದ ಸಾಲದಿಂದ ಬಳಲುತ್ತಿರುವುದನ್ನು ಎಂ.ಎಂ.ಕಲಬುರ್ಗಿ ಅವರು ದೇವಸ್ಥಾನದ ಹೆಸರಿನಲ್ಲಿ ನಡೆಯುವ ಅಕ್ರಮವನ್ನು ಬಸವಣ್ಣನ ಚಿಂತನೆಯನ್ನು ವಿಶೇಷ ರೀತಿಯಲ್ಲಿ ಚಿತ್ರಿಸಿದ್ದಾರೆ.

ರಂಗಭೋಗದ ದೇವದಾಸಿ ಪದ್ಧತಿ, ಅಭಿಷೇಕ, ಅಡ್ಡಪಲ್ಲಕ್ಕಿ ಪೂಜಾವಸ್ತುಗಳ ಖರೀದಿ ಇತ್ಯಾದಿ ಆಡಂಬರದ ಚಟುವಟಿಕೆಗಳನ್ನು ನಿರಾಕರಿಸುತ್ತವೆ. ಈ ಎಲ್ಲಾ ಚಟುವಟಿಕೆಗಳು ನಾಶವಾಗಬೇಕೆಂದರೆ ದೇವಾಲಯಗಳನ್ನು ನಿರಾಕರಿಸಬೇಕೆಂದು, ಹಾಗೆಯೇ ಮಡಕೆ, ಬೀದಿಯ ಕಲ್ಲು, ಮರಗಿಡ ಮೊದಲಾದವು ದೇವರನ್ನಾಗಿ ರೂಪಿಸಿಕೊಂಡಿರುವುದನ್ನು ವಿರೋಧಿಸುತ್ತಾರೆ. ಮೈಲಾರನನ್ನು ಪೂಜಿಸಿ ನಾಯಾಗಿ ಬೊಗಳೋದು, ಬೈರವನನ್ನಾರಾಧಿಸಿ ಬೆತ್ತಲೆ ತಿರುಗೋದು, ಕೆಂಡ ತುಳಿಯೋದು, ಸಿಡಿ ಆಡೂದು, ಬಸುರಿ ಬಾಣಂತಿ, ಕೊಡಗೂಸು ಬಲಿ ಕೊಡುವುದು ಇತ್ಯಾದಿ ಕ್ರೂರ ಆಚರಣೆಗಳನ್ನು ತಡೆದರೆ ವಾಮಾಚಾರ ನಾಶವಾಗುತ್ತೆ ಎಂಬ ಅಭಿಪ್ರಾಯ ಬಸವಣ್ಣನವರದ್ದಾಗಿತ್ತು. “ಬ್ರಾಹ್ಮಣರ ಅಗ್ರಹಾರ ಬಹಿಷ್ಕರಿಸಿ ಬಂದ ನಾನು, ಶೈವ ಆಚಾರ್ಯರ ದೇವಾಲಯಗಳನ್ನು ಕಂದಾಚಾರಗಳನ್ನು ನಿರಾಕರಿಸಬೇಕಾಗ್ಯಾದ”[೩೧] ಎಂಬ ಬಸವಣ್ಣನ ಮಾತಿನಲ್ಲಿ ಬ್ರಾಹ್ಮಣರ ಮತ್ತು ಶೈವರ ಆಚಾರ ವಿಧಿ-ವಿಧಾನಗಳ ವಿರೋಧದ ಧ್ವನಿ ವ್ಯಕ್ತವಾದ ಬಗೆಯನ್ನು ಈ ನಾಟಕದಲ್ಲಿ ಎಂ.ಎಂ.ಕಲಬುರ್ಗಿ ಅವರು ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ.

ದೇವಾಲಯ ನಿರಾಕರಿಸಬೇಕಾ ಎಂಬ ಈಶಾನ್ಯ ಗುರುಗಳ ಪ್ರಶ್ನೆಗೆ “ಬಸವಣ್ಣ: ಹೌದು, ಗುರುಗಳೇ, ದೇವರ ದುರುಪಯೋಗದ ಕೇಂದ್ರವಾಗಿರುವ ದೇವಾಲಯ ನಿರಾಕರಿಸಬೇಕು. ನಮ್ಮ ಕಾಲೇ ಕಂಬ ಆಗಬೇಕು; ಶಿರ ಸುವರ್ಣದ ಕಳಸ ಆಗಬೇಕು; ದೇಹ ದೇವಾಲಯ ಆಗಬೇಕು.”[೩೨] ವ್ಯಕ್ತಿತ್ವ ಸ್ಥಾವರದಿಂದ ಜಂಗಮಕ್ಕೆ ಪರಿವರ್ತನೆಗೊಳ್ಳಬೇಕು ಎಂಬುದನ್ನು ಗಮನಿಸಬಹುದು. ಬಸವಣ್ಣನವರ ಒಂದು ವಚನದ ಹಿನ್ನೆಲೆಯಲ್ಲಿಯೇ ಈ ದೃಶ್ಯವನ್ನು ಎಂ.ಎಂ.ಕಲಬುರ್ಗಿ ಅವರು ರೂಪಿಸಿರುವುದು ಗೋಚರವಾಗುತ್ತದೆ. ಇದಕ್ಕೆ ಸಂಬಂಧಿಸಿದವೇ ಬಸವಣ್ಣನವರ ವಚನ.

"ಉಳ್ಳವರು ಶಿವಾಲಯ ಮಾಡುವರು
ನಾನೇನು ಮಾಡಲಿ ಬಡವನಯ್ಯ
ಕಾಲೇ ಕಂಬ ದೇಹವೇ ದೇಗುಲ
ಶಿರವೇ ಹೊನ್ನ ಕಳಸವಯ್ಯಾ
ಕೂಡಲಸಂಗಮದೇವ ಕೇಳಯ್ಯ
ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ."[೩೩]

ದೇವಾಲಯವನ್ನು ನಿರಾಕರಿಸುತ್ತಿದ್ದ ಬಸವಣ್ಣ ಮಠಗಳನ್ನು ನಿರಾಕರಿಸುವಲ್ಲಿ ಮುಂದಾದರು. ಅಲ್ಲಿ ಕೂಡ ಮಠದ ಅಧಿಕಾರಿ ಪಶುಪತಿಯಿಂದ ಊರನ್ನು ಬಿಡಬೇಕೆಂಬ ಆಜ್ಞೆಗೆ ಗುರಿಯಾದರು. ದೇವಾಲಯದ ಪುರೋಹಿತರು, ಮಠದ ಆಚಾರ್ಯರು ಇವೆರಡೂ ಪ್ರತಿಗಾಮಿ ಶಕ್ತಿಗಳು. ಆಚಾರ್ಯರ ಮಠ ನಿಮ್ಮನ್ನು ತಿರಸ್ಕರಿಸಿದರೆ, ನೀವು ಮಠಗಳನ್ನು ನಿರಾಕರಿಸಿ, ಹಾಗೆಯೇ ನಿಮ್ಮ ಮನೆಗಳನ್ನೇ ಮಠಗಳೆಂದು ಭಾವಿಸಿಕೊಳ್ಳಿ. ದೇವಾಲಯಗಳು ನಿಮ್ಮನ್ನು ನಿರಾಕರಿಸಿದರೆ, ದೇಹವನ್ನೇ ದೇವಾಲಯವನ್ನಾಗಿ ಮಾಡಿಕೊಳ್ಳಿರಿ ಎನ್ನುತ್ತಾರೆ. ಇಲ್ಲಿ ಬಸವಣ್ಣ ಸ್ಥಾವರ ಎಂಬುದು ನಿಂತ ನೀರಿನಂತೆ ಕಲುಷಿತಗೊಳ್ಳುವಂಥದ್ದು, ಸಮಾಜ ಎಂಬುದು ಹರಿಯುವ ನೀರಿನಂತೆ ಶುದ್ಧವಾಗಿರುತ್ತದೆ ಎಂಬ ತತ್ವ ಎಂ.ಎಂ.ಕಲಬುರ್ಗಿ ಅವರಲ್ಲೂ ಕಂಡುಬಂದಿರುವುದನ್ನು ಈ ನಾಟಕ ಚಿತ್ರಿಸುತ್ತದೆ.

ನಾಟಕದಲ್ಲಿ ಒಂದೆಡೆ ಇಷ್ಟಲಿಂಗ ಕುರಿತು ಈಶಾನ್ಯ ಗುರುವಿನೊಂದಿಗೆ ಚರ್ಚೆ ಬರುತ್ತದೆ ಆ ಸಂದರ್ಭದಲ್ಲಿ

"ಬಸವಣ್ಣ: ಹೊರಗೆ ಪೂಜಿಸಿ ಏನ ಮಾಡುವೆನಯ್ಯ
ಒಳಗೆ ಶುದ್ಧವಾಗದನ್ನಕ್ಕ?
ಒಳಗೆ ಶುದ್ಧವಾಗದನ್ನಕ್ಕ?
ಒಳಗೆ ಶುದ್ಧವಾಗದನ್ನಕ್ಕ"[೩೪]

ಒಳಗೆ ಶುದ್ಧವಾಗುವುದಕ್ಕೆ ಒಳಗಿನ ಪೂಜೆ ಅಗತ್ಯ ಎಂಬ ಈಶಾನ್ಯಗುರುಗಳ ಮನೆಗೆ ಬಸವಣ್ಣ ಮನುಷ್ಯನಿಗೆ ಮುಖ್ಯವಾದದ್ದು ಒಳಗಿನ ಶುದ್ಧೀಕರಣ ಎಂಬುದನ್ನು ಮೇಲಿನ ವಚನದ ಮೂಲಕ ಪ್ರಸ್ತಾಪ ಮಾಡುತ್ತಾರೆ. ಸ್ಥಾವರಲಿಂಗ ಪೂಜೆಯಿಂದ ಆತ್ಮಧ್ಯಾನ ಅಲಕ್ಷ್ಯಕ್ಕೆ ಗುರಿಯಾಗಿದೆ. ಅದನ್ನು ತಪ್ಪಿಸಬೇಕಾದರೆ ಆತ್ಮವನ್ನೇ ಲಿಂಗ ಅಂತ ಭಾವಿಸಬೇಕೆಂಬ ಸಂದೇಶವನ್ನು ಬಸವಣ್ಣ ಇಲ್ಲಿ ಸಾರಿದ್ದಾನೆ. ಇದನ್ನು ನಾಟಕಕಾರರು ಪ್ರಸ್ತುತ ನಾಟಕದ ಅಡಿಯಲ್ಲಿ ಎತ್ತಿ ಹಿಡಿದಿದ್ದಾರೆ.

ಒಟ್ಟಾರೆಯಾಗಿ ಈ ನಾಟಕದಲ್ಲಿ ಬಸವಣ್ಣ ಸಮಾಜದಲ್ಲಿ ಅನಿಷ್ಟ ಪದ್ಧತಿಗಳನ್ನು, ಮೂಢನಂಬಿಕೆಗಳನ್ನು ತೊಡೆದುಹಾಕಲು ಸಾಮಾಜಿಕ ಏಣಿಶ್ರೇಣಿ ವ್ಯವಸ್ಥೆಯನ್ನು ಮುರಿದು ಹಾಕುವ ಮೂಲಕ ಎಲ್ಲರೂ ಸಮಾನರೆಂಬ ಬಸವಣ್ಣನ ತತ್ವವನ್ನು ಎಂ.ಎಂ.ಕಲಬುರ್ಗಿ ಅವರು ಆತನ ವಚನಗಳಿಂದಲೇ ನಿರೂಪಿಸಲು ಪ್ರಯತ್ನಿಸಿದ್ದಾರೆ. ಅಂದಿನ ಸಮಾಜವನ್ನು ಬದಲಾಯಿಸಲು ತಾನೇ ಆದರ್ಶವ್ಯಕ್ತಿಯಾಗಿ ಹಲವು ದೃಶ್ಯಗಳಲ್ಲಿ ಕಂಡುಬರುತ್ತಾನೆ. ಬಸವಣ್ಣನ ಈ ಕ್ರಾಂತಿಕಾರಿ ನಡೆಗಳು ಕೇವಲ ೧೨ನೇ ಶತಮಾನಕ್ಕೆ ಸೀಮಿತವಲ್ಲ. ಅವು ಇಂದಿಗೂ ಮತ್ತು ಮುಂದಿನ ತಲೆಮಾರಿಗೂ ಮಾದರಿಯಾಗಿವೆ. ಬಸವಣ್ಣನ ಮಾರ್ಗದಲ್ಲಿ ಸಮಕಾಲೀನ ಸಮಾಜ ಮುನ್ನಡೆಯಬೇಕಾಗಿದೆ ಎಂಬ ಆಶಯವನ್ನು ಎತ್ತಿ ಹಿಡಿಯುವ ನೆಲೆಯಲ್ಲಿ ಎಂ.ಎಂ.ಕಲಬುರ್ಗಿಯವರು ಪ್ರಸ್ತುತ 'ಕೆಟ್ಟಿತ್ತು ಕಲ್ಯಾಣ' ನಾಟಕವನ್ನು ರಚಿಸಿದ್ದಾರೆ. ಪ್ರಸ್ತುತ ನಾಟಕದಲ್ಲಿ ಸಮಸಮಾಜದ ಆಶಯ ಎದ್ದು ಕಾಣುತ್ತದೆ. ಇದಕ್ಕೆ ಬಹುಮುಖ್ಯವಾದ ಕಾರಣವೆಂದರೆ ಎಂ.ಎಂ.ಕಲಬುರ್ಗಿ ಅವರಲ್ಲಿರು ವೈಚಾರಿಕ ನಿಲುವುಗಳು. ಇವರಲ್ಲಿನ ಈ ವೈಚಾರಿಕ ನಿಲುವಿಗೆ ಪ್ರೇರಣೆಯೇ ಬಸವ ಮಾರ್ಗ. ಈ ಮಾರ್ಗದಲ್ಲಿ ಮುನ್ನಡೆದ ಎಂ.ಎಂ.ಕಲಬುರ್ಗಿ ಅವರು ಪ್ರಸ್ತುತ ನಾಟಕವನ್ನು ರಚಿಸಿದ್ದಾರೆ. ಆ ಮೂಲಕ ೧೨ನೇ ಶತಮಾನದ ಶ್ರೇಷ್ಠ ದಾರ್ಶನಿಕರಾದ ಬಸವಣ್ಣನವರ ಚಿಂತನೆಗಳಿಗೆ ತಮ್ಮ ಸಹಮತವಿದೆ ಎಂಬುದನ್ನು ಇಲ್ಲಿ ಅನಾವರಣಗೊಳಿಸಿದ್ದಾರೆ. ಈ ನೆಲೆಯಲ್ಲಿ ಮೂಡಿಬಂದ ಪ್ರಸ್ತುತ ನಾಟಕವು ಈ ಹಿಂದೆ ಪ್ರಸ್ತಾಪಿಸಿದ ಹಲವಾರು ಅಂಶಗಳ ಮೇಲೆ ಬೆಳಕು ಚೆಲ್ಲುವ ಮೂಲಕ ವೈಚಾರಿಕತೆಯನ್ನು ಎತ್ತಿ ಹಿಡಿಯುತ್ತದೆ.

ಇಲ್ಲಿ ಮುಖ್ಯವಾಗಿ ನಾನು ಹೇಳಬೇಕೆಂದಿರುವುದು ತಮ್ಮ ಬದುಕಿನುದ್ದಕ್ಕೂ ವಚನಗಳ ಓದು-ಸರ್ವೇಕ್ಷಣೆ-ಸಂಗ್ರಹ ಹಾಗೂ ಪ್ರಕಟಣೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಎಂ.ಎಂ. ಕಲಬುರ್ಗಿ ಅವರು ವಚನಗಳ ಆಶಯದೊಂದಿಗೆ ಪ್ರಭುತ್ವ ಮತ್ತು ಜನ, ಪುರೋಹಿತ ಮತ್ತು ಶ್ರಮಿಕ ಸಮುದಾಯಗಳಲ್ಲಿನ ಸಾಮಾಜಿಕ ಬದುಕಿನ ವೈರುಧ್ಯತೆಗಳನ್ನು ನಿರೂಪಿಸುವುದಕ್ಕೆ ಪ್ರಯತ್ನಿಸಿದ್ದಾರೆ. ಹೀಗಾಗಿ ಈ ಸೃಜನಶೀಲ ಪಠ್ಯವಾದ ನಾಟಕದಲ್ಲಿಯ ವಚನಗಳ ಆಶಯವನ್ನು ಗುರುತಿಸಬಹುದಾಗಿದೆ. ಜೊತೆಗೆ ಮೂಲತಃ ಒಬ್ಬ ಸಂಶೋಧಕರಾದ ಡಾ.ಕಲಬುರ್ಗಿ ಅವರ ಈ ನಾಟಕದ ಬರವಣಿಗೆಯಲ್ಲಿ ಸೃಜನಶೀಲತೆ ಮಸುಕಾಗಿರುವುದನ್ನು ಅಲ್ಲಗಳೆಯುವಂತಿಲ್ಲ.

**ಅಡಿಟಿಪ್ಪಣಿಗಳು**

೧. ಶಿವಪ್ರಕಾಶ ಎಚ್.ಎಸ್., ಮಹಾಚೈತ್ರ, ಮುನ್ನುಡಿ

೨. ಚಂದ್ರಶೇಖರ ಕಂಬಾರ, ಶಿವರಾತ್ರಿ, ಮುನ್ನುಡಿ, ಪು.೧೦

೨೫. ಕಲಬುರ್ಗಿ ಎಂ.ಎಂ., ಮಾರ್ಗ, ಸಂ.೩, ಪು.೫೦೨

೨೬. ಕಲಬುರ್ಗಿ ಎಂ.ಎಂ., ಕೆಟ್ಟಿತ್ತು ಕಲ್ಯಾಣ, ಪು.೨೮

೨೭. ಅದೇ, ಪು.೩೧-೩೨

೨೮. ಅದೇ, ಪು.೩

೨೯. ಅದೇ, ಪು.೨೪

೩೦. ಅದೇ, ಪು.೭೮

೩೧. ಅದೇ, ಪು.೨೫

೩೨. ಅದೇ, ಪು.೨೫

೩೩. ಕಲಬುರ್ಗಿ ಎಂ.ಎಂ., ಮಾರ್ಗ, ಸಂ.೩, ಪು.೪೯೪

೩೪. ಕಲಬುರ್ಗಿ ಎಂ.ಎಂ., ಕೆಟ್ಟಿತ್ತು ಕಲ್ಯಾಣ, ಪು.೧೯

## ಅಧ್ಯಾಯ: ಏಳು

# ಸಮಾರೋಪ

ಎಂ.ಎಂ.ಕಲಬುರ್ಗಿ ಅವರದು ಶ್ರಮಸಂಸ್ಕೃತಿಯಲ್ಲಿ ರೂಪಗೊಂಡ ವ್ಯಕ್ತಿತ್ವ. ಅವರ ಬರವಣಿಗೆ ನೋಡಿದರೆ ಅವರ ಸಂಶೋಧನ ಆಸಕ್ತಿ ವಿಷಯವನ್ನು ಆಳವಾಗಿ ನೋಡುವ ದೃಷ್ಟಿಕೋನ ಹಾಗೂ ಅವರ ಶ್ರಮದಾಯಕ ಬದುಕು ನಮ್ಮೆಲ್ಲರಿಗೂ ಅರಿವಾಗುತ್ತದೆ. ಅತಿ ಹೆಚ್ಚಿನ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿದ್ದರೂ ಕೂಡ ವಚನ ಸಾಹಿತ್ಯದಲ್ಲಿ ಅವರು ತಮ್ಮನ್ನು ಸಮರ್ಥಿಸಿಕೊಂಡಿದ್ದರೆಂದು ಅವರ ವಚನ ಸಾಹಿತ್ಯ ಕ್ಷೇತ್ರವನ್ನು ಗಮನಿಸಿದರೆ ತಿಳಿದುಬರುತ್ತದೆ. ಶರಣರ ತತ್ವಗಳನ್ನು ತಾವು ಅಳವಡಿಸಿಕೊಳ್ಳುವ ಮೂಲಕ ಇತರರಿಗೆ ಮಾರ್ಗದರ್ಶಿಯಾಗಿ ಕಂಡುಬರುತ್ತಾರೆ. ಜೊತೆಗೆ ಇವರ ವಚನಸಂಬಂಧಿ ಕಾರ್ಯ ಕುರಿತಂತೆ ಈ ಅಧ್ಯಯನದ ಮೂಲಕ ಕೆಲವು ಫಲಿತಗಳನ್ನು ಕಂಡುಕೊಂಡಿದ್ದೇನೆ.

ಎಂ.ಎಂ.ಕಲಬುರ್ಗಿ ಅವರ ವಚನ ವ್ಯವಸಾಯ ಅತ್ಯಂತ ವ್ಯಾಪಕವಾದದ್ದು ಮತ್ತು ಬಹುಶಿಸ್ತೀಯ ನೆಲೆಯಿಂದ ಕೂಡಿದ್ದು. ಎಂ.ಎಂ.ಕಲಬುರ್ಗಿ ಅವರು ಸಮಾಜಪ್ರಜ್ಞೆಯ ಸಂಶೋಧಕರು; ಸಾಹಿತ್ಯಪ್ರಜ್ಞೆಯ ವಿಮರ್ಶಕರು. ಹೀಗಾಗಿ ಸಾಮಾಜಿಕ ಪ್ರಜ್ಞೆಯಿಂದ ಸಾಹಿತ್ಯವಾಗಿ ರಚನೆಗೊಂಡ ವಚನ ಸಾಹಿತ್ಯಕ್ಕೆ ವೈಚಾರಿಕತೆ ಮತ್ತು ಅನುಭಾವ ಹೆಸರಿನ ಎರಡು ಮುಖಗಳಿವೆ. ಈ ಎರಡರ ಶೋಧವನ್ನು ಎಂ.ಎಂ.ಕಲಬುರ್ಗಿ ಅವರು ಮಾಡಿದ್ದಾರೆ. ವಿಶೇಷವಾಗಿ "ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂಬ ವಚನ ಸಾಹಿತ್ಯದ ಧ್ಯೇಯವಾಕ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು ಎಂ.ಎಂ.ಕಲಬುರ್ಗಿ ಅವರ ವಚನ ಶೋಧ-ಅಧ್ಯಯನಗಳು ನಡೆದಂತಿವೆ. ಹೀಗಾಗಿ ವಚನ ಸಾಹಿತ್ಯ ರಚನೆಯಾದ ಮೇಲೆ ಅದರ ಸಂಕಲನ ಸಮಯ, ಸಂಪಾದನ ಸಮಯಗಳಲ್ಲಾದ ಐತಿಹಾಸಿಕ ಹಾಗೂ ಧಾರ್ಮಿಕ ಸಂಘರ್ಷ ಮತ್ತು ಸ್ಥಿತ್ಯಂತರಗಳನ್ನು ಅನೇಕ ಲೇಖನಗಳಲ್ಲಿ ಚರ್ಚಿಸುತ್ತಾರೆ. ರಾಜಪ್ರಭುತ್ವದ ಯುಗವಾಗಿದ್ದ ಹತ್ತನೇ ಶತಮಾನದ ನಂಬಿಕೆಗಳು-ಮೌಲ್ಯಗಳು ಅಥವಾ ವಚನಕಾರರ ಕಾಲದಲ್ಲೆ ಇದ್ದ ಮೌಲ್ಯಗಳು ಹೇಗೆ ಸ್ಥಾವರಗೊಂಡಿವೆ ಎಂಬುದನ್ನು ಶರಣರ ವಚನಗಳಿಂದಲೇ ಪರಿಶೋಧಿಸಿ ಕೊಟ್ಟಿರುವುದು ಎಂ.ಎಂ.ಕಲಬುರ್ಗಿ ಅವರದ್ದಾಗಿದೆ.

ಒಟ್ಟಿನಲ್ಲಿ ವಚನ ಸಾಹಿತ್ಯದ ಛಂದಸ್ಸು, ವ್ಯಾಕರಣ, ರಚನಾವಿನ್ಯಾಸ, ಆಶಯ, ಸ್ಥಾವರ ನಿರಾಕರಣೆಯಂಥ ಬಹು ಮಗ್ಗುಲುಗಳ ಅಧ್ಯಯನವನ್ನು ನಾವು ಕಾಣಲು ಶಕ್ಯವಿದೆ.

* ಹೊಸತನ್ನು ಹುಡುಕುವ ಹಂಬಲ ಹೊಂದಿರುವ ಎಂ.ಎಂ.ಕಲಬುರ್ಗಿ ಅವರು ಎಷ್ಟೋ ಹೊಸ ವಚನಗಳ ಶೋಧಕ್ಕೆ ಕಾರಣಕರ್ತರಾಗಿದ್ದಾರೆ. ಅದರಲ್ಲಿಯೂ ಹೀಗಾಗಲೇ ಹಲವು ವಿದ್ವಾಂಸರಿಂದ ಸಂಪಾದನೆಗೊಂಡ ಕೃತಿಗಳನ್ನು ಹಾಗೂ ಆ ಕೃತಿಗಳ ಸಂಪಾದನೆಗಾಗಿ ಬಳಕೆ ಮಾಡಿಕೊಂಡ ಹಸ್ತಪ್ರತಿಗಳನ್ನು ಮರುಶೋಧ ಮಾಡುವ ಮೂಲಕ ಅಲ್ಲಿ ಖಿಲವಾಗಿರುವ ಅಥವಾ ಕಣ್ತಪ್ಪಿನಿಂದ ಶೋಧಿಸದೇ ಇರುವ ಎಷ್ಟೋ ಹೊಸ ವಚನಗಳನ್ನು ಶೋಧ ಮಾಡಿರುವುದು ವಿಶೇಷ ಕಾರ್ಯವೆನಿಸುತ್ತದೆ. ಜೊತೆಗೆ ಹೊಸದಾಗಿ ದೊರೆತ ಎಷ್ಟೋ ಹಸ್ತಪ್ರತಿಗಳಲ್ಲೂ ಕೂಡ ಎಲ್ಲಿಯೂ ಕಂಡುಬಾರದ ಹೊಸ ವಚನಗಳನ್ನು ಹಾಗೂ ಹೊಸ ವಚನಕಾರರನ್ನು ಶೋಧಿಸಿರುವುದು ಅವರ ಸಂಶೋಧನ ತುಡಿತವನ್ನು ಹಾಗೂ ಮುಂದಿನ ಓದುಗರಿಗೆ ಹೊಸ ಅಧ್ಯಯನದ ಹೊಳಹುಗಳನ್ನು ನೀಡಿರುವುದನ್ನು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾಗಿದೆ.

* ಎಂ.ಎಂ.ಕಲಬುರ್ಗಿ ಅವರು ವಚನ ಅಧ್ಯಯನದಲ್ಲಿ ತೊಡಗಿಕೊಂಡ ಸಂದರ್ಭದಲ್ಲಿ ಹಲವು ವಚನಗಳನ್ನು ಹೊಸದಾಗಿ ಶೋಧಿಸಿದ್ದಾರೆ. ಇವರಿಗಿಂತ ಮೊದಲು ಹಲವು ವಿದ್ವಾಂಸರು ಕೃತಿಗಳನ್ನು ಸಂಪಾದನೆ ಮಾಡಿದ್ದರೂ ಸಹ ಅವರಿಗೆ ಗೋಚರವಾಗದ ಹಲವು ವಚನಗಳು ಇವರಿಂದ ಬೆಳಕು ಕಂಡಿವೆ. ಬಸವಣ್ಣನವರ ವಚನಗಳನ್ನು ಫ.ಗು.ಹಳಕಟ್ಟಿ, ಮರಿಶಂಕರಾಧ್ಯ, ಶಿ.ಶಿ.ಬಸವನಾಳ, ಎಲ್.ಬಸವರಾಜು ಹಾಗೂ ಆರ್.ಸಿ.ಹಿರೇಮಠ ಅವರು ಸಂಪಾದನೆ ಮಡಿದ ಕೃತಿಗಳ ಜೊತೆಗೆ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ೫೧ನೇ ನಂಬರಿನ ತಾಳೆಗರಿ ಪ್ರತಿಯನ್ನು ಆಧಾರ ಪ್ರತಿಯನ್ನಾಗಿ ಬಳಸಿಕೊಂಡ ಸಂದರ್ಭದಲ್ಲಿ ಸುಮಾರು ೬೦ ವಚನಗಳು ಹೊಸದಾಗಿ ಬೆಳಕುಕಂಡಿವೆ. ಚೆನ್ನಬಸವಣ್ಣನ ವಚನ ಸಂಪಾದನ ಕಾರ್ಯ ಎಂ.ಎಂ.ಕಲಬುರ್ಗಿ ಅವರಿಗಿಂತ ಹಿಂದೆ ನಡೆದಿದ್ದರೂ ಹಲವು ಹೊಸ ವಚನಗಳು ಇವರ ಮೂಲಕ ಬೆಳಕು ಕಂಡಿವೆ. ಚೆನ್ನಬಸವಣ್ಣನವರ ಷಟ್‌ಸ್ಥಲ ವಚನ ಮಹಾಸಂಪುಟ ೩ ಕೃತಿಗಳ ಸಂಯುಕ್ತ ಸಂಪುಟವಾಗಿದೆ. ಅದರಲ್ಲಿ 'ಚೆನ್ನಬಸವರಾಜದೇವರ ಷಟ್‌ಸ್ಥಲ ವಚನ' ಕೃತಿಯಲ್ಲಿ ಸುಮಾರು ೮೧ ವಚನಗಳು ಹೊಸದಾಗಿ ಶೋಧಗೊಂಡಿರುವುದನ್ನು ಸಂಪಾದಕರು ಹೇಳಿದ್ದಾರೆ. ಆದರೆ ಸಂಪಾದಕರೆ ಹೇಳಿರುವಂತೆ ಪರಿಷ್ಕರಣಕ್ಕೆ ಬಳಸಿಕೊಂಡ ಕೃತಿಯಲ್ಲಿರುವ ವಚನಗಳು ತಾಳೆಗರಿ ಪ್ರತಿಯಲ್ಲಿ ಕಂಡುಬರುವುದನ್ನು ಚೌಕ ಕಂಸಿನಲ್ಲಿ ಕೊಟ್ಟಿದ್ದಾರೆ. ಕೊಡದೇ ಇರುವಂತಹವು ಹೊಸ

ವಚನಗಳೆಂದಿದ್ದಾರೆ. ಈ ರೀತಿಯ ಚೌಕ ಕಂಸಿನಲ್ಲಿ ಕೊಡದೇ ಇರುವ ವಚನಗಳ ಸಂಖ್ಯೆಗಳು ೭೩ ಎಂದು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಜೊತೆಗೆ ಸಂಪಾದಕರು ಚೆನ್ನಬಸವಣ್ಣನ ಅಧ್ಯಯನದಲ್ಲಿ ಮತ್ತೆ ಮತ್ತೆ ತೊಡಗಿಕೊಳ್ಳುವ ಮೂಲಕ ಚೆನ್ನಬಸವಣ್ಣನವರ ಸಮಗ್ರ ವಚನ ಸಂಪಾದನಕಾರ್ಯ ಪೂರ್ಣಗೊಳಿಸಬೇಕೆಂದು ಸಂಪಾದನೆಯಲ್ಲಿ ತೊಡಗಿದಾಗ ಚೆನ್ನಬಸವೇಶ್ವರರು ನಿರೂಪಿಸಿದ ಅನುಭಾವ ಷಟ್‌ಸ್ಥಲದ ವಚನಗಳ ಕೃತಿಯಲ್ಲಿ ೬ ವಚನಗಳು, ಚೆನ್ನಬಸವಣ್ಣನವರ ಷಟ್‌ಸ್ಥಲದ ನಿರ್ಣಯ ಕೃತಿಯಲ್ಲಿ ೧೨ ವಚನಗಳು, ಮಿಶ್ರಷಟ್‌ಸ್ಥಲ ವಚನ ಕೃತಿಯಲ್ಲಿ ೮ ವಚನಗಳು, ಚೆನ್ನದಣ್ಣಾಯಕರ ವಚನ ಕೃತಿಯಲ್ಲಿ ೨೧ ವಚನಗಳು ಹೊಸ ವಚನಗಳಾಗಿವೆ. ಹೀಗೆ ಚೆನ್ನಬಸವಣ್ಣನವರ ೧೨೦ ಹೊಸ ವಚನಗಳು ಎಂ.ಎಂ.ಕಲಬುರ್ಗಿ ಅವರಿಂದ ಬೆಳಕು ಕಂಡಿರುವುದನ್ನು ಗುರುತಿಸಲಾಗಿದೆ. ಆರ್.ಸಿ.ಹಿರೇಮಠ, ಎಸ್.ವಿದ್ಯಾಶಂಕರ್ ಹಾಗೂ ತಿಪ್ಪೇರುದ್ರಸ್ವಾಮಿ ಅವರು ಸಿದ್ಧರಾಮನ ವಚನಗಳನ್ನು ಸಂಪಾದನೆ ಮಾಡಿದ್ದರೂ ಸಹ ಎಂ.ಎಂ.ಕಲಬುರ್ಗಿ ಅವರು ಸುಮಾರು ೬೦೦೦ ವಚನಗಳ ಹಸ್ತಪ್ರತಿ ಕಟ್ಟಿನಲ್ಲಿ ಬೇಕಾದಂತಹ ವಚನಗಳ ಹಸ್ತಪ್ರತಿಗಳನ್ನು ತೆಗೆದೊಯ್ದಿದ್ದರಿಂದ ಉಳಿದ ೧೩೨೫ ವಚನ ಮತ್ತು ಸ್ವರವಚನಗಳಲ್ಲಿ ಕೆಲವು ಎಂ.ಎಂ. ಕಲಬುರ್ಗಿ ಅವರಿಂದಲೇ ಹೊಸದಾಗಿ ಬೆಳಕು ಕಂಡಿರುವುದನ್ನು ಗುರುತಿಸಲಾಗಿದೆ. ಎಂ.ಎಂ. ಕಲಬುರ್ಗಿ ಅವರ ನಿರಂತರ ಅಧ್ಯಯನ ಫಲವಾಗಿ 'ಪರಮಾನಂದ ಸುಧೆ' ಎಂಬ ಹೊಸ ವಚನಕಟ್ಟು ಲಭಿಸುವಂತಾಗಿ ಇದುವರೆಗೂ ಪ್ರಕಟವಾಗದ ಪ್ರತಿಯಾಗಿದೆ. ಇದರಲ್ಲಿ ೧೨ನೆಯ ಶತಮಾನದಿಂದ ೧೬ನೆಯ ಶತಮಾನದವರೆಗಿನ ಶರಣರ ರಚನೆಗಳು ಕಂಡುಬಂದಿವೆ. ಅದರಲ್ಲಿ ಅಂಕಿತವಿಲ್ಲದ ೨ ಕಾಲಜ್ಞಾನ ವಚನಗಳನ್ನು ಹಾಗೂ ನಿಜಗುಣ ಶಿವಯೋಗಿಗಳ ೮ ಸ್ವರವಚನಗಳನ್ನು ಹೊಸದಾಗಿ ಶೋಧಿಸಿರುವುದನ್ನು ಗುರುತಿಸಲಾಗಿದೆ. 'ಏಕೋತ್ತರ ಶತಸ್ಥಲ' ಕೃತಿಯನ್ನು ಎಂ.ಎಂ.ಕಲಬುರ್ಗಿ ಅವರಿಗೂ ಮೊದಲೇ ಭೂಸನೂರಮಠ ಅವರು ಸಂಪಾದನೆ ಮಾಡಿದ್ದಾರೆ. ಅವರ ಸಂಪಾದನೆಯಲ್ಲಿ ಕಂಡುಬಾರದ ೧೦ ಹೊಸ ವಚನಗಳನ್ನು ಎಂ.ಎಂ. ಕಲಬುರ್ಗಿ ಅವರು ಶೋಧಿಸಿರುವುದು ಗಮನಾರ್ಹವಾದ ಸಂಗತಿ. ಇದನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಮಗ್ಗೆಯ ಮಾಯಿದೇವನ ೪ ಪೂರ್ಣಪ್ರಮಾಣದ ಹೊಸ ವಚನಗಳನ್ನು ಶೋಧಿಸಿರುವುದರ ಜೊತೆ ೨೦ ಆರಂಭದ ಚರಣಗಳನ್ನೊಳಗೊಂಡ ವಚನಗಳನ್ನು ಕೂಡ ಶೋಧಿಸಿದ್ದಾರೆ. ಇವುಗಳ ಪೂರ್ಣ ಪ್ರಮಾಣದ ರೂಪ ದೊರೆಯದಿದ್ದರೂ ಅವುಗಳ ಉಳಿವಿನ ಹಿನ್ನೆಲೆಯಲ್ಲಿ ಸಂಪಾದಿಸಿರು ವುದನ್ನು ಗುರುತಿಸಲಾಗಿದೆ. ತ್ರೈಲೋಚನ ಮಾಣಿಕೇಶ್ವರ ಲಿಂಗದ ವಚನ ಕರ್ತೃವನ್ನು ಹುಡುಕ ಹೊರಟ ಎಂ.ಎಂ.ಕಲಬುರ್ಗಿ ಅವರಿಗೆ ಬೊಮ್ಮಲಿಂಗದೇವರ ಕಾವ್ಯದಲ್ಲಿ ೬

ಹೊಸ ವಚನಗಳು ಲಭಿಸಿವೆ. ಹಾಗಾಗಿ ತ್ರೈಲೋಚನ ಮಾಣಿಕೇಶ್ವರಲಿಂಗದ ಭಕ್ತನಾದ ಬೊಮ್ಮಲಿಂಗನೇ ಇವುಗಳನ್ನು ಬರೆದಿರಬೇಕೆಂಬುದನ್ನು ತಿಳಿಸಲಾಗಿದೆ.

* ವಚನ ಸಾಹಿತ್ಯ ಕುರಿತಾದ ಹಸ್ತಪ್ರತಿಗಳಿಂದ ಪ್ರತಿಮಾಡುವ ಸಂದರ್ಭದಲ್ಲಿ ಉದ್ದೇಶಪೂರ್ವಕವಾಗಿ ಅಥವಾ ಉದ್ದೇಶರಹಿತವಾಗಿ ಪ್ರಕ್ಷಿಪ್ತ ವಚನಕಾರರು ಹಾಗೂ ಪ್ರಕ್ಷಿಪ್ತ ವಚನಗಳು ಹುಟ್ಟಿಕೊಂಡಿರುವುದನ್ನು ಎಂ.ಎಂ.ಕಲಬುರ್ಗಿ ಅವರು ಹೇಳುತ್ತಾ ೧೧೨ ಪ್ರಕ್ಷಿಪ್ತ ವಚನಕಾರರನ್ನು ಗುರುತಿಸಿದ್ದಾರೆ. ಶೂನ್ಯಸಂಪಾದನೆಯಂಥ ಕೃತಿಗಳಲ್ಲಿ ಪ್ರಕ್ಷಿಪ್ತ ವಚನಕಾರರ ದಾಳಿ ಹೆಚ್ಚಾಗಿದೆ ಎಂದು ಪ್ರಕ್ಷಿಪ್ತ ವಚನಕಾರರನ್ನು ಗುರುತಿಸುವ ಮೂಲಕ ನಿಜವಚನಕಾರರ ಮೌಲ್ಯವನ್ನು ಉಳಿಸುವ ಪ್ರಯತ್ನ ಎಂ.ಎಂ.ಕಲಬುರ್ಗಿ ಅವರದ್ದಾಗಿತ್ತು ಎಂದು ಗುರುತಿಸಲಾಗಿದೆ.

* ಸಂಪಾದಕರು ಗ್ರಂಥಸಂಪಾದನೆಗೆ ಹೊಸರೀತಿಯ ವೈಧಾನಿಕತೆಯನ್ನು ಕೆಲವು ಮಹತ್ವದ ಲೇಖನಗಳಲ್ಲಿ ತಿಳಿಸಿರುವುದನ್ನು ಗುರುತಿಸಲಾಗಿದೆ. ಅನುದ್ದೇಶಿತ ಪಾಠಾಂತರಗಳು ಮತ್ತು ಉದ್ದೇಶಿತ ಪಾಠಾಂತರಗಳು ಸಂಭವಿಸುವ ಬಗೆಯನ್ನು ಹಾಗೆಯೇ ವಚನ ಸಂಪಾದನೆಯಲ್ಲಿ ಪಾಠಾಂತರ ಸ್ವರೂಪ ಮತ್ತು ಆಶಯ ಸ್ವರೂಪಗಳ ಸ್ಪಷ್ಟ ಕಲ್ಪನೆ ಸಂಪಾದಕನಿಗಿರಬೇಕೆಂದು ಅವುಗಳನ್ನು ತಮ್ಮ ಸಂಪಾದನೆಯಲ್ಲಿ ಅಳವಡಿಸಿಕೊಂಡ ಬಗೆಯನ್ನು ಇಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

* ವಚನ ಸಂಪಾದನೆಯಲ್ಲಿ ಎರಡು ತಪ್ಪು ವಿಧಾನಗಳನ್ನು ಗುರುತಿಸುವ ಮೂಲಕ ಫ.ಗು.ಹಳಕಟ್ಟಿ ಅವರಿಂದಾದ ವಚನ ಮಿಶ್ರಣ ಹಾಗೂ ಆರ್.ಸಿ.ಹಿರೇಮಠರಿಂದ ಉಂಟಾದ ಪಾಠ ಮಿಶ್ರಣ ದೋಷಗಳನ್ನು ಗುರುತಿಸಿರುವುದನ್ನು ಪ್ರಸ್ತುತ ಪ್ರಬಂಧದಲ್ಲಿ ತಿಳಿಸಲಾಗಿದೆ. ಇದುವರೆಗೂ ಹಲವು ಹಸ್ತಪ್ರತಿಗಳ ಸಹಾಯದಿಂದ ಒಂದು ಕೃತಿಯನ್ನು ಪರಿಷ್ಕರಣೆ ಮಾಡುತ್ತಾ ಬಂದಿದ್ದು, ಅವು ಮುದ್ರಣ ರೂಪದಲ್ಲಿ ನಮ್ಮದುರಿಗಿದೆ. ಹೀಗಿರುವಾಗ ಆ ಮುದ್ರಿತ ಆವೃತ್ತಿಗಳ ಸಂಪಾದನೆಯನ್ನು ಉತ್ತಮಪಡಿಸಬೇಕಾದ ಅಗತ್ಯ ಬರುವ ಸಾಧ್ಯತೆ ಪರಿಷ್ಕರಣದ ಪರಿಷ್ಕರಣ ಅಗತ್ಯವಿದೆ ಎನ್ನುತ್ತ ಪರಿಷ್ಕರಣದ ಪರಿಷ್ಕರಣೆ ಎಂಬ ಸಂಪಾದನೆಯ ಹೊಸ ಮಾದರಿಯನ್ನು ಕಟ್ಟಿಕೊಟ್ಟಿರುವುದನ್ನು ಗುರುತಿಸಲಾಗಿದೆ.

* ಜನಪ್ರಿಯ ಆವೃತ್ತಿ ಸಂಪಾದನೆಗೂ ಇತರ ಸಂಪಾದನ ಕೃತಿಗಳಿಗೆ ಸಂಪಾದಕರು ಬೇರೆ ರೀತಿಯ ವೈಧಾನಿಕತೆಯನ್ನು ಅನುಸರಿಸಿದ್ದಾರೆ. ಜನಪ್ರಿಯ ಆವೃತ್ತಿ ಆಗಿರುವುದರಿಂದ ಪಾಠಾಂತರಗಳನ್ನು ಅಡಿಯಲ್ಲಿ ನೀಡದೇ ಯೋಗ್ಯಪಾಠ ಸ್ವೀಕರಿಸಿ ಪರಿಷ್ಕರಿಸಿದ್ದುದರಿಂದ ಓದುಗರಿಗೆ ಪರಿಷ್ಕರಣದ ಸುಳಿವು ತಿಳಿಯುವುದಿಲ್ಲ. ಪರಿಷ್ಕರಣದ ಬಗೆಯನ್ನು ತಿಳಿಯಬೇಕಾದರೆ

ಕರ್ನಾಟಕ ವಿಶ್ವವಿದ್ಯಾಲಯದ ಆವೃತ್ತಿಯಲ್ಲಿ ನೀಡಿದ ಪಾಠಾಂತರಗಳನ್ನು ಗಮನಿಸಿದಾಗ ಅದರ ಅರಿವಾಗುತ್ತದೆ ಎಂಬುದನ್ನು ಉದಾಹರಣೆ ಸಮೇತ ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾಗಿದೆ.

* ಬಸವಣ್ಣನವರ ವಚನ ಸಂಪುಟದ ೨ನೆಯ ಹಾಗೂ ೩ನೇ ಆವೃತ್ತಿಯನ್ನು ಸಂಪಾದಿಸುವಲ್ಲಿ ಸಂಪಾದಕರು ಪರಿಷ್ಕರಣದ ಪರಿಷ್ಕರಣ ಮಾದರಿಯನ್ನು ಅದರಲ್ಲೂ ಅವಶ್ಯವಿದ್ದಲ್ಲಿ ವಾಹತ್ಮಕ ಪರಿಷ್ಕರಣ ಪದ್ಧತಿಯನ್ನು ಅನುಸರಿಸಿರುವುದನ್ನು ಉದಾಹರಣೆ ಸಮೇತ ಗುರುತಿಲಾಗಿದೆ. ೩ನೆಯ ಆವೃತ್ತಿಯನ್ನು ಹೊರತರುವ ಸಂದರ್ಭದಲ್ಲಿ ಬೈಬಲ್ ಮುದ್ರಣ ಮಾದರಿಯನ್ನು ಅನುಸರಿಸಿರುವುದು ಹಾಗೂ ೨ನೇ ಆವೃತ್ತಿಯಲ್ಲಿ ಪುನರುಕ್ತಿ ನಿವಾರಣೆ, ಕೃತಕ ವಚನ ನಿವಾರಣೆ ಮಾಡುವ ಮೂಲಕ ಹೊಸ ವಚನಗಳ ಸೇರ್ಪಡೆ, ಉಳಿದಿರುವ ಮುದ್ರಣ ದೋಷದ ಜೊತೆಗೆ ಪಾಠ ಪರಿಷ್ಕರಣ ಇತ್ಯಾದಿ ತಿದ್ದುಪಡಿ ಮಾಡುವ ಮೂಲಕ ಸಂಪಾದಿಸಿ ಕೊಟ್ಟಿರುವುದು ಸಂಪಾದಕರ ವೈಶಿಷ್ಟ್ಯತೆಯನ್ನು ಗುರುತಿಸಲಾಗಿದೆ.

* ಒಬ್ಬರು ಸಂಪಾದಿಸಿದ ವಚನ ಕೃತಿಯನ್ನು, ಅದೂ ಅವರು ಬಳಸಿದ ಹಸ್ತಪ್ರತಿಗಳು ಲಭ್ಯವಿಲ್ಲದಾಗ ಇನ್ನೊಬ್ಬರು ಪರಿಷ್ಕರಿಸುವುದು ಕನ್ನಡದಲ್ಲಿಯೇ ಹೊಸ ಅನುಭವ, ಹೊಸ ಉಪಕ್ರಮ. ವಚನ ಪಾಠಗಳು ಲೋಪ, ಆಗಮ, ಆದೇಶ ಕಾರಣವಾಗಿ ಸಂಕ್ಷಿಪ್ತ, ವಿಸ್ತಾರ, ಪಲ್ಲಟ ಇತ್ಯಾದಿ ರೂಪಗಳಲ್ಲಿ ಸಿಗುತ್ತವೆ. ಹೀಗಾಗಿ ಇವುಗಳಲ್ಲಿ ಹಳಕಟ್ಟಿಯವರು ಇಟ್ಟುಕೊಂಡ ವಚನ ರೂಪವನ್ನು ನಾವು ಮೊದಲು ಒಪ್ಪಿಕೊಂಡು ಅದರಲ್ಲಿಯೇ ಪಾಠಶುದ್ಧಿ ಮಾಡ ಬೇಕಾಗುತ್ತದೆ. ಇದನ್ನು ಮನಗಂಡು ಹಳಕಟ್ಟಿ ಅವರು ಸ್ವೀಕರಿಸಿದ ವಚನ ರೂಪಕ್ಕೂ ಧಕ್ಕೆ ಬರದಂತೆ, ಜೊತೆಗೆ ವೀರಶೈವ ತತ್ವಕ್ಕೆ ಕೂಡ ಚ್ಯುತಿ ಬರದಂತೆ, ಗ್ರಂಥಸಂಪಾದನ ಶಾಸ್ತ್ರಕ್ಕೂ ಚ್ಯುತಿ ಬರದಂತೆ ಈ ತ್ರಿಶೂಲ ಸಾಕ್ಷಿಯಾಗಿ ನಾವು ಪರಿಷ್ಕರಣ ಕಾರ್ಯವನ್ನು ನಿರ್ವಹಿಸಿರು ವುದನ್ನು ಗುರುತಿಸಬಹುದಾಗಿದೆ.

* ಅನ್ಯ ಆವೃತ್ತಿಗಳ ಪಾಠಾಂತರಗಳು ಅಸಮರ್ಪಕವೆನಿಸಿದಾಗ ಊಹೆ ಮಾಡಿ ಸಂಪಾದನೆ ಮಾಡಿದ್ದರೂ ಊಹೆಗೆ ನಿಲುಕದ ಪಾಠಗಳನ್ನು ಹಾಗೆಯೇ ಇಟ್ಟುಕೊಂಡಿದ್ದಾರೆ. ಕೆಲವು ಹೊಸದಾಗಿ ದೊರೆತ ವಚನಗಳು ಯಾವುದೇ ಸಂಪಾದನ ಕೃತಿಗಳಲ್ಲಿ ಪ್ರಕಟವಾಗಿಲ್ಲವೆಂದ ಸಂದರ್ಭದಲ್ಲಿ ಏಕೈಕ ಹಸ್ತಪ್ರತಿ ಪರಿಷ್ಕರಣ ಪದ್ಧತಿಯನ್ನು ಅನುಸರಿಸುವುದಾಗಿ ತಿಳಿಸಿದ್ದಾರೆ. 'ಏಕೋತ್ತರ ಶತಸ್ಥಲ' ಕೃತಿಯನ್ನು ಏಕೈಕ ಹಸ್ತಪ್ರತಿಯಿಂದ ಸಂಪಾದನೆ ಮಾಡುವ ಮೂಲಕ ಹೊಸ ವೈಧಾನಿಕತೆಯನ್ನು ರೂಪಿಸಿದ್ದಾರೆ. ಈ ರೀತಿಯ ಏಕೈಕ ಹಸ್ತಪ್ರತಿಯ ಮೂಲಕ ಸಂಪಾದನಕಾರ್ಯ ಕೈಗೊಂಡಾಗ ಅದರಲ್ಲಿನ ಲಿಪಿಕಾರನ ಮರೆವಿನಿಂದ,

ಅಕ್ಷರದೋಷಗಳನ್ನು ಮುದ್ರಿತ ಪಠ್ಯ ಮತ್ತು ಪಾಠಾಂತರಗಳ ನೆರವಿನಿಂದ ಸರಿಪಡಿಸಿಕೊಂಡಿದ್ದಾರೆ. ಇದು ಮೂಲ ಕೃತಿ ಅಥವಾ ಮೂಲಕ್ಕೆ ಸಮೀಪವಾಗಿರುವುದರಿಂದ ಪಾಠ ಸರಿಪಡಿಸುವ ಸಮಸ್ಯೆಗಳು ಅಷ್ಟಾಗಿ ಎದುರಾಗುವುದಿಲ್ಲ ಎಂದು ಸಂಪಾದಕರ ಹೇಳಿಕೆಯಲ್ಲಿ ಸಂಪಾದನೆಯ ಬಗೆಗಿನ ಅದರಲ್ಲೂ ಮೂಲಕ್ಕೆ ಧಕ್ಕೆ ಬರದಂತಹ ಕಾಳಜಿಯನ್ನು ಸಂಪಾದಕರಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

* ಎಂ.ಎಂ.ಕಲಬುರ್ಗಿ ಅವರು ಶೋಧ ಮತ್ತು ಸಂಪಾದನಕಾರ್ಯದಲ್ಲಿ ಮಾತ್ರ ತೊಡಗದೇ ಹಲವು ವಚನಗಳನ್ನು ಪಾಠ ಪರಿಷ್ಕರಣೆ ಮಾಡುವುದರ ಮೂಲಕ ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ. ಪ್ರಭುತ್ವ–ಸಮಾಜ–ಸಾಹಿತ್ಯ–ತತ್ವ–ಆಚರಣೆಗಳು–ಭಾಷೆ ಮತ್ತು ಆಕೃತಿಗಳ ಹಿನ್ನೆಲೆಯಲ್ಲಿ ವಚನಕಾರರ ಚಿಂತನೆಗಳನ್ನು ನಿರೂಪಿಸುವುದರ ಮೂಲಕ ಮೌಲ್ಯ ಮತ್ತು ಆದರ್ಶಗಳ ಬಗ್ಗೆ ಶರಣರಿಗಿರಬಹುದಾದ ವೈಚಾರಿಕತೆಯನ್ನು ಅನಾವರಣಗೊಳಿಸಿರುವ ಬಗೆಯನ್ನು ಗುರುತಿಸಲಾಗಿದೆ. ಹಾಗೆಯೇ ವಚನಕಾರರ ಕಾಲ, ಸ್ಥಳ ಕುರಿತಾದ ಇತಿವೃತ್ತವನ್ನು ಹಾಗೂ ಮೂಲವನ್ನು ಶೋಧಿಸುವ ಹಿನ್ನೆಲೆಯಲ್ಲಿ ನಡೆಸಿದ ಅಧ್ಯಯನವನ್ನು ಗುರುತಿಸಲಾಗಿದೆ.

* ವಚನ ಕೃತಿಗಳ ಅಧ್ಯಯನದಲ್ಲಿ ಬಿಡಿ ಬಿಡಿಯಾದ ವಚನಗಳಿಂದ ನಿರೂಪಿತವಾದ ಇಡಿಯಾದ ಕೃತಿಗಳೆನಿಸಿದ ಶೂನ್ಯಸಂಪಾದನೆ, ಏಕೋತ್ತರ ಶತಸ್ಥಲ ಇತ್ಯಾದಿ ಸಾಹಿತ್ಯ ಪಠ್ಯಗಳಲ್ಲದೆ ಶತಸ್ಥಲಗಳು ವಚನ ಸಾಹಿತ್ಯ ಬೆಳೆದುಬಂದ ಕಾಲಮಾನಗಳ ಸ್ಥಿತ್ಯಂತರಗಳನ್ನು ಅದರ ಪರಿಣಾಮಗಳನ್ನು ಇಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ.

* ವಚನ ಸಂಗ್ರಹ, ಸಂಕಲನ, ಸಂಪಾದನೆ ಮತ್ತು ವಿಶ್ಲೇಷಣೆಯ ಕಾರ್ಯವನ್ನು ಮಾಡಿರುವುದರ ಪ್ರಭಾವವೋ ಎಂಬಂತೆ ವಚನಗಳ ಅಧ್ಯಯನದ ಹಿನ್ನೆಲೆಯಲ್ಲಿ 'ಕೆಟ್ಟಿತ್ತು ಕಲ್ಯಾಣ' ನಾಟಕ ರಚನೆ ಮಾಡಿರುವುದನ್ನು ಗುರುತಿಸಲಾಗಿದೆ. ಬಸವಣ್ಣನ ಆದರ್ಶ ಹಾಗೂ ಕ್ರಾಂತಿಕಾರಿ ನಡೆಗಳು ಕೇವಲ ೧೨ನೆಯ ಶತಮಾನಕ್ಕೆ ಸೀಮಿತವಲ್ಲ, ಇಂದಿಗೂ ಮುಂದಿಗೂ ಮಾದರಿಯಾಗಿವೆ. ಬಸವಣ್ಣನ ಮಾರ್ಗದಲ್ಲಿ ಸಮಕಾಲೀನ ಸಮಾಜ ಮುನ್ನಡೆಯಬೇಕಿದೆ. ಈ ನಾಟಕದುದ್ದಕ್ಕೂ ಸಮಸಮಾಜದ ಕಲ್ಪನೆ ಎದ್ದುಕಾಣುತ್ತದೆ. ಬಸವಣ್ಣನವರ ಚಿಂತನೆಗಳಿಗೆ ಎಂ.ಎಂ.ಕಲಬುರ್ಗಿ ಅವರು ಸಹಮತವಿದೆ ಎಂಬಂತೆ ನಾಟಕ ಚಿತ್ರಿಸಿದ ಬಗೆಯನ್ನು ಗುರುತಿಸಲಾಗಿದೆ.

* ವಚನ ಸಾಹಿತ್ಯ ಬೌದ್ಧಿಕ ಮಟ್ಟದಿಂದ ಹಿಡಿದು ಭೌತಿಕ ಮಟ್ಟದವರೆಗೆ ವಿಸ್ತಾರವಾದ ಜ್ಞಾನವನ್ನು ನೀಡುತ್ತದೆ. ಪವಿತ್ರ ಗ್ರಂಥಗಳೆಂದು ಗುರುತಿಸಿಕೊಳ್ಳುವ ಬೈಬಲ್, ಕುರಾನ್

ಇವುಗಳ ಮಾದರಿಯಲ್ಲಿ ವಚನ ಸಾಹಿತ್ಯವನ್ನು ಪರಿಚಯಿಸುವ ಮತ್ತು ಬೆಳೆಸುವ ಉದ್ದೇಶದಿಂದ ಬಹುಭಾಷಾ ಯೋಜನೆಯನ್ನು ಕೈಗೊಂಡಿದ್ದಾರೆ. ಈ ಯೋಜನೆಯನ್ನು ಬಸವಯುಗ ಮತ್ತು ಬಸವೋತ್ತರ ಯುಗ ಎಂದು ಎರಡು ಭಾಗಗಳನ್ನಾಗಿ ವಿಂಗಡಿಸಿಕೊಂಡಿದ್ದಾರೆ. ಈ ಯುಗದಲ್ಲಿ ಬಸವಣ್ಣನನ್ನು ಒಳಗೊಂಡಂತೆ ೧೭೯ ಶರಣರು, ೩೧ ಶರಣೆಯರು ಹಾಗೂ ೧೩ ಅಜ್ಞಾತ ಶರಣರ ವಚನಗಳನ್ನು ಈ ಯೋಜನೆಗೆ ಬಳಸಿಕೊಂಡಿದ್ದಾರೆ. ಇದು ಅರ್ಥಪೂರ್ಣ ಕೆಲವೂ ಹೌದು, ಪ್ರಸ್ತುತ ದಿನಮಾನಗಳಿಗೆ ಅನಿವಾರ್ಯತೆಯೂ ಹೌದು ಎಂಬುದು ಇವರ ವಚನ ಅಧ್ಯಯನದಿಂದ ತಿಳಿದುಬರುತ್ತದೆ.

# ಅನುಬಂಧಗಳು

೧. ಎಂ.ಎಂ.ಕಲಬುರ್ಗಿ ಅವರ ವಚನಸಂಬಂಧಿ ಕೃತಿಗಳು ಹಾಗೂ ಲೇಖನಗಳು
೨. ಪರಾಮರ್ಶನ ಗ್ರಂಥಗಳು

# ಅನುಬಂಧ: ಒಂದು

## ಎಂ.ಎಂ. ಕಲಬುರ್ಗಿ ಅವರ ವಚನಸಂಬಂಧಿ ಕೃತಿಗಳು ಹಾಗೂ ಲೇಖನಗಳು

### ೧. ಕೃತಿಗಳು

೧. ಏಕೋತ್ತರ ಷಟ್‌ಸ್ಥಲ, ಲಿಂಗಾಯತ ಅಧ್ಯಯನ ಸಂಸ್ಥೆ, ಶ್ರೀಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ, ೨೦೧೦

೨. ಚನ್ನಬಸವಣ್ಣನವರ ಷಟ್‌ಸ್ಥಲ ವಚನ ಮಹಾಸಂಪುಟ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ, ೧೯೯೨.

೩. ಪರಮಾನಂದ ಸುಧೆ(ಇತರರೊಂದಿಗೆ), ಲಿಂಗಾಯತ ಅಧ್ಯಯನ ಸಂಸ್ಥೆ, ಯಡೆಯೂರು ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ, ೨೦೧೦.

೪. ಬಸವಣ್ಣನವರ ವಚನಗಳು, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು, ೧೯೯೩.

೫. ಬಸವಸ್ತೋತ್ರದ ವಚನಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬.

೬. ಬಸವಣ್ಣನವರ ಟೀಕಿನ ವಚನಗಳು, ಸಂ.೧, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬.

೭. ಬಸವಣ್ಣನವರ ಟೀಕಿನ ವಚನಗಳು, ಸಂ.೨, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬.

೮. ಬಸವಮಾರ್ಗ ೧, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೦.

೯. ಬಸವಮಾರ್ಗ ೨, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೧.

೧೦. ಬಸವಮಾರ್ಗ ೩(ಶಿವಶರಣರ ಕಾಯಕ ಸಿದ್ಧಾಂತ), ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೫.

೧೧. ವಚನ, ಬಸವ ಸಮಿತಿ, ಬಸವ ಭವನ, ಬೆಂಗಳೂರು, ೨೦೧೨.

೧೨. ವಚನ ಸಂಕಲನ ಸಂಪುಟ ೪(ಇತರರೊಂದಿಗೆ), ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ, ೧೯೯೨.

೧೩. ವಚನಶಾಸ್ತ್ರ ಸಾರ(ಇತರರೊಂದಿಗೆ), ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ, ೧೯೮೨, ೧೯೯೯, ಫ.ಗು.ಹಳಕಟ್ಟಿ ಸಂಶೋಧನ ಸಂಸ್ಥೆ, ವಿಜಾಪುರ, ೨೦೦೭.

೧೪. ವಚನ ಸಂಕಲನ ಸಂಪುಟ ೬, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ, ೨೦೦೨.

೧೫. ವಚನ ಸಾಹಿತ್ಯ ಪ್ರಕಟಣ ಇತಿಹಾಸ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ, ೧೯೯೦.

೧೬. ವಚನ ಸಾಹಿತ್ಯ ಪ್ರಾಚೀನ ಆಕಾರಕೋಶ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ, ೧೯೯೧.

೧೭. ವಚನ ವರ್ಷ, ನೀಲಗಂಗಾ ಪ್ರಕಾಶನ, ಬಾಗಲಕೋಟೆ, ೨೦೧೮.

೧೮. ಶೂನ್ಯಸಂಪಾದನೆ, ಲಿಂಗಾಯತ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಮಠ, ಡಂಬಳ, ಗದಗ, ೨೦೧೬.

೧೯. ಸಂಕೀರ್ಣ ವಚನ ಸಂಪುಟ, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೩.

೨೦. ಸಿದ್ಧರಾಮಯ್ಯದೇವರ ವಚನಗಳು(ಇತರರೊಂದಿಗೆ), ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೭.

೨೧. ಸ್ವರವಚನ ವಿಚಾರ ಸಂಕಿರಣ, ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೧೯೯೭.

## ೨. ಲೇಖನಗಳು

೧. ಅಲ್ಲಮಪ್ರಭುವಿನ ಜನ್ಮಗ್ರಾಮ, ಮಾರ್ಗ ಸಂ.೧, ಪು.೧೭೭.

೨. ಅಲ್ಲಮನ ಚರಿತ್ರೆ: ಬೆಳವಣಿಗೆಯ ರೀತಿಗಳು, ಮಾರ್ಗ ಸಂ.೧, ಪು.೧೮೩.

೩. ಅಲ್ಲಮನ ಹೊಸವಚನಗಳು, ಮಾರ್ಗ ಸಂ.೩, ಪು.೧೭೬.

೪. ಅಸ್ಪೃಶ್ಯತೆಯ ನಿರ್ಮೂಲನ: ಶರಣರ ಕಾರ್ಯವಿಧಾನ, ಮಾರ್ಗ ಸಂ.೧, ಪು.೨೭೯.

೫. ಅಲ್ಲಿ ಉಂಬರೆ ಸಂಗ, ಇಲ್ಲಿ ಉಂಬರೆ ಸಂಗ, ಮಾರ್ಗ ಸಂ.೩, ಪು.೫೦೨.

೬. ಅನುಭವಮಂಟಪ: ಹುಟ್ಟು-ಮರುಹುಟ್ಟು, ಮಾರ್ಗ ಸಂ.೪, ಪು.೩೫೭.

೭. ಅಕ್ಕ ಮಹಾದೇವಿತ್ವದ ಹಲವು ಎತ್ತರಗಳು(೧೯೯೨), ಮಾರ್ಗ ಸಂ.೬, ಪು.೨೬೪.

೮. ಇಷ್ಟಲಿಂಗ, ಮಾರ್ಗ ಸಂ.೧, ಪು.೧೬೪.

೯. ಇವರಿಬ್ಬರಿಗೆ ಹುಟ್ಟಿದ ಮಗ ನಾನು, ಮಾರ್ಗ ಸಂ.೩, ಪು.೪೮೫.

೧೦. ಎರಡು ವಚನಗಳು, ಮಾರ್ಗ ಸಂ.೩, ಪು.೪೭೩

೧೧. ಎನ್ನಿಂದಲೇ ಆಯಿತ್ತು, ಎನ್ನಿಂದಲೇ ಹೋಯಿತ್ತು, ಮಾರ್ಗ ಸಂ.೩, ಪು.೪೯೮.

೧೨. ಏಕೋತ್ತರ ಶತಸ್ಥಲ ಸಿದ್ಧಾಂತದ ಪ್ರವರ್ತಕ ಯಾರು? ಎರಡು ವಾದಗಳು, ಮಾರ್ಗ ಸಂ.೩, ಪು.೨೯೩.

೧೩. ಏಕೋತ್ತರ ಶತಸ್ಥಲ, ಮಾರ್ಗ ಸಂ.೭, ಪು.೩೭೦.

೧೪. ಕನ್ಯೆಯ ಸ್ನೇಹದಂತಿದ್ದಿತ್ತು, ಮಾರ್ಗ ಸಂ.೩, ಪು.೪೭೦.

೧೫. ಕಡಬಡ್ಡಿಯ ಕೊಡಲಾಗದು, ಮಾರ್ಗ ಸಂ.೩, ಪು.೪೭೯

೧೬. ಕಡಬಡ್ಡಿಯ ಕೊಡಲಾಗದು-ಮರುಪ್ರತಿಕ್ರಿಯೆ, ಮಾರ್ಗ ಸಂ.೩, ಪು.೪೮೩.

೧೭. ಕಲ್ಯಾಣ: ಶೈವಧರ್ಮದಿಂದ ಶರಣಧರ್ಮಕ್ಕೆ, ಮಾರ್ಗ ಸಂ.೪, ಪು.೧೪೩.

೧೮. ಕಾಯಕ ಸಿದ್ಧಾಂತದ ಆಯಾಮಗಳು, ಮಾರ್ಗ ಸಂ.೪, ಪು.೧೭೩.

೧೯. ಕಾವ್ಯದಲ್ಲಿ ಬಾಚರಸನ ವಚನ-ಶಾಸನದಲ್ಲಿ ಸಿದ್ಧರಾಮನ ವಚನ, ಮಾರ್ಗ ಸಂ.೩, ಪು.೧೭೮

೨೦. ಕೆಲವು ವಚನಕಾರರು-ವಚನ ಮುದ್ರಿಕೆಗಳು, ಮಾರ್ಗ ಸಂ.೪, ಪು.೫೧೫.

೨೧. ಕೋಡೆಕಲ್ಲ ವಚನವಾಕ್ಯ(ಸಂಪುಟ ೪), ಮಾರ್ಗ ಸಂ.೭, ಪು.೩೬೦.

೨೨. ಕೋಡೆಕಲ್ಲು ಬಸವಣ್ಣ: ಒಂದು ಅಧ್ಯಯನ(೧೯೫೫), ಮಾರ್ಗ ಸಂ.೬, ಪು.೪೦೮.

೨೩. ಚನ್ನಬಸವಣ್ಣನವರ ಅಪ್ರಕಟಿತ ವಚನಗಳು, ಮಾರ್ಗ ಸಂ.೧, ಪು.೨೨೫.

೨೪. ಚನ್ನಬಸವಣ್ಣನವರ ಷಟ್‌ಸ್ಥಲ ವಚನಸಂಪುಟಗಳು, ಮಾರ್ಗ ಸಂ.೧, ಪು.೨೫

೨೫. ಚನ್ನಬಸವಣ್ಣನವರ ಷಟ್‌ಸ್ಥಲ ವಚನ ಮಹಾಸಂಪುಟ, ಮಾರ್ಗ ಸಂ.೪, ಪು.೨೫೧.

೨೬. ಜಂಗಮ, ಮಾರ್ಗ ಸಂ.೧, ಪು.೨೬೪.

೨೭. ಜಂಗಮವೇ ಲಿಂಗವೆಂದು ನಂಬಿದೆ, ಮಾರ್ಗ ಸಂ.೩. ಪು.೫೦೫.

೨೮. ಜಾತಿ ನಾಲ್ಕುವಿಡಿದು ಬಂದ ಜಂಗಮವೇ ಶ್ರೇಷ್ಠ, ಮಾರ್ಗ ಸಂ.೭, ಪು.೧೧೯.

೨೯. ಜೇಡರ ದಾಸಿಮಯ್ಯನ ಗ್ರಾಮ: ಮುದನೂರು? ಗೊಬ್ಬೂರು?, ಮಾರ್ಗ ಸಂ.೭, ಪು.೧೨೮.

೩೦. ದಾಸೋಹ: ಐತಿಹಾಸಿಕ ಅಗತ್ಯದ ಸೃಷ್ಟಿ, ಮಾರ್ಗ ಸಂ.೧, ಪು.೨೭೫.

೩೧. ದೃಷ್ಟಿಯಾರೆ–ದೃಷ್ಟಿವಾರೆ, ಮಾರ್ಗ ಸಂ.೧, ಪು.೨೪೦.

೩೨. ದೇವಾಲಯ ಸಂಸ್ಕೃತಿ ನಿರಾಕರಣೆ, ಮಾರ್ಗ ಸಂ.೭, ಪು.೧೫೬.

೩೩. ದೇವರ ದಾಸಿಮಯ್ಯ–ಜೇಡರ ದಾಸಿಮಯ್ಯ, ಮಾರ್ಗ ಸಂ.೭, ಪು.೩೧೧.

೩೪. ದೇವರ ದಾಸಿಮಯ್ಯನಿಂದ ಜೇಡರ ದಾಸಿಮಯ್ಯ ಭಿನ್ನ, ಮಾರ್ಗ ಸಂ.೭, ಪು.೩೧೩.

೩೫. ದೇವೂರ ದಾಸಿಮಯ್ಯ? ಮಾರ್ಗ ಸಂ.೧, ಪು.೧೫೫.

೩೬. ನಕುಲೀಶ ಪಾಶುಪತರು ಮತ್ತು ವಚನ ಸಾಹಿತ್ಯ, ಮಾರ್ಗ ಸಂ.೧, ಪು.೧೭೩.

೩೭. ನೀಲಲೋಚನೆ, ಮಾರ್ಗ ಸಂ.೧, ಪು.೨೨೦.

೩೮. ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು, ಮಾರ್ಗ ಸಂ.೩, ಪು.೪೯೧.

೩೯. ಪರಿಷ್ಕರಣ–ಪರಿಷ್ಕರಣದ ಪರಿಷ್ಕರಣ, ಮಾರ್ಗ ಸಂ.೪, ಪು.೫೬೧.

೪೦. ಪರಮಾನಂದ ಸುಧೆ, ಮಾರ್ಗ ಸಂ.೭, ಪು.೩೨೧.

೪೧. ಪೂಜೆ–ಮಾಟ, ಮಾರ್ಗ ಸಂ.೩, ಪು.೫೦೭.

೪೨. ಪ್ರಕ್ಷಿಪ್ತ ವಚನಕಾರರು, ಮಾರ್ಗ ಸಂ.೧, ಪು.೨೮೩.

೪೩. ಪ್ರಭುಗೀತಿಯ ಹಸ್ತಪ್ರತಿ, ಮಾರ್ಗ ಸಂ.೧, ಪು.೩೪೧.

೪೪. ಬಸವಣ್ಣನವರು ಗಮನಿಸಿದ ಜೇಡರ ದಾಸಿಮಯ್ಯನ ಎರಡು ವಿಶೇಷ ಅಂಶಗಳು, ಮಾರ್ಗ ಸಂ.೧, ಪು.೧೫೭.

೪೫. ಬಸವಣ್ಣನವರ ಜನನದ ಉದ್ದೇಶ, ಮಾರ್ಗ ಸಂ.೧, ಪು.೧೯೦.

೪೬. ಬಸವಣ್ಣನವರ ವಚನಗಳಲ್ಲಿ ವ್ಯಕ್ತಿಗತ ಸಂಗತಿಗಳು, ಮಾರ್ಗ ಸಂ.೧, ಪು.೧೯೪.

೪೭. ಬಸವಣ್ಣನವರ ವಂಶಜರ ಕವಿಳಾಸಪುರ, ಮಾರ್ಗ ಸಂ.೧, ಪು.೨೩೩.

೪೮. ಬಸವಣ್ಣನವರ ಷಟ್‌ಸ್ಥಲ ವಚನ ವ್ಯಾಖ್ಯಾನದ ಕರ್ತೃ, ಮಾರ್ಗ ಸಂ.೧, ಪು.೩೭೩.

೪೯. ಬಸವಣ್ಣನ ತಂದೆ ಮಾದಿರಾಜನ ಬ್ರಾಹ್ಮಣ್ಯದ ಸ್ವರೂಪ, ಮಾರ್ಗ ಸಂ.೩, ಪು.೧೬೬.

೫೦. ಬಸವಣ್ಣ: ಗುರು ಇಲ್ಲದ ಗುಡ್ಡ, ಮಾರ್ಗ ಸಂ.೩, ಪು.೨೬೩.

೫೧. ಬಸವಣ್ಣನವರು ಯಾವ ಮೂಲದ ಬ್ರಾಹ್ಮಣರು, ಮಾರ್ಗ ಸಂ.೩, ಪು.೩೬೪.

೫೨. ಬಸವಣ್ಣನ ಸಂಪ್ರದಾಯ, ಮಾರ್ಗ ಸಂ.೩, ಪು.೪೨೫.

೫೩. ಬಸವಣ್ಣನವರ ಅಡ್ಡಹೆಸರು, ಮಾರ್ಗ ಸಂ.೩, ಪು.೪೫೪.

೫೪. ಬಸವಣ್ಣನವರ ವಚನ: ಮೀಮಾಂಸಿಕ–ವೈಶೇಷಿಕ, ಮಾರ್ಗ ಸಂ.೪, ಪು.೧೬೧.

೫೫. ಬಸವಸ್ತೋತ್ರದ ವಚನಗಳು, ಮಾರ್ಗ ಸಂ.೫, ಪು.೪೬.

೫೬. ಬಸವಣ್ಣನವರ ಟೀಕಿನ ವಚನಗಳು, ಮಾರ್ಗ ಸಂ.೫, ಪು.೧೯೯.

೫೭. ಬಸವಣ್ಣನವರ ವಚನಗಳು, ಮಾರ್ಗ ಸಂ.೫, ಪು.೨೭೦

೫೮. ಬಸವಮಾರ್ಗ ೧, ೨, ೩, ಮಾರ್ಗ ಸಂ.೫, ಪು.೬೫೮.

೫೯. ಬಸವಣ್ಣನವರ ಷಟ್‌ಸ್ಥಲ ವಚನ ಪ್ರಕಟಣೆಯ ಶತಮಾನೋತ್ಸವ, ಮಾರ್ಗ ಸಂ.೬, ಪು.೧೯೯೦.

೬೦. ಬಸವೋತ್ತರ ಯುಗದ ವಚನ ಸಾಹಿತ್ಯ ವಿಚಾರ ಸಂಕೀರಣ: ಉದ್ಘಾಟನೆ(೧೯೯೩), ಮಾರ್ಗ ಸಂ.೬, ಪು.೩೮.

೬೧. ಬಸವಣ್ಣನವರ ಜೀವನಚರಿತ್ರೆ, ಮಾರ್ಗ ಸಂ.೭, ಪು.೧.

೬೨. ಬಸವಣ್ಣ: ದಕ್ಷಿಣ ಭಾರತದ ಪರ್ಯಾಯ ಬುದ್ಧ, ಮಾರ್ಗ ಸಂ.೭, ಪು.೨೪.

೬೩. ಬಸವಣ್ಣ: ಪ್ರಾಚೀಣ ಲಿಂಗಾಯತ ಸಾಹಿತ್ಯದ ಒಂದು ಅನಿವಾರ್ಯತೆ, ಮಾರ್ಗ ಸಂ.೭, ಪು.೨೭.

೬೪. ಬಸವಣ್ಣನವರ ಲಿಂಗಾಯತವು ಪೂರ್ಣ ಧರ್ಮ, ಮಾರ್ಗ ಸಂ.೭, ಪು.೩೨.

೬೫. ಬಸವಣ್ಣನವರ ನಿಜಚರಿತ್ರೆ, ಮಾರ್ಗ ಸಂ.೮, ಪು.೪೨.

೬೬. ಬಸವಣ್ಣನವರಿಂದ ತಿಳಿದುಬಂದ ಒಂದು ಐತಿಹಾಸಿಕ ಸತ್ಯ!, ಮಾರ್ಗ ಸಂ.೮, ಪು.೫೩.

೬೭. ಬಸವಣ್ಣನವರ ಮೂರು ವಚನ-ನಿರ್ವಚನ, ಮಾರ್ಗ ಸಂ.೮, ಪು.೫೫.

೬೮. ಬಸವಣ್ಣನವರ ವಚನಗಳು, ಮಾರ್ಗ ಸಂ.೮, ಪು.೨೬೯.

೬೯. ಬಲಿದಾನ ಮರಣ ಸಂಪ್ರದಾಯಕ್ಕೆ ಶರಣರ ಪ್ರತಿಕ್ರಿಯೆ, ಮಾರ್ಗ ಸಂ.೧, ಪು.೩೦೮.

೭೦. ಭಕ್ತಿಯ ಮರುಳ, ಮಾರ್ಗ ಸಂ.೧, ಪು.೨೩೭.

೭೧. ಭಂಡಾರ ಮತ್ತು ಬಸವಣ್ಣ, ಮಾರ್ಗ ಸಂಪುಟ ೩, ಪು.೫೯

೭೨. ಮಾದರ ಚೆನ್ನಯ್ಯನ ಮನೆಯ ಮಗ ನಾನಯ್ಯ, ಮಾರ್ಗ ಸಂ.೩, ಪು.೪೬೭.

೭೩. ಮಿಶ್ರಷಟ್ಸ್ಥಲದ ವಚನ, ಮಾರ್ಗ ಸಂ.೫, ಪು.೨೬೭.

೭೪. ಲಿಂಗವಂತರು ತಾವು ಅಂಜಲೇಕೆ, ಮಾರ್ಗ ಸಂ.೩, ಪು.೫೦೦.

೭೫. ವಚನ ಸಾಹಿತ್ಯ ಮತ್ತು ಜೀವನಮೌಲ್ಯಗಳು, ಮಾರ್ಗ ಸಂ.೧, ಪು.೨೫೭.

೭೬. ವಚನಗಳ ಸಂಗ್ರಹ-ಸಂಕಲನ-ಸಂಪಾದನ, ಮಾರ್ಗ ಸಂ.೧, ಪು.೩೪೩.

೭೭. ವಚನ ಪರಿಷ್ಕರಣ, ಮಾರ್ಗ ಸಂ.೧, ಪು.೩೯೭.

೭೮. ವಚನ ಸಾಹಿತ್ಯ: ಸಂಪಾದನೆಯ ವಿಧಾನ-ಇತಿಹಾಸ, ಮಾರ್ಗ ಸಂ.೧, ಪು.೪೦೩.

೭೯. ವಚನ ಸಾಹಿತ್ಯ ಪ್ರಕಟಣೆಯ ಇತಿಹಾಸ, ಮಾರ್ಗ ಸಂ.೧, ಪು.೪೧೨.

೮೦. ವಚನಗಾಯನ: ಪ್ರಾಚೀನತೆ, ಮಾರ್ಗ ಸಂ.೪, ಪು.೪೦.

೮೧. ವಚನಕಾರರು: ಭಾಷೆ, ಕನ್ನಡ ಭಾಷೆ ಮತ್ತು ವಚನ ಭಾಷೆ, ಮಾರ್ಗ ಸಂ.೪, ಪು.೪೯.

೮೨. ವಚನಗಳಲ್ಲಿ ಚತುರಾಚಾರ್ಯರ ಉಲ್ಲೇಖ: ಒಂದು ಪ್ರಕ್ಷಿಪ್ತತೆ, ಮಾರ್ಗ ಸಂ.೪, ಪು.೬೬

೮೩. ವಚನ ಪರಿಷ್ಕರಣೆ: ಎರಡು ತಪ್ಪು ವಿಧಾನಗಳು, ಮಾರ್ಗ ಸಂ.೪, ಪು.೫೫೬.

೮೪. ವಚನ ಸಂಕಲನ ಸಂಪುಟ-೬, ಮಾರ್ಗ ಸಂ.೫, ಪು.೪೬೨.

೮೫. ವಚನ ಸಾಹಿತ್ಯದ ಪ್ರಾಚೀನ ಆಕರ ಕೋಶ, ಮಾರ್ಗ ಸಂ.೫, ಪು.೬೧೦.

೮೬. ವಚನಶಾಸ್ತ್ರಸಾರ, ಮಾರ್ಗ ಸಂ.೫, ಪು.೬೬೩.

೮೭. ವಚನ ಸಾಹಿತ್ಯದ ಪ್ರಕಟಣೆಯ ಇತಿಹಾಸ, ಮಾರ್ಗ ಸಂ.೫, ಪು.೬೭೬.

೮೮. ವಚನ ಚಳುವಳಿ ವಿಚಾರ ಸಂಕಿರಣ: ಅಧ್ಯಕ್ಷತೆ(೧೯೯೦), ಮಾರ್ಗ ಸಂ.೬, ಪು.೧೪.

೮೯. ವಚನಾನುಶೀಲನ(೧೯೮೯), ಮಾರ್ಗ ಸಂ.೬, ಪು.೨೩೩.

೯೦. ವಚನ ಪ್ರಸಾದ(೧೯೯೭), ಮಾರ್ಗ ಸಂ.೬, ಪು.೨೯೩.

೯೧. ವಚನ ಅಧ್ಯಯನ(೧೯೯೪), ಮಾರ್ಗ ಸಂ.೬, ಪು.೪೦೩.

೯೨. 'ವಚನ' ಬಹುಭಾಷಾ ಅನುವಾದ ಯೋಜನೆ, ಮಾರ್ಗ ಸಂ.೭, ಪು.೨೭೭.

೯೩. ವಚನ ಸಾಹಿತ್ಯ: ವೈದಿಕ ವಿರೋಧ ಮತ್ತು ಜಾತಿನಿರಸನ, ಮಾರ್ಗ ಸಂ.೭, ಪು.೨೮೫.

೯೪. ವಚನ, ಮಾರ್ಗ ಸಂ.೭, ಪು.೩೨೫.

೯೫. 'ವಚನ' ಸಂಪುಟ ಬಿಡುಗಡೆ ಪ್ರಸ್ತಾವಿಕ ಭಾಷಣ, ಮಾರ್ಗ ಸಂ.೭, ಪು.೫೪೦.

೯೬. ವೀರಶೈವ ಸ್ವರವಚನ ಸಾಹಿತ್ಯ, ಮಾರ್ಗ ಸಂ.೧, ಪು.೨೪೩.

೯೭. ಶರಣರು ಕಟ್ಟಬಯಸಿದ ಸ್ತ್ರೀ ಸಮಾಜ, ಮಾರ್ಗ ಸಂ.೧, ಪು.೨೯೯.

೯೮. ಶರಣರು-ಕುಟುಂಬ, ಮಾರ್ಗ ಸಂ.೪, ಪು.೧೬೭.

೯೯. ಶರಣ ಧರ್ಮ: ಜಾತಿ ನಾಶ-ಜಾತಿ ನಿರ್ಮಾಣ, ಮಾರ್ಗ ಸಂ.೪, ಪು.೧೮೬.

೧೦೦. ಶರಣರ ಬಂಡಾಯದ ವಚನಗಳು(೧೯೯೧), ಮಾರ್ಗ ಸಂ.೬, ಪು.೩೯೩.

೧೦೧. ಶರಣರ ಅಂಗಹೀನರೆಂದರೆ ನಾಯಕನರಕ, ಮಾರ್ಗ ಸಂ.೩, ಪು.೪೮೮.

೧೦೨. ಶರಣ ಸಾಹಿತ್ಯ ಸಮ್ಮೇಳನ ಅಧ್ಯಕ್ಷತೆ(೨೦೦೩), ಮಾರ್ಗ ಸಂ.೬, ಪು.೧೨೧.

೧೦೩. ಶರಣ ಸಮಾಜ(೨೦೦೪), ಮಾರ್ಗ ಸಂ.೬, ಪು.೩೬೭.

೧೦೪. ಶರಣ ನುಡಿಮುತ್ತುಗಳು(೧೯೭೮), ಮಾರ್ಗ ಸಂ.೬, ಪು.೩೮೫.

೧೦೫. ಶೂನ್ಯಸಂಪಾದನೆ: ಇನ್ನಷ್ಟು ವಿಚಾರಗಳು, ಮಾರ್ಗ ಸಂ.೧, ಪು.೩೫೦.

೧೦೬. ಶೂನ್ಯಸಂಪಾದನೆ ರಾಚನಿಕ ವಿವೇಚನೆ, ಮಾರ್ಗ ಸಂ.೧. ಪು.೫೪೬

೧೦೭. ಶೂನ್ಯಸಂಪಾದನೆಗಳು ಎಷ್ಟು? ಕಾಲಾನುಕ್ರಮ ಯಾವುದು?, ಮಾರ್ಗ ಸಂ.೩, ಪು.೩೪೯.

೧೦೮. ಷಟ್‌ಸ್ಥಲ ಸಿದ್ಧಾಂತ: ನವೀಕರಣದ ಅಗತ್ಯ, ಮಾರ್ಗ ಸಂ.೭, ಪು.೧೨೩.

೧೦೯. ಸಕಲ ಪುರಾತನರ ವಚನಕಟ್ಟು: ಕೆಲವು ಸಮಸ್ಯೆಗಳು, ಮಾರ್ಗ ಸಂ.೧, ಪು.೧೯೯.

೧೧೦. ಸಕಲ ಪುರಾತನರ ವಚನಕಟ್ಟು, ಮಾರ್ಗ ಸಂ.೪, ಪು.೪೩.

೧೧೧. ಸಮಗ್ರ ವಚನ ಸಂಪುಟ-೬, ಮಾರ್ಗ ಸಂ.೫, ಪು.೨೮೧.

೧೧೨. ಸಮಗ್ರ ವಚನ ಸಾಹಿತ್ಯ ಸಂಪುಟಗಳು, ಮಾರ್ಗ ಸಂ.೫, ಪು.೬೭೮.

೧೧೩. ಸಮಗ್ರ ವಚನ ಸಂಪುಟ-ಪ್ರಥಮ ಆವೃತ್ತಿ: ಬಿಡುಗಡೆ(೧೯೯೩), ಮಾರ್ಗ ಸಂ.೬, ಪು.೪೩.

೧೧೪. ಸಮಗ್ರ ಸ್ವರವಚನ ಸಾಹಿತ್ಯ ಪ್ರಕಟನ ಯೋಜನೆ: ಉದ್ಘಾಟನೆ(೧೯೯೫), ಮಾರ್ಗ ಸಂ.೬, ಪು.೮೩.

೧೧೫. ಸಮಗ್ರ ವಚನ ಸಂಪುಟ-ದ್ವಿತೀಯ ಆವೃತ್ತಿ: ಬಿಡುಗಡೆ(೨೦೦೧), ಮಾರ್ಗ ಸಂ.೬, ಪು.೧೧೭.

೧೧೬. ಸಮಗ್ರ ವಚನ ಸಾಹಿತ್ಯದ ಜನಪ್ರಿಯ ಆವೃತ್ತಿಯ ಮಹಾಸಂಪುಟ ಸಂಪಾದಕೀಯ(ಬೈಬಲ್ ಮಾದರಿ), ಮಾರ್ಗ ಸಂ.೭, ಪು.೩೮೦.

೧೧೭. ಸರ್ವಜ್ಞನ ಅಂಕಿತ, ಮಾರ್ಗ ಸಂ.೩, ಪು.೪೧೮

೧೧೮. ಸಿದ್ಧರಾಮ-ಬಸವಣ್ಣ-ಪಂಡಿತಾರಾಧ್ಯ, ಮಾರ್ಗ ಸಂ.೪, ಪು.೧೪೦.

೧೧೯. ಸೂಳ್ನುಡಿ ಎಂದರೇನು? ಮಾರ್ಗ ಸಂ.೩, ಪು.೪೨೩.

೧೨೦. ಸೂಳ್ನುಡಿ-ವಚನ-ವಚನಾಗಮ, ಮಾರ್ಗ ಸಂ.೩, ಪು.೩೨೬.

೧೨೧. ಸ್ವರವಚನ ವಿಚಾರ ಸಂಕಿರಣ ಸಂಪುಟ, ಮಾರ್ಗ ಸಂ.೫, ಪು.೬೯.

೧೨೨. ಸ್ಥಾವರಕ್ಕಳಿವುಂಟು-ಜಂಗಮಕ್ಕಳಿವಿಲ್ಲ, ಮಾರ್ಗ ಸಂ.೩, ಪು.೪೯೪.

೧೨೩. ಹೆಸರಿಲ್ಲದ ಹೆಸರು, ಮಾರ್ಗ ಸಂ.೩, ಪು.೪೭೬.

## ಅನುಬಂಧ: ಎರಡು

# ಪರಾಮರ್ಶನ ಗ್ರಂಥಗಳು

### ಪ್ರಾಥಮಿಕ ಆಕರಗಳು

೧. ಕಲಬುರ್ಗಿ ಎಂ.ಎಂ., ಮಾರ್ಗ ೧, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೦

೨. ಕಲಬುರ್ಗಿ ಎಂ.ಎಂ., ಮಾರ್ಗ ೩, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೦

೩. ಕಲಬುರ್ಗಿ ಎಂ.ಎಂ., ಮಾರ್ಗ ೪, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೦

೪. ಕಲಬುರ್ಗಿ ಎಂ.ಎಂ., ಮಾರ್ಗ ೫, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೦

೫. ಕಲಬುರ್ಗಿ ಎಂ.ಎಂ., ಮಾರ್ಗ ೬, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೦

೬. ಕಲಬುರ್ಗಿ ಎಂ.ಎಂ., ಮಾರ್ಗ ೭, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೫

೭. ಕಲಬುರ್ಗಿ ಎಂ.ಎಂ., ಮಾರ್ಗ ೮, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೫

೮. ಕಲಬುರ್ಗಿ ಎಂ.ಎಂ., ವಚನ ಸಾಹಿತ್ಯದ ಪ್ರಾಚೀನ ಆಕರ ಕೋಶ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಮಠ, ಗದಗ, ೧೯೯೧.

೯. ಕಲಬುರ್ಗಿ ಎಂ.ಎಂ., ಪರಿಕಲ್ಪನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೧೦. ಕಲಬುರ್ಗಿ ಎಂ.ಎಂ., ಗ್ರಂಥಸಂಪಾದನಶಾಸ್ತ್ರ, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೧೫.

೧೧. ಕಲಬುರ್ಗಿ ಎಂ.ಎಂ., ಬಸವಸ್ತೋತ್ರದ ವಚನಗಳು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

೧೨. ಕಲಬುರ್ಗಿ ಎಂ.ಎಂ., ಚೆನ್ನಬಸವಣ್ಣನವರ ಷಟ್‌ಸ್ಥಲ ವಚನ ಮಹಾಸಂಪುಟ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ, ೧೯೯೦

೧೩. ಕಲಬುರ್ಗಿ ಎಂ.ಎಂ., ವಚನ ಸಂಕಲನ ಸಂಪುಟ ೪, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ, ೧೯೯೨.

೧೪. ಕಲಬುರ್ಗಿ ಎಂ.ಎಂ., ಬಸವಣ್ಣನವರ ಟೀಕಿನ ವಚನಗಳು, ಸಂಪುಟ ೧, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೯.

೧೫. ಕಲಬುರ್ಗಿ ಎಂ.ಎಂ., ಬಸವಣ್ಣನವರ ಟೀಕಿನ ವಚನಗಳು, ಸಂಪುಟ ೨, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೯.

೧೬. ಕಲಬುರ್ಗಿ ಎಂ.ಎಂ., ಬಸವಣ್ಣನವರ ವಚನಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೩.

೧೭. ಕಲಬುರ್ಗಿ ಎಂ.ಎಂ., ಸಂಕೀರ್ಣ ವಚನ ಸಂಪುಟ ೧, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೩.

೧೮. ಕಲಬುರ್ಗಿ ಎಂ.ಎಂ., ಸಿದ್ಧರಾಮಯ್ಯ ದೇವರ ವಚನಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೮.

೧೯. ಕಲಬುರ್ಗಿ ಎಂ.ಎಂ., ವಚನ ಸಂಕಲನ ಸಂಪುಟ ೬, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ, ೨೦೦೨.

೨೦. ಕಲಬುರ್ಗಿ ಎಂ.ಎಂ., ಪರಮಾನಂದ ಸುಧೆ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ, ೨೦೧೦.

೨೧. ಕಲಬುರ್ಗಿ ಎಂ.ಎಂ., ಏಕೋತ್ತರ ಶತಸ್ಥಲ, ಲಿಂಗಾಯತ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ, ೨೦೧೪.

೨೨. ಕಲಬುರ್ಗಿ ಎಂ.ಎಂ., ಬಸವಮಾರ್ಗ ೧, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೦.

೨೩. ಕಲಬುರ್ಗಿ ಎಂ.ಎಂ., ಬಸವಮಾರ್ಗ ೨, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೧.

೨೪. ಕಲಬುರ್ಗಿ ಎಂ.ಎಂ., ಬಸವಮಾರ್ಗ ೩, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೧.

೨೫. ಕಲಬುರ್ಗಿ ಎಂ.ಎಂ., ವಚನ ಸಾಹಿತ್ಯದ ಪ್ರಕಟಣೆಯ ಇತಿಹಾಸ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ, ೧೯೯೦.

೨೬. ಕಲಬುರ್ಗಿ ಎಂ.ಎಂ., ಸ್ವರವಚನ ವಿಚಾರ ಸಂಕಿರಣ ಸಂಪುಟ, ಶ್ರೀ ಜಗದ್ಗುರು ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು, ೧೯೯೭.

೨೭. ಕಲಬುರ್ಗಿ ಎಂ.ಎಂ., ವಚನ ವರ್ಷ, ನೀಲಗಂಗ ಪ್ರಕಾಶನ, ಬಾಗಲಕೋಟೆ, ೨೦೧೮.

**ಪೂರಕ ಆಕರಗಳು**

೧. ಅಂಗಡಿ ಎಸ್.ಎಸ್., ಚಿದಾನಂದಮೂರ್ತಿಯವರ ಸಾಹಿತ್ಯ: ಒಂದು ಅಧ್ಯಯನ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೨೦೧೬.

೨. ಕರೀಗೌಡ ಬೀಚನಹಳ್ಳಿ, ಬಸವಣ್ಣ: ಪುನರ್ಲೇಖ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫.

೩. ಕಲ್ಯಾಣರಾವ್ ಜಿ. ಪಾಟೀಲ, ಎಂ.ಎಂ.ಕಲಬುರ್ಗಿಯವರ ಶೋಧಗಳು, ಪಿಎಚ್.ಡಿ.ಪ್ರಬಂಧ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ, ೨೦೧೭.

೪. ಕೊಪ್ಪ ಎಸ್.ಕೆ., ಸಿದ್ಧರಾಮ ಮತ್ತು...., ಸಂವಹನ ಪ್ರಕಾಶನ, ಮೈಸೂರು, ೨೦೧೨.

೫. ಗಂಗೂಬಾಯಿ ಎ.ಪವರ, ಡಾ.ಎಂ.ಎಂ.ಕಲಬುರ್ಗಿ ಅವರ ವಚನ ಸಂಪಾದನೆ: ಒಂದು ಅಧ್ಯಯನ, ಎಂ.ಫಿಲ್.ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೬.

೬. ಗಿರೀಶ ಕಾರ್ನಾಡ, ತಲೆದಂಡ, ಮನೋಹರ ಗ್ರಂಥಮಾಲೆ, ಧಾರವಾಡ, ೨೦೧೩.

೭. ಚಿದಾನಂದಮೂರ್ತಿ ಎಂ., ಬಸವಣ್ಣನವರು, ನ್ಯಾಷನಲ್ ಬುಕ್‌ಟ್ರಸ್ಟ್, ನವದೆಹಲಿ, ೨೦೦೯.

೮. ಚಿದಾನಂದಮೂರ್ತಿ ಎಂ., ಹೊಸತು ಹೊಸತು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೮

೯. ದಾದಾನಾಯ್ಕ, ಗ್ರಂಥ ಸಂಪಾದನೆ: ಡಾ.ಎಂ.ಎಂ.ಕಲಬುರ್ಗಿ ಅವರ ಕೊಡುಗೆ, ಎಂ.ಫಿಲ್. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ೧೯೯೬

೧೦. ನಂದೀಶ ಹಂಡೆ, ಬಸವಣ್ಣ ಮತ್ತು...., ಸಂವಹನ ಪ್ರಕಾಶನ, ಮೈಸೂರು, ೨೦೧೨

೧೧. ನರಸಿಂಹಾಚಾರ್ ಡಿ.ಎಲ್., ಕನ್ನಡ ಗ್ರಂಥಸಂಪಾದನೆ, ಶಾರದ ಮಂದಿರ, ಮೈಸೂರು, ೧೯೬೪

೧೨. ನಾಗಯ್ಯ ಜಿ.ಎಂ., ಸಮಗ್ರ ಸಂಶೋಧಕ ಎಂ.ಎಂ.ಕಲಬುರ್ಗಿ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೯.

೧೩. ನಾಗಭೂಷಣಸ್ವಾಮಿ ಓ.ಎಲ್., ವಚನ ಸಾವಿರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪.

೧೪. ನಾಗಭೂಷಣಶಾಸ್ತ್ರಿಗಳು, ಚನ್ನಬಸವಣ್ಣನವರ ವಚನ ಸಂಗ್ರಹ, ಸಾಯಿ ಪಬ್ಲಿಷಿಂಗ್ ಹೌಸ್, ಧಾರವಾಡ.

೧೫. ಪಂಡಿತ್ ಕೆ. ರಾಥೋಡ್, ಅಭಿಮತ, ಲಿಖಿತ ಪ್ರಕಾಶನ, ಧಾರವಾಡ, ೨೦೧೯.

೧೬. ಪಾಟೀಲ ಶಿವಲಿಂಗಪ್ಪ ಶಿವಮೂರ್ತಪ್ಪ, ವಚನಗಳ ಇಂಗ್ಲಿಷ್ ಅನುವಾದ ಒಂದು ಅಧ್ಯಯನ, ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೧೭. ಬಸವನಾಳ ಶಿವಲಿಂಗಪ್ಪನವರು, ಬಸವಣ್ಣನವರ ಷಟ್‌ಸ್ಥಲದ ವಚನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೨೦೧೧.

೧೮. ಭಟ್ ಎಸ್.ಆರ್., ಭಾಷಾಂತರ ಒಂದು ಕಲಾತ್ಮಕ ಅಭಿವ್ಯಕ್ತಿ, ನವಕರ್ನಾಟಕ ಪಬ್ಲಿಕೇಶನ್ಸ್, ಬೆಂಗಳೂರು, ೨೦೧೨.

೧೯. ಭಾನುಮತಿ ವೈ.ಸಿ., ಗ್ರಂಥಸಂಪಾದನ ವ್ಯಾಸಂಗ, ಸಂವಹನ ಪ್ರಕಾಶನ, ಮೈಸೂರು, ೨೦೧೨.

೨೦. ಭೂಸನೂರಮಠ, ಮಹಾಲಿಂಗದೇವರು ನಿರೂಪಿಸಿದ ಏಕೋತ್ತರ ಶತಸ್ಥಲ, ಶ್ರೀ.ನಿ.ಪ್ರ.ಸ್ವ ಶಿವಬಸವಸ್ವಾಮಿಗಳು, ೧೯೭೪.

೨೧. ಮನಗುಂಡಿ ಎಸ್.ವಿ., ಶ್ರೀ ಬಸವಣ್ಣನವರ ವಚನಗಳ ಸಂಪಾದನ ಪರಂಪರೆ, ಪಿಎಚ್.ಡಿ. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೬.

೨೨. ಮಾಳಿ ವಿ.ಎಸ್., ಶರಣರು ಮತ್ತು..., ಸಂವಹನ ಪ್ರಕಾಶನ, ಮೈಸೂರು, ೨೦೧೨

೨೩. ಮೃತ್ಯುಂಜಯ ರುಮಾಲೆ, ಸಮಗ್ರ ಸಂಶೋಧಕ ಎಂ.ಎಂ.ಕಲಬುರ್ಗಿ, ಪಲ್ಲವ ಪ್ರಕಾಶನ, ಚನ್ನಪಟ್ಟಣ, ೨೦೧೫.

೨೪. ಮೋಹನ ಕುಂಟಾರ್, ಅನುವಾದ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೫

೨೫. ರವೀಂದ್ರನಾಥ ಕೆ., ಕಲ್ಲಯ್ಯ ಎಸ್. ಹಿರೇಮಠ, ಕಲ್ಲರಳಿ, ಪೂಜ್ಯ ಶ್ರೀ ಶರಣಬಸವ ತಾತ ಪ್ರಕಾಶನ, ಅರಳಿಹಳ್ಳಿ, ೨೦೧೦

೨೬. ರವೀಂದ್ರನಾಥ ಕೆ., ರೇವಣಸಿದ್ಧ ಮತ್ತು.... ಸಂವಹನ ಪ್ರಕಾಶನ, ಮೈಸೂರು, ೨೦೧೨.

೨೭. ರಾಮಕೃಷ್ಣ ಮರಾಠೆ, ಕನ್ನಡದ ಮಹಾಮಾರ್ಗ, ಡಾ.ಎಂ.ಎಂ.ಕಲಬುರ್ಗಿ ಲಿಂಗಾಯತ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ, ೨೦೧೭.

೨೮. ರಾಜೇಂದ್ರ ಚೆನ್ನಿ(ಸಂ), ನಾನು ಕಲಬುರ್ಗಿ, ಲಡಾಯಿ ಪ್ರಕಾಶನ, ಗದಗ, ೨೦೧೬.

೨೯. ಲಂಕೇಶ್ ಪಿ., ಸಂಕ್ರಾಂತಿ, ಲಂಕೇಶ್ ಪ್ರಕಾಶನ, ಬೆಂಗಳೂರು, ೨೦೧೨.

೩೦. ವೀರಣ್ಣ ದಂಡೆ, ಎಂ.ಎಂ.ಕಲಬುರ್ಗಿ ಸಂಶೋಧನ ಸಾಹಿತ್ಯ, ಡಾ.ಬಿ.ಡಿ.ಜತ್ತಿ ವಚನ ಅಧ್ಯಯನ ಮತ್ತು ಸಂಶೋಧನ ಕೇಂದ್ರ, ಅನುಭವ ಮಂಟಪ, ಬಸವ ಸಮಿತಿ, ಕಲಬುರಗಿ ೨೦೧೬.

೩೧. ವೀರಣ್ಣ ರಾಜೂರ, ಮಾರ್ಗಾನುಸಂಧಾನ, ಸಂವಹನ ಪ್ರಕಾಶನ, ಮೈಸೂರು, ೨೦೧೯.

೩೨. ವೀರೇಶ ಬಡಿಗೇರ, ಕೃತಿ: ಪ್ರತಿ ಮತ್ತು ಸಂಸ್ಕೃತಿ, ಮಯ ಪ್ರಕಾಶನ, ಕಮಲಾಪುರ, ೨೦೧೫.

೩೩. ಶಾಮಸುಂದರ ಬಿದರಕುಂದಿ(ಸಂ), ಕಲಬುರ್ಗಿ ನೆನಪು, ಧಾರವಾಡ ಸಾಹಿತ್ಯ ಸಂಭ್ರಮ ಟ್ರಸ್ಟ್, ಧಾರವಾಡ, ೨೦೧೬.

೩೪. ಶಿವಪ್ರಕಾಶ ಎಚ್.ಎಸ್., ಮಹಾಚೈತ್ರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೦.

೩೫. ಶಿರೂರ ಬಿ.ವ್ಹಿ., ಎಂ.ಎಂ.ಕಲಬುರ್ಗಿಯವರು ಮತ್ತು ನಾನು, ಕೋಲಶಾಂತೇಶ್ವರ ಜನಕಲ್ಯಾಣ ಕೇಂದ್ರ, ವಿರಕ್ತಮಠ, ಅರಸೀಕೆರೆ, ೨೦೧೭.

೩೬. ಸದಾನಂದ ಕನವಳ್ಳಿ(ಸಂ), ಮಹಾಮಾರ್ಗ, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ, ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೮.

೩೭. ಸಣ್ಣಯ್ಯ ಬಿ.ಎಸ್., ಪ್ರಾಚೀನ ಕನ್ನಡ ಗ್ರಂಥಸಂಪಾದನೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨.

೩೮. ಸಿದ್ಧಪ್ಪ ಎನ್., ಕನ್ನಡ ಗ್ರಂಥಸಂಪಾದನೆಗೆ ಡಾ.ಆರ್.ಸಿ.ಹಿರೇಮಠರ ಕೊಡುಗೆ, ಪಿಎಚ್.ಡಿ. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೨.

೩೯. ಸೀತಾರಾಂ ಜಾಹಿಗೀರದಾರ, ಗ್ರಂಥಸಂಪಾದನ ಪರಿಚಯ, ಕನ್ನಡ ಸಾಹಿತ್ಯ ಸಂಘ, ರಂಗಪೇಟೆ, ೧೯೭೮

೪೦. ಸುಜಾತ, ಡಾ.ಎಂ.ಎಂ.ಕಲಬುರ್ಗಿ ಅವರು ಹಸ್ತಪ್ರತಿಶಾಸ್ತ್ರಕ್ಕೆ ನೀಡಿದ ಕೊಡುಗೆ, ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭.

೪೧. ಸುಂಕಾಪುರ ಎಂ.ಎಸ್., ಸಕಲ ಪುರಾತನರ ವಚನಗಳು, ಸಂಪುಟ ೩, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೮.

೪೨. ಹಳಕಟ್ಟಿ ಫ.ಗು., ವಚನಶಾಸ್ತ್ರಸಾರ, ಭಾಗ ೧, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಡಂಬಳ-ಗದಗ, ೧೯೯೯.

೪೩. ಹಳಕಟ್ಟಿ ಫ.ಗು.(ಪ್ರಸಂ.), ಪರಿಷ್ಕರಣೆ: ಕಲಬುರ್ಗಿ ಎಂ.ಎಂ., ವೀರಣ್ಣ ರಾಜೂರ, ವಚನಶಾಸ್ತ್ರ ಸಾರ, ಭಾಗ ೧.

೪೪. ಹಳ್ಳಿಕೇರಿ ಎಫ್.ಟಿ., ರಾಜಮಾರ್ಗ, ಡಾ.ಎಂ.ಎಂ.ಕಲಬುರ್ಗಿ ಲಿಂಗಾಯತ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ, ೨೦೧೭.

೪೫. ಹಳ್ಳಿಕೇರಿ ಎಫ್.ಟಿ., ರವೀಂದ್ರನಾಥ ಕೆ., ಸಿರಿಸಂಪದ, ಡಾ.ಬಿ.ವಿ.ಶಿರೂರ ಅಭಿನಂದನ ಸಮಿತಿ, ಯಲಬುರ್ಗಾ, ೨೦೦೨

೪೬. ಹಳ್ಳಿಕೇರಿ ಎಫ್.ಟಿ., ವಿರೂಪಾಕ್ಷಿ ಬಿ.ಎನ್., ಡಾ.ಎಂ.ಎಂ.ಕಲಬುರ್ಗಿ ಮಾರ್ಗದ ಮಹಾ ವಾಕ್ಯಗಳು, ವಿಕಾಸ ಪ್ರಕಾಶನ, ಹೊಸಪೇಟೆ, ೨೦೧೨.

೪೭. ಹಿರೇಮಠ ಆರ್.ಸಿ., ಸಕಲ ಪುರಾತನರ ವಚನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೨.

೪೮. ಹಿರೇಮಠ ಆರ್.ಸಿ., ಚನ್ನಬಸವಣ್ಣನವರ ವಚನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೫.

೪೯. ಹಿರೇಮಠ ಆರ್.ಸಿ., ಭಕ್ತಿಭಂಡಾರಿ ಬಸವಣ್ಣನವರ ವಚನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೮

